# ಕಲಾಕೋಶ

ಪ್ರಧಾನ ಸಂಪಾದಕರು
ಪಿ. ಆರ್. ತಿಪ್ಪೇಸ್ವಾಮಿ

ಸಂಪಾದಕರು
ಎನ್. ಮರಿಶಾಮಾಚಾರ್
ಡಾ|| ಅ. ಲ. ನರಸಿಂಹನ್
ವಿ. ಟಿ. ಕಾಳೆ
ಡಾ|| ಬಿ. ಕೆ. ಹಿರೇಮಠ



ಕರ್ನಾಟಕ ಲಲಿತಕಲಾ ಆಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು

KALAKOSHA (Dictionary of Art) Published by V.N. Mallikarjuna Swamy, Registrar, Karnataka Lalithakala Academy, Kannada Bhavana, J.C. Road, Bangalore - 560 002

First Impression : 1994
Second Impression : 2008
Third Impression : 2009

Copies : 500

Rs. : 180=00

**ಪ್ರಧಾನ ಸಂಪಾದಕರು**

ಪಿ. ಆರ್. ತಿಪ್ಪೇಸ್ವಾಮಿ

**ಪ್ರಕಟಣಾ ಸಮಿತಿ**

ಶ್ರೀ ವಿ. ಟಿ. ಕಾಳೆ
ಶ್ರೀಮತಿ ಎಸ್. ಧನಲಕ್ಷ್ಮಿ
ಡಾ|| ಬಿ. ಕೆ. ಹಿರೇಮಠ
ಶ್ರೀ ರಘುಪತಿಭಟ್
ಶ್ರೀ ವೈ. ಹೆಚ್. ಸುಗೂರ್

Cover Jocket Designed by : K. Chandrakanth Acharya

ಮುದ್ರಕರು
ಭಾಗ್ಯಂ ಬೈಂಡಿಂಗ್ ವರ್ಕ್ಸ್
ನಂ. 25/1, 1ನೇ ಮುಖ್ಯರಸ್ತೆ,
ನ್ಯೂ ಟಿಂಬರ್ ಯಾರ್ಡ್ ಲೇಔಟ್,
ಮೈಸೂರು ರಸ್ತೆ, ಬೆಂಗಳೂರು - 26

# ಅಧ್ಯಕ್ಷರ ನುಡಿ

## (ಎರಡನೇ ಮುದ್ರಣಕ್ಕೆ)

ನಾಡಿನ ಬಹುದೊಡ್ಡ ಕಲಾವಿದರೆನಿಸಿದ ಪಿ.ಆರ್. ತಿಪ್ಪೇಸ್ವಾಮಿ ಅವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಕಾಲದಲ್ಲಿ ಅನೇಕ ಉಪಯುಕ್ತವಾದ ಕೆಲಸಗಳನ್ನು ಮಾಡಿದ್ದಾರೆ. ಅಂಥವುಗಳಲ್ಲಿ ಅವರ ಕಾಲದಲ್ಲಿ ಪ್ರಕಟಿಸಿದ 'ಕಲಾಕೋಶ' ವೂ ಒಂದು.

ಕಲಾಕೋಶದ ರಚನೆ ಎಷ್ಟು ಕಷ್ಟವೆಂಬುದನ್ನು ಅವರೇ ತಮ್ಮ ನುಡಿಯಲ್ಲಿ ಹೇಳಿದ್ದಾರೆ. ಅಪಾರ ಪರಿಶ್ರಮ, ತಾಳ್ಮೆ ಮತ್ತು ಬುದ್ಧಿವಂತಿಕೆಯನ್ನು ಅಪೇಕ್ಷಿಸುವ ಇಂಥ ಕೃತಿಯನ್ನು ಹೊರತರಲು ಶ್ರಮಿಸಿದ ತಿಪ್ಪೇಸ್ವಾಮಿಯವರಿಗೂ, ಸಂಪಾದಕ ಮಂಡಳಿಗೂ ಅಕಾಡೆಮಿ ತನ್ನ ಕೃತಜ್ಞತೆ ಸಲ್ಲಿಸುತ್ತದೆ. ಅಪರೂಪಕ್ಕೆ ಸುವರ್ಣಕರ್ನಾಟಕದ ಅಂಗವಾಗಿ ಈ ಕೃತಿಯ ಪುನರ್‌ಮುದ್ರಣ ಅವಕಾಶ ನನ್ನ ಅಧ್ಯಕ್ಷತೆಯ ಅವಧಿಯಲ್ಲಿ ದೊರಕಿದುದು ನನ್ನ ಪಾಲಿಗೆ ಸಂತಸವನ್ನು ತಂದಿದೆ. ಇಂಥ ಮಹತ್ವದ ಕೃತಿ ಪುನರ್‌ಮುದ್ರಣಗೊಂಡು ಹೆಚ್ಚಿನ ಜನರಿಗೆ ತಲುಪಲು ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳು ಮತ್ತು ನಿರ್ದೇಶಕರಿಗೆ ನಾನು ಅಕಾಡೆಮಿ ಪರವಾಗಿ ಕೃತಜ್ಞತೆ ಸಲ್ಲಿಸುತ್ತೇನೆ. ಕೃತಿ ಸಕಾಲದಲ್ಲಿ ಹೊರಬರಲು ಮುದ್ರಣ ಕಾರ್ಯದ ಜವಾಬ್ದಾರಿ ಹೊತ್ತ ರಿಜಿಸ್ಟ್ರಾರ್ ವಿ.ಎನ್. ಮಲ್ಲಿಕಾರ್ಜುನ ಸ್ವಾಮಿ ಅವರಿಗೂ, ಸಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಭಾಗ್ಯಂ ಬೈಂಡಿಂಗ್ ವರ್ಕ್ಸ್‌ನ ಮಾಲೀಕರಿಗೂ ನನ್ನ ವಂದನೆಗಳು.

**ವಿ.ಬಿ. ಕಾಳೆ**
(ಅಧ್ಯಕ್ಷರು)

## ಪ್ರಧಾನ ಸಂಪಾದಕರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಲೆ ಹಾಗೂ ಕಲಾವಿದರನ್ನು ಕುರಿತು ಅನೇಕ ಉಪಯುಕ್ತ ಗ್ರಂಥಗಳನ್ನು ಹೊರ ತಂದಿದ್ದು ಈಗ ಕಲಾಕೋಶ ಪುಸ್ತಕ ಪ್ರಕಟವಾಗುತ್ತಿದೆ. ಕಲಾವಿದರ ಮತ್ತು ಕಲಾ ವಿದ್ಯಾರ್ಥಿಗಳ ಬಹುದಿನಗಳ ಕೊರತೆಯನ್ನು ಈ ಪುಸ್ತಕ ಸ್ವಲ್ಪವಾದರೂ ನೀಗುವುದರಲ್ಲಿ ಸಂಶಯವಿಲ್ಲ. ಭಾರತೀಯ ಭಾಷೆಗಳಲ್ಲೇ ಇಷ್ಟೊಂದು ದೊಡ್ಡ ಗಾತ್ರದ ಕಲಾಕೋಶ ಹೊರಬರುತ್ತಿರುವುದು ಇದೇ ಪ್ರಥಮವಾಗಿದೆ. ಈ ಪುಸ್ತಕ ಪ್ರಕಟಣೆ ಅಲ್ಪಾವಧಿಯಲ್ಲಿ ಪ್ರಕಟವಾಗುತ್ತಿದ್ದು, ಪರಿಪೂರ್ಣ ಪುಸ್ತಕವಲ್ಲದಿದ್ದರೂ ನಮ್ಮ ಮಿತಿಯಲ್ಲಿ ಎಷ್ಟು ಸಾಧ್ಯವೋ ಅಷ್ಟರಲ್ಲಿ ಉತ್ತಮವಾಗಿ ಹೊರತರಲಾಗಿದೆ.

ಕಲಾಕೋಶದ ರಚನೆ, ಮುದ್ರಣಗಳು ಕಷ್ಟದ ಕೆಲಸ. ಅನೇಕ ಕಡೆಗಳಲ್ಲಿ ಚದುರಿ ಹೋಗಿರುವ ವಿಷಯಗಳನ್ನು ಒಂದೆಡೆ ಸಂಕ್ಷಿಪ್ತವಾಗಿ ತರಬೇಕಾಗುತ್ತದೆ. ಈ ಕೆಲಸ ಹೆಚ್ಚಿನ ತಾಳ್ಮೆ, ಬುದ್ಧಿವಂತಿಕೆ, ವ್ಯಾಪಕವಾದ ಓದು ಹಾಗೂ ಪಾಂಡಿತ್ಯಗಳನ್ನು ಅಪೇಕ್ಷಿಸುತ್ತದೆ. ಇಂತಹ ಕಲಾಕೋಶವೊಂದನ್ನು ಅಕಾಡೆಮಿಯ ಮೂಲಕ ಹೊರತರಬೇಕೆಂಬ ಸೂಚನೆ ಬಂದಾಗ ಸದಸ್ಯರುಗಳು ಸಂತೋಷದಿಂದ ಒಪ್ಪಿಗೆ ನೀಡಿದರಲ್ಲದೆ ಅನೇಕ ಉಪಯುಕ್ತ ಸಲಹೆಯನ್ನು ನೀಡಿದರು. ಅವರಿಗೆ ನನ್ನ ಧನ್ಯವಾದಗಳು. ಕಲಾವಿದರಲ್ಲದೆ, ಬರಹಗಾರರೂ, ಕಲಾ ಪುಸ್ತಕ ರಚನೆ ಹಾಗೂ ಪ್ರಕಟಣೆಗಳಲ್ಲಿ ಪರಿಶ್ರಮ ಉಳ್ಳವರೂ ಆದ ಶ್ರೀ ಎನ್. ಮರಿಶಾಮಾಚಾರ್, ಡಾ|| ಅ. ಲ. ನರಸಿಂಹನ್, ಡಾ|| ಬಿ. ಕೆ. ಹಿರೇಮಠ, ಶ್ರೀ ವಿ. ಟಿ. ಕಾಳೆ, ಈ ನಾಲ್ವರೂ ಸೇರಿ ಕರ್ನಾಟಕದಾದ್ಯಂತ, ಕಲೆಯ ಬಗ್ಗೆ ಬರೆಯಬಲ್ಲವರಿಂದ ಕೆಲವು ನಮೂದುಗಳನ್ನು ತರಿಸಿಕೊಂಡು ಹಾಗೂ ಉಳಿದ ಹಲವಾರು ನಮೂದುಗಳನ್ನು ಸ್ವತಃ ರಚಿಸಿ ಈ ಗ್ರಂಥವನ್ನು ತಯಾರಿಸಿದ್ದಾರೆ. ಈ ನಾಲ್ವರು ಸಂಪಾದಕರ ಶ್ರಮ ಸಾರ್ಥಕವಾಗಿದ್ದು ಕನ್ನಡ ನಾಡು, ನುಡಿಗಳಿಗೆ ಹೆಮ್ಮೆಯ ಕಾಣಿಕೆಯಾಗಿದೆಯೆಂದರೆ ತಪ್ಪಾಗಲಾರದು. ಎಂದಿನಂತೆ ಕಲಾವಿದರು, ಕಲಾಭಿಮಾನಿಗಳು, ಲೇಖಕರು, ವಿದ್ಯಾರ್ಥಿಗಳು ಈ ಗ್ರಂಥವನ್ನು ಸ್ವಾಗತಿಸಿ, ಪ್ರಯೋಜನವನ್ನು ಪಡೆದುಕೊಳ್ಳುತ್ತಾರೆಂದು ನಂಬಿದ್ದೇನೆ.

ಈ ಗ್ರಂಥ ತಯಾರಿಸಿದ ಸಂಪಾದಕರುಗಳಿಗೆ, ಚಾಲಕಶಕ್ತಿ ನೀಡಿದ ರಿಜಿಸ್ಟ್ರಾರ್ ಶ್ರೀ ಕೆ. ಮುಕುಂದನ್ ಮತ್ತು ಸಿಬ್ಬಂದಿ ವರ್ಗದವರಿಗೆ, ಸದಸ್ಯರಿಗೆ ಹಾಗೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಲಕ್ಷ್ಮಿ ಮುದ್ರಣಾಲಯದವರಿಗೂ ವಂದನೆಗಳು.

**ಪಿ. ಆರ್. ತಿಪ್ಪೇಸ್ವಾಮಿ**

ಪ್ರಧಾನ ಸಂಪಾದಕರು

## ಸಂಪಾದಕರ ಮಾತು

ಕನ್ನಡದಲ್ಲಿ 'ಕೋಶ'ಗಳು ಅಪರೂಪವೇನಲ್ಲ. ಈಗಾಗಲೇ ಮೈಸೂರು ವಿಶ್ವವಿದ್ಯಾಲಯದಿಂದ ವಿಶ್ವಕೋಶ ಸಂಪುಟಗಳು ಹಾಗೂ, 'ವಿಷಯ ವಿಶ್ವಕೋಶ' ಸಾಹಿತ್ಯ ಪರಿಷತ್ತಿನಿಂದ 'ಜಾನಪದ ವಿಶ್ವಕೋಶ' ನಿರಂಜನರ 'ಜ್ಞಾನಗಂಗೋತ್ರಿ' ಸಂಪುಟಗಳು ಹಂಪೆಯ ಕನ್ನಡ ವಿಶ್ವವಿದ್ಯಾಲಯದಿಂದ 'ಕಿರಿಯರ ಕೋಶ' ಇತ್ಯಾದಿಗಳು ಹೊರಬಂದಿವೆ. ಇವುಗಳಲ್ಲೆಲ್ಲಾ ಪ್ರಾಸಂಗಿಕವಾಗಿ ಚಿತ್ರಕಲೆ, ಕಲಾವಿದರ ಬಗ್ಗೆಯೂ ನಮೂದುಗಳಿವೆ. ಇವುಗಳಿಗಿಂತ ತೀರಾ ಮೊದಲೇ ಎಂದರೆ ಸಾವಿರಾರು ವರ್ಷಗಳ ಹಿಂದೆಯೇ ವಿಶ್ವಕೋಶಗಳಂತಹ ಗ್ರಂಥಗಳು ಬಂದಿವೆ. ಅವೆಂದರೆ ಅಭಿಲಷಿತಾರ್ಥ ಚಿಂತಾಮಣಿ, ವಿಷ್ಣು ಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಶಿಲ್ಪಸೂತ್ರ, ಚಿತ್ರಸೂತ್ರ, ಶಿವತತ್ವ ರತ್ನಾಕರ ಇತ್ಯಾದಿಗಳು. ಇವುಗಳಲ್ಲಿಯೂ ಚಿತ್ರಕಲೆ ಕುರಿತ ಪ್ರತ್ಯೇಕ ಅಧ್ಯಾಯಗಳೇ ಇದ್ದು ಚಿತ್ರಕಲೆಯ ಅನೇಕ ಪಾರಿಭಾಷಿಕ ಶಬ್ದಗಳು ವಿವರಣೆಯೊಂದಿಗೆ ಬಂದಿವೆ. ಇಷ್ಟಾದರೂ ಕನ್ನಡದಲ್ಲಿ 'ಶಿಲ್ಪ, ಚಿತ್ರಕಲೆ'ಗೆ ಮೀಸಲಾದ ಪೂರ್ಣ ಪ್ರಮಾಣದ 'ಕೋಶ'ಗಳು ಇನ್ನು ಬಂದಿಲ್ಲ. ಆದರೆ ಆ ಬಗೆಯ ಒಂದೆರಡು ಪ್ರಯತ್ನಗಳು ನಡೆದಿವೆ.

ಗದಗಿನ ಶ್ರೀ ನ.ಮ.ಶಿರಹಟ್ಟಿ ಅವರು ತಮ್ಮ ಶಿಹಾಮಿ ಪಬ್ಲಿಕೇಷನ್ ಮೂಲಕ 'ಚಿತ್ರಕಲಾ ಕೈದೀಪ' ಎಂಬ ಕಿರು ಪುಸ್ತಕವನ್ನು ೧೯೮೭ರಲ್ಲಿ ತಂದಿದ್ದು ೮೬, ೯೦ರಲ್ಲಿ ಮರು ಮುದ್ರಣ ಕಂಡಿದೆ. ಅಂತೆಯೇ ಶ್ರೀಯುತರುಗಳಾದ ಎನ್. ಮರಿಶಾಮಾಚಾರ್ ಮತ್ತು ಎನ್. ವಿಶ್ವರೂಪಾಚಾರ್ ಅವರುಗಳು ೧೯೮೫ರಲ್ಲಿ 'ಕಲಾಕೋಶ' ಎಂಬ ಪುಸ್ತಕ ಹೊರತಂದರು. ಇವೆರಡೂ ಪುಸ್ತಕಗಳು ಕೋಶದ ಮಾದರಿಯನ್ನು ಅನುಸರಿಸಿವೆಯಾದರೂ ಅವುಗಳದೇ ಮಿತಿ ಹೊಂದುವುದು ಅನಿವಾರ್ಯವಾಯಿತು. ಈ ಕಾರಣದಿಂದ ಅಕಾಡೆಮಿ 'ಕಲಾಕೋಶ'ದಂತಹ ದೊಡ್ಡ ಪ್ರಮಾಣದ ಕಾರ್ಯಕ್ಕೆ ಮನಸ್ಸು ಮಾಡಿತು.

ಇತಿಹಾಸ ಪೂರ್ವದಿಂದಲೂ ಭಾರತದಲ್ಲಿ ಚಿತ್ರಕಲೆ ಆಳವಾಗಿ ಬೇರೂರಿ ನಿಂತು ತನ್ನದೇ ಆದ ಪಾರಿಭಾಷಿಕ ಶಬ್ದ ಹಾಗು ವಿವರಣೆ ಹೊಂದಿರುವುದು ಸರ್ವವೇದ್ಯ. ಆದರೆ ಭಾರತಕ್ಕೆ ಹೊರಗಿನಿಂದ ಬಂದ ಪ್ರವಾಸಿಗಳು, ಅರಸು ಮನೆತನಗಳು ತಮ್ಮೊಂದಿಗೆ ತಮ್ಮ ಕಲೆಯನ್ನು ತಂದಿದ್ದು ಅದರೊಂದಿಗೆ ಅದರದೇ ಆದ ಪಾರಿಭಾಷಿಕ ಶಬ್ದಗಳು ಬಂದವು. ಕಳೆದೊಂದು ಶತಮಾನದಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳ ಕಲೆಯ ಕ್ಷೇತ್ರದಲ್ಲಿ ಅಭೂತಪೂರ್ವ ಬದಲಾವಣೆಗಳು ಆದವು. ಅದರೊಂದಿಗೆ ದಿನಕ್ಕೊಂದು ಪಂಥಗಳು, ಹೊಸ ಪ್ರಯೋಗಗಳು, ಅನ್ವೇಷಣೆಗಳು ಬಂದು ಅನೇಕ ಹೊಸ ಪಾರಿಭಾಷಿಕ ಶಬ್ದಗಳು ಹುಟ್ಟಿಕೊಂಡವು.

ಇವು ಐರೋಪ್ಯ ದೇಶದ ಬೇರೆ ಬೇರೆ ಪ್ರಾಂತಗಳ ಭಾಷೆಗಳಲ್ಲಿದ್ದರೂ ಇಂಗ್ಲೀಷ್ ಮುಖಾಂತರ ಭಾರತಕ್ಕೂ ಬಂದಿತು. ಭಾರತೀಯ ಕಲಾ ಶಿಕ್ಷಣದಲ್ಲಿಯೂ ಸೇರಿಕೊಂಡು ಕಲಾವಿದರಲ್ಲಿ ಬಳಕೆಯಾಗತೊಡಗಿದವು. ಅವುಗಳ ಪ್ರಭಾವದಿಂದಾಗಿ, ಇಂದು ದೇಶೀಯ ಪದ್ಧತಿಗಳು ಹಾಗೂ ಪಾರಿಭಾಷಿಕ ಕಲೆಯ ಕ್ಷೇತ್ರದಲ್ಲಿ ಪದಗಳನ್ನು ಮರೆಸುವಷ್ಟು ವಿದೇಶಿಯ ಶಬ್ದಗಳು ತುಂಬಿಕೊಂಡಿರುವುದನ್ನು ಕಾಣಬಹುದು. ಇದರಿಂದಾಗಿ 'ಕಲಾಕೋಶದ' ಸ್ವರೂಪ ವಿಸ್ತಾರವಾಗುವಂತಾಯಿತು.

ಈ 'ಕಲಾಕೋಶ'ಕ್ಕೆ ಅನೇಕ ಮೂಲಗಳಿಂದ ನಮೂದುಗಳನ್ನು ಆರಿಸಲಾಗಿದೆ. ಇಂಗ್ಲೀಷಿನಲ್ಲಿರುವ ಹತ್ತಾರು ಕೋಶಗಳಿಂದ ಮುಖ್ಯವಾಗಿ ಆಧುನಿಕ ಕಲೆಗೆ ಹೆಚ್ಚು ಒತ್ತು ನೀಡುವಂತಹ ನಮೂದುಗಳನ್ನು ಪಟ್ಟಿ ಮಾಡಲಾಯಿತು. ಕರ್ನಾಟಕದಾದ್ಯಂತ ಕಲೆ ಕುರಿತು ಬರೆಯಬಲ್ಲ ಲೇಖಕರಿಗೆ ನಮೂದುಗಳನ್ನು ಒಂದಿಷ್ಟು ಪ್ರಾಥಮಿಕ ಮಾಹಿತಿಯೊಂದಿಗೆ ನೀಡಲಾಯಿತು. ಅವರುಗಳು ಇನ್ನಷ್ಟು ಮಾಹಿತಿ ಸಂಗ್ರಹಿಸಿ ಬರೆದು ಕೊಟ್ಟಿದ್ದನ್ನು ನಾಲ್ವರು ಸಂಪಾದಕರು ಸಮನಾಗಿ ಹಂಚಿಕೊಂಡು 'ಸಂಪಾದಿಸ'ಲಾಯಿತು. ಅನೇಕರು ಅಗತ್ಯಕ್ಕಿಂತ ತೀರಾ ಹೆಚ್ಚಿಗೆ ಬರೆದಿದ್ದರು. ವಿಷಯಾಂತರವೂ ಅಷ್ಟೇ ಪ್ರಮಾಣದಲ್ಲಿ ನಡೆದಿತ್ತು. ಅವುಗಳನ್ನು ಒಪ್ಪ ಓರಣವಾಗಿ ಜೋಡಿಸಿ, ಬೇಕಿರುವ ಇನ್ನುಳಿದ ನಮೂದುಗಳನ್ನು ಸಂಪಾದಕರೂ ಬರೆದಿದ್ದು ಸಾಧ್ಯವಾದೆಡೆಗಳಲ್ಲಿ ಛಾಯಾಚಿತ್ರ, ರೇಖಾಚಿತ್ರಗಳನ್ನು ಅಳವಡಿಸಿ ಇಲ್ಲಿ ಕೊಡಲಾಗಿದೆ.

ಇದರೊಂದಿಗೆ ಭಾರತೀಯ ಪಾರಿಭಾಷಿಕ ಶಬ್ದಗಳು ಹಲವಾರು ಕಡೆಗಳಲ್ಲಿ ಚದುರಿದ್ದನ್ನು ಸಂಗ್ರಹಿಸಿ ಕೊಡಲಾಗಿದೆ. ಚಿತ್ರಕಲೆಯಷ್ಟೇ ಅಲ್ಲ ಸಾಂಪ್ರದಾಯಿಕ ಶಿಲ್ಪಕ್ಕೆ ಸಂಬಂಧಿಸಿದ ಅನೇಕ ನಮೂದುಗಳನ್ನು ಇಲ್ಲಿ ನೀಡಲಾಗಿದೆ. ಈ ಕೆಲವು ನಮೂದುಗಳನ್ನು ಮೂಲ ಸಂಸ್ಕೃತ ಗ್ರಂಥಗಳಿಂದಲೇ ಆರಿಸಿ ತೆಗೆಯಲಾಗಿದೆ. ಗ್ರಾಫಿಕ್ ಮುದ್ರಣ ಕಲೆಗೆ ಸಂಬಂಧಿಸಿದ ನಮೂದುಗಳನ್ನು ಒಂದೇ ಎಡೆಯಲ್ಲಿ ಕೊಡಲಾಗಿದೆ.

ಇಲ್ಲಿಯ ನಮೂದುಗಳನ್ನು ಸ್ಥೂಲವಾಗಿ ಈ ರೀತಿ ವಿಂಗಡಿಸಿಕೊಳ್ಳಬಹುದು.

೧) ವಿವಿಧ ಪ್ರದೇಶದ ಕಲೆಗಳು (ವಿದೇಶ, ಭಾರತ, ಕರ್ನಾಟಕ)
೨) ಒಂದು ಕಾಲದ (ಅವಧಿಯ) ಕಲೆ (ವಿದೇಶ, ಭಾರತ)
೩) ಆಧುನಿಕ ಪಂಥ (ಇಸಂ)ಗಳು
೪) ಕಲಾಪರಿಕರಗಳು
೫) ಕಲಾ ಮಾಧ್ಯಮಗಳು
೬) ಬಣ್ಣ (ನಮೂನೆ, ತಯಾರಿಕೆ, ಬಳಕೆ ಇತ್ಯಾದಿ)

೭) ಜನಪದ ಕಲೆ (ಪ್ರಬೇಧಗಳು, ಶೈಲಿ, ರಚನಾ ವಿಧಾನ)
೮) ಶಿಲ್ಪ, ವಾಸ್ತುಶಿಲ್ಪ, ಶಿಲ್ಪೋಪಕರಣಗಳು
೯) ಗ್ರಾಫಿಕ್ (ಮಾಧ್ಯಮ, ಪ್ರಬೇಧ, ರಚನಾತಂತ್ರ, ಉಪಕರಣಗಳು ಇತ್ಯಾದಿ)
೧೦) ಸೌಂದರ್ಯ ಶಾಸ್ತ್ರ, ಕಲಾ ವಿಮರ್ಶೆ, ಶಾಸ್ತ್ರಗ್ರಂಥಗಳು
೧೧) ಚಿತ್ರಕಲೆಯ ವ್ಯಾಕರಣ
೧೨) ಕಲಾ ಪ್ರಕಾರಗಳು
೧೩) ಇತರೆ (ಮೇಲಿನ ವರ್ಗೀಕರಣಕ್ಕೆ ಒಳಪಡದ ಕೆಲವು ನಮೂದುಗಳು)

ಈ ಎಲ್ಲ ವರ್ಗೀಕರಣಗಳಿಂದ ಸುಮಾರು ಮುನ್ನೂರು ನಮೂದುಗಳನ್ನು ಆರಿಸಿ, ಅಕಾರಾದಿಯಾಗಿ ಜೋಡಿಸಿ ಕೊಡಲಾಗಿದೆ. ಪಾಶ್ಚಿಮಾತ್ಯ ಕಲಾಕೋಶಗಳಲ್ಲಿ ಮುಖ್ಯವಾಗಿ ಕಾಣುವುದು ಪಾರಿಭಾಷಿಕ ಪದಗಳೊಡನೆ ಕಲಾವಿದರ ವಿದ್ಯಾಭ್ಯಾಸ ಸಾಧನೆ ಇತ್ಯಾದಿ ವಿವರಗಳು. ಆದರೆ ಪ್ರಸ್ತುತ ಕೋಶದಲ್ಲಿ ಕಲಾವಿದರ ವಿವರಗಳನ್ನು ಕೈ ಬಿಡಬೇಕಾಯಿತು. ಇದಕ್ಕೆ ಕಾರಣ, ಗಾತ್ರ, ವಿಸ್ತರಣಾ ಭಯ. ಪಾಶ್ಚಿಮಾತ್ಯ ಪ್ರಮುಖ, ಭಾರತೀಯ ಹೆಸರುವಾಸಿಯಾದ, ಕರ್ನಾಟಕದ ಸುಮಾರು ಎಲ್ಲ ಕಲಾವಿದರನ್ನು ಅವಶ್ಯವಾಗಿ ನಮೂದಿಸಬೇಕಿತ್ತು. ಈ ಹೆಸರುಗಳ ಸಂಭಾವ್ಯಪಟ್ಟಿ ಮಾಡಿದಾಗ ಅದು ಐನೂರು ಹೆಸರುಗಳಿಗೂ ಮೀರಿತು. ಆದುದರಿಂದ ಕಲಾವಿದರನ್ನೇ ಕುರಿತು ಕಲಾಕೋಶವೊಂದನ್ನು ಹೊರತರಲು ಅವಕಾಶವಿದೆ.

ಕೋಶದ ಕೆಲಸ ಆರಂಭಿಸಿದಾಗ ಅದಕ್ಕೆ ಕಾಲಮಿತಿಯೊಂದರ ವಿನಾ ಉಳಿದ ಯಾವುದೇ ಮಿತಿ ಇರಲಿಲ್ಲ. ಆದರೂ ನೂರಾರು ನಮೂದುಗಳನ್ನು ಬೇರೆ ಬೇರೆ ಮೂಲಗಳಿಂದ ಆರಿಸುವಾಗ ಹಾಗೂ ಹತ್ತಾರು ವಿಭಿನ್ನ ಪ್ರದೇಶದ ಲೇಖಕರು ಬರೆಯುವಾಗ ಹಲವಾರು ಸಣ್ಣಪುಟ್ಟ ತೊಂದರೆಗಳು ಬಂದುದು ಸಹಜ. ಒಂದು ಭಾಷೆಯದಾದರೆ ಇನ್ನೊಂದು ಪುಟ ಮಿತಿಯದು. ಮುಖ್ಯವಾಗಿ ನಾಮಪದದ ಉಚ್ಚಾರಣೆಯಲ್ಲಿ ವ್ಯಕ್ತಿ ಇಲ್ಲವೆ ಊರಿನ ಹೆಸರಿನಲ್ಲಿ ಒಬ್ಬರಿಂದ ಒಬ್ಬರಿಗೆ ವ್ಯತ್ಯಾಸವಾಗುವುದುಂಟು. ಆದಷ್ಟು ಅವುಗಳಿಗೆ ಏಕರೂಪತೆ ಕೊಡಲು ಪ್ರಯತ್ನಿಸಿದೆ. ಆದರೂ ಭಿನ್ನ ಸ್ವರೂಪದ ಉಚ್ಚಾರಗಳು ಅಲ್ಲಲ್ಲಿ ಉಳಿದಿರಬಹುದಾದ ಸಾಧ್ಯತೆಗಳಿವೆ. ಅಂತೆಯೇ ನಮೂದುಗಳ ಆಯ್ಕೆಯಲ್ಲಿ ಹಲವಾರು ಕೋಶಗಳ ಆಕರಗಳನ್ನು ಪಡೆಯಲಾಗಿದೆ. ಲಭ್ಯವಿರುವ ಆಧುನಿಕ ಕಲಾ ಪ್ರಪಂಚದ ವಸ್ತು ವಿಷಯವನ್ನು ಪಡೆಯಲಾಗಿದೆ. ಆದರೂ ಕೆಲವಾದರೂ ಪಾರಿಭಾಷಿಕ ಶಬ್ದಗಳು ಕಲಾ ಪ್ರಕಾರ ಅಥವಾ ಶೈಲಿಗಳ ನಮೂದುಗಳು ಬಿಟ್ಟು ಹೋಗಿರುವ ಸಾಧ್ಯತೆಗಳಿವೆ. ಇದಕ್ಕೆ ಕಣ್ಣು ತಪ್ಪಿರುವ ಕಾರಣ ಒಂದಾದರೆ ಸಕಾಲದಲ್ಲಿ ಲೇಖನ ಬಾರದಿರುವುದೂ ಇನ್ನೊಂದೇ ವಿನಾ ಉದ್ದೇಶಪೂರಕವಾಗಿ ಅಲ್ಲವೆಂದು ನಮ್ರತೆಯಿಂದ ಸೂಚಿಸಬಯಸುತ್ತೇವೆ.

ಕನ್ನಡದ ಕಲಾಕೋಶಗಳಲ್ಲಿ ಇದೊಂದು ಆರಂಭ ಮಾತ್ರ. ಇದು ಇನ್ನೂ ಪರಿಪೂರ್ಣವಾಗಬೇಕು ಎಂಬುದು ನಮ್ಮ ಬಯಕೆ. ಓದುಗರ, ವಿಮರ್ಶಕರ ಎಂದಿನ ಪ್ರೋತ್ಸಾಹ ಈ ಗ್ರಂಥಕ್ಕೂ ದೊರೆಯುತ್ತದೆ ಎಂಬ ನಂಬಿಕೆ ನಮಗಿದೆ. ಕನ್ನಡದ ಕಲಾ ಪಂಡಿತರು ಇದರಲ್ಲಿರಬಹುದಾದ ಕುಂದು ಕೊರತೆಗಳನ್ನು ಸಹೃದಯತೆಯಿಂದ ತಿದ್ದಿ ಇನ್ನು ಪರಿಪೂರ್ಣವಾದ ಗ್ರಂಥ ಹೊರತರಲು ಈ 'ಕಲಾಕೋಶ' ಒಂದು ನಿಮಿತ್ತವಾಗಲಿ ಎಂದು ವಿನಂತಿಸುತ್ತೇವೆ. ಈ ಸಂಪುಟವನ್ನು ಹೊರತರಲು ನಮ್ಮೊಂದಿಗೆ ಸಹಕರಿಸಿದ ಲೇಖಕರಿಗೆ, ಮುದ್ರಕರಿಗೆ, ಅಧ್ಯಕ್ಷರು, ರಿಜಿಸ್ಟ್ರಾರ್, ಸಿಬ್ಬಂದಿವರ್ಗ, ಸದಸ್ಯರು ಮುಂತಾದ ಎಲ್ಲರಿಗೂ ವಂದನೆಗಳನ್ನು ಸಲ್ಲಿಸುತ್ತೇವೆ.

# ಕಲಾಕೋಶ

## ಅಂಡರ್ ಪೇಯಿಂಟಂಗ್

ಒಂದು ಚಿತ್ರದ ರೇಖಾಕೃತಿ, ಸಂಯೋಜನೆ, ಛಾಯೆಯ ಮೌಲ್ಯಗಳನ್ನು ಯೋಜಿಸುವುದು. ಅದು ಕೆಲವು ವೇಳೆ ಬಣ್ಣವನ್ನು ಸೂಚಿಸಬಹುದು. ಇದರ ಉದ್ದೇಶವೆಂದರೆ ಬಣ್ಣ ಹಚ್ಚುವ ಸಮಸ್ಯೆಗಳನ್ನು ಎದುರಿಸುವುದಕ್ಕೆ ಮುಂಚೆ, ಸಾಮಾನ್ಯವಾಗಿ ಹೊಳಪು ಇರುವಾಗ, ವಿನ್ಯಾಸ ಮತ್ತು ಛಾಯಾ ಮೌಲ್ಯಗಳನ್ನು ಸ್ಥಿರಪಡಿಸುವುದೇ ಆಗಿರುತ್ತದೆ. ನಿರ್ದಿಷ್ಟ ಅರ್ಥದಲ್ಲಿ, ಹೊಳಪನ್ನು ಉಂಟು ಮಾಡುವುದು. ಉದಾ: ಹಳದಿಯೊಂದಿಗೆ ಕೆಂಪು, ನೇರಳೆ ಬಣ್ಣಗಳಿಂದ ಹೊಳಪುಗೊಳಿಸಿ ನೆರಳಿನಲ್ಲಿ ಹೆಚ್ಚಿನ ಪರಿಣಾಮವನ್ನು ತರುವುದು.

ಮರಿ

## ಅಂತರಾಳ

ಗರ್ಭಗೃಹವನ್ನೂ ಮುಂದಿನ ಮಂಟಪವನ್ನೂ ಸೇರಿಸುವ ಭಾಗ 'ಅಂತರಾಳ'. ಗರ್ಭಗೃಹದ ಮುಂದಿನ ಈ ಮೊಗಸಾಲೆಯನ್ನು 'ಅರ್ಧಮಂಟಪ'ವೆಂದೂ ಕರೆದಿರುವುದು ಉಂಟು. ಇದು ಗರ್ಭಗೃಹಕ್ಕಿಂತ ಹೆಚ್ಚು ಅಲಂಕೃತವಾಗಿರುತ್ತದೆ. ಕೆಲವೊಮ್ಮೆ ಹಲವು ಪರಿವಾರದೇವತೆಗಳನ್ನೂ ಇದರಲ್ಲಿ ಸ್ಥಾಪಿಸಿರುತ್ತಾರೆ. ಇದಕ್ಕೆ ಮುಂದಿನ ಮಂಟಪದ ಕಡೆ ಸಾಮಾನ್ಯವಾಗಿ ದ್ವಾರವಿಲ್ಲದಿದ್ದರೆ 'ತೆರದ ಮುಖಮಂಟಪ' ಅಥವಾ 'ತೆರೆದ ಅಂತರಾಳ' ಎನ್ನುತ್ತಾರೆ.

ಪಿ.ವಿ.ಕೆ.

## ಅಕಾಡೆಮಿ

ಪಾಂಡಿತ್ಯದ ಕೇಂದ್ರವಾದ ಅಕಾಡೆಮಿಯು ಮೊದಲು ಕ್ರಿ.ಪೂ.೬೦೦ರಲ್ಲಿ ಅಥೆನ್ಸಿನ ಸಮೀಪದ ಆಲಿವ್ ಮರಗಳ ತೋಪಿನಲ್ಲಿ ಒಂದು ಮನೆಯಿದ್ದು, ಇದು ಗ್ರೀಕ್ ವೀರ ಅಕಡೆಮಸ್‌ನ ನೆನಪಿಗಾಗಿ ನಿರ್ಮಿತವಾಗಿತ್ತು. ಇಲ್ಲಿ ಒಂದು ಕ್ರೀಡಾಭವನವನ್ನು ಕಟ್ಟಿ, ಯುವಜನರು ಕ್ರೀಡೆಗಳನ್ನು ಆಡಲು ಸೇರುತ್ತಿದ್ದರು. ಕ್ರಿ.ಪೂ.೩೮೫ರಲ್ಲಿ ತತ್ವಜ್ಞಾನಿ ಪ್ಲೇಟೋ ಇದನ್ನು ವಿದ್ಯಾಸಂಸ್ಥೆಯನ್ನಾಗಿ ಮಾಡಿದ ಅಕೆಡಮಸ್ ಸ್ಮಾರಕ ಕ್ಷೇತ್ರದಲ್ಲಿ ಪ್ರಾರಂಭವಾದ ವಿದ್ಯಾಸಂಸ್ಥೆಯನ್ನು ಅಕಾಡೆಮಿ ಎಂದು ಕರೆದರು.

ಅನಂತರ ಕಲೆ, ವಿಜ್ಞಾನ, ಸಾಹಿತ್ಯ, ತತ್ವಜ್ಞಾನಗಳಲ್ಲಿ ಪಾಂಡಿತ್ಯ ಪಡೆದ ಸಂಘ ಸಂಸ್ಥೆಗಳಿಗೂ ಈ ಹೆಸರು ಅನ್ವಯಿಸಲ್ಪಟ್ಟಿತು. ನವೋದಯ ಕಾಲದಲ್ಲಿ ಇಟಲಿಯ ನಗರದಲ್ಲಿ

ಅಕಾಡೆಮಿಗಳು ಪ್ರಾರಂಭವಾದವು. ಕಲಾ ಅಕಾಡೆಮಿಗಳಿಗೆ ಮಾನ್ಯತೆ ಸಿಕ್ಕಿದ್ದು ಕೂಡ ನವೋದಯ ಕಾಲದಲ್ಲಿ. ಅಕಾಡೆಮಿಗಳು ವಿದ್ವಾಂಸರ ಸಂಸ್ಥೆಯಾಗಿದ್ದು, ಈಗ ಎಲ್ಲ ರಾಷ್ಟ್ರಗಳಲ್ಲೂ ಅಕಾಡೆಮಿಗಳು ಸ್ಥಾಪಿತವಾಗಿದ್ದು ಸಾಹಿತ್ಯ, ಕಲೆ ಮತ್ತು ವಿಜ್ಞಾನಗಳ ಅಭಿವೃದ್ಧಿಗಾಗಿ ಮೀಸಲಾಗಿರುವ ಸಂಸ್ಥೆಗಳಾಗಿವೆ.

ಸಾಹಿತ್ಯ ಕಲೆಗಳ ಸರ್ವತೋಮುಖ ಅಭಿವೃದ್ಧಿ, ವಿವಿಧ ಕಲೆಗಳ ಚಟುವಟಿಕೆಗಳ ಸಮನ್ವಯ ರಾಜ್ಯದ ಹಾಗೂ ರಾಷ್ಟ್ರದ ಸಾಂಸ್ಕೃತಿಕ ಏಳಿಗೆಗಾಗಿ ಶ್ರಮಿಸುವುದು. ಅಲ್ಲದೆ ಅಧ್ಯಯನ, ಸಂಶೋಧನೆಗಳಿಗೆ ಪ್ರೋತ್ಸಾಹ, ಇದಕ್ಕಾಗಿ ಸಂಸ್ಥೆಗಳನ್ನು ಗ್ರಂಥಾಲಯಗಳನ್ನು ಸ್ಥಾಪಿಸುವುದು. ವಿವಿಧ ಪ್ರದೇಶಗಳ ನಡುವೆ ವಿಚಾರ ವಿನಿಮಯ ನಡೆಸುವುದು, ಪುಸ್ತಕಗಳನ್ನು ಪ್ರಕಟಿಸುವುದು, ಪ್ರತಿಭಾವಂತ ಸಾಹಿತಿ, ಕಲಾವಿದರಿಗೆ ಮತ್ತು ಸಂಸ್ಥೆಗಳಿಗೆ ಮನ್ನಣೆ ಹಾಗೂ ನೆರವು ನೀಡುವುದು, ರಾಜ್ಯದ ವಿವಿಧ ಭಾಗಗಳ ನಾನಾ ರೀತಿಯ ಕಲೆಗಳ ಸಂಗ್ರಹ, ರಕ್ಷಣೆ ಪ್ರೋತ್ಸಾಹ ಕೊಡುವುದು. ಕಲಾಪ್ರದರ್ಶನ, ಸಾಹಿತಿ, ಕಲಾವಿದರು ಸಲ್ಲಿಸಿರುವ ಸೇವೆಗೆ ಪ್ರಶಸ್ತಿ, ಶಿಷ್ಯವೇತನ, ಪ್ರವಾಸಾನುಧಾನ, ಮುಂತಾದ ಧ್ಯೇಯೋದ್ದೇಶಗಳನ್ನು ಅಕಾಡೆಮಿ ಹೊಂದಿರುತ್ತದೆ.

ಭಾರತದಲ್ಲಿ ಕೇಂದ್ರ ಸರ್ಕಾರವು ಚಿತ್ರ, ಶಿಲ್ಪ ಕಲೆಗಳಿಗಾಗಿ ೧೯೫೪ರಲ್ಲಿ ಲಲಿತಕಲಾ ಅಕಾಡೆಮಿಯನ್ನು ಸ್ಥಾಪಿಸಿತು. ಇದು ನವದೆಹಲಿಯ ರಬೀಂದ್ರ ಭವನ ಕಟ್ಟಡದಲ್ಲಿದದೆ. ಅಲ್ಲದೆ ಕೇಂದ್ರ ಲಲಿತಕಲಾ ಅಕಾಡೆಮಿ ತನ್ನ ಕಾರ್ಯವ್ಯಾಪ್ತಿಯನ್ನು ರಾಷ್ಟ್ರದ ಬೇರೆ ಕಡೆ ವಿಸ್ತರಿಸಬೇಕೆಂಬ ಉದ್ದೇಶದಿಂದ, ಪ್ರಾಂತೀಯ ಅಕಾಡೆಮಿಗಳನ್ನು ಸ್ಥಾಪಿಸಿದ್ದು, ಮದ್ರಾಸು ಭುವನೇಶ್ವರ, ಕಲ್ಕತ್ತ, ಲಕ್ನೋಗಳಲ್ಲಿದೆ. ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ೧೯೬೪ರಲ್ಲಿ ಲಲಿತಕಲಾ ಅಕಾಡೆಮಿಯನ್ನು ಸ್ಥಾಪಿಸಿದೆ. ಇತ್ತೀಚೆಗೆ ಕರ್ನಾಟಕ ಸರ್ಕಾರವು ಶಿಲ್ಪಕಲೆಗಾಗಿ ಶಿಲ್ಪ ಕಲಾ ಅಕಾಡೆಮಿಯನ್ನು ಸ್ಥಾಪಿಸಿದೆ.

ಮಹಿ

## ಅಕಾಡೆಮಿಕ್ ಜ್ಯುಲಿಯನ್

ಜ್ಯುಲಿಯನ್ ಕಲಾಶಾಲೆ ೧೮೭೩ರಲ್ಲಿ 'ಈ ಕೋಲ್ ಡಿ ಬಾ ಆರ್ಟ್ಸ್' ಕಲಾಶಾಲೆ ಯಲ್ಲಿ ಪ್ರವೇಶ ದೊರೆಯದಿದ್ದ ವಿದ್ಯಾರ್ಥಿಗಳ ಬದಲಿ ವ್ಯವಸ್ಥೆಯಾಗಿ ಇದನ್ನು ಕಲಾವಿದ ರೂಥಾಲ್ಡ್ ಜುಲಿಯನ್ ಪ್ರಾರಂಭಿಸಿದ. ಅನಂತರ ಈ ಕಲಾಶಾಲೆ ಅತ್ಯಂತ ಜನಪ್ರಿಯತೆಯನ್ನು ಗಳಿಸಿತು.

ಶಾ

## ಅಕಾಡೆಮಿ ಸುಸೆ

ಇದು ಅತ್ಯಂತ ಹಳೆಯ ಅಕಾಡೆಮಿಗಳಲ್ಲಿ ಒಂದಾಗಿದ್ದು, ಪ್ಯಾರಿಸಿನ ಪಾಂಟ್ ಸೆಯಿಂಟ್ ಮಿಚಲ್‌ಗೆ ಹತ್ತಿರದ ದಂಡೆಯ ಮೇಲಿದೆ. ಇದನ್ನು ಸೂಸೆ ಸ್ಥಾಪಿಸಿ, ಕಡಿಮೆ ಶುಲ್ಕದಲ್ಲಿ

ಪ್ರವೇಶ ದೊರೆಯುತ್ತಿತ್ತು. ಈ ಅಕಾಡೆಮಿಯಲ್ಲಿ ಕೃತಿ ರಚಿಸಿದವರಲ್ಲಿ ಡೆಲಕ್ರಾಯ್, ಕೊಬೇಟ್, ಮ್ಯಾನೆಲ್, ಪಿಸ್ಸಾರೋ, ಮೊನೆ ಮತ್ತು ಸಿಜಾನ್ ಪ್ರಮುಖ ಕಲಾವಿದರು.

ಶಾ

## ಅಚ್ಚು ಮೊಳೆ ತಂತ್ರ (Typography)

ಸಮಕಾಲೀನ ಗ್ರಾಫಿಕ್ ಕಲೆಯ ಎರಡು ಮುಖ್ಯ ಅಂಶಗಳೆಂದರೆ ಅಕ್ಷರಗಳು ಮತ್ತು ಬಿಂಬಗಳು. ಹಾಳೆಯ ಮೇಲೆ ಮೂಡಬೇಕಾದ ಅಕ್ಷರಗಳ ಅಳತೆ, ವಿನ್ಯಾಸ ಇತ್ಯಾದಿಗಳ ಬಗೆಗೆ ನಡೆಸುವ ಅಭ್ಯಾಸಕ್ಕೆ ಟೈಪೋಗ್ರಫಿ ಎನ್ನುತ್ತಾರೆ. ಇದರಲ್ಲಿ ಕಲಾವಿದನ ಕುಸುರಿ ತಂತ್ರ ನಯವಾಗಿದ್ದೂ ಸಂಕೀರ್ಣವಾಗಿರಬೇಕು. ಕಳೆದೆರಡು ಶತಮಾನಗಳಲ್ಲಿ ರೋಮನ್ ಮಾದರಿಯ ನೂರಾರು ಬಗೆಯ ವಿನ್ಯಾಸಗಳು ರಚಿತವಾಗಿವೆ. ಅಡೋಬೆ, ಆಗ್ಫಾ, ಮಾನೋಟೈಪ್‌ನಂತಹ ಸಂಸ್ಥೆಗಳು ಅಚ್ಚು ಮೊಳೆಗಳ ಸಂಶೋಧನೆ ಹಾಗೂ ಉತ್ಪಾದನೆಗೆಂದೇ ಮೀಸಲಾಗಿವೆ.

ಟೈಪ್‌ಗಳನ್ನು ಸೇರೀಫ್ ಮತ್ತು ಸಾನ್ಸ್ ಸೇರೀಫ್ (ಸೇರೀಫ್ ರಹಿತ) ಎಂದೆರಡು ಬಗೆಯಲ್ಲಿ ವಿಂಗಡಿಸಲಾಗಿದೆ. ಸ್ಥೂಲವಾಗಿ ಬರೆದ ಅಕ್ಷರಗಳಿಗೆ ತೆಳುವಾದ ತುದಿ ಗೆರೆಗಳನ್ನು ಜೋಡಿಸುವುದು ಪರಿಪಾಠ. ಈ ಚೂಪು ಗೆರೆಗಳಿಗೆ ಸೇರೀಫ್ ಎನ್ನುತ್ತಾರೆ. ಇವುಗಳಿಂದಾಗಿ ಅಕ್ಷರಗಳು ಕೂಡಿಕೊಂಡಂತೆ ಕಾಣುತ್ತವೆ. ಸಾಮಾನ್ಯ ದಾಖಲೆಗಾಗಿ ಉಪಯೋಗಿಸುವ ಅಚ್ಚು ಮೊಳೆಗಳಲ್ಲಿ ಸೇರೀಫ್ ಮೊಳೆಗಳದ್ದೇ ಸಿಂಹ ಪಾಲು. ಫ್ಯೂಚರಿಸ್ಮ್‌ನ ಆವಿಷ್ಕಾರದ ನಂತರ ಹಾಗೂ ಸ್ಕ್ಯಾಂಡಿನೇವಿಯನ್ ವಿನ್ಯಾಸಗಳ ಜನಪ್ರಿಯತೆಯಿಂದಾಗಿ ಅಕ್ಷರಗಳಿಗೆ ಈ ಬಗೆಯ ತಲೆಕಟ್ಟು ನೀಡುವ ಸಂಪ್ರದಾಯ ಕಡಿಮೆಯಾಗಿ ಸೇರೀಫ್ ಇಲ್ಲದ(Sans Seriff) ಅಕ್ಷರ ವಿನ್ಯಾಸ ಆರಂಭವಾಯ್ತು. ಭಾಸ್ಕರ್ ವಿಲೆ ಸೇರೀಫ್‌ಯುತ ಅಕ್ಷರಗಳ ಪಿತಾಮಹನಾದರೆ ಎರೀಜಿಲ್ ಹೊಸ ಸೇರೀಫ್ ರಹಿತ ಅಕ್ಷರಮಾಲೆಯ ಮೂಲಪುರುಷ. ಇವನ ರಚನೆಗಳಾದ ಹಾಗೂ ಸಾಕಷ್ಟು ಮಾರ್ಪಾಡು ಹೊಂದಿದ ಜಿಲ್ ಸಾನ್ಸ್ ಹಾಗೂ ಎರೀ(ಎರಾಸ್) ಇಂದಿನ ಮುದ್ರಣ ಮಾಧ್ಯಮದಲ್ಲಿ ಬಹಳ ಜನಪ್ರಿಯವಾಗಿವೆ. ಜಿಲ್ ಅಕ್ಷರ ರಚನೆಗಿದ್ದ ಎಲ್ಲಾ ಕಟ್ಟು ಪಾಡುಗಳನ್ನು ತೊರೆದು ನಿರ್ಬಂಧ ಹಸ್ತ(free Hand) ಕೃತಿಗಳಾಗಿಸುವತ್ತ ಒಲಿದಿದ್ದ. ಡ್ಯೂರೆರ್ ಅಕ್ಷರಾಭ್ಯಾಸಕ್ಕೆ ಅನುಕೂಲವಾಗುವಂಥ ಹಲವಾರು ಹಸ್ತಪ್ರತಿಗಳನ್ನು ಬರೆದಿದ್ದ.

ಇತ್ತೀಚಿನ ದಿನಗಳಲ್ಲಿ ಮುದ್ರಣ ಮೊಳೆಗಳ ಜೋಡಣೆಯನ್ನು ಕಂಪ್ಯೂಟರ್ ಮುಖಾಂತರ ಮಾಡುವ ತಂತ್ರಜ್ಞಾನ ಬೆಳೆದಿದೆ. (DTP ಮತ್ತು Typesetting ಎನ್ನುವ ಹೆಸರುಗಳಲ್ಲಿ ಕರೆಯುತ್ತಾರೆ.) ಝಾಫ್ ಇತ್ತೀಚಿನ ವರ್ಷಗಳಲ್ಲಿ ಮೇಧಾವೀ ತಂತ್ರಕಾರ. ೫೦ಕ್ಕೂ ಹೆಚ್ಚು ಮೊಳೆ ವಿನ್ಯಾಸ ಮಾಡಿದ್ದಾನೆ. ಇಂದು ಜನಪ್ರಿಯವಾಗಿರುವ ಝಾಫ್ ಛಾನ್ಸರೀ ಆತನ ಕೃತಿಯೇ. (ನೋಡಿ: ಕ್ಯಾಲಿಗ್ರಾಫಿ, ಕಂಪ್ಯೂಟರ್ ಕಲೆ) ನಮ್ಮಲ್ಲಿ ಕಮಲೇಶ್‌ರ ಕ್ಯಾಲಿಗ್ರಫಿಯನ್ನು ಒಂದು ಹೆಸರಿಸಬಹುದಾದ ಶೈಲಿಗಳ ಪಾಲಿಗೆ ಸೇರಿಸಬಹುದಾದರೂ ಅದನ್ನು ಅಚ್ಚು ಮೊಳೆ ತಂತ್ರಕ್ಕೆ ಅಳವಡಿಸಿಲ್ಲ, ಈಗಿನ ಹಲವಾರು ಪತ್ರಿಕಾ ಚಿತ್ರಕಾರರು, ಜಾಹಿರಾತು ಚಿತ್ರಕಾರರು ತಮ್ಮದೇ ಶೈಲಿಗಳನ್ನು ಬೆಳೆಸಿಕೊಂಡಿದ್ದರೂ ಯಾರೂ ಅದರಲ್ಲೇ ಸಂಪೂರ್ಣವಾಗಿ ತೊಡಗಿಕೊಂಡಿಲ್ಲ,

ರ. ಶಾ.

## ಅಜಂತ

ಅಜಂತಾ ಗುಹಾಲಯಗಳು ಈಗಿನ ಮಹಾರಾಷ್ಟ್ರದ ಔರಂಗಬಾದ್ ಜಿಲ್ಲೆಯಲ್ಲಿವೆ ಈ ಪ್ರದೇಶವು ಬೆಟ್ಟಗಳ ನಾಡು. ಚಂದರ್, ಶತಮಾಲ, ವಿಂಧ್ಯಾದ್ರಿ ಮತ್ತು ಸಹ್ಯಾದ್ರಿ ಎಂದು ಕರೆಯಲ್ಪಡುವ ಪಶ್ಚಿಮ ಘಟ್ಟಗಳ ಬೆಟ್ಟಗಳ ಸುತ್ತಲೂ ಇವೆ.

ಈ ಗುಹಾಂತರ ದೇವಾಲಯಗಳು 'ವಾಘ್' ಕಣಿವೆಯ ಮನೋಹರವಾದ ನೈಸರ್ಗಿಕ ಸನ್ನಿವೇಶದಲ್ಲಿವೆ. ಬೆಟ್ಟವನ್ನು ಕೊರೆದು ಗುಹಾಲಯಗಳನ್ನು ನಿರ್ಮಿಸಿ ಚಿತ್ರಗಳನ್ನು ಬರೆಯುವ ಕಾರ್ಯವು ಕ್ರಿಪೂ. ೨ನೆಯ ಶತಮಾನದಿಂದ ಪ್ರಾರಂಭವಾಗಿ ಕ್ರಿ.ಶ. ೭ನೆಯ ಶತಮಾನದವರೆಗೂ ಮುಂದುವರೆದಿದೆ. ಶಾತವಾಹನರು, ವಾಕಾಟಿಕರುಮತ್ತು ಬಾದಾಮಿಯ ಚಾಲುಕ್ಯ ಅರಸರು ಬೌದ್ಧಭಿಕ್ಷುಗಳಿಗಾಗಿ ಗುಹಾಂತರ ದೇವಾಲಯಗಳನ್ನು ನಿರ್ಮಿಸಿದರು. ಶಿಲ್ಪಿಗಳು ಗುಹಾಲಯಗಳ ನಿರ್ಮಾಣ ಹಾಗೂ ಕಲಾವಿನ್ಯಾಸದಲ್ಲಿ ತಮ್ಮ ಚಾತುರ್ಯವನ್ನು ತೋರಿದ್ದಾರೆ. ಮತನಿಷ್ಠೆ ಹಾಗೂ ಪರಂಪರಾನುಗತವಾಗಿ ಬೆಳೆಸಿಕೊಂಡು ಬಂದ ಕಲಾಪರಿಪೂರ್ಣತೆಯನ್ನು ವರ್ಣಲೇಪನದಲ್ಲಿ ಬೌದ್ಧ ಭಿಕ್ಷುಗಳು ಉತ್ತಮವಾಗಿ ಪ್ರದರ್ಶಿಸಿರುವರು.

ಅಜಂತದಲ್ಲಿ ಒಟ್ಟು ೩೦ ಗುಹಾಂತರ ದೇವಾಲಯಗಳಿವೆ. ಅನೇಕ ಗುಹಾಲಯಗಳಲ್ಲಿ ಕಾಲ ಮತ್ತು ಪ್ರಕೃತಿಯ ಹೊಡೆತದಿಂದ ಚಿತ್ರಗಳು ನಾಶವಾಗಿವೆ. ೧೬ನೆಯ ಗುಹೆಯ ಕಲೆಯ ದೃಷ್ಟಿಯಿಂದ ಅತ್ಯಂತ ಮುಖ್ಯವಾದುದು. ಈ ಗುಹೆಯನ್ನು ಬೆಟ್ಟದೊಳಕ್ಕೆ ೬೫ ಕೊರೆದು ನಿರ್ಮಿಸಲಾಗಿದೆ. ೨೦ ಕಂಬಗಳನ್ನು ಅಂದವಾಗಿ ಕೊರೆಯಲಾಗಿದೆ. ಮುಖಮಂಟಪದಲ್ಲಿ ೫ ಕಂಬಗಳಿವೆ. ರಂಗಮಂಟಪದಲ್ಲಿ ಪ್ರತಿಯೊಂದು ಕಡೆಯೂ ಚಿಕ್ಕ ಚಿಕ್ಕ ತೊಲೆಗಳಿವೆ ಗರ್ಭಗೃಹದಲ್ಲಿ ಪ್ರಲಂಭ ಪದ್ಮಾಸನನಾಗಿರುಬುದ್ಧದೇವನ ಮೂರ್ತಿಯಿದೆ.ಈ ಗುಹೆಯಲ್ಲಿ ವಾಕಾಟಕ ರಾಜ ಹರಿಷೇಣನ ಶಿಲಾಶಾಸನವಿದೆ. ೧೭ನೆಯ ಗುಹಾಲಯವು ಸಹ ಸುಮಾರಾಗಿ ೧೦ನೇ ಗಹೆಯ ಮಾದರಿಯಲ್ಲಿದೆ ಎಂದು ಹೇಳಬಹುದು. ಇದರಲ್ಲಿ ೬೫ ವಿಸ್ತಾರವಾದ ಹಜಾರವಿದೆ. ಮತ್ತು ೨೦ ಸುಂದರವಾದ ಕಂಬಗಳನ್ನು ಕೊರೆದು ಬಿಡಿಸಲಾಗಿದೆ. ಈ ಗುಹಾಲಯುವನ್ನು ಅತ್ಯಂತ ಸುಂದರವಾದ ಮಂದಿರವನ್ನಾಗಿಸಬೇಕೆಂಬ ಇಚ್ಛೆಯಿಂದ ಕೊರೆಯಲಾಗಿದೆ. ಆದರೆ ಕೆಲಸ ಪೂರ್ಣಗೊಂಡಿಲ್ಲ.

ಅಜಂತದ ಭಿತ್ತಿಚಿತ್ರಗಳು: ಅಜಂತದ ಗುಹೆಗಳ ಉತ್ಕೃಷ್ಟವಾದ ಶಿಲ್ಪ ಚಿತ್ರರಚನೆಗಾಗಿ ಗುಪ್ತರ ಕಾಲದ ಕಲಾ ಔನ್ನತ್ಯವನ್ನೂ ಗಾಂಧಾರ, ಪಾರಸಿಕ, ಚೀನಾ ಸಂಪರ್ಕದ ಸಂಕೀರ್ಣತೆಯನ್ನು ಸೂಚಿಸುತ್ತವೆ. ಇಲ್ಲಿರುವ ೩೦ ಗುಹೆಗಳಲ್ಲಿ ೨,೯,೧೦,೧೫, ೧೬, ೧೯, ೨೬ ಮತ್ತು ೨೯ ಪೂಜಾರ್ಹವಾದ ಚೈತ್ಯಗಳು. ಮಿಕ್ಕವುಗಳು ಭಿಕ್ಷುಗಳ ವಾಸಕ್ಕಾಗಿ ಕೊರೆದಿರುವ ವಿಹಾರಗಳು, ಅಥವ ಸಂಘಾರಾಮಗಳು. ೮,೯,೧೦,೧೨, ಮತ್ತು ೧೩ನೆಯ ಗುಹೆಗಳು ಬೌದ್ಧರ ಹೀನಯಾನ ಪಂಗಡಕ್ಕೂ ಉಳಿದವುಗಳು ಮಹಾಯಾನ ಪಂಗಡಕ್ಕೂ ಸೇರಿ

ಹೀನಯಾನ ಗುಹೆಗಳಲ್ಲಿ ಶಿಲ್ಪಚಿತ್ರಗಳು ಕಡಿಮೆ. ಮಹಾಯಾನ ಗುಹೆಗಳಲ್ಲಿ ಶಿಲ್ಪಚಿತ್ರಗಳು ಹೆಚ್ಚಾಗಿ ಕಂಡು ಬರುತ್ತವೆ. ಕಾರಣವೆಂದರೆ ಹೀನಯಾನ ಪಂಥದಲ್ಲಿ ಬುದ್ಧನ ಸಂಕೇತಗಳಾದ ಪಾದಗಳು, ಧರ್ಮಚಿತ್ರ, ದಂತಗಳು, ಸಂಪುಟಗಳಲ್ಲಿಟ್ಟು ಜೋಪಾನ ಮಾಡಿದ ಬೂದಿ ಇವುಗಳಿಗೆ ಮಾತ್ರ ಆರಾಧನೆ ಸಲ್ಲತಕ್ಕದ್ದು. ದೈಹಿಕ ರೂಪವನ್ನು ಶಿಲ್ಪ ಚಿತ್ರಾದಿಗಳಲ್ಲಿ ಕೂಡ



ಅಜಂತ

ನಿಷೇಧಿಸಲಾಗಿತ್ತು, ಹೀನಯಾನ ಯುಗದಲ್ಲಿ ಬುದ್ಧನ ಜನನ, ತ್ಯಾಗ,, ಜ್ಞಾನಸಂಪಾದನೆ, ಮಹಾಪರಿನಿರ್ವಾಣ ಇವುಗಳು ಮಾತ್ರ ಶಿಲ್ಪದಲ್ಲಿ ಪ್ರದರ್ಶಿತವಾದವು.

ಮಹಾಯಾನದಲ್ಲಿ ಬುದ್ಧನ ದೈಹಿಕ ನಿರೂಪಣೆ ಮತ್ತು ಅವನ ಪೂರ್ವಜನ್ಮದ ಕಥನ ರೂಡಿಗೆ ಬಂದಿತು. ಅಶೋಕನ ತರುವಾಯ ಮಹಾಯಾನ ಪಂಥವು ಪ್ರವರ್ಧಮಾನಕ್ಕೆ ಬಂದಿತೆನ್ನಬಹುದು. ಬುದ್ಧನ ಜೀವಿತಕ್ಕೆ ಸಂಬಂಧಿಸಿದ ಜಾತಕಕತೆಗಳು,ಆರ್ಯದೇವನ ಜಾತಕಮಾಲೆ, ಅಶ್ವಘೋಷನ ಬುದ್ಧಚರಿತೆ ಸೌಂದರಾನಂದ, ಸಾರಿಪುತ್ರ ಪ್ರಕರಣ, ಪ್ರಮುಖವಾದ ಭಿಕ್ಷುಗಳ ಜೀವಿತಗಳು ಚರಿತ್ರಾತ್ಮಕ ಘಟನೆಗಳು, ಪ್ರಕೃತಿ ಸೌಂದರ್ಯವನ್ನು ಸಾರುವ ಮೃಗ, ಪಕ್ಷಿ, ವೃಕ್ಷ ಮುಂತಾದವು ವರ್ಣಚಿತ್ರಗಳಲ್ಲಿಯೂ, ಶಿಲ್ಪದಲ್ಲಿಯೂ ಅತ್ಯಂತ ಸುಂದರವಾಗಿ ರೂಪುಗೊಂಡವು. ಚಿತ್ರದ ಹಿನ್ನಲೆಯಾದ ಪಶು, ಪಕ್ಷಿ, ಪ್ರಾಣಿಗಳ ಸಮುದಾಯದ ಚಟುವಟಿಕೆಗಳಿಗೂ ಮುನ್ನೆಲೆಯಾದ ಮಾನವನ ಪ್ರವೃತ್ತಿಗಳಿಗೂ ಇರುವ ಅನುಪಮ ಸಮ್ಮೇಳನ ಚಿತ್ರಕಾರನು ಪ್ರತಿಯೊಂದು ವರ್ಣಚಿತ್ರದಲ್ಲೂ ಮನೋಜ್ಞವಾಗಿ ರೂಪಿತವಾಗಿದೆ. ಇಂಥಹ ಸಮ್ಮಿಳನ ಅವನ ಕಲ್ಪನಾಶಕ್ತಿಯಲ್ಲಿ ರಚನಾ ವಿಧಾನದಲ್ಲಿ ನಿರ್ದಿಷ್ಟವಾಗಿ ಕಂಡು ಬರುತ್ತದೆ.

ಅಜಂತದ ಚಿತ್ರಗಳನ್ನು ಸ್ಥೂಲವಾಗಿ ೩ ಪಂಗಡಗಳಾಗಿ ವಿಂಗಡಿಸಬಹುದು. ೧)ಅಶುದ್ಧಾಲಂಕಾರದವು ೨)ಶುದ್ಧರೂಪಾತ್ಮಕವಾದವು ೩)ಕತನಾತ್ಮಕವಾದವು. ೩ನೆಯ ವಿಭಾಗದಲ್ಲಿ ಮತ್ತೆ ೩ ಭಾಗಗಳಿವೆ. ೧)ಸಮಕಾಲೀನ ಚರಿತ್ರಾತ್ಮಕ ಕಥನ, ೨)ಗೌತಮನ ಸಂಸಾರತ್ಯಾಗ, ಬುದ್ಧತ್ವ ಸಂಪಾದನೆ ಹಾಗೂ ಮಹಾನಿರ್ಣಯಗಳ ಕಥನ, ೩)ಆರ್ಯದೇವ ಜಾತಕ ಮಾಲೆಯಲ್ಲಿ ಅಶ್ವಘೋಷ, ಬುದ್ಧ ಚರಿತ್ರೆ, ಸೌಂದರಾನಂದ ಸಾರಿಪುತ್ರ ಪ್ರಕಾರಗಳಲ್ಲಿ ಬುದ್ಧರ ದಿವ್ಯವಿಧಾನ ಮುಂತಾದವುಗಳಲ್ಲಿ ವರ್ಣಿಸಿದ ಚರಿತ್ರೆ ಇವೆಲ್ಲವೂ ಸೇರಿರುತ್ತವೆ.

ಸಮಕಾಲೀನ ಚರಿತ್ರಾತ್ಮಕ ದೃಶ್ಯಗಳಲ್ಲಿ ಮುಖ್ಯವಾದವುಗಳೆಂದರೆ. ೧ನೆಯ ಗುಹೆಯಲ್ಲಿರುವ ಇಮ್ಮಡಿ ಪುಲಕೇಶಿಯು ತನ್ನ ದರ್ಬಾರಿನಲ್ಲಿ ಪಾರಸಿಕ ರಾಜನಾದ ೩ನೆಯ ಖುಸ್ರುವಿನ ರಾಯಭಾರಿಯನ್ನು ಬರಮಾಡಿಕೊಳ್ಳುವ ಚಿತ್ರ ಇದರಲ್ಲಿ ಖುಸ್ರು ಮತ್ತು ಅವನ ರಾಣಿಯರ ಚಿತ್ರಗಳಿವೆ. ೧೭ನೆಯ ಗುಹೆಯಲ್ಲಿ ಅಶೋಕನ ಮಗನಾದ ವಿಜಯನ ಸಿಂಹಳ ವಿಜಯ ಎಂಬುದರಲ್ಲಿ ನರ್ತಕಿಯರ ವೃಂದ ಅತಿ ಮನೋಹರವಾಗಿದೆ.

ಕಣ್ಣು ಕೋರೈಸುವಂಥ ಬಣ್ಣಗಳು ನೈಜವಲ್ಲದ ಭಂಗಿಗಳು, ಪ್ರವೃತ್ತಿಗಳು ಅಜಂತದ ಚಿತ್ರರಚನೆಗೆ ಅತಿದೂರವಾದವು. ಆತ್ಮಸಂತೋಷ, ಸಂಘಸುಧಾರಣೆ ಜ್ಞಾನಾಭಿವೃದ್ಧಿ ಇವೇ ಈ ಎಲ್ಲ ಚಿತ್ರಗಳ ಉದ್ದೇಶವಾಗಿದೆ. ಆಧ್ಯಾತ್ಮಿಕ ಶಾಂತಿಯಲ್ಲದೆ ಮನೋವಿಕಾರಗಳ ಚಿತ್ರಣ ಇಲ್ಲಿ ಕಂಡು ಬರುವುದಿಲ್ಲ.

ಜೆ. ಟಿ. ಡ.

## ಅಣ್ಕೆ, ಅಣ್ಕೆಗೆಯ್

ಅಣ್ಕೆ, ಅಣ್ಕೆಗೆಯ್ ಎಂದರೆ, ಲೇಪನ, ಬಳಿಯುವುದು, ಬಣ್ಣ ಹಾಕುವುದು ಎಂಬ ಅರ್ಥವಿದೆ. ಮಲ್ಲಿನಾಥ ಪುರಾಣದಲ್ಲಿ "ಅನಿಲಕಂ, ಪತ್ರಧಂ, ಬಿಂದುಕಂ, ಧೂಮ್ರವತಕಂ, ಉದ್ವರ್ತನಂ, ಚಿತ್ರ ಪ್ರವರ್ತನ ಎಂಬ ಆರುತೆರದ ಅಣ್ಕೆಯಮಂ" ಎಂದೂ ಚಂದ್ರಪ್ರಭ ಪುರಾಣದಲ್ಲಿ "ಪುಲಕಂ, ಪತ್ರಕಂ, ಬಿಂದುಕಂ, ಧೂಮ್ರಾವರ್ತಂ, ಉದ್ವರ್ತನಂ, ಚಿತ್ರವರ್ತಂ ಎಂಬ ಆರು ಅಣ್ಕೆಗಳೂಂ" ಎಂದೂ, ಜಯನೃಪಕಾವ್ಯದಲ್ಲಿ ನೀಲಕ, ಬಿಂದುಕ, ಪತ್ರಕ, ಧೂರ್ಮಸುವರ್ತನ, ನವಚಿತ್ರಸುವರ್ತಕವೆಂದೆಂಬ ಆರು ತರದಣ್ಕೆ'ಎಂದು (ಇಲ್ಲಿ ಐದೇ ಇದೆ, ಧೂರ್ಮ ಹಾಗೂ ಸುವರ್ತನ ಬೇರೆ ಎಂದು ಪರಿಗಣಿಸಿದರೆ ಆರು ಆಗುತ್ತದೆ) ಆರುವಿಧದ ಲೇಪನ ಕ್ರಿಯೆಯ ಬಗ್ಗೆ ಉಲ್ಲೇಖ ದೊರೆಯುತ್ತದೆ. ಇಲ್ಲಿಯ ಮೂರು ಉದಾಹರಣೆಗಳಲ್ಲಿ ಪತ್ರಕ ಮತ್ತು ಬಿಂದುಕಗಳಷ್ಟೇ ಸಮಾನವಾಗಿದ್ದು ಉಳಿದವುಗಳಲ್ಲಿ ವ್ಯತ್ಯಾಸವಿರುವುದರಿಂದ ಇವು ಒಂದು ನಿಶ್ಚಿತ ಎಣಿಕೆ ಎಂದು ಅನ್ನಿಸುವುದಿಲ್ಲ. ಮತ್ತು ಇವುಗಳನ್ನು ಅರ್ಥೈಸಲೂ ಸಾಧ್ಯವಾಗುವುದಿಲ್ಲ, ಸಂಸ್ಕೃತ ಶಬ್ದಕೋಶದಲ್ಲಿ 'ಬಿಂದು'ವೆಂದರೆ ಆನೆಯ ಮೈಮೇಲೆ ಬರೆಯುವ ಬಣ್ಣ ಬಣ್ಣದ ಬೊಟ್ಟುಗಳು ಎಂಬ ಅರ್ಥವಿದೆ. 'ಬಿಂದುಕಂ' ಎಂದರೆ ಇಡೀ ಚಿತ್ರವನ್ನು ಬಣ್ಣದ ಚುಕ್ಕೆಗಳಿಂದ ಇಂದಿನ Pointillism ನಂತೆ ಪೂರೈಸುವಿಕೆ ಎಂದು ಹೇಳಬಹುದು. ಇಡೀ ಚಿತ್ರವನ್ನಲ್ಲದಿದ್ದರೂ ನೆರಳು-ಬೆಳಕಿನ ಭಾಗವನ್ನು ಚುಕ್ಕೆಗಳಿಂದ ರಚಿಸುವ ಪದ್ಧತಿಯೊಂದು ಇದ್ದಿರಬಹುದು. ಅಜಂತೆಯ ಕೆಲವು ಚಿತ್ರಗಳಲ್ಲಿ ತೆಳುವಾದ ಬಣ್ಣದ ಮೇಲೆ ಗಾಢವಾದ ಬಣ್ಣಗಳ ಚುಕ್ಕೆಗಳನ್ನು ಇರಿಸಿ ಆಕಾರಗಳನ್ನು ಎದ್ದು ಕಾಣುವಂತೆ

ಮಾಡಿರುವುದಾಗಿ ಕಲಾವಿದ ಶ್ರೀ ಎಂ. ಎಸ್. ಚಂದ್ರಶೇಖರ್ ಅವರು ತಿಳಿಸುತ್ತಾರಲ್ಲದೆ ಇದೇ ಪದ್ಧತಿಯನ್ನು ಅನುಸರಿಸಿ ನೂರಾರು ಪ್ರತಿಕೃತಿಗಳನ್ನು ರಚಿಸಿದ್ದಾರೆ.

**ಅಲನ**

## ಅರ್ಥ್ ಆರ್ಟ್ Earth Art

ಭೂಮಿ, ಬಂಡೆಗಳು, ನೊರೆ ಅಥವಾ ಮಂಜು ಇಂತಹ ನೈಸರ್ಗಿಕ ವಸ್ತುಗಳನ್ನು ಬಳಸಿ ಗ್ಯಾಲರಿಯಲ್ಲಾಗಲೀ ಅಥವಾ ಹೊರಾಂಗಣದಲ್ಲಾಗಲೀ ಸೃಷ್ಟಿಸಲ್ಪಟ್ಟ ಕಲಾಕೃತಿಗಳನ್ನು ನಿರ್ದೇಶಿಸಲು ಬಳಸುವ ಪದ. ೧೯೬೦ರ ಮಧ್ಯದಿಂದ ಬಳಕೆಯಲ್ಲಿದೆ. ರಾಬರ್ಟ್ ಸ್ಮಿತ್‌ಸನ್, ಮಾರಿಸ್, ರಾಬರ್ಟ್ಸ್ ಹಾಗೂ ಮೈಕೆಲ್ ಹೈಝರ್ ಪ್ರಮುಖರು.

**ರ.ಕಾಶಿ**

## ಅಧಿಷ್ಠಾನ

ಆಧಾರ ಅಥವಾ ತಳಹದಿಗೆ 'ಅಧಿಷ್ಠಾನ' ಎಂದು ಹೆಸರು. ಕಟ್ಟಡದ ತಳಭಾಗ ಇದು. ಮೂಸೂರಕ, ವಾಸ್ತೂಧ್ವಾರ, ಧರಾತಲ, ತಲ, ಕುಟ್ಟಿಮ ಇವುಗಳು ಅಧಿಷ್ಠಾನಕ್ಕೆ ಸಮಾನಾರ್ಥಕವಾದ ಪದಗಳು. ಇದು ಕಟ್ಟಡ ಅಥವಾ ದೇವಾಲಯದ ಭಾರವನ್ನೆಲ್ಲಾ ಹೊರುವ ಸಾಮರ್ಥ್ಯವಿರುವಂತೆ ದೃಢವಾಗಿ ಕಟ್ಟಲಾದ ಭಾಗ. ಸಾಮಾನ್ಯವಾಗಿ ಇದು ದೇವಾಲಯದ ಎತ್ತರದ ಎಂಟನೇ ಒಂದು ಭಾಗದಷ್ಟು ಪ್ರಮಾಣವುಳ್ಳದ್ದಾಗಿರುತ್ತದೆ. ಪಾದುಕಾ, ಜಗತಿ, ಕುಮುದ, ಗಳ, ಅಂತರಿಕ, ಕಂಪ, ಪಟ್ಟಿಕಾ ಮತ್ತು ವಾಜನಗಳೆಂಬ ಅಲಂಕರಣ ಪಟ್ಟಿಕೆಗಳಿಂದ ಇದು ಕೂಡಿರುತ್ತದೆ. ಈ ಅಲಂಕರಣ ಭಾಗಗಳಲ್ಲಿನ ಹೆಚ್ಚು ಕಡಿಮೆಗಳನ್ನು ಅಥವಾ ವಿಸ್ತೀರ್ಣದಲ್ಲಿನ ವ್ಯತ್ಯಾಸವನ್ನು ಅವಲಂಭಿಸಿ ಅನೇಕ ವಿಧದ ಅಧಿಷ್ಠಾನಗಳನ್ನು ರಚಿಸಲಾಗುತ್ತದೆ. ಶಾಸ್ತ್ರಗ್ರಂಥಗಳು ಅನೇಕ ವಿಧದ ಅಧಿಷ್ಠಾನಗಳನ್ನು



ಹೆಸರಿಸುತ್ತವೆ. ಮಯಮತದಲ್ಲಿ ಜಾತಿ ಮತ್ತು ಭೂಮಿ ಎಂಬ ಎರಡು ಪ್ರಧಾನ ರೀತಿಗಳನ್ನು ಹೆಸರಿಸಿದೆ. ಶಿಲ್ಪ ರತ್ನದಲ್ಲಿ ಮಂಚಕ, ಪಾದಬಂಧ ಮತ್ತು ಪ್ರತಿಬಂಧಗಳೆಂಬ ಮೂರು ವಿಧಗಳನ್ನು ತಿಳಿಸುತ್ತದೆ. ಒಟ್ಟಾರೆ ಅಲಂಕರಣದ ಭಾಗಗಳನ್ನು ವಿವಿಧ ರೀತಿಯ ಸಂಯೋಜನೆಗಳಿಂದ ಅವನ್ನು ರೂಪಿಸಲಾಗಿರುತ್ತದೆ. ಇಂತಹವುಗಳಲ್ಲಿ ಕಪೋತಬಂಧ, ಪದ್ಮಕಬಂಧ, ಶ್ರೀಬಂಧ, ಪುಷ್ಪಕಬಂಧ, ಪದ್ಮಪುಷ್ಕಲ, ಸುಂದರಾಬ್ಜಬಂಧಗಳನ್ನು ಹೆಸರಿಸಬಹುದು. ಹಲವು ಕಡೆ ಅಧಿಷ್ಠಾನದ ಕೆಳಗೆ 'ಉಪಪೀಠ'ವೆಂಬ ಐಚ್ಛಿಕಭಾಗ ಕಂಡುಬರುತ್ತದೆ.

**ಉಪಪೀಠ:** ಅಧಿಷ್ಠಾನದ ಕೆಳಗೆ ಐಚ್ಛಿಕವಾಗಿ ಬರುವ ಈ ಭಾಗ ಕಟ್ಟಡದ ಉನ್ನತಿ, ಶೋಭೆ, ಮತ್ತು ರಕ್ಷಣೆಗಳಿಗಾಗಿ ಇದು ಇದ್ದರೆ ಒಳಿತು ಎಂಬ ಕಾರಣದಿಂದ ಇದನ್ನು ಅಳವಡಿಸಿಕೊಂಡಿರುತ್ತಾರೆ. ಇದನ್ನೂ ಕೂಡ ಅಧಿಷ್ಠಾನದಂತೆ ಅಲಂಕರಣ ಪಟ್ಟಿಕೆಗಳಿಂದ ಅಲಂಕರಿಸಿರುತ್ತಾರೆ. ಹಲವು ವೇಳೆ ಪದ್ಮದಳಗಳ ಅಲಂಕಾರದಿಂದ ಕೂಡಿದ 'ಪದ್ಮಪಾದುಕಾ' ಎಂಬ ಐಚ್ಛಿಕ ಭಾಗವು ಇದರ ಸ್ಥಳದಲ್ಲಿ ರೂಪಿಸಿರುವುದುಂಟು.

**ಪಿ.ವಿ.ಕೆ.**

## ಅನ್ವಯಿಕ ಕಲೆಗಳು(Applied Arts)

ಕ್ರಿ.ಶ. ೧೯ನೆಯ ಶತಮಾನದಲ್ಲಿ ಔದ್ಯೋಗಿಕ ಕ್ರಾಂತಿಯ ನಂತರ ಈ ಪದದ ಬಳಕೆಯಾಗತೊಡಗಿತು. ಉಪಯುಕ್ತ ವಸ್ತುಗಳ ನಿರ್ಮಾಣದ ಜೊತೆಗೆ ಅವುಗಳಲ್ಲಿ ಕಲಾತ್ಮಕ ಅಂಶಗಳನ್ನು ಬುದ್ಧಿಪೂರ್ವಕವಾಗಿ ಸೇರಿಸಲಾಯಿತು. ಅನ್ವಯಿಕ ಕಲೆಗಳು ಅಲಂಕಾರಿಕ ಕಲೆ(ಪೀಠೋಪಕರಣ, ಆಭರಣ, ಮಡಿಕೆ-ಕುಡಿಕೆಗಳು) ಮತ್ತು ಆಧುನಿಕ ಕರಕುಶಲ ಕಲೆಗಳೊಂದಿಗೆ ನಿಕಟ ಸಂಬಂಧ ಹೊಂದಿವೆ. ವಿಶೇಷವಾಗಿ ಇವು ವ್ಯಾಪಾರದ ದೃಷ್ಟಿಯಿಂದ ಮತ್ತೆ ಮತ್ತೆ ಅದೇ ನಕ್ಷೆಗಳೊಂದಿಗೆ ಸಿದ್ಧಗೊಳ್ಳುವ ಯಂತ್ರನಿರ್ಮಿತ ವಸ್ತುಗಳನ್ನೊಳಗೊಳ್ಳುತ್ತವೆ. ಉತ್ಪಾದಕರು ಯಂತ್ರನಿರ್ಮಿತ ವಸ್ತುಗಳಲ್ಲಿ ಕಲೆಯನ್ನು ಒಡಗೂಡಿಸುವಲ್ಲಿ ವಿಫಲರಾದುದನ್ನು ಕಂಡು ವಿಲಿಯಂ ಮೊರಿಸ್‌ನಂತಹ ವ್ಯಕ್ತಿಗಳು, 'ಕಲೆಗಳು ಮತ್ತು ಹಸ್ತಕೌಶಲ್ಯ' ಚಳುವಳಿಯಲ್ಲಿ ಆಸಕ್ತರಾದರು. ಈ ಚಳುವಳಿಯು ಪ್ರತಿನಿತ್ಯದ ಪರಿಸರದಲ್ಲಿ ಕಲೆಯನ್ನು ಬೆಸೆಯಬೇಕೆಂಬ ಮನೋವಿಲಾಸದ ಅಭಿವ್ಯಕ್ತಿ ಎನ್ನಬಹುದು.

ಔದ್ಯೋಗಿಕ ಕ್ರಾಂತಿಯ ಪರಿಣಾಮವಾಗಿ ಅಲಂಕಾರಿಕ ಕಲೆಗಳು ಲಲಿತಕಲೆಗಳ ಪೂರಕ ಅಂಗವೆಂದು ಗಣಿಸಲಾಯಿತು. ಕ್ರಮೇಣ ಅಲಂಕಾರವು ಯಾವುದೇ ಮೇಲ್ಮೈಗೆ ಹಚ್ಚಬಹುದಾದ ಕಲಾತ್ಮಕ ಎಣ್ಣೆ ಎಂದು ತಿಳಿಯಲಾಯಿತು. ಇದು ಅನ್ವಯಿಕ ಕಲೆಗೆ ದಾರಿಮಾಡಿಕೊಟ್ಟಿತು. ನಂತರ ಅನ್ವಯಿಕ ಕಲೆಯು ಮಾರಾಟದ ವಸ್ತುಗಳ ನಿರ್ಮಾಣದ ಒಂದಂಶವೆನಿಸಿತು ಮತ್ತು ಔದ್ಯೋಗಿಕ ಕಲೆ ಎಂಬುದಾಗಿ ಕರೆಯಲ್ಪಟ್ಟಿತು.

**ಶಿ. ಪ.**

## ಅನಿಲ್ ಲೈನ್

ಹಿಂದೆ ನೀಲಿಯ ಗಿಡದಿಂದಲೂ, ಈಚೆಗೆ ವಿಶೇಷವಾಗಿ ಕೋಲ್ ಟಾರಿನಿಂದಲೂ

(ಎಂದರೆ ಕೀಲೆಣ್ಣೆಯಿಂದಲೂ) ತಯಾರಿಸುವ ಅನೇಕ ಉಜ್ವಲ ವರ್ಣಗಳಿಗೆ ಮೂಲವಾದ, ಒಂದು ರಾಸಾಯನಿಕ ಆಧಾರ ವಸ್ತು ; ನೀಲಿ ಸಾಮಾನ್ಯವಾಗಿ ಸಾವಯವ ವರ್ಣಗಳಿಗಿಂತಲೂ ಶಾಶ್ವತವಾದುದು. ಇವು ವಿಷವುಳ್ಳದ್ದಾಗಿರುತ್ತವೆ.

ಮರಿ

## ಅಬ್ಬಾಸಿಡ್ ಕಲೆ

ಕ್ರಿ.ಶ. ೭೫೯ ರಿಂದ ೧೨೫೮ರ ವರೆಗೆ ಅರಸೊತ್ತಿಗೆಯನ್ನು ನಡೆಸಿದ ಅಬ್ಬಾಸಿಡ್ ಅರಸು ಮನೆತನವು ಮಧ್ಯಕಾಲೀನ ಇಸ್ಲಾಂ ಸಂಸ್ಕೃತಿಯ ಅಭಿವೃದ್ಧಿಗಾಗಿ ಅಸಾಮಾನ್ಯವಾದ ಸಾಧನೆಗಳನ್ನು ಮಾಡಿದೆ. ಇರಾಕಿನ ಸುಮೇರುವಿನಲ್ಲಿ ನಡೆಸಿದ ಉತ್ಖನನದಲ್ಲಿ ಲಭ್ಯವಾದ ೯ನೆಯ ಶತಮಾನದ ಭಿತ್ತಿಚಿತ್ರಗಳು ಕಂಡುಬಂದಿವೆ. ಈ ಕಲಾಕೃತಿಗಳನ್ನೇ ಅಬ್ಬಾಸಿಡ್ ಕಲೆ ಎಂದು ಗುರುತಿಸಲಾಗುತ್ತದೆ. ಅಬ್ಬಾಸಿಡ್‌ಕಲೆಯು ಪ್ರಾಯಶಃ ಹೆಲೆನೆಸ್ಟಿಕ್ ಯುಗದ ಪ್ರಭಾವದಲ್ಲಿ ಅಭಿವೃದ್ಧಿಗೊಂಡಿದೆಯೆಂದು ಹೇಳಬಹುದು.

ಆಕೃತಿಗಳ ವರ್ಣಚಿತ್ರಣವನ್ನು ಸಮತ್ವತತ್ವ(Symmetrical)ದಲ್ಲಿ ಸಂಯೋಜಿಸಲಾಗಿದ್ದು ದಪ್ಪ ಹಾಗೂ ಪ್ರಭಾವೀ ವರ್ಣಗಳನ್ನು ಬಳಸಿ ಕಪ್ಪು ವರ್ಣದ ಬಾಹ್ಯರೇಖೆಗಳನ್ನು ಎಳೆಯಲಾಗಿದೆ. ಅಲ್ಲದೆ ಸ್ಥಳ ಇಲ್ಲವೇ ಹಿನ್ನೆಲೆಯ ಸೂಚನೆಯು ಇಲ್ಲದಂತೆ ಈ ಕಲಾಕೃತಿಗಳ ರಚನೆಯಾಗಿದೆ. ಪೌರಾಣಿಕ ಹಾಗೂ ಬೇಟೆಯ ಸನ್ನಿವೇಶಗಳ ಚಿತ್ರಣದಲ್ಲಿ ಹೆಲೆನಿಸ್ಟಿಕ್ ಪ್ರಭಾವವು ಕಂಡುಬರುತ್ತಿದ್ದರೂ ಚಿತ್ರಣಶೈಲಿಯು ಮಾತ್ರ ಪರಿಶುದ್ಧ ಪರ್ಷಿಯನ್ ಶೈಲಿಯಾಗಿದೆ. ಅಬ್ಬಾಸಿಡ್ ಸಂಸ್ಕೃತಿಯ ಭವ್ಯತೆ ಹಾಗೂ ಶ್ರೀಮಂತಿಕೆಗಳನ್ನು ಚೈನಾದೇಶದ ವಿಲಾಸೀ ವಸ್ತುಗಳಾದ ಪಿಂಗಾಣಿ ಪಾತ್ರೆಗಳ ಮೇಲೆ ನಕಲುಗೊಳಿಸಿರುವದು ಗಮನಾರ್ಹವಾಗಿದೆ. ನಂತರದ ಜನಸಾಮಾನ್ಯರ ನಿತ್ಯಜನಜೀವನಕ್ಕೆ ಸಂಬಂಧಪಟ್ಟ ಕಿರುವರ್ಣಚಿತ್ರಗಳು ಮುಕ್ತವಾದ ಸ್ವಾಭಾವಿಕ ಶೈಲಿಯಲ್ಲಿ ಚಿತ್ರಣಗೊಂಡವುಗಳಾಗಿವೆ.

ಮ್ಯ. ಹೊ.

## ಅಬು ಪರ್ವತ

ದಕ್ಷಿಣ ರಾಜಾಸ್ಥಾನದ ಅಂಚಿನಲ್ಲಿ ಅಡ್ಡಲಾಗಿ ಹಬ್ಬಿರುವ ಅರಾವಳೀ ಪರ್ವತಗಳಲ್ಲಿ ಅಬು ನಗರದ ಹತ್ತಿರ ಕಾಣಬರುವ ದೊಡ್ಡ ಪರ್ವತ. ಉತ್ತರ ಅಹಮದಾಬಾದಿಗೆ ೧೧೦ ಮೈಲಿ ದೂರದಲ್ಲಿದೆ. ಏಳು ಮೈಲಿ ಅಗಲವಾಗಿರುವ ಒಂದು ನದೀ ಕಣಿವೆ ಉಳಿದ ಬೆಟ್ಟಗಳ ಸಾಲಿನಿಂದ ಪರ್ವತವನ್ನು ಪ್ರತ್ಯೇಕಿಸಿದೆ. ಈ ಕಣಿವೆಯಲ್ಲಿ ಪಶ್ಚಿಮ ಟಾನಿಸ್ ಎಂಬ ನದಿ ಹರಿಯುವುದು, ಈ ಬೆಟ್ಟದ ಎತ್ತರ ೪೦೦೦-೫೬೫೦ಗಳಷ್ಟಿದೆ.

ಪರ್ವತದ ನೆತ್ತಿಯಲ್ಲಿ ಮತ್ತು ಪೀಠಭೂಮಿಗಳಲ್ಲಿ ವಿಶೇಷ ರೀತಿಯಲ್ಲಿ ಕೊರೆದಿರುವ ಜೈನ ಬಸದಿಗಳು, ದೇವಾಲಯಗಳೂ, ಗೋಪುರಗಳೂ ಇವೆ. ಸುಮಾರು ೨೦೦ ವರ್ಷಗಳಿಂದಲೂ ಕೂಡ ಯಾತ್ರಾಸ್ಥಳವಾಗಿದೆ. ಮಹಾಭಾರತದಲ್ಲಿ ಇದನ್ನು ಅರ್ಬುದ ಎಂದು ಕರೆಯಲಾಗಿದೆ. ಶಿಖರದ ಮೇಲು ಭಾಗದಲ್ಲಿ ಒಂದು ವೃತ್ತಾಕಾರದ ಪೀಠಭೂಮಿಯಲ್ಲಿ

ಗ್ರಾನೈಟ್ ಶಿಲೆಯ ಗುಹೆ ಇದೆ. ಇದರಲ್ಲಿ ಪುರಾಣದಲ್ಲಿ ಹೇಳಿರುವಂತೆ ವಿಷ್ಣುವಿನ ಅವತಾರವೆನಿಸಿದ ಭೃಗುವಿನ ಪಾದಗಳ ಹೆಜ್ಜೆ ಮೂಡಿದೆಯೆಂದು ನಂಬಲಾಗಿದೆ. ಈ ಶಿಖರದ ಮಧ್ಯದಲ್ಲಿ ದಿಲ್‌ವಾರಾ ಎಂಬ ಸ್ಥಳದಲ್ಲಿ ಅಮೃತ ಶಿಲೆಯಿಂದ ನಿರ್ಮಿಸಲಾದ ಎರಡು ಪ್ರಸಿದ್ಧ ದೇವಾಲಯಗಳಿವೆ. ಇವು ಗುಜರಾತಿನ ವಾಸ್ತುಶಿಲ್ಪವನ್ನು ತೋರಿಸುವ ಮಾದರಿಯಾಗಿವೆ. ಜೈನರ ಪ್ರಖ್ಯಾತವಾದ ಐದು ಪವಿತ್ರ ಕ್ಷೇತ್ರಗಳಲ್ಲಿ ಇದೂ ಒಂದಾಗಿದೆ. ಜೈನಶಾಸನಗಳು ಸಹ ಇಲ್ಲಿವೆ.

೧೧೯೭ರಲ್ಲಿ ನಿರ್ಮಿಸಲಾದ ತೇಜ್‌ಪಾಲ್ ದೇವಾಲಯ, ಮತ್ತು ೧೦೩೨ರಲ್ಲಿ ಸೋಲಾಂಕಿ ಚಕ್ರವರ್ತಿಗಳ ಮಾಂಡಲಿಕ ವಿಮಲಷಾಹ ಎಂಬುವನು ಕಟ್ಟಿಸಿದ ದೇವಾಲಯಗಳು ಪ್ರಮುಖವಾದವು. ಈ ಎರಡು ದೇವಾಲಯಗಳು ಅವುಗಳ ಗೋಪುರದ ಒಳಭಾಗದ ಗೋಪುರಗಳಲ್ಲಿ ಕೊರೆದಿರುವ ಶಿಲ್ಪಕಲೆಗೆ ಪ್ರಸಿದ್ಧಿಯನ್ನು ಪಡೆದಿವೆ. ಇವುಗಳ ಜೈನರ ವಾಸ್ತುಶಿಲ್ಪ ಸೌಂದರ್ಯಾಭಿರುಚಿಗೂ ಪ್ರಸಿದ್ಧಿಯಾಗಿವೆ.

ವಿಮಲ್‌ಷಾಹ ದೇವಸ್ಥಾನದ ಪ್ರಾಮುಖ್ಯತೆ ಎಂದರೆ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಿರುವ ಜೈನರ ೨೩ನೆಯ ತೀರ್ಥಂಕರ ಪಾರ್ಶ್ವನಾಥ ವಿಗ್ರಹದ ಮೇಲೆ ಗವಾಕ್ಷದಿಂದ ಬೀಳುವ ಬೆಳಕು. ಈ ದೇವಾಲಯದ ಮೇಲಿರುವ ಮುಖಮಂಟಪ ೪೮ ಸಾಲಾಂಕೃತ ಸಾಲುಗಂಬಗಳ ಮೇಲಿದೆ. ದೇವಸ್ಥಾನ ದೀರ್ಘ ಚತುರ ಪ್ರಾಕೃತಿಯಲ್ಲಿದ್ದು ಅದರ ಸುತ್ತಳತೆಯಲ್ಲಿ ೫೨ ಗರ್ಭಗುಡಿಗಳಿವೆ. ಪ್ರತಿಗುಡಿಯಲ್ಲಿಯೂ ಪಾರ್ಶ್ವನಾಥನ ವಿಗ್ರಹವಿದೆ. ಹೊರನೋಟಕ್ಕೆ ಈ ದೇವಾಲಯಗಳು ಸಾಧಾರಣವಾಗಿ ಕಾಣುತ್ತವೆ. ಆದರೆ ಒಳಭಾಗದಲ್ಲಿನ ಕಂಬಗಳು, ಕಮಾನುಗಳು, ದುಂಡುಗುಮ್ಮಟ, ಮೂರ್ತಿಗಳು, ಕುಸುರಿ ಕೆತ್ತನೆಯ ಮೋಹಕ ಕೃತಿಗಳು ಮೊದಲಾದವುಗಳಿಗೆ ಜಗತ್ಪ್ರಸಿದ್ಧಿಯಾಗಿವೆ. ಫರ್ಗ್ಯೂಸನ್‌ರವರು "ಈ ಮಂದಿರಗಳ ಅಮೃತಶಿಲೆಯಲ್ಲಿ ಮಾಡಿರುವ ಕೆತ್ತನೆಯ ಕೆಲಸವನ್ನು ಕಾಗದದ ಮೇಲೆ ಚಿತ್ರಿಸಲು ಕೂಡ ತಾನು ಅಸಮರ್ಥನಾಗಿರುವುದಾಗಿಯೂ, ಅಲ್ಲಿಯ ಕಲೆ ಅಷ್ಟು ಸೂಕ್ಷ್ಮವಾಗಿಯೂ ಚಲುವಾಗಿಯೂ ಇದೆ" ಎಂದಿದ್ದಾರೆ.

ಅಬು ಬೆಟ್ಟಗಳ ಶ್ರೇಣಿಯಲ್ಲಿ ಉದ್ದಕ್ಕೂ ಅಮೃತ ಶಿಲೆಯಿಂದ ರೂಪಿಸಿದ ಅನೇಕ ದೇವಾಲಯಗಳಿವೆ.

ಹೆ.ಟಿ.ಐ.

## ಅಬುಸನ್ (Aubusson)

ಕರಕುಶಲ ಕಲೆಯಲ್ಲಿ ನೆಯ್ಗೆ ಅಥವಾ ಹೆಣೆಯುವಿಕೆಯ ತಂತ್ರಕ್ಕೆ (ಕೆಲಸಕ್ಕೆ) ಸಂಬಂಧಿಸಿದ "ಅಬುಸನ್" ಎಂಬುದು ಮುಖ್ಯವಾಗಿ ರತ್ನಗಂಬಳಿಗೆ ಸೇರಿದ ಶಬ್ದ. ಅಬುಸನ್ ಕಾರ್ಪೆಟ್, ಟಿಪಸ್ಟ್ರಿಗಳು, ನೆಲದ ಹಾಸುಗೆ, ತೂಗು ಬಟ್ಟೆಗಳಲ್ಲಿ ವಿಶೇಷವಾದಂಥವು. ಹೆಚ್ಚಿನ ಆಡಂಬರದಿಂದ ಕೂಡಿದ ಚಿತ್ರ, ಸುಳುಹು. ನಕ್ಷೆಯ ಚಿತ್ತಾರಗಳ ಸೂಕ್ಷ್ಮ ಹಾಗೂ ವಿಸ್ತಾರದ ಹರವುಗಳಿಂದ, ಚಿತ್ತಾಕರ್ಷಕ ವರ್ಣವೈವಿಧ್ಯತೆಯಿಂದ ಕಂಗೊಳಿಸುವ ಇವು, ಕ್ರಮೇಣ ಚಿನೋಸರಿ (Chinoiserie Motif) ಮೋಟಿಫ್ ಎಂದು ಕರೆಯುವ ಸೂಕ್ಷ್ಮ ಹಾಗೂ ನವಿರು ಶೈಲಿಗಳನ್ನು ಪಡೆದುಕೊಂಡವು. ಕಲಾತ್ಮಕ ಹಾಗೂ ಕ್ರಿಯಾತ್ಮಕವಾದ ಇವುಗಳ ಸುಂದರ ವಿನ್ಯಾಸಗಳು ಪರ್ಷಿಯನ್ನರಿಂದ ರೂಪಗೊಂಡಂಥವು.

ಪುರಾತನ ಈಜಿಪ್ಷಿಯನ್ನರು ಮತ್ತು ಮಧ್ಯಏಷಿಯಾದಲ್ಲಿ ಒಳಪಡುವ ಬೊಕಾರೋ,

ಸಮರ್‌ಕಂದ್, ತಬ್ರಿಜ್ ಮತ್ತು ಮುಖ್ಯ ನಗರಗಳಾದ ಖಿರ್‌ಮನ್, ಹರಾಜ್ ಶೋರಸನ್, ಶೇಕ್‌ಮನ್, ಸರುಖ್‌ಗಳಲ್ಲಿ ಬೆಳೆದ ಕಾರ್ಪೆಟ್‌ಗಳು ಮುಖ್ಯ ಕೇಂದ್ರವಾದ ಕೇಶನ್‌ನಲ್ಲಿ ಹೆಚ್ಚಾಗಿ ತಯಾರಿಸಲ್ಪಟ್ಟವು. ಶಹಬ್ಬಾಸ್‌ನ ಕಾಲಕ್ಕೆ ಭಾರತವನ್ನು ಪ್ರವೇಶಿಸಿದ ಪರ್ಷಿಯನ್ನರ ಕಾರ್ಪೆಟ್‌ಗಳು ತುಂಬಾ ಕ್ರಿಯಾತ್ಮಕವಾಗಿ ಮೂಡಿಬಂದವು. ಅಬುಲ್‌ಫಜಲ್ ಎಂಬುವನು ಅಬುಸನ್ ಕಾರ್ಪೆಟ್‌ಗಳನ್ನು ಉತ್ಕೃಷ್ಟವಾಗಿ ಪಣೆದ. ಅವು ಜಾಜಮ್ಸ್, ಶತರಂಗಿಸ್, ಬಲೂಚಿಸ್ ಹಾಗೂ ಸಿಲ್ಕ್‌ಗಳಾಗಿದ್ದವು. ಅಕ್ಬರನ ನಂತರ, ಶಹಜಾನ್‌ನ ಮುಖಾಂತರ ರಫ್ತುಮಾಡತೊಡಗಿದರು. ಅಂದಿನಿಂದ ಗುರುತಿಸಬಹುದಾದ ತಯಾರಿಕಾ ಸ್ಥಳಗಳು ಭಾರತದಲ್ಲಿ, ಶಹಜಾನ್‌ಪುರ, ಜೈಪುರ, ಗ್ವಾಲಿಯರ್, ಮಿರ್ಜಾಪುರ್.

೧೪ನೆಯ ಲೂಯಿಯಿಂದ ೧೬೬೫ರಲ್ಲಿ ಕಲಾತ್ಮಕವಾದ ಅಬುಸನ್ ಕಾರ್ಪೆಟ್‌ಗಳ ತಯಾರಿಕೆಗಾಗಿಯೇ "ರಾಯಲ್ ಮ್ಯಾನುಫ್ಯಾಕ್ಟರಿ" ಎಂಬ ಕೈಗಾರಿಕಾ ಸಂಸ್ಥೆಯನ್ನು ಸ್ಥಾಪಿಸಿದ, ಅನಂತರ ೧೮ನೇ ಶತಮಾನದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದ ಟೆಪಸ್ಟ್ರಿ, ಕಾರ್ಪೆಟ್ ಇತ್ಯಾದಿಗಳು ಹೆಚ್ಚಾಗಿ ಬೆಳಕಿಗೆ ಬಂದವು.

ಭಾರತದ ಇಂಥ ಕಾರ್ಪೆಟ್‌ಗಳು ಪ್ರಪಂಚದ ಗಮನ ಸೆಳೆದದ್ದು ೧೮೫೧ರ ಲಂಡನ್ ವಸ್ತುಪ್ರದರ್ಶನದಲ್ಲಿ. ಈ ಸಂದರ್ಭದಲ್ಲಿ ಇವುಗಳ ಉತ್ಪಾದನೆಗಾಗಿ ಬ್ರಿಟೀಷ್ ಫರ್ಮ್‌ಗಳೇ ಹುಟ್ಟಿಕೊಂಡಿದ್ದವು. ಆಗ ಬ್ರಿಟೀಷ್ ಕಂಪೆನಿಯು ರಾಜಾ ಮಹಾರಾಜ್ ಆಳ್ವಾರ್‌ರವರಿಗೆ ಅಬುಸನ್ ಕಾರ್ಪೆಟ್ಟನ್ನು ಉಡುಗೊರೆಯಾಗಿ ನೀಡಿತ್ತು.

ಪ್ರಪಂಚದಲ್ಲಿ ಅತಿ ದೊಡ್ಡದಾದ ಇದರ ಅಗಲವೇ ೫೦ ಅಡಿ ಇದೆ.

ಈ ಅಬುಸನ್ ಕಾರ್ಪೆಟ್‌ಗಳನ್ನು ಹೆಣೆಯುವಾಗ, ದಪ್ಪನೆಯ ದಾರಗಳಿರುವ ಬಟ್ಟೆ ಅಥವಾ ದಾರಗಳನ್ನೇ ನೇರವಾಗಿ ಕೈಮಗ್ಗಕ್ಕೆ (ವಿಶೇಷ) ನೇತುಹಾಕುತ್ತಾರೆ. ನಕ್ಷೆ, ಬಣ್ಣಗಳ ವಿಂಗಡನೆ, ವಿನ್ಯಾಸ ಇತ್ಯಾದಿಗಳನ್ನು ಪ್ರತ್ಯೇಕವಾಗಿ ತಯಾರಿಸಿಕೊಂಡು ಅಥವಾ ನೇರವಾಗಿ ಅಂದಾಜು ಕಲ್ಪನೆಯೊಂದಿಗೂ ಉತ್ಕೃಷ್ಟ ಬಣ್ಣದ ದಾರಗಳನ್ನು ಹೆಣಿಗೆಯೊಂದಿಗೆ ವಿಂಗಡಿಸುತ್ತ, ಒರಟು, ನಯ, ಮೃದು ಮೇಲ್ಮೈಗಳನ್ನು ನಿರ್ಮಿಸುತ್ತಾರೆ. ದಪ್ಪ ದಾರಗಳ ಮೇಲೆ ಹಾಕುವ ಬಣ್ಣದ ಚಿತ್ತಾರಗಳನ್ನು ಹಾಗೆಯೇ ಬಿಟ್ಟು, ಪೂರ್ಣಗೊಂಡನಂತರ, ಚಿತ್ತಾರಗಳ ಆಕಾರ, ಬಣ್ಣದ ವಿಂಗಡನೆಯನ್ನು ಗಮನಿಸಿಕೊಂಡು ಕತ್ತರಿಸುತ್ತಾರೆ. ಇದು ಸಾಮಾನ್ಯವಾಗಿ ಒಂದೂವರೆಯಿಂದ, ಎರಡೂವರೆ-ಮೂರು ಇಂಚುಗಳಷ್ಟು ದಪ್ಪನಾಗಿರುತ್ತದೆ. ಕತ್ತರಿಸಿದ ಭಾಗಗಳ ಮೇಲೆ ಕೈಗಳನ್ನು ಆಡಿಸಿದರೆ, ಕಲ್ಲಿನಲ್ಲಿ ಕೆತ್ತಿದ ಬಾಸ್‌ಲೀಫ್‌ನಂತೆ(ತೆಳುವಾದ ಉಬ್ಬು ಚಿತ್ರ) ಭಾಸವಾಗುತ್ತದೆ. ಉಬ್ಬು-ತಗ್ಗುಗಳು ಕಣ್ಣಿಗೂ ಗೋಚರಿಸುತ್ತವೆ, ಇದನ್ನೇ "ಅಬುಸನ್" ಎನ್ನುವುದು. ಇಂಥ ನೆಯ್ಗೆಯ ಕಾರ್ಪೆಟ್‌ಗಳನ್ನು 'ಅಬುಸನ್ ಎಂಬೊಸಿಂಗ್ ಕಾರ್ಪೆಟ್' ಎನ್ನುತ್ತಾರೆ. ಹೆಣಿಗೆಯ ಬಣ್ಣದ ದಾರಗಳನ್ನು ವಿಭಾಗಿಸಿ, ಕೊನೆಯಲ್ಲಿ ಮೇಲ್ಮುಖ, ಕೆಳಮುಖವಾಗಿ ಕತ್ತರಿಸುವುದಕ್ಕೆ 'ಬೆರ್‍ಯಾ' ಎಂದು, ನಕ್ಷಾಚಿತ್ರ(ಡಿಸೈನ್)ಗಳನ್ನು ಬೇರೆಯಾಗಿಸುವ ಬೈಂಡಿಂಗ್ ಅಂಚುಗಳಿಗೆ 'ಪಿಟ್ಯಾ' ಎಂದೂ ಕರೆಯುತ್ತಾರೆ. ಇಂತಹ ತೆಳು ಉಬ್ಬುಗೆತ್ತನೆಯ ಭಾವನೆ ಬರುವಂತೆ ಹೆಣೆಯುವ 'ಅಬುಸನ್'ಗಳು ಇಂಡೋ-ಪರ್ಷಿಯನ್ನರ ಕೊಡುಗೆ.

ಇತ್ತೀಚೆಗೆ ಹೆಚ್ಚು ಪ್ರಸಿದ್ಧಿಯಾಗಿರುವ ಇವುಗಳ ಬೆಲೆ ಅಪಾರ. ಶ್ರೀಮಂತ ವೈಭವದಿಂದ ಕೂಡಿದ ಆಕರ್ಷಣೆಯಿಂದ ಇವುಗಳ ಬಳಕೆ ಒಳಾಲಂಕಾರದಲ್ಲಿ(interior decoration) ಹೆಚ್ಚು

ಇವುಗಳನ್ನು ಜರ್ಮನಿ, ಅಮೆರಿಕಾ, ಇಂಗ್ಲೆಂಡ್, ಯುರೋಪ್ ರಾಷ್ಟ್ರಗಳಿಗೆ ರಫ್ತುಮಾಡುತ್ತಿರುವ ಭಾರತ ಪಾಕಿಸ್ತಾನೀಯರ ಸ್ಪರ್ಧಾಪೋಟಿ ವರ್ಧಿಸುತ್ತಿದೆ. ಚೈನಾದಲ್ಲಿ ಮಾತ್ರ ಸರ್ಕಾರವೇ ಇವುಗಳ ಕಾರ್ಖಾನೆ ನಡೆಸುತ್ತಿದೆ. "ಅಬುಸನ್" ಸುಂದರ ಹಾಗೂ ಆಕರ್ಷಕ ಮಾತ್ರವಲ್ಲ ಸೂಕ್ಷ್ಮ ಹಾಗೂ ನಾವೀನ್ಯತೆಯ, ಮಹತ್ವದ ಕ್ರಿಯಾಶೀಲತೆಗೆ ಸಾಕ್ಷಿ ಕೂಡ ಆಗಿದೆ.

ಆರ್. ಎ. ಶಾ.

## ಅಭಿಲಷಿತಾರ್ಥ ಚಿಂತಾಮಣಿ

ಕರ್ನಾಟಕದ ಮೊದಲ ಅರಸು ಮನೆತನಗಳಲ್ಲಿ ಒಂದಾದ ಚಾಳುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನಿಂದ ಸುಮಾರು ೧೧೩೦ ರಲ್ಲಿ ರಚಿತವಾದ ಅಭಿಲಷಿತಾರ್ಥ ಚಿಂತಾಮಣಿಗೆ ಮನಸೋಲ್ಲಾಸ ಎಂಬ ಹೆಸರೂ ಇದೆ. ಪಾಕಶಾಸ್ತ್ರ, ಗಜಶಾಸ್ತ್ರ, ವೈದ್ಯಶಾಸ್ತ್ರ ಇತ್ಯಾದಿ ಹಲವಾರು ಶಾಸ್ತ್ರಗಳನ್ನು ಕುರಿತು ಹೇಳುವ ಈ ಗ್ರಂಥ ಒಂದು ರೀತಿಯಲ್ಲಿ ವಿಶ್ವಕೋಶದಂತಹ ರಚನೆ ಎಂದು ಹೇಳಬಹುದು. ಅಭಿಲಷಿತಾರ್ಥದ ಉಪಭೋಗಗಳಿಗೆ ಸಂಬಂಧಿಸಿದ ಮೂರನೆಯ ಪ್ರಕರಣದಲ್ಲಿ ಮೊದಲನೆಯದು ಗೃಹೋಪಯೋಗವಾಗಿದ್ದು ಅದರಲ್ಲಿ ಎರಡೆರಡು ಸಾಲಿನ ಸುಮಾರು ೮೦೦ ಶ್ಲೋಕಗಳನ್ನು ಚಿತ್ರಕಲೆಗೆ ಮೀಸಲಿರಿಸಿದೆ. ಅಲೇಖ್ಯಕರ್ಮ, ಲೇಪದ್ರವ್ಯ, ವರ್ತಿಕಾ (ವಿವಿಧ ಬಗೆಯ ಲೇಖನಿಗಳು) ಮೂಲವರ್ಣ, ಮಿಶ್ರವರ್ಣ, ವರ್ಣಛಾಯೆ, ಇತ್ಯಾದಿಗಳನ್ನು ಹೇಳಿ ಅಂತಃಪುರದ ಭಿತ್ತಿಯಲ್ಲಿ ಚಿತ್ರವಿಚಿತ್ರವಾದ ಚಿತ್ರಗಳನ್ನು ರಚಿಸಬೇಕೆಂದು ಹೇಳುತ್ತದೆ. ಕಲಾವಿದನಾದವನು ಪ್ರಗಲ್ಭ(ನಿಪುಣಂ, ಭಾವಕ (ಪ್ರತಿಭಾವಂತ) ತಜ್ಞ (ಪರಿಶ್ರಮದಿಂದ) ಸೂಕ್ಷ್ಮರೇಖೆ ಬರೆಯಬಲ್ಲ: ಏಕಾಗ್ರಮತಿಯಾಗಿ ವಿದ್ಯುತ್ ನಿರ್ಮಾಣ ಕುಶಲನಾದ(?), ಪತ್ರ ಲೇಖನ (ದೇಹದ ಮೇಲೆ ಮಕರ ಪತ್ರ ರಚನೆ) ಕೋವಿದ, ವರ್ಣ ಪೂರ್ಣ ದಕ್ಷ, ವೀರಣದಲ್ಲಿ(?) ಶ್ರಮ ಪಡೆದ ವ್ಯಕ್ತಿಯಾಗಿರಬೇಕೆಂದೂ ನಾನಾ ರಸಗಳಿಂದ ಒಳಗೊಂಡಂತೆ ಚಿತ್ರ ರಚಿಸಬಲ್ಲವನಾಗಿರಬೇಕೆಂದೂ ಹೇಳುತ್ತದೆ. ಭಿತ್ತಿಯ ಸಿದ್ಧತೆಯ ಬಗ್ಗೆ ವಿವರವಾದ ವರ್ಣನೆಯಿದೆ. ಚಿತ್ರ ರಚನೆಯ ನಂತರ ಚಿನ್ನದ ರೇಖಿನ ಲೇಪನ ವಿವರಿಸಿ ವರಾಹದ ಕೋರೆದಾಡೆಯಿಂದ ಗಟ್ಟಿಸಿದಾಗ 'ವಿದ್ಯುತ್'ನಂತೆ ಕಾಂತಿಯುತವಾಗುತ್ತದೆ ಎಂದು ಹೇಳುತ್ತದೆ. ಉಳಿದಂತೆ ಸುಮಾರು ೭೦೦ ಶ್ಲೋಕಗಳಲ್ಲಿ ತಾಳಮಾನ ಮತ್ತು ನವಸ್ಥಾನಗಳ ಬಗ್ಗೆ ವಿವರಣೆಯಿದೆ.

ಅಲಸ

## ಅಭಿವ್ಯಕ್ತಿ

ಕಲಾವಿದರು, ತಮ್ಮ ಭಾವನೆಗಳನ್ನು ಚಿತ್ರ, ಶಿಲ್ಪ, ಗ್ರಾಫಿಕ್, ಕುಶಲಕಲೆ ಮುಂತಾದವುಗಳ ಮೂಲಕ ಅಬಿವ್ಯಕ್ತ ಪಡಿಸುತ್ತಾರೆ. ಅವರು ತಿಳಿಸಬೇಕೆಂದಿರುವುದನ್ನು 'ಸುಂದರ'ವಾಗಿ ತಿಳಿಸಿದಾಗ ಅದು ಕಲಾತ್ಮಕ ಅಭಿವ್ಯಕ್ತಿಯಾಗುವುದು. ಒಂದು ಕಲಾಸೃಷ್ಟಿ ಮೂರು ಹಂತಗಳ ಸಮನ್ವಯದಿಂದ ಪೂರ್ಣಗೊಳ್ಳುವುದು. ಮೊದಲನೆಯದಾಗಿ ಬಣ್ಣ, ಎರಡನೆಯದಾಗಿ ಆಕಾರ ಮತ್ತು ಮೂರನೆಯದು ಅಭಿವ್ಯಕ್ತಿ.

ಮರಿ

## ಅಮರಾವತಿ

ಆಂಧ್ರಪ್ರದೇಶದಲ್ಲಿರುವ ಅಮರಾವತಿ ಪ್ರಮುಖ ಐತಿಹಾಸಿಕ ಮತ್ತು ಪ್ರೇಕ್ಷಣೀಯ ಸ್ಥಳವಾಗಿದೆ. ಗುಂಟೂರು ಜಿಲ್ಲೆಯ ಸತ್ತೇನಪಲ್ಲಿ ತಾಲೂಕಿಗೆ ಸೇರಿದಂತೆ ಕೃಷ್ಣಾನದಿಯ ದಂಡೆಯ ಮೇಲಿದೆ. ಶಾತವಾಹನರ ರಾಜಧಾನಿಯಾಗಿದ್ದ ಈ ಸ್ಥಳವು ಧಾನ್ಯಕಟ್ಟುರವೆಂಬ ಹೆಸರಿನಿಂದ ಪ್ರಸಿದ್ಧಿಯಾಗಿತ್ತು. ಬೌದ್ಧಸ್ತೂಪದ ಕಲಾಕುಶಲತೆಗೆ ಈ ಸ್ಥಳವು ಪ್ರಸಿದ್ಧಿಯಾಗಿದೆ.

ಆಂದ್ರದ ಶಾತವಾಹನರುಮಹಾಯಾನ ಬೌದ್ಧ ಧರ್ಮವನ್ನು ಪ್ರೋತ್ಸಾಹಿಸಿ ಇಲ್ಲಿ ಚೈತ್ಯಾಲಯಗಳನ್ನು, ವಿಹಾರಗಳನ್ನು, ಸ್ತೂಪಗಳನ್ನು ಕಟ್ಟಿಸಿದರು. ಇಲ್ಲಿರುವ ಸ್ತೂಪಶಿಲ್ಪಗಳು ಜಗದ್ವಿಖ್ಯಾತವಾಗಿವೆ. ಬುದ್ಧನ ಜಾತಕ ಕತೆಗಳಿಂದಲೂ ಜೀವಿತ ವೃತ್ತಾಂತಗಳಿಂದಲೂ ವಿವರಗಳನ್ನು ಆಯ್ದುಕೊಂಡು ಇಲ್ಲಿ ಬಹಳ ಸುಂದರವಾದ ಮತ್ತು ರಮಣೀಯವಾದ ಶಿಲ್ಪಗಳನ್ನು ಕಡೆದಿದ್ದಾರೆ. ಕ್ರಿ.ಶ. ೧೭೯೭ರಲ್ಲಿ ಕರ್ನಲ್ ಮೆಕೆಂಜಿಯಿಂದಬೆಳಕಿಗೆ ಬಂದ ಈ ಸ್ಥಳವು ಭಾರತೀಯ ವಾಸ್ತುಶಿಲ್ಪ ಚರಿತ್ರೆಯಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಬಿಸಿತು.

ಇಲ್ಲಿನ ಮುಖ್ಯ ಕಲಾಕೃತಿಯೆಂದರೆ ಮಹಾಸ್ತೂಪ. ಇಲ್ಲಿರುವ ಸ್ತೂಪಕಗಳು ಸಾಂಚಿ, ಬಾರಹುತನದಲ್ಲಿರುವಸ್ತೂಪಗಳಿಗಿಂತ ಕೆಲವು ವಿಷಯಗಳಲ್ಲಿ ಭಿನ್ನವಾಗಿದ್ದು ತಮ್ಮದೇ ಆದ ವೈಶಿಷ್ಟವನ್ನು ಹೊಂದಿದೆ. ಅಮರಾವತಿಯ ಸ್ತೂಪವು ಕ್ರಿ.ಪೂ. ೧ನೆಯ ಶತಮಾನದಿಂದ ಕ್ರಿ.ಶ.೩ನೆಯ ಶತಮಾನದವರೆಗೆ ನಾಲ್ಕು ಹಂತಗಳಲ್ಲಿ ಬೆಳೆಯಿತೆಂದು ಹೇಳಬಹುದಾಗಿದೆ. ಇದರ ವ್ಯಾಸ ೧೬೨ ಎತ್ತರ ಸುಮಾರು ೧೨೦ ಈ ಬೃಹತ್ ಸ್ತೂಪ ಬಿಳಿಯ ಶಿಲೆಯ ಶಿಲ್ಪ ಫಲಕಗಳಿಂದ ಅಚ್ಛಾದಿತವಾಗಿತ್ತು. ನಾಲ್ಕು ದಿಕ್ಕುಗಳಲ್ಲೂ ಐದು ಆಯತ ಸ್ತಂಭಗಳಿವೆ.

ಈ ಸ್ತೂಪವನ್ನು ಅಲಂಕರಿಸಲು ನಿರ್ಮಾಣವಾದ ಬಿಳಿಯ ಕಲ್ಲಿನ ಶಿಲ್ಪಫಲಕಗಳೇ ಪ್ರಾಚೀನ ಆಂದ್ರ ಕಲಾಕಾರರ ಮಹಾನ್ ಕೃತಿಗಳಾಗಿವೆ. ಈ ಶಿಲ್ಪ ಫಲಕಗಳಲ್ಲಿ ಜಾತಕ ಮತ್ತು ಅವಧಾನದ ಕತೆಗಳು ಮತ್ತು ಬುದ್ಧನ ಜೀವನಕ್ಕೆ ಸಂಬಂಧಿಸಿದ ಘಟನೆಗಳು ಕೆತ್ತಲ್ಪಟ್ಟಿವೆ. ಅವುಗಳಲ್ಲಿ ನಳಗಿರಿ ಎಂಬ ಆನೆ ಕೋಪಾವಿಷ್ಟವಾಗಿದ್ದು ನಂತರ, ಬುದ್ಧನ ಪಾದದಡಿಯಲ್ಲಿ ಮುದುಡಿಕೊಂಡು ನಿಂತಿರುವುದು ಒಂದು ಮಹಾನ್‌ಕೃತಿ ಎಂದು ಹೇಳಬಹುದಾಗಿದೆ.

ಅಮರಾವತಿಯಲ್ಲಿ ಮೊದಲು ಹೀನಯಾನ ಪಂಗಡವಿತ್ತು ಇದರ ಪ್ರಕಾರ ಬುದ್ಧನ ಪಾದ, ಭೋಧಿವೃಕ್ಷ, ಸಿಂಹಾಸನ ಮುಂತಾದ ಸಂಕೇತಗಳೇ ಬುದ್ಧನನ್ನು ಸೂಚಿಸುತ್ತಿದ್ದವು. ಕ್ರಿ.ಶ.೨ನೆಯ ಶತಮಾನದ ನಂತರ ಗಾಂಧಾರ ಮತ್ತು ಮಥುರಾ ಶಿಲ್ಪಗಳಿಂದ ಪ್ರಭಾವಿತಗೊಂಡು ಅಮರಾವತಿಯಲ್ಲೂ ಬುದ್ಧನ ವಿಗ್ರಹಗಳು ನಿರ್ಮಾಣವಾದವು. ಸಾಂಪ್ರದಾಯಕವಾದ ಮತ್ತು ಮಹಾಪುರುಷ ಲಕ್ಷಣಗಳನ್ನೊಳಗೊಂಡ ಬುದ್ಧ ವಿಗ್ರಹಗಳು ಅಮರಾವತಿಯ ಶಿಲ್ಪಗಳಿಂದಲೇ ಸೃಷ್ಟಿಗೊಳಿಸಲ್ಪಟ್ಟವೆಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.

ಜೆ. ಟಿ. ಜ.

## ಅಮ್ಮಿನಭಾವಿ

ಧಾರವಾಡ ನಗರದಿಂದ ಸುಮಾರು ಹನ್ನೆರಡು ಕಿ.ಮಿ. ದೂರದಲ್ಲಿರುವ ಅಮ್ಮಿನಭಾವಿಯ ಹಿರೇಮಠದಲ್ಲಿ ಕೆಲವು ಕುತೂಹಲಕಾರಿ ಚಿತ್ರಗಳಿವೆ. ವಿಷ್ಣು ಲಕ್ಷ್ಮಿ ಬ್ರಹ್ಮ ಶಿವನ ಪರಿವಾರ, ತ್ರಿಪುರ ಸಂಹಾರ, ಕೃಷ್ಣಾರ್ಜುನರ ಯುದ್ಧ ಕಾಮಧೇನು, ಹಿರಣ್ಯಕಶಪು, ಗೋಪಿಕಾವಸ್ತ್ರಾಪಹರಣ, ಮಹಿಷಮರ್ದಿನಿ ಇತ್ಯಾದಿ ಪೌರಾಣಿಕ ದೃಶ್ಯಗಳಲ್ಲದೆ ನರಗುಂದ ಬಾಬಾ ಸಾಹೇಬ ಆಸ್ಥಾನದಲ್ಲಿ ರಾಜಪರಿವಾರದೊಂದಿಗೆ ಇರುವುದು; ಮೈಸೂರು ಮಹಾರಾಜರು; ಸಂಗೊಳ್ಳಿರಾಯಣ್ಣನನ್ನು ಬಂಧಿಸಿ ಸೈನಿಕರು ಕರೆತರುತ್ತಿರುವುದು, ಆತನ ವೃದ್ಧ ತಂದೆ-ತಾಯಿಯರು, ರಾಯಣ್ಣನಿಗೆ ಶಿಕ್ಷೆ ವಿಧಿಸುತ್ತಿರುವುದು ಇತ್ಯಾದಿ ಪೌರಾಣಿಕ ಘಟನೆಗಳೂ ಚಿತ್ರಿತವಾಗಿದೆ. ಸ್ವಾಮಿಯೊಬ್ಬರ ಚಿತ್ರವಿದ್ದು ಇದು ಮಠದ ಹಿಂದಿನ ಪರಂಪರೆಯ ಸ್ವಾಮಿಯೊಬ್ಬರ ಚಿತ್ರವಾಗಿರಬಹುದು. ಇಲ್ಲಿರುವ ಕುತೂಹಲಕಾರಿ ಚಿತ್ರವೆಂದರೆ 'ವಿಚಿತ್ರ ಪ್ರಾಣಿ'ಯ ಚಿತ್ರ ಕೋಳಿಯ ಮುಖ, ನವಿಲಿನ ಕತ್ತು, ಸಿಂಹದ ಒಡಲು, ನಾಲ್ಕು ಕಾಲುಗಳಲ್ಲಿ ಒಂದು ಆನೆಯದು, ಒಂದು ಆಕಳಿನದು, ಒಂದು ಹುಲಿಯದು, ಇನ್ನೊಂದು ಕಾಲಿನ ಬದಲು ಚಿತ್ರ ಹಿಡಿದ ಕೈನದು ಬಾಲ ಎತ್ತಿ ಹಿಡಿದ ಸರ್ಪದಂತಿದೆ. ಅದರ ಕೆಳಗೆ ನರ್ತಿಸುತ್ತಿರುವ ಕೃಷ್ಣನ ಚಿತ್ರವಿದೆ. ಈ ಪ್ರಾಣಿಯ ಮುಂದೆ ಕೈಮುಗಿದು ನಿಂತ ವ್ಯಕ್ತಿಯೊಬ್ಬನಿದ್ದಾನೆ. ಈ ಒಟ್ಟು ಚಿತ್ರ ಬಂಧ ಅರ್ಜುನನಿಗೆ ವಿಶ್ವರೂಪದರ್ಶನ ಮಾಡಿಸುತ್ತಿರುವ ಕೃಷ್ಣನದು. ಈ ಚಿತ್ರಣ ಒರಿಸ್ಸಾದ ಪಟಚಿತ್ರಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ದಕ್ಷಿಣದಲ್ಲಿ ಅಪರೂಪ. (ಹಂಪೆಯ ಭಿತ್ತಿಚಿತ್ರದಲ್ಲಿ, ದೇವನಹಳ್ಳಿ ಬಳಿಯ ವಿಜಯಪುರದ ಶೈವಮಠವೊಂದರ ಪಲ್ಲಕ್ಕಿಯಲ್ಲಿ ಈ ಬಗೆಯ ಚಿತ್ರಣ ಕಾಣಬಹುದು). ಬಾಬಾ ಸಾಹೇಬ ಹಾಗೂ ದಶಾವತಾರಗಳು ಭಿತ್ತಿಯಲ್ಲಿ ಚಿತ್ರಿತವಾಗಿದ್ದರೆ ಉಳಿದವು ಮರದ ಹಲಗೆ ಹಾಗೂ ತಗಡಿನ ಹಾಳೆಗಳ ಮೇಲೆ ಚಿತ್ರಿತವಾಗಿವೆ. ಇವು ಕಳೆದ ಶತಮಾನದ ಮಧ್ಯದಲ್ಲಿ ಬರೆದ ಚಿತ್ರಗಳಾಗಿರಬಹುದು. ಮೂಲತ ಬಿಡಿ ಚಿತ್ರಗಳು ಕಿತ್ತೂರು ಅರಮನೆಯಲ್ಲಿ ಇತ್ತೆಂದೂ ಅದು ನಾಶವಾದ ಮೇಲೆ ಅಲ್ಲಿಂದ ತಂದು ಇಲ್ಲಿ ಹೊದ್ದಿಸಿರುವರೆಂದೂ ಹೇಳಿಕೆಯಿದೆ.

ಅಲಿಕ

## ಅಮೂರ್ತ ಕಲೆ

ಜ್ಯಾಮಿತಿಯ ಆಕೃತಿಗಳನ್ನು ವರ್ಣ ರೇಖೆಗಳಲ್ಲೇ ವಸ್ತುಗಳನ್ನು ಕಲಾವಿದ ಸೆರೆಹಿಡಿಯಬೇಕು ಎನ್ನುವ ನೂತನ ಪಂಥ ಇಪ್ಪತ್ತನೇ ಶತಮಾನದಲ್ಲಿ ರೂಪುಗೊಂಡಿತು. ಅದು 'ಅಮೂರ್ತ' ಕಲೆ ಎನಿಸಿಕೊಂಡಿತು. ಯಾವುದೇ ವಸ್ತುವನ್ನು ಅದು ಇದ್ದಂತೆಯೇ ರೂಪಿಸದೆ ಬಣ್ಣ ಆಕೃತಿಗಳನ್ನು ಹೊಂದಾಣಿಕೆಯಾಗುವಂತೆ, ಇಲ್ಲವೆ ಪರಿಣಾಮಕಾರಿಯಾಗುವಂತೆ ಮೂಡಿಸಿ ಚಿತ್ರಿಸುವುದು ಅಮೂರ್ತಕಲೆ. ವಾಸ್ತವತೆಯ ಅತ್ಯಂತ ಮೂರ್ತ ಚಿತ್ರವು ಕೂಡ ಬೆಲೆ ಪಡೆಯಬೇಕಾದರೆ ರೇಖಾ ಸಂಯೋಜನೆಯ ಹೊಂದಾಣಿಕೆ ಮತ್ತು ಬಣ್ಣಗಳ ಆಧಾರದ ಮೇಲೆ ನಿಂತಿರಬೇಕು. ಏಕೆಂದರೆ ಕೃತಿಗೊಂಡಿರುವ ನಿಸರ್ಗದ ವಸ್ತುಗಳು ತಮ್ಮಷ್ಟಕ್ಕೆ ತಾವೇ ಚಿತ್ರದಲ್ಲಿ ಜೀವಂತವಾಗುತ್ತವೆ. ಅವು ತಾತ್ವಿಕವಾಗಿ ಅನುಕರಣೆ ಮಾಡದೆ ಅಥವಾ ನೈಸರ್ಗಿಕ ವಾದವನ್ನು ವರ್ಣಿಸದೆ ಭಾವೋದ್ವೇಕನ ಮಾಡುವ ಸಂಗೀತದ ಮೂಲಾಂಶಗಳಂತೆ ಇವೆ.

ಸಂಗೀತ ಮತ್ತು ವಾಸ್ತುಶಿಲ್ಪವನ್ನು ಅನುಸರಿಸುವ ಅಪೇಕ್ಷೆಯಿಂದ ತನ್ನದೇ ಆದ ಸ್ವಾತಂತ್ರ್ಯವನ್ನು ಪಡೆದು ನಿಯಮಗಳನ್ನು ಬೆಳೆಸಿಕೊಂಡು ಹುಟ್ಟಿತು ಅಮೂರ್ತಕಲೆ. ವ್ಯಾಗ್ನರನ 'ಲೋಮನ್‌ಗ್ರೀನ್' ಎಂಬ ಸಂಗೀತ ಕೃತಿಯನ್ನು ಆಲಿಸಿ ಆಸ್ವಾದಿಸಿದ ಮೇಲೆ ಸಂಗೀತದಲ್ಲಿರುವ ಶಕ್ತಿಗಳನ್ನು ಚಿತ್ರಕಲೆಯಲ್ಲೂ ಕೂಡ ತರಬಹುದೆಂದು ಕ್ಯಾಂಡೆನಸ್ಕಿಗೂ ಅನಿಸಿತು. ರಷ್ಯದಲ್ಲಿ ಜನಿಸಿದ ಈ ಚಿತ್ರಕಾರ ಅಮೂರ್ತ ಕಲೆಯ ಆದ್ಯ ಪ್ರವರ್ತಕ ಎಂದು ಪ್ರಸಿದ್ಧನಾದ. ಹಾಲೆಂಡಿನ ಮಾಂಡ್ರಿಯಾನ್ ಕೂಡ ಪ್ರಖ್ಯಾತ ಅಮೂರ್ತ ಪಂಥದ ಕಲಾವಿದ.

ಅಮೂರ್ತ ಆಕಾರಗಳನ್ನು ಅಲಂಕಾರ ಸೌಂದರ್ಯಕ್ಕಾಗಿ ಬಳಸುತ್ತಿದ್ದರೂ, ಅದರ ಪ್ರಯೋಜನಗಳಿಸಿಕೊಂಡದ್ದು ಇಪ್ಪತ್ತನೆಯ ಶತಮಾನದಲ್ಲಿ ಯಾವುದೇ ಕಟ್ಟುಪಾಡು ನಿಬಂಧಗಳಿಗೂ ಒಳಗಾಗದ ಕಲ್ಪನೆಯ ಅದಮ್ಯ ಚೇತನಗಳಿಗೆ ಪ್ರಾಮುಖ್ಯತೆ ಇರುವ, ಅಮೂರ್ತಕಲೆ ತಾನು ತನ್ನ ವೈವಿಧ್ಯತೆಯಿಂದ ಬಹು ಜನರನ್ನು ಆಕರ್ಷಿಸಿತು. ಜ್ಯಾಮಿತಿಯು ಅಮೂರ್ತ ಕಲೆಯ ಜೊತೆ ಸಂಬಂಧ ಹೊಂದಿದ್ದು ಈ ಕಲಾವಿದರು ಅದರ ರೂಪಕ್ಕೆ ನಾನಾ ವಿಧವಾದ ಹೊಸ ಕಾಣಿಕೆಗಳನ್ನು ಕೊಟ್ಟಿದ್ದಾರೆ. ಇಟಲಿಯ ಅಲ್ಬರ್ಟೊ ಮ್ಯಾಗ್ನೆಲ್ಲಿ ಚಪ್ಪಟೆಯಾದ ರೇಖೆ, ರೂಪ ಮತ್ತು ಬಣ್ಣದಲ್ಲಿ ವೈದೃಶ್ಯವಾಗಿ ಕಾಣುವಂತೆ ಜಾಮಿತಿಯ ಚೌಕಟ್ಟಿಗೆ ಹೊಂದಿಸಿದ್ದಾನೆ. ಅಮೂರ್ತ ಕಲೆಯ ವಿವಿಧ ರೂಪಗಳು ಸಾಮಾನ್ಯ ಕಲಾತ್ಮಕ ತತ್ವಗಳಿಂದ ದೂರವಾದರೂ, ವಸ್ತುನಿಷ್ಟ ವಾಸ್ತವವನ್ನು ಉಲ್ಲೇಖಿಸಲು ತಿರಸ್ಕಾರ, ಕೃತಿಯಲ್ಲಿ ಯಾವುದೇ ವಸ್ತು ಅಥವಾ ಅರ್ಥ ಇರದು. ಕಾವ್ಯಾತ್ಮಕ ಅಮೂರ್ತವಾದ ಕಲೆ ಸಹ ಪ್ರಾರಂಭವಾಯಿತು. ಇದರಲ್ಲಿ ವರ್ಣಗಳನ್ನು ಅನಾವರಣಗೊಳಿಸುವ ಆಕೃತಿ ಕಂಡುಬರುತ್ತದೆ.

ಪಿ ಆರ್ ತಿ.

## ಅಮೂರ್ತತೆ ಜಿಯಾಮೆಟ್ರಿಕ್ (Geometric Abstraction)

ಅಮೂರ್ತದೊಳಗಿನ ವಿಭಾಗೀಕರಣವಿದು. ಅಂದರೆ ಅಬ್‌ಸ್ಟ್ರಾಕ್ಟ್ ಎಕ್ಸ್‌ಪ್ರೆಷನಿಸಂ ಕಲಾಕೃತಿಗಳಲ್ಲಿ ಭಾವತೀವ್ರವಾದ ಹಾಗೂ ಮನೋನಿಷ್ಠ ಗುಣಗಳಿಗೆ ಹೆಚ್ಚು ಪ್ರಾಶಸ್ತ್ಯವಿದ್ದಲ್ಲಿ ಜಿಯಾಮೆಟ್ರಿಕ್ ಅಬ್‌ಸ್ಟ್ರಾಕ್ಷನ್ನಿನ ಕೃತಿಗಳಲ್ಲಿ ತರ್ಕಬದ್ಧತೆ ಹಾಗೂ ವಸ್ತುನಿಷ್ಠತೆ ಕಂಡುಬರುವುದು. ಈ ಕಲಾಪ್ರಕಾರವು(ಇಸಂ) ಕ್ಯೂಬಿಸಂ, ರಷ್ಯದ ಸುಪ್ರಿಮ್ಯಾಟಿಸಂ ಹಾಗೂ ಕನ್‌ಸ್ಟ್ರಕ್ಟಿವಿಸಂ ಮೌಲಿಕವಾಗಿ ಜನಿಸಿ ಬಂದಿತು. ಕ್ರಮೇಣ ಅದು (ಜಿಯಾಮೆಟ್ರಿಕ್ ಅಮೂರ್ತತೆಯು) ಡಿಲೋನೆ ಎಂಬ ಕಲಾವಿದನ ವರ್ಣ ಪ್ರಯೋಗಗಳು ಹಾಗೂ ಸಿಂಕ್ರೊನಿಸಂ ಮೂಲಕ ಬೆಳೆಯಿತು. ಬಹುಶಃ ಈ ಜಿಯಾಮೆಟ್ರಿಕ್ ಅಮೂರ್ತ ಗುಣವು ವ್ಯಾನ್‌ಡೋಸ್‌ಬರ್ಗ್ ಎಂಬಾತನ ನಿಯೋ-ಪ್ಲಾಸ್ಟಿಸಿಸಂ ಎಂಬ ಇಸಂ ಮತ್ತು ಪಿಯಟ್ ಮಾಂಡ್ರಿಯಾನನ ಕೃತಿಗಳಲ್ಲಿ ಅತ್ಯುತ್ತಮವಾಗಿ ವ್ಯಕ್ತಗೊಂಡಿದೆ. ಇವರ ಕೃತಿಗಳಲ್ಲಿ ಸರಳ ಶುದ್ಧ ಜಿಯಾಮೆಟ್ರಿ 'ಆಕಾರಗಳ' ಅತ್ಯುತ್ತಮ ಬಳಕೆಯಾಗಿದೆ. ಈ ಪ್ರಕಾರದಲ್ಲಿ ಹೊರಗಿನ ಪ್ರಪಂಚದ ವಸ್ತುಗಳ ಚಿತ್ರಣವಿರುವುದಿಲ್ಲ. (ಉದಾ: ಗಿಡ, ಮರ, ಮಾನವ ಇತ್ಯಾದಿಯ ಚಿತ್ರಣವಿರದು). ಬದಲಿಗೆ ಜಿಯಾಮೆಟ್ರಿ ಆಕಾರದ, ಭಾವರಹಿತವಾದ ಆಕಾರಗಳನ್ನು ಆಕಾರಗಳನ್ನಾಗಿಯೇ ನೋಡಿ ಅನುಭವಿಸಬೇಕಾಗುತ್ತದೆ. ಉದಾ: ಪಿಯಟ್ ಮಾಂಡ್ರಿಯನ್ನನಲ್ಲಿ ಎಂಟು ಕೆಂಪು ಆಯತಾಕಾರಗಳನ್ನು ಹಾಗೆಯೇ ಸ್ವೀಕರಿಸಬೇಕಾಗುತ್ತದೆ. ಅವುಗಳು ಇನ್ನೇನೋ ಆಗಲು ಸಾಧ್ಯವಿಲ್ಲ. ಮುಂದೆ ೧೯೬೦ರ ಮಿನಿಮಲ್ ಕಲಾ ಚಳುವಳಿ ಈ ಜಿಯಾಮೆಟ್ರಿಕ್ ಅಮೂರ್ತತೆಯ ಹೊಸ ಸಾಧ್ಯತೆಗಳನ್ನು ಕಂಡುಕೊಂಡಿತು. ಉದಾಹರಣೆಗೆ ಫ್ರಾಂಕ್‌ಸ್ಟೆಲ್ಲಾ ಎಂಬಾತನ ಕೃತಿಗಳಲ್ಲಿ ಈ ಗುಣಗಳಿದ್ದು, ಇವು ಕನ್‌ಸ್ಟ್ರಕ್ಟಿವಿಸಂ ಹಾಗೂ ಮಿನಿಮಲಿಸಂನ ಕೊಂಡಿಗಳಾಗಿದ್ದವು.

ಎಲ್. ಎ. ಆ.

## ಅಮೂರ್ತತೆ (Abstraction)

'ಅಬ್‌ಸ್ಟ್ರಾಕ್ಟ್' ಎಂಬುದಕ್ಕೆ ಪದಶಃ 'ಎತ್ತಿಕೊ' 'ಹೊರತೆಗೆ' ಎಂದು ಅರ್ಥ. ನೈಸರ್ಗಿಕ ವಸ್ತುಗಳಿಂದ ಮಾಡಿಕೊಂಡ ಅಲಂಕಾರಿಕ ಕಲೆಯಲ್ಲಿನ ಶೈಲೀಕೃತ ಆಕೃತಿಗಳಿಗೆ ಈ ಪದ ಅನ್ವಯವಾಗುತ್ತದೆ. ನವೋದಯ ಯುಗದ ಅನಂತರದ ಕಲಾವಿದರಲ್ಲಿ ತಮ್ಮ ಭಾವನೆ ಮತ್ತು ವಿಚಾರಗಳನ್ನು ಅಭಿವ್ಯಕ್ತಿಸಲು ವರ್ಣನೆ ಅಥವಾ ವಿವರಣೆ ಬಿಟ್ಟ ರೇಖೆ ಮತ್ತು ವರ್ಣಗಳನ್ನು ಬಳಸುವ ಪ್ರವೃತ್ತಿ ಹೆಚ್ಚಾಯಿತು. ಕಲಾವಿದ ವ್ಹಿಸ್ಲರನು ಸಂಗೀತದ ದೃಷ್ಟಾಂತ ಎಂಬುದನ್ನು ಸೂಚಿಸಲು 'ಸಿಂಪನಿ' (Symphony) ಅಥವಾ 'ನೊಕ್ಟರನ್'(Nocturune) ಎಂಬ ಶೀರ್ಷಿಕೆ ಬಳಸಿದನು. ಸಂಕೇತವಾದಿಗಳ ಚಳುವಳಿಯು ಕಲೆಗಳಲ್ಲಿ ಸಂಗೀತಕ್ಕೂ ಹಾಗೂ ಅಮೂರ್ತ ತತ್ವಗಳಿಗೂ ವಿಶೇಷ ಗಮನ ಕೊಟ್ಟಿತು. ಇಂಗ್ಲಿಷ್ ಲೇಖಕ ವಾಲ್ಟರ್ ಪೀಟರನು ಎಲ್ಲ ಕಲೆಗಳು ಸಂಗೀತವನ್ನು ಹೊಂದಲಪೇಕ್ಷಿಸುತ್ತವೆ ಎಂದು ಸಾರಿದನು.

೨೦ನೆಯ ಶತಮಾನದ ಹೊತ್ತಿಗೆ ಅಬ್‌ಸ್ಟ್ರಾಕ್ಷನ್ ಪದವು ತನ್ನ ಮೂಲ ಅರ್ಥವನ್ನು ಕಳೆದುಕೊಂಡು, ಇದ್ದುದನ್ನು ಕಂಡಂತೆ ಚಿತ್ರಿಸದೆ 'ಆಕೃತಿ ರಹಿತ ಚಿತ್ರಣ' ಎಂಬ ಅರ್ಥವನ್ನು ಪಡೆಯಿತು.

ಆರ್ಫಿಕ್ ಕ್ಯೂಬಿಸಂ(Orphic Cubism) ಪಂಥದವರು "ಕಣ್ಣಿಗೆ ಕಾಣುವ ನೈಜ ಚಿತ್ರಣಕ್ಕೆ ಬದಲಾಗಿ ಕಲಾವಿದನು ನಿರ್ಮಿಸಿದ ಹೊಸ ಆಕೃತಿಗಳ ಚಿತ್ರಣ" ಎಂಬುದಾಗಿ ವಿವರಿಸುತ್ತಾರೆ. ಕ್ಯಾನ್‌ಡಿನಸ್ಕಿ ರಚಿಸಿದ ಜಲವರ್ಣ ಚಿತ್ರವೆ ಈ ಬಗೆಯ ಅಮೂರ್ತ ಕಲೆಯ ಆದ್ಯಕೃತಿಯೆಂದು ತಿಳಿಯಲಾಗುತ್ತದೆ. ಫೀಲ್ ಮ್ಯಾಂಡ್ರಿಯನ್‌ನು ಈತನಿಂದ ಪ್ರೇರಿತನಾದನು. ಅನಂತರ ಈ ಪರಂಪರೆ ರಷ್ಯ , ಹಾಲಂಡ, ಫ್ರಾನ್ಸ, ಗ್ರೇಟ್ ಬ್ರಿಟನ್‌ಗಳಲ್ಲಿ ಪ್ರಚಲಿತವಾಗಿತ್ತು.

ಕ್ಯಾನ್‌ಡಿನಸ್ಕಿಯ ಈ ಅಮೂರ್ತತೆಯ ಕಲ್ಪನೆಯು ಚಿತ್ರಕಲೆ ಮತ್ತು ಸಂಗೀತಗಳ ಮಧ್ಯದ ಸಾಂಕೇತಿಕವಾದವನ್ನು ಆಶ್ರಯಿಸಿದ್ದಾಗಿದೆ. ಸಂಗೀತವು ಒಂದು ಭಾಷೆ. ಯಾವುದೇ ಗಮನಾರ್ಹವಾದ ವಸ್ತು, ವಿಷಯವಿಲ್ಲದೆ ಭಾವ ಹಾಗೂ ಹೃದಯದ ಮೇಲೆ ಪರಿಣಾಮ ಬೀರುವ ಶಕ್ತಿಯುಳ್ಳದ್ದಾಗಿದೆ. ಈ ಸಾಂಕೇತಿಕ ವಾದವು ಎಲ್ಲ ಬಗೆಯ ಐಂದ್ರಿಕ ಪ್ರಭಾವ ಬೀರುತ್ತದೆ. ವರ್ಣ ಇತ್ಯಾದಿಗಳು ದಟ್ಟವಾಗಿ ಅನುಭೂತಿಯನ್ನುಂಟು ಮಾಡುತ್ತವೆ. ಕ್ಯಾನ್‌ಡಿನಸ್ಕಿಯು ಹೇಳುವ ಭೌತಿಕ ಹಾಗೂ ಮಾನಸಿಕ ಸಂಬಂಧವು ಪರೀಕ್ಷೆಗೆ ಒಳಪಡಿಸಲಾದ ಆಧ್ಯಾತ್ಮಿಕ ಕ್ಷೇತ್ರದ್ದಾಗಿದೆ. ಇಂಥ ಅನುಭೂತಿಯನ್ನು ವರ್ಣ ಹಾಗೂ ರೇಖೆಗಳ ಮೂಲಕ ಚಿತ್ರಕಲೆಯಲ್ಲೂ ಪ್ರಚೋದಿಸಬಹುದೆಂಬುದು ಕ್ಯಾನ್‌ಡಿನಸ್ಕಿಯ ನಂಬಿಕೆ.

ಶಿ. ಪ.

## ಅಮೂರ್ತತೆಯ ಬಳಗ(Abstraction Creation)

ಕ್ರಿ. ಶ. ೧೯೩೦ರ ದಶಕದಲ್ಲಿ ಪ್ಯಾರಿಸ್‌ನಲ್ಲಿ ಅಮೂರ್ತ ಕಲೆಯತ್ತ ಆಸಕ್ತಿ ತಳೆದ ಫ್ರೆಂಚ್ ಕಲಾವಿದರ ಸಮೂಹವಿದು. ಒಂದು ಕಾಲಕ್ಕೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿದ, ನಾಲ್ಕು ನೂರಕ್ಕಿಂತ ಹೆಚ್ಚಿನ ಕಲಾವಿದರ ಗುಂಪನ್ನು ಒಳಗೊಂಡಿತ್ತು. ಈ ಗುಂಪಿನ ಸದಸ್ಯರು

ಸರ್‍ರಿಯಲಿಸಂ ಪಂಥವನ್ನು ವಿರೋಧಿಸಿದರು. ಆದರ ಬದಲಾಗಿ ಕನ್ಸಟ್ರಕ್ಟಿವಿಸಮ್ ಪಂಥವನ್ನು ಮತ್ತು ಡಿಸ್ಟಿಜಲ್ (Destijl) ನ ಜ್ಯಾಮಿತಿ ಕಲೆಯನ್ನು ಅನುಸರಿಸಿದರು. ಆಗಸ್ಟ ಹರ್ಬಿನ್, ಜೀನ್ ಹೆಲಿಲಿನ್ ಮತ್ತು ಜಾರ್ಜಸ್ ವಾಂಟೊಂಗರ್ರೂ ಈ ಬಳಗದ ಕೇಂದ್ರ ವ್ಯಕ್ತಿಗಳು. ಇವರೊಂದಿಗೆ ಜೀನ್ ಆರ್ಪ್, ವಸಿಲಿ ಕ್ಯಾನ್‌ಡಿನ್‌ಸ್ಕಿ, ಪಿಯೆಟ್ ಮ್ಯಾಂಡ್ರಿಲಿನ್ ಹಾಗೂ ಬೆನ್ ನಿಕೊಲ್ಸನ್ ಅವರನ್ನು ಹೆಸರಿಸಬಹುದು. ಈ ಬಳಗದ ಸದಸ್ಯರು ೧೯೩೧-೩೬ರ ಅವಧಿಯಲ್ಲಿ ಶುದ್ಧ ಅಮೂರ್ತತೆಯನ್ನು ಕಲೆಯಲ್ಲಿ ಅಳವಡಿಸಿಕೊಂಡ ಈ ಕಲಾಸಂಪ್ರದಾಯವು ಎರಡನೆಯ ಜಾಗತಿಕ ಯುದ್ಧದ ನಂತರವೂ ಪ್ರಚಲಿತವಿತ್ತು. ವಾರ್ಷಿಕ ಕಲಾ ಪ್ರದರ್ಶನಗಳನ್ನು ಏರ್ಪಡಿಸುತ್ತಲಿದ್ದ ಈ ಕಲಾವಿದರ ಬಳಗವು ಶುದ್ಧ ಜ್ಯಾಮಿತಿ ಅಮೂರ್ತತೆಯ ಕಲಾ ತತ್ವವನ್ನು ಉಳಿಸುವಲ್ಲಿ, ಬೆಳೆಸುವಲ್ಲಿ ಮಹತ್ವದ ಪಾತ್ರವಹಿಸಿತು.

ಶಿ. ಪ.

## ಅಮೇರಿಕೆಯ ಕಲೆ

ಮೂರುನೂರು ವರುಷಗಳ ಹಿಂದೆಯೇ ಅನೇಕ ಯುರೋಪಿಯನ್ ನಾಗರೀಕರು ಅಮೇರಿಕೆಗೆ ಬಂದು ಹೊಸಜೀವನವನ್ನು ಪ್ರಾರಂಭಿಸಿದರು. ಈ ಕಾಲದಲ್ಲಿ ಅವರಿಗೆ ಅವಶ್ಯವಾದ ಕಲೆ ಎಂದರೆ ವಾಸ್ತುಶಿಲ್ಪವಾಗಿತ್ತು. ಮೂರ್ತಿಶಿಲ್ಪ ಹಾಗೂ ವರ್ಣಚಿತ್ರಕಲೆಗಳು ಕುಶಲ ಕೈಗಾರಿಕಾ ಕಲೆಗಳಾಗಿ ಉಪಯೋಗದಲ್ಲಿದ್ದವು. ಕ್ರಿ.ಶ. ೧೭೦೦ ಮತ್ತು ೧೮೦೦ರಲ್ಲಿ ಅಮೇರಿಕೆಯ ಪ್ರತಿಯೊಬ್ಬ ವಸಾಹತುದಾರನೂ ಸ್ವತಂತ್ರ ಕುಶಲ ಕಲಾವಿದನಾಗಿದ್ದನು. ಅಲ್ಲಿನ ನಿವಾಸಿಗಳು ಕೆಲವು ಕಚ್ಚಾಸಾಮಗ್ರಿಗಳನ್ನು ಯುರೋಪಿನಿಂದ ಆಮದು ಮಾಡಿಕೊಂಡು



ಗ್ರ್ಯಾಂಟ್‌ವುಡ್

ಕೈಗಾರಿಕಾ ವಸ್ತುಗಳನ್ನು ತಯಾರಿಸುತ್ತಿದ್ದರು. ಸ್ಥಳೀಯ ಕಲಾವಿದರು ರಸ್ತೆ ಬದಿಯ ಊಟದ ಮನೆಗಳಿಗೆ ಕಲಾತ್ಮಕ ನಾಮಫಲಕಗಳನ್ನೂ ಕೆಲವು ಶ್ರೀಮಂತ ಕುಟುಂಬದ ಸದಸ್ಯರ ಭಾವಚಿತ್ರ (Portraits)ಗಳನ್ನೂ ಚಿತ್ರಿಸಿಕೊಡುತ್ತಿದ್ದರು.

ಈ ವಲಸೆಗಾರರು ಭದ್ರವಾಗಿ ಅಮೇರಿಕೆಯಲ್ಲಿ ನೆಲೆಗೊಂಡನಂತರ ಯುರೋಪಿಯನ್ ಕಲಾಶೈಲಿಯು ಅಭಿವೃದ್ಧಿಗೊಂಡು ಪ್ರಸರಿಸಿತು. ಕ್ರಿ.ಶ. ೧೭೭೦ರಲ್ಲಿ ಅಮೇರಿಕೆಯ ಕಲಾವಿದರಾದ ಬೆಂಜಾಮಿನ್‌ವೆಸ್ಟ್(Benjamin West) ಮತ್ತು ಜಾನ್ ಸಿಂಗಲ್ಟನ್ ಕೋಪ್ಲೇ(John Singlton Copley) ಅವರು ಯುರೋಪಿಯನ್ ಕಲೆಯಿಂದ ಪ್ರಭಾವಿತರಾಗಿ ತಮ್ಮ ಕಲಾಭ್ಯಾಸವನ್ನು ಯುರೋಪಿನಲ್ಲಿಯೇ ಮಾಡಿದರಲ್ಲದೆ ಅಮೇರಿಕದ ಯುವ ಕಲಾವಿದರಿಗೂ ಕಲಿಸಿಕೊಟ್ಟರು. ಈ ವಿದ್ಯಾರ್ಥಿಗಳು ಯುರೋಪಿನ ಸಾಂಪ್ರದಾಯಿಕ ಕಲೆಯನ್ನು ಅಮೇರಿಕೆಗೆ ತಂದರು. ೧೮ನೆಯ ಶತಮಾನದ ಕೊನೆಯ ವೇಳೆಗೆ ಅಮೇರಿಕೆಯಲ್ಲಿ ಹುಟ್ಟಿಕೊಂಡ ಕಲಾಶಾಲೆಗಳು ಹೊರ ದೇಶಗಳಲ್ಲಿಯೂ ಖ್ಯಾತಿಗೊಂಡವು. ಪರಿಣಾಮವಾಗಿ ಯುರೋಪಿಯನ್ ಕಲಾವಿದರಾಗಿದ್ದ ಹೌಡನ್(Houdon) ಎಂಬ ಫ್ರೆಂಚ್‌ಶಿಲ್ಪಿಯೂ ಎಲ್ 'ಎನ್ಫಾಂಟ್'(L' Engfant) ಎಂಬ ವಾಸ್ತುಶಿಲ್ಪಿಯೂ ಅಮೇರಿಕೆಗೆ ಹೋಗಿ ಅಲ್ಲಿ ತಮ್ಮ ಕಲಾಭ್ಯಾಸವನ್ನು ಮಾಡಿದರು. ಹೌಡನ್ನನು ಜಾರ್ಜ್‌ವಾಷಿಂಗ್ಟನ್ನನ(George Washington) ಅನೇಕ ಭಾವಪ್ರತಿಮೆಗಳನ್ನು ಕೆತ್ತಿದನು. ಎಲ್ ಎನ್ಫಾಂಟನು ಅಮೇರಿಕೆಯ ಹೊಸ ರಾಜಧಾನಿ ಪಟ್ಟಣ ವಾಷಿಂಗ್ಟನ್ ಡಿ.ಸಿ ನಗರ ನಿರ್ಮಾಪಕರಲ್ಲೊಬ್ಬನಾಗಿ ಅನೇಕ ನಕ್ಷೆಗಳನ್ನು ತಯಾರಿಸಿಕೊಟ್ಟನು.

ವರ್ಣಚಿತ್ರಕಲೆಯು ನಿಧಾನವಾಗಿ ಅಭಿವೃದ್ಧಿಗೊಂಡಿತು. ಅಲ್ಲಿನ ಕಲಾವಿದರು ಹೆಚ್ಚಾಗಿ ಪತ್ರಿಕಾ ವರದಿಗಾರರಾಗಿದ್ದರು. ಆ ಕಾಲದಲ್ಲಿ "ಕ್ಯಾಮರಾ" ಹೆಚ್ಚಾಗಿ ಬಳಕೆಯಲ್ಲಿಲ್ಲದ್ದರಿಂದ ಪತ್ರಿಕೆಗಳು ಇಂಥ ಕಲಾವಿದರನ್ನೇ ಅವಲಂಬಿಸಿರುತ್ತಿದ್ದವು. ಈ ಕಲಾವಿದರು ಹೆಚ್ಚಾಗಿ ದಿನನಿತ್ಯದ ಸನ್ನಿವೇಶಗಳನ್ನೇ ಚಿತ್ರಿಸುತ್ತಿದ್ದರು. ಈ ಪತ್ರಿಕಾ ವರದಿಗಾರ ಕಲಾವಿದರಲ್ಲಿ ವಿನ್ಸ್ಲೋ ಹೋಮರ್(Winslow Homer)ನು ಸುಪ್ರಸಿದ್ಧ ಕಲಾವಿದನಾಗಿದ್ದನು. ಅವನು ಹೊರದೇಶಗಳಲ್ಲಿ ಕಲಾಭ್ಯಾಸ ಮಾಡಿದವನಲ್ಲವಾಗಿದ್ದರೂ ಯುರೋಪಿಯನ್ ಕಲಾವಿದರ ಪ್ರಭಾವದಲ್ಲಿ ತನ್ನಷ್ಟಕ್ಕೆ ತಾನೇ ಸ್ವತಂತ್ರವಾಗಿ ಅಭ್ಯಾಸ ಮಾಡಿದವನಾಗಿದ್ದನು. ೧೯ನೆಯ ಶತಮಾನದ ಸುಪ್ರಸಿದ್ಧ ಕಲಾವಿದರಾದ ಥಾಮಸ್ ಈಕಿನ್ಸ್(Thomas Eakins), ವ್ಹಿಸ್ಲರ್(Whistler), ಸಾರ್ಜೆಂಟ್(Sargent), ಮತ್ತು ಮೇರಿ ಕಸಾಟ್(Mary Cassatt) ಮುಂತಾದವರು ಪ್ಯಾರಿಸ್ ಇಲ್ಲವೇ ಲಂಡನ್‌ಗಳಲ್ಲಿ ವಾಸಿಸುತ್ತಿದ್ದ ಸಂಪೂರ್ಣವಾಗಿ ಯುರೋಪಿಯನ್ ಕಲಾವಿದರಿಂದಲೇ ಪ್ರಭಾವಿತರಾಗಿದ್ದರು. "ದಿ ಆಷ್ಟನ್"(The Ashtan) (ಕಸದ ತೊಟ್ಟಿ) ಕಲಾ ಶಾಲೆಯು ಪರಿಶುದ್ಧ ಅಮೇರಿಕದ ಕಲಾಶೈಲಿಯ ಜನನಕ್ಕೆ ಕಾರಣವಾಯಿತು. ಈ ಕಲಾಶಾಲೆಯಿಂದ ಹೊರಬಂದ ಕಲಾವಿದರು ಹೆಚ್ಚಾಗಿ ದಿನ ನಿತ್ಯದ ಸನ್ನಿವೇಶಗಳ ಚಿತ್ರಗಳನ್ನೇ ಚಿತ್ರಿಸುತ್ತಿದ್ದರು. ಅವರಲ್ಲಿ ಅತ್ಯಂತ ಕಿರಿಯನೂ ಸುಪ್ರಸಿದ್ಧನೂ ಆದ ಜಾರ್ಜ್ ಬೆಲ್ಲೋಸ್(George Bellows)ನು "ಮುಷ್ಟಿಸ್ಪರ್ಧೆ" (Boxing Matches) ನಂತಹ ಕಲಾಕೃತಿಗಳನ್ನು ರಚಿಸಿದನು.

ಕ್ರಿ.ಶ. ೧೯೧೩ರಲ್ಲಿ ಅಮೇರಿಕೆಯಲ್ಲಿ ಜರುಗಿದ "ಪ್ರಭುತ್ವ ಲಾಂಛನ"ಗಳ ಪ್ರದರ್ಶನದಲ್ಲಿ ವೈಯಕ್ತಿಕ ಭಾವಮುದ್ರಾ ಪಂಥ(Post- Impressionist)ದ ಕಲಾಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಪ್ರಥಮ ಹಾಗೂ ದ್ವಿತೀಯ ವಿಶ್ವ ಸಮರದ ಮಧ್ಯಕಾಲದಲ್ಲಿ ಅಮೇರಿಕೆಯ ಅನೇಕ ಕಲಾವಿದರು ಯುರೋಪಿನ "ಘನಾಕೃತಿ"(Cubism), ಸರ್ರಿಯಲಿಸ್ಟ್ ಕಲೆ ಮತ್ತು ಅಮೂರ್ತಕಲೆ

(Abstract Art) ಮುಂತಾದ ಆಧುನಿಕ ಶೈಲಿಗಳನ್ನೂ ಅಭ್ಯಸಿಸಿದರು. ಅವರಲ್ಲಿ ಜಾನ್ ಮಾರ್ಟಿನ್(John Martin) ಮತ್ತು ಸ್ಟೂಅರ್ಟ್ ಡೇವಿಸ್(Stuart Davis) ಅವರು ವಿಶ್ವವಿಖ್ಯಾತ ಕಲಾವಿದರಾಗಿದ್ದರು. ೧೯೩೦ರಲ್ಲಿ ಉಂಟಾದ ಆರ್ಥಿಕ ಮುಗ್ಗಟ್ಟಿನಿಂದಾಗಿ ಕೆಲವು ಕಲಾವಿದರು ಮರಳಿ ವಾಸ್ತವಿಕತೆಯತ್ತ ತಿರುಗಿದರು. ಗ್ರಾಂಟ್‌ವುಡ್(Grant Wood)ನು ಮಧ್ಯಪಶ್ಚಿಮ ಅಮೇರಿಕೆಯ ಕೃಷಿಕ ಜೀವನವನ್ನು ಬಿಂಬಿಸುವ ವರ್ಣಚಿತ್ರಗಳನ್ನೂ ಬೆನ್‌ಷಾನ್(Benshahn)ನು ಹೆಚ್ಚಾಗಿ ಸಾಂಕೇತಿಕವಾಗಿ ನಗರಗಳಲ್ಲಿರುವ ಬಡವರ ಲೋಭತನವನ್ನು ಬಿಂಬಿಸುವ ವರ್ಣಚಿತ್ರ ಕಲಾಕೃತಿಗಳನ್ನೂ ಚಿತ್ರಿಸಿದರು.

ದ್ವಿತೀಯ ವಿಶ್ವ ಸಮರ ಕಾಲದಲ್ಲಿ ಯುರೋಪಿನ ಅನೇಕ ಕಲಾವಿದರು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಿಗೆ ವಲಸೆ ಬಂದರು. ಈ ವೇಳೆಗೆ ಆಧುನಿಕ ಕಲಾಶೈಲಿಗಳು ಅಂತರ್ರಾಷ್ಟ್ರೀಯ ಮನ್ನಣೆಗೆ ಪಾತ್ರವಾಗಿದ್ದವು.ಹೀಗೆ ವಲಸೆ ಬಂದ ಕಲಾವಿದರು ಅಮೂರ್ತ ಹಾಗೂ ಸರ್ರಿಯಲಿಸ್ಟ್ ಕಲಾವಿದರಾಗಿದ್ದು ೧೯೫೦ರಲ್ಲಿ ಜನಿಸಿದ "ಅಮೂರ್ತ ಅಭಿವ್ಯಕ್ತಿವಾದ" (Abstract Expressionism)ಎಂಬ ಹೊಸ ಶೈಲಿಯ ಉಗಮಕ್ಕೆ ಕಾರಣರಾದರು. ಅವರಲ್ಲಿ ಜಾಕ್ಸನ್ ಪೊಲಾಕ್(Jackson Pollock) ಮಾರ್ಕ್ ರೊಥ್ಕೋ(Mark Rothko) ಮತ್ತು ಆಡೊಲ್ಫ್ ಗಾಟ್ಲೀಬ್(Adolf Gottlieb) ಮುಂತಾದವರು ಈ ಹೊಸ ಶೈಲಿಯ ಪ್ರವರ್ತಕರೆಂದು ವಿಶ್ವ ಪ್ರಖ್ಯಾತರಾಗಿದ್ದಾರೆ.

ಎ. ಟಿ. ಕಾಳೆ

## ಅರೆಬಸ್ಕ್(Arabesque)

ಬಳಸುರೇಖೆ, ಎಲೆ, ಬಳ್ಳಿ, ಹೂವು-ಇವು ಒಂದರೊಳಗೊಂದು ಹೆಣೆದುಕೊಂಡಂತೆ ರಚಿಸಿದ ವಿಶಿಷ್ಟ ಮಾದರಿಯ ಆಕೃತಿಗೆ ಅರೆಬಸ್ಕ್ ಎನ್ನುತ್ತಾರೆ. ಈ ಆಕೃತಿಯನ್ನು ಬಣ್ಣದಲ್ಲಿ, ಮುದ್ರಣದಲ್ಲಿ, ಕೆತ್ತನೆಯಲ್ಲಿ ಮೂಡಿಸಬಹುದು. ಕೈಯಿಂದ ತೆಗೆದ ಮೇಲ್ಮೈ ಅಲಂಕಾರದಲ್ಲೂ ಇದನ್ನು ಕಾಣಬಹುದು. ಇದು ಪ್ರಾಚೀನ ಹೆಲಾನಿಸ್ಟಿಕ್ ಕಲೆಯಷ್ಟು ಹಿಂದಿನದು. ೧೮ನೆಯ ಶತಮಾನದ ಉತ್ತರಾರ್ಧ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಕಲೆ ಮತ್ತು ಸಾಹಿತ್ಯದ ಪುನರುಜ್ಜೀವನದ ಅಲಂಕರಣದಲ್ಲಿ ಗ್ರೊಟಸ್ಕೊ ವಿವರಿಸಲು ಈ ಪದವನ್ನು ಉಪಯೋಗಿಸಲಾಯಿತು. ಆದರೆ ಸದ್ಯ 'ಮೂರಿಷ್ ಅರೆಬಸ್ಕ್' ಅಂದರೆ, ಅಲಂಕಾರಿಕ ಎಲೆ-ಬಳ್ಳಿಗಳ 'ಫೊಲಿಯೇಜ್' ಮಾದರಿ ಅಥವಾ ಇಸ್ಲಾಮಿಕ್ ಕಲೆಗೆ ಮಾತ್ರ ಸೀಮಿತಗೊಂಡಿದೆ.

ಅ.ಜಾ.

## ಅಲಂಕಾರಗಳು (ಹ.ಪ್ರ)

ಹಸ್ತಪ್ರತಿ ಲಿಪಿಕಾರರ ಕೌಶಲ, ಕಲಾಪ್ರಜ್ಞೆಗಳು ಹಾಗೂ ಹಸ್ತಪ್ರತಿಗಳ ಒಡೆಯರ ಕಲಾಭಿರುಚಿ- ಉದ್ದೇಶಗಳಿಗೆ ತಕ್ಕಂತೆ ಹಸ್ತಪ್ರತಿಗಳು ಅಲಂಕಾರಗೊಳ್ಳುತ್ತ ಬಂದಿವೆ. ಹಸ್ತಪ್ರತಿ ಅಲಂಕಾರಗಳನ್ನು ಅಗತ್ಯದ, ಉದ್ದೇಶಿತ ಮತ್ತು ಸಾಂದರ್ಭಿಕ ಎಂದು ವಿಂಗಡಿಸಿಕೊಳ್ಳಬಹುದು. ಸಾಂದರ್ಭಿಕದಲ್ಲಿ ಮತ್ತೆ ಶಾಸ್ತ್ರ ಸಂಬಂಧಿ, ಕಥಾಸಂಬಂಧಿ ಎಂದು ವಿಭಜಿಸಿಕೊಳ್ಳಬಹುದು.

ಅಗತ್ಯದ ಅಲಂಕಾರಗಳು ಶ್ರೀಕಾರ, ಸ್ವಸ್ತಿಕ, ಕಲಶ, ಪುಷ್ಪ, ಲಿಂಗಾಕೃತಿ, ಮುತ್ತಿನಾಕೃತಿ, ಸುರುಳಿಯಾಕೃತಿ, ಇತ್ಯಾದಿಯಾಗಿ ವೈವಿಧ್ಯಮಯವಾಗಿವೆ. ಇಂಥ ಅಲಂಕಾರಗಳು ಅಧ್ಯಾಯದ ಪ್ರಾರಂಭದಲ್ಲಿ, ಅಧ್ಯಾಯದ ಕೊನೆಯಲ್ಲಿ ಬರಹದ ನಂತರದಲ್ಲಿ ಉಳಿಯುವ ಖಾಲಿ ಜಾಗದಲ್ಲಿ ಕಂಡುಬರುತ್ತವೆ. ಗರಿ/ಕಾಗದಗಳಲ್ಲಿನ ಅರ್ಧ ಬರವಣಿಗೆ ಅಶುಭವೆಂದು ಭಾವಿಸಲಾಗುತ್ತಿದ್ದು ಅಂಥ ಸ್ಥಾನವನ್ನು ತುಂಬಲು ಈ ಅಗತ್ಯದ ಅಲಂಕಾರಗಳನ್ನು ರಚಿಸುತ್ತಿದ್ದರು.

ಉದ್ದೇಶಿತ ಅಲಂಕಾರಗಳು ಹಸ್ತಪ್ರತಿಗಳ ಸೌಂದರ್ಯವನ್ನು ಹೆಚ್ಚಿಸುವ ಉದ್ದೇಶದಿಂದಲೇ ರಚಿಸಿದವುಗಳು. ತಾಳೆಗರಿಗಳ ಮೇಲೆ ಚೂಪಾಗಿ ಬರೆಯುವ ಸಾಧನ ಕಂಟ ಹಾಗೂ ಕೈವಾರ(Compass)ದಿಂದ ರಚಿಸಿದವುಗಳು ಮೇಲ್ನೋಟಕ್ಕೆ ಜ್ಯಾಮಿತಿ ನಕ್ಷೆಗಳಂತೆ ಕಾಣುತ್ತವೆ. ಆದರೆ ಸಾಮಾನ್ಯ ಜ್ಯಾಮಿತಿ ನಕ್ಷೆಗಳಿಗಿಂತ ಭಿನ್ನವಾಗಿ ರಚಿಸಲಾದ ಈ ಅಲಂಕಾರಗಳಲ್ಲಿ ವರ್ತುಲ, ಅಂತರ್ಗತ ವರ್ತುಲ, ಅರ್ಧ, ಕಾಲು ಭಾಗದ ವರ್ತುಲಾಕೃತಿಗಳು, ಆಚ್ಛಾದಿತ ಇಲ್ಲವೆ ತಳುಕು ಹಾಕಲಾದ ವರ್ತುಲಗಳು. ವಿಕಸಿತ, ಅರ್ಧವಿಕಸಿತ ಕಮಲ ಹೀಗೆ ವೈವಿಧ್ಯಪೂರ್ಣವಾದ ಸಂಯೋಜಿತ ಚಿತ್ರಗಳಾಗಿರುತ್ತವೆ.

ಸಾಂದರ್ಭಿಕ ಚಿತ್ರರಚನೆಗಳಲ್ಲಿ ಶಾಸ್ತ್ರಸಂಬಂಧಿ, ಕಥಾಸಂಬಂಧಿ, ಚಿತ್ರರಚನೆಗಳಿರುತ್ತವೆ. ಶಾಸ್ತ್ರಸಂಬಂಧಿ ರಚನೆಗಳಲ್ಲಿ ಆಯಾ ಶಾಸ್ತ್ರಕ್ಕೆ ಸಂಬಂಧಪಟ್ಟ ಮಂತ್ರ, ತಂತ್ರ, ಯಂತ್ರಾದಿಗಳಿಗೆ ಸಂಬಂಧಪಟ್ಟ ಮಾಂತ್ರಿಕ ಮಹತ್ವದ ಸಾಂಕೇತಿಕ ಚಿತ್ರಗಳು, ವಾಸ್ತು ಶಿಲ್ಪಾದಿ ಶಾಸ್ತ್ರಗಳಲ್ಲಿನ ವಾಸ್ತು ರಚನೆಯ ಮಾದರಿ ಚಿತ್ರಗಳು ಈ ಗುಂಪಿಗೆ ಸೇರುತ್ತವೆ. ಮೈ.ವಿ.ವಿ.ದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ 'ರೂಪಾವಳಿ' ಮತ್ತು ಶ್ರವಣಬೆಳ್ಗೊಳದ ಜೈನಮಠದ ಸಂಗ್ರಹದಲ್ಲಿರುವ 'ತ್ರಿಲೋಕಸಾರ' ಇಂಥ ಚಿತ್ರರಚನೆಗಳ ಉದಾಹರಣೆಗಳಾಗಿವೆ.

ಕಥಾ ಸಂಬಂಧಿ ಚಿತ್ರ ರಚನೆಗಳು ಹಸ್ತಪ್ರತಿಗಳಲ್ಲಿನ ಕಾವ್ಯದ ಕಥೆಗೆ ಸಂಬಂಧಿಸಿದಂತೆ ರಚಿಸಿದವುಗಳು. ಇವು ಕಾವ್ಯದ ಸಂದರ್ಭ, ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟುವಂತೆ ಮಾಡುವ ಸುಂದರ ಸಂಯೋಜನಾ ಚಿತ್ರಗಳಾಗಿರುತ್ತವೆ.

ಹೀಗೆ ಹಸ್ತಪ್ರತಿ ಅಲಂಕಾರಗಳು ಕಲಾಪೂರ್ಣವೂ, ವೈವಿಧ್ಯಮಯವೂ ಕಲೆ ಹಾಗೂ ಚಾರಿತ್ರಿಕ ಮಹತ್ವದವುಗಳಾಗಿರುತ್ತವೆ.

ಬಿ. ಕೆ. ಹಿ.

## ಅಲ್ಲಾ ಪ್ರೀಮ

ಮೊದಲು ವಿಚಿತ್ರ ಮತ್ತು ಬೇಜವಾಬ್ದಾರಿ ತಂತ್ರ ಎಂದು ಪರಿಗಣಿಸಲ್ಪಟ್ಟು, ೧೯ನೇ ಶತಮಾನದಲ್ಲಿ ಸಾಮಾನ್ಯವಾಗಿ ಬಳಸಲ್ಪಟ್ಟ ತಂತ್ರ. ಈ ತಂತ್ರದ ಮೇಲ್ಮೈನ ಒಂದು ಭಾಗವನ್ನು ಪೂರ್ಣವಾಗಿ ಬಣ್ಣ ತುಂಬಿ ಅಪಾರ ದರ್ಶಕವನ್ನಾಗಿ ಮಾಡಿ ಪೂರ್ಣಗೊಳಿಸಿದಾಗ, ಮುಂಚಿನ ರೇಖಾಕೃತಿಯಾಗಲೀ ಅಥವಾ ಕೆಳಮಟ್ಟದ ವರ್ಣಚಿತ್ರವಾಗಲೀ ಅಂತ್ಯದ ಪರಿಣಾಮವನ್ನು ಮಾರ್ಪಡಿಸುವುದಿಲ್ಲ.

ಮರಿ

## ಅವಕಾಶ(Space)

ಹರ್ಬರ್ಟ್‌ರೀಡ್‌ರ ಪ್ರಕಾರ ಅವಕಾಶ ಚಿತ್ರಕಲೆಯ ಅವಿಭಾಜ್ಯ ಅಂಗಗಳಲ್ಲೊಂದು. ಅವಕಾಶದ ಪೂರ್ಣ ಸಂಸ್ಥಾಪನೆಯಾಗದಿದ್ದರೆ ಚಿತ್ರ ಅಪೂರ್ಣವೆನಿಸಬಹುದು. ಘಟಕಗಳು ಚಪ್ಪಟೆ ನೆಲೆಯಲ್ಲಿಲ್ಲದೇ ಹಿಂದೆ ಮುಂದೆ ಇದ್ದಂತೆ ಭ್ರಮೆ ಹುಟ್ಟಿಸುವಲ್ಲಿ ಅವಕಾಶದ ಹಿರಿಮೆ ನಿಂತಿದೆ. ಅವಕಾಶವನ್ನು ಎರಡು ಭಾಗವಾಗಿ ಚರ್ಚಿಸಬಹುದು.

(ಅ) ನಿಜವಾದ (ಆ) ಊಹಾತ್ಮಕ

ಚಿತ್ರದ ಚೌಕಟ್ಟಿನೊಳಗೆ ಇರುವ ಜಾಗದ ಪರಿಕರಣೆ-ನಿಜವಾದುದು. ಇದು ವೀಕ್ಷಕನ ದೃಷ್ಟಿಯನ್ನು ಮುದಗೊಳಿಸುವಂತಿರಬೇಕು. ಇದಕ್ಕಾಗಿ ಹಲವು ಸರಳ ನಿಯಮಗಳನ್ನೂ ಹೇಳುತ್ತಾರೆ. ಚಿತ್ರದ ಯಾವುದೇ ಘಟಕವನ್ನು ಮಧ್ಯ ಭಾಗದಲ್ಲಿ ವೀಕ್ಷಕನ ನೇರ ದೃಷ್ಟಿಗೆ



ವಿನ್ಸೆಂಟ್ ವ್ಯಾನ್‌ಗೋ

ಬೀಳದಂತೆ ಅಳವಡಿಸುವುದು, ಚಿತ್ರದ ಪ್ರಮುಖ ಭಾಗಕ್ಕೆ ಕೇಂದ್ರೀಕೃತವಾಗುವಂತೆ ಉಳಿದ ಘಟಕಗಳನ್ನು ರಚಿಸುವುದು ಇತ್ಯಾದಿ.

ಚಿತ್ರಕ್ಕೆ ಮೂರನೆಯ ಆಯಾಮ ದೊರಕಿಸಲು ಮಾಡುವ ಅವಕಾಶ ಸಂಸ್ಥಾಪನೆ ಊಹಾತ್ಮಕ. ಇದಕ್ಕೆಂದು ಕಲಾವಿದರು ಹಲವು ತಂತ್ರಗಳ ಮೊರೆ ಹೋಗುತ್ತಾರೆ. ಅವುಗಳಲ್ಲಿ ಮುಖ್ಯವಾದುದು ಬಣ್ಣ, ಪರಿದೂರ(Perspective) ಹಾಗೂ ಅಳತೆ. ನೀಲವರ್ಣಗಳು ಹಿಂದೆ ಸರಿದಂತೆ, ಕೆಂಪು ಹಳದಿಗಳು ಮುಂದೆ ಬಂದಂತೆ ಭಾಸವಾಗುತ್ತವೆ. ಅಂತೆಯೇ ತೆಳುಬಣ್ಣಗಳೂ ಹಾಗೂ ಗಾಢ ಬಣ್ಣಗಳೂ ಸಹ ವರ್ತಿಸುತ್ತವೆ. ಬೆಕ್‌ಮನ್‌ನ ಖ್ಯಾತ 'Trypitch'ನಲ್ಲಿ ಮಧ್ಯದ ಭಾಗ ನೀಲಿಯಿಂದ ಕೂಡಿದ್ದು ಅದು ಹಿಂದೆ ಸರಿದಂತೆ ಭಾಸವಾಗುತ್ತಿದ್ದು, ಆ ಭಾಗದಲ್ಲಿ ಸ್ವತಂತ್ರನಾಗುತ್ತಿರುವ ಯುದ್ಧ ಕೈದಿಯ ಚಿತ್ರವಿದ್ದು ಬಹಳ ಅರ್ಥಪೂರ್ಣವಾಗಿದೆ.

ಪರಿದೂರದಲ್ಲಿ ಕ್ಷಿತಿಜದಲ್ಲಿ ಕೂಡುವ ಗೆರೆಗಳ ಸಹಾಯದಿಂದ ಅಳತೆಯಲ್ಲಿ ಮುಂಭಾಗದ ವಸ್ತುಗಳು ದೊಡ್ಡವಾಗಿ, ಹಿಂದಿರುವವು ಚಿಕ್ಕವಾಗಿ ಕಾಣುವಂತೆ ಚಿತ್ರೀಕರಿಸುವುದರಿಂದ ಅವಕಾಶ ಸಂಸ್ಥಾಪನೆ ಸುಲಭವಾಗುತ್ತದೆ.

ರ.ಕಾ.

## ಅವಾಂಟ್ ಗಾರ್ಡೆ

ಇದು ಫ್ರೆಂಚ್ ಪಡೆಯಲ್ಲಿ ಉಪಯೋಗದಲ್ಲಿದ್ದ ಒಂದು ಪದ. ಅನಂತರ ೧೯ನೇ ಶತಮಾನದಲ್ಲಿ ಕಲಾತ್ಮಕ ಬೆಳವಣಿಗೆಯಲ್ಲಿ 'ಇಸಂ'ಗಳ ಜೊತೆಗೂಡಿತು. ರಿಯಲಿಸಂನಿಂದ ಕ್ಯೂಬಿಸಂ ಕಲಾವಿದರನ್ನು ಆಕರ್ಷಿಸಿ, ಈ ಶಾಲೆಯ ಖ್ಯಾತಿ ಬೆಳೆದಂತೆ, ವಿದ್ಯಾರ್ಥಿಗಳು ಈ ಶಾಲೆಗೆ ಹೋಗಲು ಇಚ್ಛಿಸಿದರು.

ಶಾ

## ಅವಿಗ್ನಾನ್ ಸ್ಕೂಲ್

ಅವಿಗ್ನಾನ್ ಶೈಲಿ ಮಧ್ಯ ೧೪ನೇ ಶತಮಾನದಿಂದ ೧೫ನೇ ಶತಮಾನದವರೆಗೆ ದಕ್ಷಿಣ ಪೂರ್ವ ಫ್ರಾನ್ಸಿನಲ್ಲಿರುವ ಅವಿಗ್ನಾನ್ ನಗರದಲ್ಲಿ ಮತ್ತು ಅದರ ಸುತ್ತ ಕಲಾಕ್ರಿಯೆ ಮಾಡುತ್ತಿದ್ದ ವ್ಯಕ್ತಿಗಳ ಸಂಕಲನ. ಈ ಪದವು ಯಾವುದೇ ಒಂದು ಶೈಲಿಯ ಅಭಿವೃದ್ಧಿಯನ್ನು ಸೂಚಿಸದೇ ದಕ್ಷಿಣ ಫ್ರಾನ್ಸಿನ ಕಲೆಯ ಮೇಲೆ ಮೊದಲು ಆದ ಇಟಲಿ ಪ್ರಭಾವ, ನಂತರ 'ಫ್ಲೆಮಿಷ್' ಪ್ರಭಾವದಿಂದ ಪ್ರಭಾವಿತರಾದ ಅವಿಗ್ನಾನ್ ಸುತ್ತಮುತ್ತ ಇದ್ದ ಚಿತ್ರಗಾರರ ಒಟ್ಟಾರೆ ಕೃತಿಗಳನ್ನು ಸೂಚಿಸುತ್ತದೆ.

ಫ್ಲೆಮಿಷ್ ಕಲೆಯಲ್ಲಿದ್ದ ಬಿಂಕ ಮತ್ತು ಬಿಗಿತ ಮಾರ್ಪಟ್ಟಿತ್ತು. ಇಟಾಲಿಯನ್ ಶೈಲಿ ಸಹ ತನ್ನ ಸರದಿಯಲ್ಲಿ, ಫ್ಲೆಮಿಷ್ ಕಲೆಯ ವಿವರಗಳಿಗೆ ಗಮನ ಕೊಡುವುದು ಜೀವಂತ ರೇಖೆಗಳು, ಭಾವಪೂರ್ವಕ ಬಣ್ಣಗಳ ಬಳಕೆಯಂತಹ ಲಾಭಗಳನ್ನು ಪಡೆಯಿತು. ಇದರ ಫಲ

ನಿಕೋಲಸ್ ಫ್ರೋಮಂತ, ಎಂಗೆಕ್ರಾಂಕ್ ಚಾರೊಂಟಾನ್‌ನಂತಹ ಕಲಾವಿದರ ಕೃತಿಗಳಲ್ಲಿ ಒಂದು ಹೊಸದಾದ, ರೂಪಚಿತ್ರಗಳು ಬರೆಯುವಲ್ಲಿ ಮತ್ತು ಪ್ರಕೃತಿಯ ಗಾಢವಾದ ಅನುಭವ ಮುಂತಾದ ಗುಣಗಳನ್ನು ಹೊಂದಿದ್ದವು. ಅವಿಗ್ನಾನ್‌ನ 'ಪೈಯ್ಟು' ಕೆಲವು ತಜ್ಞರಿಂದ ಚಾರೊಂಟಾನ್ ಕೃತಿ ಎಂದು ಗುರುತಿಸಲ್ಪಟ್ಟು. ಈ ಕೃತಿಯು ಅವಿಗ್ನಾನ್ ಶೈಲಿಯ ಅತ್ಯುನ್ನತ ಕೃತಿಯಾಗಿದೆ.

ಶಾ

## ಅಸರ್ ಮಹಲ್

ಬಿಜಾಪುರ ಊರೊಳಗೇ ಇರುವ ಅಸರ್ ಮಹಲ್ ಆದಿಲ್‌ಶಾಹಿ ಮನೆತನದ ಮಹಮದ್‌ನಿಂದ ಸುಮಾರು ೧೬೪೬ರ ವೇಳೆಯಲ್ಲಿ ರಚಿತವಾಯಿತು. ಹೊರನೋಟಕ್ಕೆ ಸಾಮಾನ್ಯವಾದ ಕಟ್ಟಡವಾಗಿ ಕಂಡರೂ ಒಳಗಿನ ಮಹಡಿಯ ಮೇಲೆ ಮುಂಭಾಗದ ಕೋಣೆ ಮತ್ತು ಹಜಾರಗಳಲ್ಲಿ ಇಡೀ ನಾಲ್ಕು ಕಡೆಯ ಭಿತ್ತಿಗಳಲ್ಲಿ ಚಿತ್ರಕಲೆಯಿದೆ. ತೆಳುವಾದ ಬಟ್ಟೆಯುಟ್ಟ ಕುಳಿತಿರುವ ವ್ಯಕ್ತಿ, ಮಗುವನ್ನು ತೂಗುತ್ತಿರುವ ಹಲವಾರು ಮಹಿಳೆಯರು. ಇಬ್ಬರು ಕಾಲುಮಣೆಯ ಮೇಲೆ ಕುಳಿತಂತೆ ಇರುವುದು, ಉದ್ದನೆಯ ಕೊಳಲಿನಂತಹ ವಾದ್ಯವನ್ನು ನುಡಿಸುತ್ತಿರುವ ವ್ಯಕ್ತಿ ಇತ್ಯಾದಿ ವ್ಯಕ್ತಿಗಳ ಚಿತ್ರಣವನ್ನು ದೊಡ್ಡ ಆಕಾರದಲ್ಲಿ ರಚಿಸಿದೆ. ಉಳಿದಂತೆ ಹಜಾರದಲ್ಲಿ ಹೂಬಳ್ಳಿ ಕಾಯಿಗಳಿಂದ ತುಂಬಿರುವ ಹೂಕುಂಡಗಳ ಚಿತ್ರಗಳಿವೆ. ಮಾನವಾಕಾರಗಳ ಮುಖಭಾಗ ಅಳಿಸಿ ಹೋಗಿದ್ದು ಇಡೀ ಚಿತ್ರಣ ಮಾಸಿಹೋಗಿದೆ. ಆದರೂ ಅಳಿದುಳಿದ ಚಿತ್ರಗಳಲ್ಲಿಯ ನಿಲುವು, ಬಣ್ಣಗಾರಿಕೆ, ಛಾಯಾಂಕನ, ದೃಗ್ದರ್ಶನ ಮುಂತಾದವೆಲ್ಲ ಯೂರೋಪಿನ ಸಮಕಾಲೀನ ಶೈಲಿಯನ್ನು ಬಹಳವಾಗಿ ಹೋಲುತ್ತದೆ. ಹಜಾರದ ಚಿತ್ರಣವೆಲ್ಲಾ ಕಡುಪಾದ ನೀಲಿಬಣ್ಣದ ಹಿನ್ನೆಲೆಯಲ್ಲಿ ರೂಪಿಸಿದೆ. ಯೂರೋಪಿನಿಂದ ೧೬೦೧ರಲ್ಲಿ ಕಾರ್ತಿನಿಯಯನ್ ಹೆಡಾ ಎಂಬ ಕಲಾವಿದ ಇಬ್ರಾಹಿಂನ ಆಸ್ಥಾನಕ್ಕೆ ಬಂದು ಕೆಲವು ಕ್ರೈಸ್ತಪರಚಿತ್ರಗಳನ್ನು ತೋರಿಸಿದ್ದಾಗಿ ತಿಳಿದುಬರುತ್ತದೆ. ಈತನೋ ಅಥವ ಇವನ ಶಿಷ್ಯರೋ ಅಸರ್ ಮಹಲ್‌ನ ಚಿತ್ರಗಳನ್ನು ಬರೆದಿರಬಹುದಾದ ಸಾಧ್ಯತೆಯಿದೆ.

ಅಲನ

## ಅಸ್ಸಿರಿಯನ್ ಕಲೆ(Assyrian Art)

ಅಸ್ಸಿರಿಯನ್ನರು, ಮೆಸೊಪೊಟೆಮಿಯಾದ ಉತ್ತರ ಭಾಗದಲ್ಲಿದ್ದಂತಹ ಒಂದು ಜನಾಂಗದವರು. ಕ್ರಿ. ಪೂ. ೧೪೦೦ ರಿಂದ ಕ್ರಿ.ಪೂ. ೬೦೦ ರ ವೇಳೆಯಲ್ಲಿ ರಾಜಕೀಯವಾಗಿ ಪ್ರಬಲರಾಗಿ ಇರಾನ್ ಮತ್ತು ಈಜಿಪ್ಟ್‌ವರೆಗೂ ರಾಜ್ಯ ವಿಸ್ತರಿಸಿದರು. ಈ ಸಂದರ್ಭದಲ್ಲಿ ಚಿತ್ರ, ಶಿಲ್ಪ, ವಾಸ್ತುಕಲೆಗಳನ್ನು ಬೆಳೆಸಿದರು. ಬೆಬಿಲೋನಿಯನ್ನರ ಸಮಕಾಲೀನತೆಯನ್ನು ಕಾಣುವ ಅಸ್ಸಿರಿಯನ್ನರ ಚಿತ್ರ ಶಿಲ್ಪಕಲಾಕೃತಿಗಳಲ್ಲಿ, ಸ್ವಂತಿಕೆಯ ಛಾಪನ್ನು ಕಾಣುತ್ತೇವೆ. ಇವರ ಕಾಲದ ಉಬ್ಬುಕೆತ್ತನೆಯ ಶಿಲ್ಪಕೃತಿಗಳು, ದೈತ್ಯ ಗಾತ್ರದ ಶಿಲ್ಪಗಳನ್ನು ಅರಮನೆ ಮತ್ತು ದೇವಾಲಯಗಳ ದ್ವಾರಗಳಲ್ಲಿ ಮೇಲ್ಭಾಗದ ಉದ್ದನೆಯ ತೊಲೆಗಳಲ್ಲಿ ಕಾಣುತ್ತೇವೆ. ಇಂತಹ ಕೃತಿಗಳನ್ನು ಕೊರ್ಸಾಬಾದ್,

ನೈನೇವ್ ಮತ್ತು ನಿಮರುದ್ ಪ್ರದೇಶಗಳಲ್ಲಿ ಈಗಲೂ ನೋಡಬಹುದು. ಎರಡರಿಂದ ಮೂರು ಮೀಟರ್‌ಗಳಷ್ಟು ಉದ್ದದ ಕಲ್ಲು ಹಾವಸೆಗಳಲ್ಲಿ ಕಡಿಮೆ ಉಬ್ಬುಗೆತ್ತನೆಯ ಚಿತ್ರಗಳನ್ನು ಗೋಡೆ, ತೊಲೆ, ಕಂಬಗಳನ್ನು ಶೃಂಗಾರಗೊಳಿಸಲೆಂದೆ ಮಾಡಿದ್ದಾರೆ. ಇವುಗಳಲ್ಲಿ ದಿನನಿತ್ಯದ ಸಾಮಾನ್ಯ ವಿಷಯಗಳ ದೃಶ್ಯಗಳು, ಹಬ್ಬ ಹರಿದಿನಗಳ ಸಂದರ್ಭ ಚಿತ್ರಗಳು, ಮೆರವಣಿಗೆ, ಬೇಟೆಯಾಡುವಿಕೆಗೆ ಸಂಬಂಧಿಸಿದ ಚಿತ್ರಗಳ ಜೊತೆಗೆ ಖಾಲಿ ಬಿಟ್ಟಂಥ ಸ್ಥಳಗಳಲ್ಲಿ ಕ್ಯುನಿಫಾರಂ ಬರವಣಿಗೆಯ ವಿವರಗಳನ್ನೂ ಕೆತ್ತಿದ್ದಾರೆ. ಇವುಗಳೆಲ್ಲ ಅರ್ಧಮುಖ, ಮುಕ್ಕಾಲು ಮುಖ, ಗುಂಪುಚಿತ್ರಗಳು, ಅಸ್ಸಿರಿಯನ್ ರಾಜರುಗಳಿಗೆ ಸಂಬಂಧಿಸಿದ ಚಿತ್ರಶಿಲ್ಪಗಳು ಆಕರ್ಷಣೆಯನ್ನುಂಟು ಮಾಡುವಂತಿವೆ. ಒಂದು ಆಕಾರದೊಂದಿಗೆ ಇನ್ನೊಂದರ ಆಕಾರಗಳನ್ನು ಸೇರಿಸಿ, ಹೋಲಿಕೆಯನ್ನು ನೀಡಿದ ಶಿಲ್ಪಗಳೂ ಮುಖ್ಯವಾಗಿವೆ. ಉದಾಹರಣೆಗೆ: ಕುದುರೆ ಅಥವಾ ಹಸುವಿನ ದೇಹಕ್ಕೆ ಮನುಷ್ಯನ ಮುಖ, ಬೆನ್ನಿನ ಮೇಲೆ ನವಿಲ ಅಥವಾ ಇನ್ನಾವುದೋ ಪಕ್ಷಿಯ ರೆಕ್ಕೆಗಳು, ಇರುವಂತೆ ಮಾಡಿದ ಶಿಲ್ಪಕೃತಿಗಳನ್ನು, ಧಾರ್ಮಿಕ ಚಿತ್ರಗಳನ್ನು ಅರಮನೆಯ ಅಲಂಕಾರಕ್ಕಾಗಿ ದೇವಾಲಯಗಳ ಹೊರಾಲಂಕಾರಕ್ಕಾಗಿ ನಿರ್ಮಿಸಿದ್ದಾರೆ.

ಭಾರತದಲ್ಲಿ ಕಂಡು ಬರುವ ಹಲವಾರು ಪೌರಾಣಿಕ ದೃಶ್ಯಗಳು ಅಸ್ಸೀರಿಯನ್ ಕಲೆಯಲ್ಲೂ ಕಂಡು ಬರುವುದರಿಂದ ಪರಸ್ಪರ ಸಂಬಂಧವಿರಬಹುದೆಂದು ಊಹಿಸಬಹುದು.

**ಆರ್. ಎ. ಶಾ.**

## ಆಂಗ್ಲೋ ಸ್ಯಾಕ್ಸನ್ ಕಲೆ (Anglo-saxon Art)

ಕ್ರಿ.ಶ. ೫ನೆಯ ಶತಮಾನದಿಂದ ಕ್ರಿ. ಶ. ೧೦೬೬ರ ನಾರ್ಮನ್ ವಿಜಯದವರೆಗಿನ ಅವಧಿಯಲ್ಲಿ ಪ್ರಚಲಿತವಿದ್ದ ಇಂಗ್ಲಿಷ್ ಕಲೆ. ಅತೀ ಮಹತ್ವದ ಪ್ರಾಚೀನ ಕಲಾಕೃತಿಗಳೆಂದರೆ ೭ನೆಯ ಶತಮಾನದಲ್ಲಿ ಸಟನ್ ಹೋ ಎಂಬ ಸ್ಥಳದಲ್ಲಿ ದೊರೆತ ಗಿಲಾಯಿ(Enamels)ಯಿಂದಾದ ವಸ್ತುಗಳು ಮತ್ತು ಲೋಹಶಿಲ್ಪಗಳು. ಈಗ ಇವು ಲಂಡನ್ನಿನ ಬ್ರಿಟಿಷ್ ವಸ್ತು ಸಂಗ್ರಹಾಲಯದಲ್ಲಿವೆ. ಬಹುಪಾಲು ಆಂಗ್ಲೋ ಸ್ಯಾಕ್ಸನ್ ಕಲೆಯು ಕ್ರಿಸ್ತಮತಕ್ಕೆ ಸಂಬಂಧಿಸಿದುದು. ರೋಮನ್ ಸಂಪ್ರದಾಯದ ಪ್ರಭಾವವೂ ಕೆಲಮಟ್ಟಿಗೆ ಎದ್ದು ಕಾಣುತ್ತದೆ. ಉದಾ: ರೆಕುಲ್ವರ್ ಕ್ರಾಸ್(೭ನೆಯ ಶ. ಕ್ಯಾಂಟರ್‌ಬರಿ ಕೆಥಡ್ರಲ್) ೮ನೆಯ ಶತಮಾನದಲ್ಲಿ ನಡೆದ ಡೆನ್‌ಮಾರ್ಕದ ದಾಳಿಗಳ ನಂತರ ಇಟಲಿಯ ಪ್ರಭಾವವು ಕ್ಷೀಣಗೊಂಡಿತು. ಉತ್ತರ ಐರೋಪ್ಯ ರಾಷ್ಟ್ರಗಳ(ಸ್ಕಾಂಡಿನೇವಿಯನ್) ಪ್ರಭಾವವು ದಟ್ಟವಾಯಿತು. ಇದರ ಪರಿಣಾಮವಾಗಿ ಕೆತ್ತನೆಗೊಂಡ ಇಲ್ಲವೆ ವರ್ಣಲೇಪಿತ ಬಳ್ಳಿಯ ಕುಡಿಗಳ ಸಂಕೀರ್ಣ ನಕ್ಷೆಗಳ ಅಲಂಕಾರಗಳತ್ತ ವಿಶಿಷ್ಟ ಅಭಿರುಚಿ ಕಾಣಿಸಿಕೊಂಡಿತು. ಇಂಥ ನಕ್ಷೆಗಳು ಅನೇಕ ಸಲ ಅದ್ಭುತ ಭೂತಾಕಾರದ ಚಿತ್ರಗಳಲ್ಲಿ ಲೀನಗೊಂಡು ತಳುಕು ನಕ್ಷೆಯಂತೆ ಕಾಣುತ್ತವೆ. ಆಂಗ್ಲೋ ಸ್ಯಾಕ್ಸನ್ ಕಲೆಯು ಕ್ರಿ.ಶ. ೯೪೦ರಿಂದ ಸೇಂಟ್ ಡನ್‌ಸ್ಟನ್, ಸೇಂಟ್ ಓಸವಾಲ್ಡ್, ಸೇಂಟ್ ಎಥೆಲ್‌ವೋಲ್ಡ ಕ್ರೈಸ್ತ ಮಠಗಳ ಪುನರುಜ್ಜೀವನದಿಂದಾಗಿ ಹೊಸ ಪ್ರಚೋದನೆ ಪಡೆಯಿತು. ಇದರ ಶ್ರೇಷ್ಠ ಪರಂಪರೆ ಎಂದರೆ ಕ್ಯಾಂಟರ್ ಬರಿ, ವಿಂಚೆಸ್ಟರ್‌ಗಳಲ್ಲಿ ನಿರ್ಮಿತವಾದ ಹಸ್ತಪ್ರತಿಗಳ ವರ್ಣಚಿತ್ರಗಳ ಮಾಲೆ. ಲಂಡನ್ನಿನ ಬ್ರಿಟಿಷ್ ಗ್ರಂಥಾಲಯದಲ್ಲಿರುವ ಸೇಂಟ್ ಎಥಲ್‌ವುಡ್ ಬೈಬಲ್ ಈ ಕಲೆಯ ಒಂದು ಉತ್ಕೃಷ್ಟ ಮಾದರಿ.

ಆಂಗ್ಲೋ ಸ್ಯಾಕ್ಸನ್ ಕಲೆಯನ್ನು ಎರಡು ಅವಧಿಗಳಲ್ಲಿ ವಿಂಗಡಿಸಬಹುದು. (೧) ೯ನೆಯ ಶತಮಾನದಲ್ಲಾದ ಡೆನಿಸ್ ಆಕ್ರಮಣದ ಪೂರ್ವದ ಕಲೆ (೨) ಡೆನಿಸ್ ಆಕ್ರಮಣದ ನಂತರದ ಕಲೆ. ೯ನೆಯ ಶತಮಾನದ ಮುಂಚೆ ಹಸ್ತಪ್ರತಿಗಳ ಅಲಂಕಾರಿಕ ವರ್ಣಚಿತ್ರಗಳು ಬ್ರಿಟನ್‌ದ ಪ್ರಧಾನ ಕಲೆ ಎನಿಸಿತ್ತು. ಈ ವರ್ಣರಂಜಕತೆಯಲ್ಲಿ ಎರಡು ಸಂಪ್ರದಾಯಗಳಿದ್ದವು-ಒಂದು, ಕ್ಯಾಂಟರ್‌ಬರಿಗೆ ಸೀಮಿತವಾಗಿತ್ತು. ಇದು ರೋಮನ್ ಸನ್ಯಾಸಿಗಳ ಪ್ರಭಾವಕ್ಕೆ ಒಳಗಾಗಿ ಕೃತಿಗಳನ್ನು ಸೃಷ್ಟಿಸಿತು. ಇನ್ನೊಂದು ಸಂಪ್ರದಾಯವು ಇನ್ನೂ ವ್ಯಾಪಕವಾದ ಪ್ರಭಾವಕ್ಕೆ ಸಿಲುಕಿತ್ತು. ಅದು ನಾರ್ಥಂಬ್ರಿಯಾದಲ್ಲಿ ಉಚ್ಛ್ರಾಯ ಸ್ಥಿತಿಯನ್ನು ತಲುಪಿತು.

ಶಿ. ಪ.

## ಆ್ಯಕ್ಷನ್ ಅಂಡ್ ಬಾಡಿ ಆರ್ಟ್ (Action and Body Art)

ಪಶ್ಚಿಮದಲ್ಲಿ ಕೆಲವು ಕಲಾವಿದರು ಮಾನವ ದೇಹದ ಚಲನಶೀಲತೆಯನ್ನು ೧೯೬೦ರಲ್ಲಿ ಕಲಾಘೋಷಣೆಗಳಿಗಾಗಿ ದುಡಿಸಿಕೊಂಡ ಸಂದರ್ಭದಲ್ಲಿ ಮೂಡಿಬಂದ ಪದಪುಂಜ ಆ್ಯಕ್ಷನ್ ಅಂಡ್ ಬಾಡಿ ಆರ್ಟ್. ದೇಹವನ್ನೇ ಕಲಾಕೃತಿಯನ್ನಾಗಿಸಿ, ಅದರ ಕ್ರಿಯೆಗಳನ್ನು ಅಭಿವ್ಯಕ್ತಿಯ ರೂಪದಲ್ಲಿ ದುಡಿಸಿಕೊಳ್ಳಲಾಯಿತು. ಅಂದಿನ ಸಮಕಾಲೀನ ಬದುಕಿನ ಆಘಾತ, ಅಸಹ್ಯ, ಬೇಸರ ಮತ್ತು ಹಿಂಸೆ ಇತ್ಯಾದಿಗಳನ್ನು ಅಭಿವ್ಯಕ್ತಿಸಲು ಈ ಹಾದಿ ಕಲಾವಿದರಿಗೆ ಪೂರಕವಾಯಿತು. ಕ್ಲೈನ್ ಎಂಬ ಕಲಾವಿದ ಕ್ಯಾನ್‌ವಾಸ್ ಮೇಲೆ ವರ್ಣಲೇಪಿಸಿದುಬೆತ್ತಲೆ ಹೆಣ್ಣುಗಳ ದೇಹಗಳನ್ನು ಎಳೆದಾಡಿದ್ದರಿಂದ (ಅವನ (Monotone Symphony) ಸಂಗೀತ ಕಾರ್ಯಕ್ರಮದ ಹಿನ್ನೆಲೆ ಈ ಸಂದರ್ಭಕ್ಕಿದೆ) ಮೂಡಿದ ರೂಪಗಳನ್ನು ಇಲ್ಲಿ ಹೆಸರಿಸಬಹುದು.

ಯುದ್ಧಾನಂತರದ ಜರ್ಮನಿಯ ಅತ್ಯಂತ ಪ್ರಭಾವಶಾಲಿ ಕಲಾವಿದನಾದ ಜೋಸೆಫ್ ಬೆಯುಸ್ ತನ್ನನ್ನೇ ಅಭಿವ್ಯಕ್ತಿಗೆ ಬಳಸಿಕೊಂಡವನು. "How to explain pictures to a dead Hare" ನ್ನು ಇಲ್ಲಿ ಹೆಸರಿಸಬಹುದು. ಹಲವು ವಿಡಿಯೋ ಚಿತ್ರಗಳಲ್ಲೂ ಆ ಸಂದರ್ಭದಲ್ಲಿ ಬೆತ್ತಲೆ ದೇಹಗಳನ್ನು ಅಭಿವ್ಯಕ್ತಿಗೆ ವಿಶಿಷ್ಟರೀತಿಯಲ್ಲಿ ದುಡಿಸಿಕೊಳ್ಳಲಾಗಿದೆ. ಬದುಕಿಗೆ ತೀರಾ ಹತ್ತಿರವಾಗಿ ಗುಂತರ್ ಬ್ರುಸ್, ಒಟ್ಟೊ ಮುಹಲ್, ಹೆರ್‌ಮ್ಯಾನ್ನ್ ನಿಟ್ಸ್‌ಚ್ ಮತ್ತು ರುಡಾಲ್ಫ ಸ್ಚವಾರ್‌ಝ್ಕೋಗ್ಲರ್ ತಮ್ಮನ್ನು ಅಭಿವ್ಯಕ್ತಿಗಾಗಿ ದುಡಿಸಿಕೊಂಡರು. ೧೯೭೪ ರಲ್ಲಿ ಹೆರ್‌ಮ್ಯಾನ್ನ್ ನಿಟ್ಸ್‌ಚ್ ಅರೆ ಬೆತ್ತಲೆ ದೇಹಗಳೇ ಅಲ್ಲದೆ ಚರ್ಮತೆಗೆದ ಪ್ರಾಣಿಗಳ ದೇಹ-ಮಾಂಸಗಳನ್ನು ತಮ್ಮ ಅಭಿವ್ಯಕ್ತಿಗೆ ಪೂರಕವಾಗಿಸಿಕೊಂಡದ್ದಿದೆ. ಈ ಕಲಾವಿದರ ಈ ಹಾದಿಯ ಅಭಿವ್ಯಕ್ತಿಯ ಪ್ರಖರತೆ, ಎಷ್ಟೆಂದರೆ ಪ್ರಾಣವನ್ನು ಕಳೆದುಕೊಳ್ಳುವಷ್ಟು.(Self mutilation) ಪ್ರದರ್ಶನದಲ್ಲಿ ತನ್ನ ಬೆತ್ತಲೆ ದೇಹದೊಂದಿಗೆ ಮತ್ತೆ ಮತ್ತೆ ಅಭಿವ್ಯಕ್ತಿಸುವಾಗ ಸ್ಚವಾರ್‌ಝ್ಕೋಗ್ಲರ್ (೧೯೪೦-೬೯) ತನ್ನನ್ನೇ ಕೊಂದುಕೊಂಡನು! ೧೯೯೨-೯೩ರಲ್ಲಿ ಕರ್ನಾಟಕದ ಗುಲ್ಬರ್ಗಾದಲ್ಲಿ ಅಂತರ್‍ರಾಷ್ಟ್ರೀಯ ಶಿಲ್ಪಿಗಳ ಸಿಂಪೋಸಿಯಂ ಒಂದರಲ್ಲಿ ಸಿಂಗಪುರದ ಶಿಲ್ಪಿ ಲೀವೆನ್ ತಮ್ಮ ದೇಹವನ್ನೇ ದುಡಿಸಿಕೊಂಡ ಅಭಿವ್ಯಕ್ತಿಯ ಪ್ರದರ್ಶನವೊಂದನ್ನು ನೀಡಿದರು.

ಕೆ.ವಿ.ಸು.

## ಆಕಾರ (Shape)

ಆಕಾರವು ಸಾಮಾನ್ಯವಾಗಿ ಎರಡು ಆಯಾಮದ ಸಮತಟ್ಟು ಗುಣದ ಚಿತ್ರಾಂಶ. (ಚಿತ್ರಣ ರೀತಿ) ಇದನ್ನು ರೇಖೆಗಳಿಂದ ಮೂಡಿಸಬಹುದಾಗಿದ್ದರೂ, ನಾವು ರೇಖೆಗಳ ಸಮ್ಮಿಲನಕ್ಕಿಂತಲೂ ಅದು ಮೂಡಿಸುವ ಆಕಾರದಿಂದಾಗಿಯೇ ಅದನ್ನು ಹೆಚ್ಚು ಬೇಗನೆ ಸ್ವೀಕರಿಸುತ್ತೇವೆ.

ಕಾಗದಗಳನ್ನು ಬೇಕಾದ ರೀತಿ ಕತ್ತರಿಸಿದಾಗ ಅವು ಆಕಾರಗಳಾಗುತ್ತವೆ; ಮತ್ತು ವಿವರಗಳಿಲ್ಲದೆಯೂ ಅವುಗಳನ್ನು ಎಲೆ, ಹೆಜ್ಜೆಗುರುತು ಇತ್ಯಾದಿಯಾಗಿ ಗುರುತಿಸಬಹುದಾಗಿದೆ. ಆದರೆ ಹೆಚ್ಚು ಸಂಕೇತವಾದ ವಸ್ತುಗಳ(ಉದಾಹರಣೆಗೆ: ಒಂದು ಕುದುರೆ) ಆಕಾರವನ್ನು ನಾವು ಗುರುತಿಸಲು ಕಷ್ಟವಾಗುತ್ತದೆ. ಕಾರಣ ಕುದುರೆಯ ಆಕಾರದ ಉಬ್ಬು- ತಗ್ಗುಗಳಿಂದಾಗಿ ಅದನ್ನು ಹೆಚ್ಚಾಗಿ ಕುದುರೆ-ಆಕಾರಕ್ಕಿಂತಲೂ ಕುದುರೆ ರೂಪವನ್ನಾಗಿ (Form) ಭಾವಿಸುತ್ತೇವೆ.



ಬ್ರಾಂಕೂಸಿ

ಪ್ರತಿಯೊಂದು ವಸ್ತುವಿಗೂ ಆಕಾರವಿರುತ್ತದೆ. ಪಿರಮಿಡ್ಡುಗಳು, ಮೋಡಗಳು, ಕಾಲು, ಶಿಲ್ಪ, ಮುಂತಾದುವೆಲ್ಲಕ್ಕೂ ಆಕಾರವಿರುತ್ತದೆ. ರೇಖೆಗಳಲ್ಲಿ ವ್ಯತ್ಯಾಸಗಳಿರುವಂತೆ ಆಕಾರಗಳಲ್ಲಿಯೂ ಉಂಟು ವೈಯಕ್ತಿಕ ಗುಣಗಳನ್ನು ಒಂದೊಂದು ಆಕಾರವೂ ಹೊಂದಿರುತ್ತದೆ. ಆಕಾರಗಳಲ್ಲೂ ಕೆಲವು ಸುಂದರವಾಗಿದ್ದು ಕೆಲವು ವರ್ಣಸಲಸಾಧ್ಯವಾಗಬಹುದು. ದೃಶ್ಯಕಲೆಯಲ್ಲಿ ಆಕಾರವು ಪ್ರಮುಖ ಪಾತ್ರ ವಹಿಸುತ್ತದೆ.

ರೇಖಾಚಿತ್ರವು ಪ್ರಮುಖವಾಗಿ ಎರಡು ಆಕಾರಗಳನ್ನು ಹೆಚ್ಚು ಮೂಡಿಸುವುದರಿಂದ 'ಆಕಾರವು' ಒಂದು ವಸ್ತುವಿನ ಛಾಯಾಂಕನ(Sichoutters)ವನ್ನು ಮೂಡಿಸಿ ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಒಂದು ಆಕಾರದ ಹೊರ ತುದಿಯನ್ನು ರೇಖೆಯೆನ್ನುತ್ತೇವೆ. ಕಂಬಾರನೊಬ್ಬ ಮಡಕೆಯನ್ನು ಮಣ್ಣಿನಿಂದ ನಿರ್ಮಿಸುವಾಗ ಅದಕ್ಕೆ 'ಒಳ್ಳೆಯ ರೇಖೆಗಳಿವೆಯೇ ಇಲ್ಲವೇ' ಎಂದು ನೋಡುತ್ತಾನೆ. ಆದ್ದರಿಂದ ಆಕಾರ ಹಾಗೂ ರೇಖೆಗಳ ನಡುವೆ ಅವಿನಾಭಾವ ಸಂಬಂಧವಿದೆ. ಪ್ರಕೃತಿ ನಿರ್ಮಿತ ವಸ್ತುಗಳ ಆಕಾರಕ್ಕೂ ಮಾನವ ನಿರ್ಮಿತ ವಸ್ತುಗಳ ಆಕಾರಕ್ಕೂ ವ್ಯತ್ಯಾಸಗಳು ಅಜಗಜಾಂತರವಾಗಿರುತ್ತವೆ. ಮಾನವ ನಿರ್ಮಿತ ವಸ್ತುಗಳ ಆಕಾರಗಳು ಹೆಚ್ಚು ಜಿಯಾಮೆಟ್ರಿಕ್ ಹಾಗೂ ನಿಶ್ಚಿತ(Regid)ಭಾವ ಹೊಂದಿರುತ್ತವೆ.

ಆಕಾರವೊಂದರ ಒಳಾಂಗಣವನ್ನು ಇತ್ಯಾತ್ಮಕ(Positive) ಪ್ರದೇಶವೆಂದು ಗುರುತಿಸಿದಂತೆ ಆಕಾರದ ಹೊರಾಂಗಣದಲ್ಲಿನ ಖಾಲಿ ಜಾಗವು ನೇತ್ಯಾತ್ಮಕ(Negative) ಆಕರವಾಗಿರುವ ಸಾಧ್ಯತೆ ಇದೆ. ಏಕೆಂದರೆ ಹಿನ್ನೆಲೆ ಇದ್ದಾಗಷ್ಟೇ ಮುನ್ನೆಲೆ ನಿರ್ಧಾರವಾಗುವುದು. ಆಕಾರಕ್ಕೆ ಹಿನ್ನೆಲೆ ಅನಿವಾರ್ಯ.

ಎಚ್. ಎ. ಅ.

## ಆಕ್ರಿಲಿಕ್ಸ್

ದೊರಗಾದ ಇಲ್ಲವೇ ನುಣುಪಾದ ಯಾವುದೇ ಮೇಲ್ಮೈಯ ಮೇಲೆ ಲೇಪಿಸಲು ಬರುವಂತ ಒಂದು ಸಿಂಥೆಟಿಕ್ ಬಣ್ಣವಾಗಿದೆ. ವರ್ಣಗಳನ್ನು ತೆಳುವಾಗಿ ಲೇಪಿಸುವುದಕ್ಕಾಗಲೀ ದಪ್ಪವಾದ ಬಣ್ಣಗಳನ್ನು ಹಚ್ಚುವುದಕ್ಕಾಗಲೀ ಆಕ್ರಿಲಿಕ್ ವರ್ಣವು ಅತ್ಯುತ್ತಮವಾದ ಮಾಧ್ಯಮವಾಗಿದೆ. ಆಕ್ರಿಲಿಕ್ ಲೇಪನವು ಯಾವುದೇ ಮೇಲ್ಮೈಯ ಮೇಲೆ ಅಂಟಿಸಿದ ತೆಳುವಾದ ಪೊರೆಯಂತೆ ಕಾಣಿಸುತ್ತದೆಯಲ್ಲದೇ ಸುಲಭವಾಗಿ ಮೇಲ್ಮೈಯ ಮೇಲೆ ಇಂಗಿಹೋಗದ ಈ ಆಕ್ರಿಲಿಕ್ ವರ್ಣವು ತೈಲವರ್ಣಗಳಿಗಿಂತ ಶೀಘ್ರವಾಗಿ ಒಣಗುತ್ತವೆ. ತೈಲವರ್ಣ ಮತ್ತು ಜಲವರ್ಣಗಳೆರಡಕ್ಕೂ ಆಕ್ರಿಲಿಕ್ ಪಾರದರ್ಶಕ ಕವಚವಾಗಿ ಕೆಲಸಮಾಡುತ್ತದೆ. ೧೯೬೦ರ ವೇಳೆಗೆ ಆಕ್ರಿಲಿಕ್ ವರ್ಣಗಳು ಸಾಕಷ್ಟು ಜನಪ್ರಿಯತೆಗೊಂಡು ವಿಶ್ವದಾದ್ಯಂತ ಮಿಶ್ರಮಾಧ್ಯಮವಾಗಿ ಇಲ್ಲವೆ ನೇರವಾಗಿ ಕಲಾಕೃತಿಗಳ ನಿರ್ಮಾಣದಲ್ಲಿ ಬಳಕೆಯಾಗುತ್ತಲಿವೆ. ಮೊರಿಸ್ ಲೂಯಿಸ್, ಕೆನೆಥ್ ನೋಲಾಂಡ್, ಜೂಲ್ಸ್, ಓಲ್ಸನಿಕ್ ಮುಂತಾದ ಕಲಾಪ್ರಪಂಚದ ಅಧ್ವರ್ಯಗಳು ಆಕ್ರಿಲಿಕ್ ವರ್ಣಗಳ ಪ್ರಚಾರಕ್ಕೆ ಕಾರಣೀಭೂತರಾದರು.

ಮ್ಯ. ಹೊ.



ತಾಜ್‌ಮಹಲ್

## ಆಗ್ರ

ವಾಸ್ತುಶಿಲ್ಪಕ್ಕೆ ಪ್ರಸಿದ್ಧಿಯಾಗಿರುವ ತಾಜ್‌ಮಹಲ್ ಇರುವ ನಗರ. ಯಮುನಾ ನದಿಯ ದಡದಲ್ಲಿ ದೆಹಲಿಗೆ ೧೨೩ ಮೈಲಿ ದೂರದಲ್ಲಿದೆ ಕ್ರಿ.ಶ. ೧೫೬೬ರಲ್ಲಿ ಅಕ್ಬರನು ಇದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು.

ಆಗ್ರ ನಗರ ಐತಿಹಾಸಿಕವಾಗಿ ಪ್ರಸಿದ್ಧವಾದ ಸ್ಥಳ. ೧೫೦೪ರಲ್ಲಿ ಸಿಕಂದರ್ ಲೂದಿಯು ಈ ನಗರವನ್ನು ಕಟ್ಟಿಸಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು ಹಾಗೂ ಒಂದು ಕೋಟೆಯನ್ನು ಕಟ್ಟಿಸಿದನು. ಮುಂದೆ ಮೊಘಲ ಬಾದಷಹನಾದ ಬಾಬರನು ಇದನ್ನು ಗೆದ್ದು ಹಳೆಯ ಕೋಟೆಯಲ್ಲಿ ಜಾಮೀ ಮಸೀದಿಯನ್ನು ಕಟ್ಟಿಸಿದನು. ತರುವಾಯ ಇದು ಅಕ್ಬರ, ಜಹಾಂಗೀರ್, ಷಹಜಾನ್ ಮೊದಲಾದ ಮೊಘಲ ಬಾದಷಹರ ರಾಜಧಾನಿಯಾಗಿತ್ತು. ಅಕ್ಬರನು ಈ ನಗರದ ಸಮೀಪದಲ್ಲಿ ಸಿಕ್ರಿ ಎಂಬಲ್ಲಿ ಸುಂದರವಾದ ಕಲ್ಲಿನ ಕಟ್ಟಡವನ್ನು ಕಟ್ಟಿಸಿದನು. ಈ ಕಟ್ಟಡಗಳ ರಚನೆಯು ಇತಿಹಾಸ ಪ್ರಸಿದ್ಧಿಯಾದುದು. ಅಕ್ಬರನು ಇಲ್ಲಿಯೇ ಕೆಲವು ಕಾಲ ವಾಸ ಮಾಡಿದನು. ಅವನ ಕಾಲದ ಅರಮನೆಯಾದ ಜಹಂಗೀರ್ ಮಹಲ್ ಹಿಂದೂ ರಾಜರುಗಳ ಅರಮನೆಯಂತಿದ್ದು ಮೊಘಲ ಶೈಲಿಯ ಮೇಲೆ ಆದ ಹಿಂದೂ ಪ್ರಭಾವಕ್ಕೆ ಸಾಕ್ಷಿಯಾಗಿದೆ.

ಕಲಾಪ್ರೇಮಿಯಾದ ಷಹಜಾನ್ ಅಕ್ಬರನ ಕಾಲದ ಕೋಟೆಯನ್ನು ದುರಸ್ತಿ ಮಾಡಿದ್ದಲ್ಲದೆ ಸುಂದರ ಕಟ್ಟಡಗಳನ್ನು ಕಟ್ಟಿಸಿದನು. ಈತನು ಕಟ್ಟಿಸಿದ ಮೋತಿಮಸೀದಿ ಒಂದು ಉತ್ಕೃಷ್ಟವಾದ

ಕಲಾಕೃತಿಯಾಗಿದೆ. ತನ್ನ ಹೆಂಡತಿ ಮಮತಾಜ್ ಮಹಲಳ ಸ್ಮರಣೆಗಾಗಿ ಸುಮಾರು ೧೬೩೦ರಲ್ಲಿ ನಿರ್ಮಿಸಿದ ತಾಜ್‌ಮಹಲ್ ಎಂಬ ಶಿಲಾಕೃತಿಯು ಜಗತ್ತಿನಲ್ಲಿಯೇ ಶ್ರೇಷ್ಠ ಹಾಗೂ ಅದ್ಭುತವಾದ ಕಲಾಕೃತಿಯಾಗಿದೆ. ಇದಲ್ಲದೆ ತನ್ನ ಹೆಂಡತಿಗಾಗಿ ಕಟ್ಟಿಸಿದ ಶಹಾಬುರ್ಜ ಗುಪುರ, ಜುಮ್ಮಾಮಸೀದಿ, ದಿವಾನ್-ಈ-ಆಮ್, ದಿವಾನ್-ಈ-ಖಾಸ್ ಮೊದಲಾದವು ಈಗಲೂ ಅಚ್ಚಳಿಯದೆ ಕಂಗೊಳಿಸುತ್ತವೆ. ಮೊಗಲ್ ಅರಸರ ಕಾಲದಲ್ಲಿ ಭಾರತಕ್ಕೆ ಬಂದಿದ್ದ ಪ್ರವಾಸಿಗರು ಇಲ್ಲಿಯ ಪೇಟೆ ಬೀದಿಗಳಲ್ಲಿ ವಿಕ್ರಯವಾಗುತ್ತಿದ್ದ ಚಿಕಣಿ ಚಿತ್ರಗಳ ಬಗ್ಗೆ ಮಾಹಿತಿ ನೀಡುತ್ತಾರೆ. ಇಂದಿಗೂ ಇಲ್ಲಿ ಚಿಕಣಿ ಚಿತ್ರಗಳು ದೊರೆಯುತ್ತದೆಯಾದರೂ ಮೂಲದ ದುರ್ಬಲವಾದ ನಕಲುಗಳಾಗಿವೆ.

**ಬಿ.ಟಿ.ಜಿ.**

## ಆರ್ಟ್ ಅಂಡ್ ಲಾಂಗ್ವೇಜ್(Art and Language)

ಇಂಗ್ಲಿಷ್ ಕಲಾವಿದರಾದ ಟೆರ್ರಿ ಅಟ್ಕಿನ್‌ಸನ್, ಡೇವಿಡ್ ಬೈನ್ ಬ್ರಿಡ್ಜ್, ಮೈಖೇಲ್ ಬಾಲ್ಡ್‌ವಿನ್, ಮತ್ತು ಹ್ಯಾರೋಲ್ಡ್ ಹುರ್ರೆಲ್‌ರವರು ೧೯೬೮ರಲ್ಲಿ ಆರ್ಟ್ ಅಂಡ್ ಲಾಂಗ್ವೇಜ್ ಎಂಬ ಹೆಸರಿನಲ್ಲಿ ಪ್ರಿಂಟಿಂಗ್ ಪ್ರೆಸ್ ಒಂದನ್ನು ತೆರೆದರು. ಪದಗಳ ಭಾಷೆ ಕಲೆಯ ಭಾಷೆಯ ಒಳಹೊರಗನ್ನು ಪರೀಕ್ಷಿಸಲು ಅತ್ಯಂತ ಸೂಕ್ತವೆಂದು ಭಾವಿಸಿದ ಈ ಕಲಾವಿದರ ಗುಂಪು ೧೯೬೯ರಲ್ಲಿ ಒಂದು ನಿಯತಕಾಲಿಕ ಪತ್ರಿಕೆಯೊಂದರ ಪ್ರಕಟಣೆಯನ್ನೂ ಪ್ರಾರಂಭಿಸಿತು. ಆರ್ಟ್ ಅಂಡ್ ಲಾಂಗ್ವೇಜ್ ಹೆಸರಿನ ಈ ಪತ್ರಿಕೆಯೇ (Conceptual art theory)ಯನ್ನು ಪ್ರಸ್ತುತ ಪಡಿಸಿತು. ಈ ಗುಂಪಿನ ಕಲಾವಿದರ ನಿಲುವುಗಳು ಅಮೆರಿಕ ಮತ್ತು ಯುರೋಪಿನ ಹಲವಾರು ಕಲಾವಿದರ ಮೇಲೆ ಪ್ರಭಾವ ಬೀರಿತು.

**ಕೆ. ವಿ. ಸು.**

## ಆರ್ಟ್ ಡೆಕೊ

"ಆರ್ಟ್ ಡೆಕೊ" ಎಂಬುದು ೧೯೨೦ ಮತ್ತು ೧೯೩೦ರ ಅವಧಿಯಲ್ಲಿ ಯುರೋಪ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಬಳಸಲಾಗುತ್ತಿದ್ದ ನಕ್ಷೆ ಮತ್ತು ಮನೆಯ ಒಳಾವರಣವನ್ನು ಅಲಂಕಾರಗೊಳಿಸುವ ಶೈಲಿಯಾಗಿದೆ. ೧೯೨೫ರಲ್ಲಿ ಈ ಶೈಲಿಯು ಆರ್ಟ್‌ನವ್(Art Nouveau) ಎಂದು ಕರೆಯಲಾಗುವ ನವೀನ ಶೈಲಿಯಿಂದ ಹುಟ್ಟಿಕೊಂಡುದಾಗಿದೆ. ನಿಖರವಾದ ಜಾಮಿತಿಕ ಆಕೃತಿಗಳು, ಹೂವುಗಳು ಮತ್ತು ವಿಶಿಷ್ಟ ಭಂಗಿಯಲ್ಲಿರುವ ಸ್ತ್ರೀಯರ ನಗ್ನ ಚಿತ್ರಗಳು ಮುಂತಾದವುಗಳನ್ನು ಪ್ರಖರ ವರ್ಣಗಳಲ್ಲಿ ಚಿತ್ರಿಸುವುದು ಈ ಶೈಲಿಯ ಗುಣಧರ್ಮವಾಗಿದೆ. ಜೇಡ್ ಎಂದು ಕರೆಯಲಾಗುವ ಒಂದು ತರಹದ ಬಹು ಬೆಲೆಯ ಕಲ್ಲು ಮತ್ತು ಹಸ್ತಿದಂತ ಮುಂತಾದ ವಿಲಾಸೀ ವಸ್ತುಗಳ ಮೇಲೆ ಕಲಾವಿದನು ರೂಪಿಸುವ ಕುಶಲ ಕಲೆಗಾರಿಕೆಗೆ ಒತ್ತುಕೊಡುವುದು ಈ ಶೈಲಿಯ ವೈಶಿಷ್ಟ್ಯವಾಗಿದೆ.

ಆರ್ಟ್‌ಡೆಕೊ ಶೈಲಿಯು ಅಲಂಕಾರಿಕ ಕಲೆಗಳಲ್ಲಿ "ಫ್ರೆಂಚ್ ಶ್ರೇಷ್ಠತೆ"ಯನ್ನು ಪುನಃಪ್ರತಿಷ್ಠಾಪಿಸಲ್ಪಟ್ಟಿತಲ್ಲದೆ ಸಂಯುಕ್ತ ಸಂಸ್ಥಾನಗಳಿಗೂ ಪ್ರಸರಿಸಿ ಜನತಾ-ಬಜಾರಕ್ಕೂ

(Mass-Market) ಮತ್ತು ಯಾಂತ್ರಿಕ ವಸ್ತುಗಳ ತಯಾರಿಕೆಗೂ ಬಳಸುವ ಶೈಲಿಯಾಯಿತು. ಜನಸಾಮಾನ್ಯರಿಗಾಗಿ ಉತ್ಪಾದಿಸಲ್ಪಡುವ ವಸ್ತುಗಳ ತಯಾರಿಕೆಗಾಗಿ ಪ್ಲಾಸ್ಟಿಕ್ ಮತ್ತು ಬೇರೆ ತರದ ಸಿಂಥೆಟಿಕ್ ವಸ್ತುಗಳ ಬಳಕೆಯ ವಿಧಾನದಿಂದಾಗಿ ಕೆಳದರ್ಜೆಯ ಕಲಾಕೃತಿಗಳ ರಚನೆಯಾಗತೊಡಗಿತು. ೧೯೬೦ರ ವೇಳೆಗೆ ಆರ್ಟ್‌ಡೆಕೊ ಶೈಲಿಯು ಉತ್ಸುಕತೆಯ ಅಭಾವದಿಂದಾಗಿ ಅವನತಿಯ ಮಾರ್ಗ ಹಿಡಿಯಿತು.

**ಮ್ಯ. ಹೊ.**

## ಆರ್ಟ್ ಮೊಬೈಲಿಯರ್

ಕ್ರಿ. ಪೂ. ೩೫,೦೦೦ ವರುಷಗಳ ಹಿಂದೆ ಜೀವಿಸಿದ ಪ್ರಾಚೀನ ಯುರೋಪ್ ಮತ್ತು ಏಷ್ಯದ ಬೇಟೆಗಾರರು ಮತ್ತು ಆಹಾರ ಸಂಗ್ರಹಕಾರರಿಂದ ರಚಿಸಲ್ಪಟ್ಟ ಚಿಕ್ಕ ಚಿಕ್ಕ ಪ್ರತಿಮೆಗಳು, ಅಲಂಕೃತ ಉಪಕರಣಗಳು ಮತ್ತು ಹಲಗೆಗಳೇ ಮುಂತಾದ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು ಅನುಕೂಲವಾಗುವಂಥ ಕಲಾಕೃತಿಗಳನ್ನು ಆರ್ಟ್ ಮೋಬ್ಯಾಲಿಯರ್ ಎಂದು ಕರೆಯಲಾಗುತ್ತದೆ. ಈ ಪದವು ಸ್ವಾಭಾವಿಕವಾದ ಗುಹೆ ಮತ್ತು ಬಂಡೆಗಲ್ಲುಗಳ ಮೇಲೆ ಚಿತ್ರಿತವಾದ ಇಲ್ಲವೆ ಕೆತ್ತನೆ ಮಾಡಲ್ಪಟ್ಟ ಕೇವ್ ಆರ್ಟ್ ಅಥವಾ ಗುಹೆಯ ಕಲೆಯಿಂದ ಪ್ರತ್ಯೇಕವಾದುದೆಂಬುದನ್ನು ಈ ವಸ್ತುಗಳು ಸ್ಪಷ್ಟಗೊಳಿಸುತ್ತವೆ. ಆರ್ಟ್ ಮೊಬೈಲಿಯರ್‌ವು ಗುಹಾ ಚಿತ್ರಕಲೆಗಿಂತ ಮುಂಚಿತವಾಗಿಯೇ ಬೆಳೆದು ಬಂದುದಾಗಿದೆಯಲ್ಲದೇ ಸ್ಪೇನ್‌ನಿಂದ ಸೈಬೀರಿಯವರೆಗಿನ ಬಹು ವಿಸ್ತಾರವಾದ ಕ್ಷೇತ್ರದಲ್ಲಿ ಕಂಡುಬರುತ್ತದೆ. ಸಣ್ಣ ಸಣ್ಣ ಪ್ರತಿಮೆಗಳು, ಪ್ರಾಣಿಗಳ ಚಿಕ್ಕ ಚಿಕ್ಕ ಶಿಲ್ಪಕೃತಿಗಳು ಅತ್ಯಂತ ಪುರಾತನ ಕೃತಿಗಳಾಗಿವೆ. ಸಣ್ಣ ಸಣ್ಣ ಪ್ರತಿಮೆಗಳೆಲ್ಲ ಸಾಮಾನ್ಯವಾಗಿ ಸ್ತ್ರೀಯರ ಪ್ರತಿಮೆಗಳಾಗಿದ್ದು ಕೆಲವು ಸ್ತ್ರೀಯರ ಪ್ರತಿಮೆಗಳು ಉತ್ಪ್ರೇಕ್ಷಿತ ಲೈಂಗಿಕ ಗುಣಧರ್ಮಗಳುಳ್ಳವಾಗಿ ರಚಿಸಲ್ಪಟ್ಟಿವೆ ಎಂಬುದಕ್ಕೆ ಕ್ರಿ. ಪೂ. ೩೦,೦೦೦ ವರ್ಷದ ಹಿಂದೆ ರಚಿಸಲ್ಪಟ್ಟ ಸುಪ್ರಸಿದ್ಧವಾದ ವೀನಸ್ ಅಥವಾ "ರತಿ"ಯ ಪ್ರತಿಮೆಯು ಅತ್ಯುತ್ತಮ ಉದಾಹರಣೆಯಾಗಿದೆ. ಕ್ರಿ. ಪೂ. ೨೦,೦೦೦ ವರ್ಷದ ನಂತರದ ಇಂಥ ಕಲಾಕೃತಿಗಳಲ್ಲಿ ಹೆಚ್ಚಾಗಿ ಕೆತ್ತನೆಮಾಡಿದ ಇಲ್ಲವೆ ಕೊರೆದು ತಯಾರಿಸಿದ ಪ್ರಾಣಿಗಳ ಪೂರ್ಣಪರಿಮಾಣ(Round)ದ ಪ್ರತಿಮೆಗಳಿದ್ದು ಸ್ವಾಭಾವಿಕ ಮತ್ತು ಹೆಚ್ಚು ವಿವರಗಳನ್ನು ರೂಪಿಸುವ ರೀತಿಯಲ್ಲಿ ತಯಾರಿಸಲಾಗಿದೆ. ಪ್ರಾಚೀನ ಶಿಲಾಯುಗದ ಜನರು ಜಾಮಿತಿಕ (Geometric) ಆಕೃತಿಗಳನ್ನು ಪ್ರತಿನಿಧಿಸಿದ ಮತ್ತು ಬಾಗುರೇಖೆಯ ಅಲಂಕಾರಗಳಿಂದ ರಚಿಸಿದ ಎಲುಬಿನ ತುಂಡುಗಳು ಇಸ್ತುರಿಝ್‌ನಲ್ಲಿ ಕಂಡು ಬಂದಿವೆ.

**ಮ್ಯ. ಹೊ.**

## ಆಟೋಮ್ಯಾಟಿಸಂ

ಸರ್‍ರಿಯಲಿಸಂ ನಂತರದ ಹಲವು ಕಲಾ ಪ್ರಕಾರಗಳಲ್ಲಿ ಉಪಯೋಗಿಸುವ ಸಾಂಕೇತಿಕ ಶಬ್ದ. ತನ್ನಿಂದ ತಾನೇ ಹೆಚ್ಚು ಪ್ರಯತ್ನವಿಲ್ಲದೇ ಸೌಂದರ್ಯ ಸೃಷ್ಟಿ ಮಾಡುವ ಕ್ರಿಯೆ. ಇದರ ರಚನೆಯ ಮುಖ್ಯ ವಿಧಾನಗಳು, ಗೀಚುವುದು, ಸವೆಯುವುದು, ವಸ್ತುವಿನ ಮೇಲ್ಮೈಯನ್ನು

ಪೇಪರ್ ಮೇಲೆ ಮೂಡಿಸುವುದು ಹಾಗೂ ಮಾನಸಿಕ ಸ್ವಪ್ನಗಳಿಂದಾಯ್ದ ಘಟಕಗಳ ಜೋಡಣೆ ಭ್ರಮೆಯ ನಿರೂಪಣೆ ಇತ್ಯಾದಿ. ಅಮೂರ್ತ ಕಲಾವಿದರು ಬಣ್ಣವನ್ನು ಮನಸ್ಸಿಗೆ ಬಂದಂತೆ ತಿದ್ದುವುದಕ್ಕೂ ಇದೇ ಪದವನ್ನು ಉಪಯೋಗಿಸುತ್ತಾರೆ.

ಮರಿ

## ಆದರ್ಶ ಕಲೆ

ಯಾವ ಕಲಾಕೃತಿ ಭೌತಿಕ ವಸ್ತುವನ್ನು ಪ್ರತಿನಿಧಿಸದೆ ಆ ವಸ್ತುವಿನ ಮಾನಸಿಕ ಭಾವನೆಯನ್ನು ಸೂಚಿಸುವುದೊ ಅದೇ ಆದರ್ಶಕಲೆ. ಯಾವ ಕಲಾಕೃತಿ ಭೌತಿಕ ವಸ್ತುವನ್ನು ಪ್ರತಿನಿಧಿಸುತ್ತದೆಯೋ ಅದು ಅನಾದರ್ಶ. ಪ್ಲೆಟೋನ ಪ್ರಕಾರ ಕೇವಲ ವಾಸ್ತವಿಕತೆಗಳೆಂದರೆ ಈ ಮನೋಭಾವನೆಗಳು ದೃಶ್ಯ ವಸ್ತುಗಳಲ್ಲಿ ಮೂಲಭೂತ ಮನೋಭಾವನೆಯ ಅಪೂರ್ಣ ಕೈಗೂಡುವಿಕೆ. ಕಲೆಯ ನಿಜವಾದ ಕೆಲಸ ಈ ಆದರ್ಶ ಭಾವನೆಗಳನ್ನು ಪ್ರತಿಬಿಂಬಿಸುವುದು ಮತ್ತು ಆದರ ಅಸ್ತವ್ಯಸ್ತ ಪ್ರತಿಮೆಯ ರೂಪವಾದ ಭೌತಿಕ ಘಟನೆಗಳನ್ನನುಸರಿಸಿ ರಚಿಸುವಿಕೆ ಎಂಬದು ಅವನ ಸಿದ್ಧಾಂತ. ಈ ಸಿದ್ಧಾಂತವು ಅರ್ಥಹೀನವಲ್ಲ, ಆದರೆ ಪ್ರಮಾಣ ಉತ್ಕೃಷ್ಟತೆಯಲ್ಲಿ ಸಾಮರಸ್ಯ ಮತ್ತು ರೇಖಾಕೃತಿ ಮಾನವನ ಮನಸ್ಸಿನ ಮೇಲೆ ಎಷ್ಟು ಪ್ರಭಾವ ಬೀರಿತ್ತೆಂದರೆ ಶತಮಾನಗಳವರೆಗೆ ಕಲಾವಿದರು ಮಾನಸಿಕ ಹೆಬ್ಬಯಕೆಯನ್ನು ಸಂಕೇತದ ಮೂಲಕ ಅಭಿವ್ಯಕ್ತಿಸುತ್ತಿದ್ದರು. ಈ ಭಾವನೆಗಳನ್ನು ಅಭಿವ್ಯಕ್ತಿಸುವ ಹಾಗೂ ಮಾನವ ಚಿತ್ರವನ್ನು ಆರಿಸಿ ಸಂಸ್ಕರಿಸಿ ಉನ್ನತಿಗೇರಿಸಿ ಪೂರ್ಣರೂಪ ಕೊಡಬೇಕಾಗಿತ್ತು. ಅದು ಅಸ್ತಿತ್ವದಲ್ಲಿರುವ ಅನೇಕ ಕಲಾಕೃತಿಗಳನ್ನು ಸೃಷ್ಟಿಸಿದೆ. ಕಲಾವಿದರಾದ ಬ್ರಾಂಕೂಸಿ, ಮರೆವಿಚ್, ಮತ್ತು ಮೂಡ್ರಿಯನ್ ಮುಂತಾದವರ ಕಲಾಕೃತಿಗಳಲ್ಲಿ ಈ ಆದರ್ಶ ಕಲೆಯ ತತ್ವಗಳಿವೆ.

ಮರಿ

## ಆಧುನಿಕ ಕಲೆ

ಕಲಾವಿದ ವಸ್ತುವನ್ನು ಇರುವಂತೆ ಚಿತ್ರಿಸದೆ, ಒಂದು ವಸ್ತುವನ್ನು ನೋಡಿದಾಗ ಅವನ ಮನಸ್ಸಿನ ಮೇಲಾದ ಭಾವನೆಗಳನ್ನು ರಚಿಸುವುದು ಆಧುನಿಕ ಕಲೆಯ ಗುಣ. ವಿಜ್ಞಾನ ಬೆಳೆದಂತೆಲ್ಲಾ ಕಲೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳಾಗಿವೆ ಹಾಗೂ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳು ಪ್ರಭಾವ ಬೀರಿದೆ. ಈ ಶತಮಾನದ ಕಲೆ ಹಿಂದಿನ ಶತಮಾನದ ಕಲೆಯಿಂದ ಒಂದಲ್ಲ ಒಂದು ರೀತಿಯಿಂದ ಪ್ರೇರಿತವಾಗಿದೆ. ಇದ್ದಂತೆಯೇ ಇರುವ ಚಿತ್ರವನ್ನು ಕ್ಯಾಮರಾ ಮಾಡುತ್ತದೆ. ಕಲೆಯಂತೆಯೇ ಸಾಹಿತ್ಯ ಸಂಗೀತ ಮುಂತಾದ ಪ್ರಕಾರಗಳಲ್ಲೂ ಬದಲಾವಣೆಗಳಾಗಿವೆ, ಕಲೆಯಲ್ಲಿ 'ಆಧುನಿಕ' ಎಂಬುದು ಬಂದುದು ೧೯ನೆಯ ಶತಮಾನ ಮಧ್ಯಭಾಗದಲ್ಲಿ ಕಲಾವಿದರು ತಮ್ಮ ಪ್ರತಿಭೆಗಳನ್ನು ಅಭಿವ್ಯಕ್ತಗೊಳಿಸಲು ಹೊಸ ಪಂಥಗಳಿಂದ ತಮ್ಮ ಭಾವನೆಗಳನ್ನು ಸೃಜನಾತ್ಮಕವಾಗಿ ವ್ಯಕ್ತಪಡಿಸಲು ಅನೇಕ ಮಾಧ್ಯಮಗಳನ್ನು, ತಂತ್ರಗಳನ್ನು ಹುಡುಕಿದ್ದು, ವಸ್ತುನಿಷ್ಠವಾದ ಕಲೆಗೆ ದಾರಿಯಾಯಿತು. ಮತ್ತು ಕೆಲವು ಪಂಥಗಳು ಹುಟ್ಟಿಕೊಂಡು ಕಲೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳಾದವು. ಪ್ರಥಮವಾಗಿ ಆಧುನಿಕ ಕಲೆಯನ್ನು ತನ್ನ ಚಿತ್ರಗಳಲ್ಲಿ ಅಭಿವ್ಯಕ್ತಪಡಿಸಿದವನು ಎಡ್ವರ್ಡ್ ಮಾನೆ ಅವನು ಪ್ರಕೃತಿ

ಚಿತ್ರಗಳನ್ನು ಸುತ್ತಮುತ್ತಲಿನ ಸನ್ನಿವೇಶಗಳನ್ನು ಚಿತ್ರಿಸಿದ ಹಾಗೂ ಅಂದಿನವರೆಗೂ ಬಳಕೆಯಲ್ಲಿದ್ದ ವಿಧಾನವನ್ನು ಬಿಟ್ಟು ತನ್ನದೇ ಸ್ವಂತ ವಿಧಾನವನ್ನು ರೂಢಿಸಿಕೊಂಡು ಕಲಾ ಪ್ರಪಂಚದಲ್ಲಿ ಅವನ ಕೃತಿಗಳು ಕೋಲಾಹಲ ಎಬ್ಬಿಸಿದವು. ವಿವಾದಾಸ್ಪದವಾದವು.

ಹೊಸ ಚಿಂತನೆ, ಹೊಸ ವಿಚಾರಧಾರೆ, ಹೊಸ ಪ್ರಯೋಗ,ಹೊಸ ಹಾದಿಗೆ ಚೈತನ್ಯಕಾರಕವಾಗಿ, ಅನೇಕ ಪಂಥಗಳು ಪ್ರಾರಂಭವಾಗಲು ಸಾಧ್ಯವಾಯಿತು. ಇಂಪ್ರೆಷನಿಸಂ, ಫಾವಿಸಂ, ಕ್ಯೂಬಿಸಂ, ಎಕ್ಸ್‌ಪ್ರೆಷನಿಸಂ, ಫ್ಯೂಚರಿಸಂ, ದಾದಾಯಿಸಂ, ಸರ್ರಿಯಲಿಸಂ, ಆಪ್‌ಆರ್ಟ್ ಪ್ರಭಾವ ಸ್ವಲ್ಪ ಕಾಲವಿತ್ತು. ಆದರೆ ಸಮಕಾಲೀನ ಕಲೆ ಎಂಬುದು ಕಲೆಯಲ್ಲಿನ ಆಗು ಹೋಗುಗಳಿಗೆ ಅನ್ವಯಿಸುತ್ತದೆ.

**ಮರಿ**

## ಆನೆಗೊಂದಿ

ಹಂಪೆಗೂ ಆನೆಗೊಂದಿಗೂ ಮಧ್ಯೆ ತುಂಗಭದ್ರೆಯಿದ್ದು ತೆಪ್ಪದಲ್ಲಿ ದಾಟಬಹುದಾದರೂ ಆನೆಗೊಂದಿ ರಾಯಚೂರು ಜಿಲ್ಲೆಯ ಗಂಗಾವತಿ ತಾಲೂಕಿಗೆ ಸೇರಿದ್ದಾಗಿದೆ. ಊರೊಳಗೆ ಚಾಳುಕ್ಯ, ಹೊಯ್ಸಳ ಹಾಗೂ ವಿಜಯನಗರ ಕಾಲಕ್ಕೆ ಸೇರಿದ ಅನೇಕ ವಾಸ್ತುಶಿಲ್ಪ, ಶಿಲ್ಪಗಳಿವೆ. ನದಿಯ ಬಳಿಯಿರುವ ಹಳೆಯ ಊಂಚಪ್ಪಮಠ ಈಗ ಪಾಳು ಬಿದ್ದಿದೆ. ಇಲ್ಲಿಯ ಹೊಯ್ಸಳರ ಆದಿಕಾಲದ ಕಂಬಗಳನ್ನು ಬೇರೆಲ್ಲಿಂದಲೋ ತಂದು ಜೋಡಿಸಿದಂತಿದೆ. ಇವಕ್ಕೆ ಹೊಂದಿಕೊಂಡ ಮಂಟಪದ ಮೇಲ್ಭಾವಣಿಯಲ್ಲಿ ಚಿತ್ರಕಲೆ ಇದ್ದ ಗುರುತಿದೆ. ಮೆರವಣಿಗೆಯ ದೃಶ್ಯ, ನವನಾರಿ ಕುಂಜರ ಇತ್ಯಾದಿ ಚಿತ್ರಗಳಿದ್ದುದಾಗಿ ಹೇಳಿಕೆಯಿದೆ ಈಗ ನವನಾರಿ ಕುಂಜರದ ಸೊಂಡಲಿನ ಭಾಗದ ಇಬ್ಬರು ಸ್ತ್ರೀಯರ ಚಿತ್ರ ಮಾತ್ರ ಉಳಿದಿದೆ. ಆದರೂ ಇವು ರೇಖೆ ಮತ್ತು ಬಣ್ಣಗಾರಿಕೆಯಲ್ಲಿ ವಿಜಯನಗರ ಕಾಲದ ಮಾದರಿಗಳಾಗಿವೆ.

**ಅಲನ**

## ಆಫ್ ಆರ್ಟ್

ಪಾಪ್ ಆರ್ಟ್ ಹಿಂದೆಯೇ ಬಂದಿತು ಆಪ್‌ಆರ್ಟ್. ಆಪ್‌ಎಂದರೆ ಆಪ್ಟಿಕಲ್ ಎಂಬುದರ ಹ್ರಸ್ವ ರೂಪಾಂತರ. ಇದನ್ನು ದೃಗ್‌ದರ್ಶನ ಕಲೆ ಎಂದು ಸ್ಥೂಲವಾಗಿ ಕರೆಯಬಹುದು. ಈ ಕಲೆಯ ವಸ್ತು ರಚನಾ ವಿಧಾನ ಎಲ್ಲೂ ನಮ್ಮ ದೃಕ್‌ಧರ್ಮಕ್ಕೆ ಸಂಬಂಧಿಸಿವೆ. ಕಣ್ಣಿನಲ್ಲಿ, ಬೆಳಕು, ಆಕಾರಗಳನ್ನು ಗ್ರಹಿಸುವ ಭಾಗಗಳನ್ನು ಚಕಿತಗೊಳಿಸುವುದೂ, ಉದ್ರೇಕಿಸುವುದೂ ಈ ಪ್ರಕಾರದ ಉದ್ದೇಶಗಳಲ್ಲಿ ಒಂದು. ಆದುದರಿಂದ ಈ ಪ್ರಕಾರದ ಚಿತ್ರಗಳಲ್ಲಿ ದೃಷ್ಟಿಗೆ ಕೋರೈಸುವ ಅಥವಾ ಪಟಗುಟ್ಟುವ, ಮಿಡಿಯುವ ಮುಂತಾದ ಭ್ರಮೆಯುಂಟು ಮಾಡುವಂತಹ ಆಕೃತಿಗಳು, ವರ್ಣ ಸಂಯೋಜನೆ ಅಡಕವಾಗಿರುತ್ತದೆ. ಕೆಲವು ವೇಳೆ ಈ ಅನುಭವಗಳನ್ನು ಉಂಟುಮಾಡಲು ಪ್ರೇಕ್ಷಕರು ಆಪ್‌ಆರ್ಟ್ ಕೃತಿಗಳ ಮುಂದೆ ಓಡಾಡಬೇಕೆಂಬಷ್ಟುಹೆಯೂ ಮಾಡಲಾಗುತ್ತದೆ. ಈ ಆಪ್‌ಆರ್ಟ್ ಬಹು ಜನರಿಗೆ ಆಕರ್ಷಣೀಯವಾಗಿ ಈ ಪ್ರಕಾರವನ್ನು ಅನುಸರಿಸಿದ ಅನೇಕ ಮಂದಿ ಕಲಾವಿದರಿದ್ದಾರೆ.

ಇಷ್ಟಾಗಿ ಈ ಪ್ರಕಾರವು ಹುಟ್ಟಿ ಇನ್ನೂ ೩೨ ವರ್ಷಗಳೂ ಆಗಿಲ್ಲ. ಈ ಆಪ್ಆರ್ಟ್ ಧುರೀಣರಲ್ಲಿ ಬ್ಯಾಕೆಟ್ ನ್ಯೂಮನ್, ಜೂಲ್ಸ್, ಜಲಿಟ್ಸ್ಕಿ, ಫ್ರಾಂಕ್ ಸೈಲಾ ಲ್ಯಾರಿ ಪೂನ್ಸ್ ಮುಂತಾದವರು ಪ್ರಸಿದ್ಧರು.

ಬಿ. ವಿ. ಕೆ.

## ಆಫ್ರಿಕಾದ ಕಲೆ

ಆಫ್ರಿಕಾದ ಕಲೆ ಅತಿ ಪ್ರಾಚೀನವಾದದ್ದು, ಆದರೆ ಬೆಳಕಿಗೆ ಬಂದದ್ದು ಈ ಶತಮಾನದ ಆರಂಭ ಕಾಲದಲ್ಲಿ. ಉಗ್ರತೆ ಮತ್ತು ಸರಳತೆಗಳಿಂದ ಕೂಡಿದ ಈ ಕಲೆಯ ಚೈತನ್ಯವನ್ನು ಆಧುನಿಕ ಕಲಾವಿದರು ಕಂಡುಕೊಂಡ ಮೇಲೆ ಇದು ಅವರಿಗೆ ಸ್ಫೂರ್ತಿಯ ಮೂಲವಾಯಿತು. ಆಫ್ರಿಕಾದ ಕಲೆ ಅಲ್ಲಿಯ ಜನ ಜೀವನದ ಭಾಗವಾಗಿ ಕಲಾಕುಶಲತೆಯನ್ನು ಮತ್ತು ಚಿತ್ರಕಾರರ ನೈಪುಣ್ಯವನ್ನು ಕಾಣಬಹುದು. ಮರದ ಕೆತ್ತನೆ ಮತ್ತು ಶಿಲ್ಪಕೃತಿಗಳು ಆಫ್ರಿಕಾದ ಕಲೆಯಲ್ಲಿ ಅತಿ ಮುಖ್ಯ. ಕೃತಿಯಲ್ಲಿ ನೈಜತೆ ಮುಖ್ಯವಾಗಿರದೆ, ದೇಹದ ಆಕಾರಗಳನ್ನು ವಿಚಿತ್ರ ರೀತಿಯಲ್ಲಿ ಮಾರ್ಪಡಿಸಿದ್ದಾರೆ. ಕಲಾವಿದನ ದೃಷ್ಟಿಯಲ್ಲಿ ಸೌಂದರ್ಯ ಹೇಗೆ ಕಾಣುತ್ತದೋ ಹಾಗೆ ಪ್ರತಿಮೆಗಳು ರೂಪ ಪಡೆದು ವೈಶಿಷ್ಟ್ಯದ ಪ್ರತಿಬಿಂಬಗಳಾಗಿರುತ್ತದೆ.

ಎನ್. ವಿ.

## ಆಲಂಪುರ

ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಗೆ ಸೇರಿದ್ದು ಕೃಷ್ಣೆ-ತುಂಗಭದ್ರೆಯರ ಸಂಗಮದ ಸನಿಹವಿರುವ ಊರು. ಕ್ರಿ.ಶ. ೮ನೆ ಶತಮಾನಕ್ಕೆ ಸೇರಿದ ಅನೇಕ ದೇವಾಲಯಗಳಿಂದಾಗಿ, ಅಲಂಪುರ, ಆರಂಭದಲ್ಲಿದ್ದ ಪಶ್ಚಿಮ ಚಾಲುಕ್ಯರ ವಾಸ್ತುಶಿಲ್ಪ ಕುರಿತಂತೆ, ಅಧ್ಯಯನ ನಡೆಸುವಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆ. ಈ ಕಟ್ಟಡಗಳನ್ನು ಅದೇ ಅವಧಿಯಲ್ಲಿ ಪಟ್ಟದ ಕಲ್ಲಿನಲ್ಲಿ ನಿರ್ಮಿಸಿದ ದೇವಾಲಯಗಳೊಂದಿಗೆ ಹೋಲಿಸಬಹುದಾಗಿದೆ. ಅಲಂಪುರ ದೇವಾಲಯಗಳ ಕೆಲವದರಲ್ಲಿ ಶಿಖರಗಳು ಔತ್ತರೇಯ ಶೈಲಿಯಲ್ಲಿವೆ. ಇತರ ದೇವಾಲಯ, ದಕ್ಷಿಣಾತ್ಯ ಶೈಲಿಯವು, ಅಷ್ಟಕೋಣಾಕೃತಿಯ ಶಿಖರವನ್ನು ಹೊಂದಿವೆ. ಈ ದಾಕ್ಷಿಣಾತ್ಯ ದೇವಾಲಯಗಳು ಕಮಾನು,ಚಾವಣಿ ಅಲಂಕಾರದ ಉಬ್ಬು ಕಟ್ಟಡವುಳ್ಳ ದೇವಾಲಯಗಳಿಂದ ಸುತ್ತುವರಿಯಲ್ಪಟ್ಟಿವೆ. ಹಾಗೂ ಒರಿಸ್ಸಾದ ಕೆಲವು ಕೆಳನಾಡಿನ ದೇವಾಲಯಗಳಲ್ಲಿರುವ ಪ್ರಸನ್ನ ಮುದ್ರೆಯ ಶಿಲ್ಪಗಳನ್ನು ನೆನಪಿಸುತ್ತವೆ. ಅಲಂಪುರ, ಪಶ್ಚಿಮ ಚಾಲುಕ್ಯರ ಸರಹದ್ದಿನ ಪ್ರದೇಶದಲ್ಲಿದ್ದು ದಕ್ಷಿಣ ಉತ್ತರ ಶೈಲಿಗಳು ಸಂಧಿಸುತ್ತಿರುವುದು ಕಾಣಬಹುದು.

ಅಲಂಪುರದ ಒಂಭತ್ತು ಮಂದಿರ ಶಿವನಿಗೆಂದು ನಿರ್ಮಿಸಿರುವಂಥವು. ಬ್ರಹ್ಮ ದೇವಾಲಯಗಳಿಗೂ ಸೌಮ್ಯ ಬಾಲಬ್ರಹ್ಮ ಕುಮಾರ ಬ್ರಹ್ಮ, ಆರ್ತ, ವೀರ, ವಿಶ್ವತಾಕರ, ಗರುಡ, ಪದ್ಮ ಸ್ವರ್ಗ, - ಹೀಗೆ ಬ್ರಹ್ಮರ ದೇವಾಲಯ ಸಮೂಹ, ಇಲ್ಲಿದೆ.

ನಿಕನಾ

## ಆಲೇಖ, ಆಲೇಖ್ಯ

ಬರೆಹ ಅಥವಾ ಚಿತ್ರ(to be written or painted, painting) ಆಲೇಖ್ಯಲೇಖೆ: ಚಿತ್ರ

(Painting); ಆಲೇಖ್ಯ: ಚಿತ್ರಿಸಬೇಕಾದ ಆಲೇಖ್ಯಗತೆ: ಚಿತ್ರಿಸಲ್ಪಟ್ಟ; ಆಲೇಖ್ಯ ಪ್ರಖ್ಯ: ಚಿತ್ರಕ್ಕೆ ಸದೃಶ್ಯವಾದುದು; ಆಲೇಖ್ಯ ಶೇಷ: ಚಿತ್ರದಲ್ಲಿ ಮಾತ್ರ ಉಳಿದಿರುವ, ಮೃತಿ ಹೊಂದಿರುವ ಎಂಬ ಅರ್ಥಗಳಿವೆ. ಸಂಸ್ಕೃತ ನಿಘಂಟಿನಂತೆ ಆಲೇಖವೆಂದರೆ ಬರೆಹ, ಪತ್ರ, ಕಾಗದ ಎಂದೂ ಆಲೇಖನವೆಂದರೆ (೧) ಬರೆಯುವುದು- ಚಿತ್ರಹಾಕುವುದು (೨) ಬರಹಗಾರ-ಚಿತ್ರಗಾರ, ಮತ್ತು (೩) ಲೇಖಣಿ-ವರ್ತಿಕೆ ಎಂದೂ ಆಲೇಖ್ಯವೆಂದರೆ ಬರೆಯಲ್ಪಡುವ, ಚಿತ್ರಿಸಲ್ಪಡುವ ಎಂದೂ ಅರ್ಥವಿದೆ.

ಎಂದರೆ ಚಿತ್ರ ಮತ್ತು ಲಿಪಿ ಎರಡೂ 'ಬರೆಯುವ' ಕ್ರಿಯೆಯೇ ಆಗಿದ್ದು, ಒಂದು ಫಲಕ, ಲೇಖಣಿ, ವರ್ಣಗಳು ಅವಶ್ಯಕವಾಗಿ ಚಿತ್ರ ಮತ್ತು ಬರೆಹ ಎರಡಕ್ಕೂ ಬೇಕಾಗಿದ್ದು, 'ಆಲೇಖ್ಯ' ಶಬ್ದದ ಮೂಲ ಕಲ್ಪನೆಯು ಚಿತ್ರ ಮತ್ತು ಲಿಪಿ ಒಂದೇ ಆಗಿದ್ದ 'ಚಿತ್ರಲಿಪಿ'ಯ (to be omited) ಕಾಲದಷ್ಟು ಹಿಂದೆ ಹೋಗಬಹುದು.

ಅಲನ

## ಆಸ್ಟ್ರೇಲಿಯಾ ಮೂಲನಿವಾಸಿಗಳ ಕಲೆ

ಆಸ್ಟ್ರೇಲಿಯಾ ದೇಶದ ಬಂಡೆಯಾಶ್ರಯ ಚಿತ್ರಗಳು, ಕೊರೆದ ಚಿತ್ರಗಳು, ಬುಡಕಟ್ಟು ಜನರ ದೇಹದ ಮೇಲಿನ ರೇಖಾ ಅಲಂಕರಣ ವಿನ್ಯಾಸಗಳು, ಆಭರಣ ಇತ್ಯಾದಿಗಳು ಈ ಪಟ್ಟಿಯಲ್ಲಿ ಬರುತ್ತವೆ. ಚರ್ಮದ ಮೇಲಿನ ಚಿತ್ರಗಳು, ಅಮೂರ್ತ ಶೈಲಿಯಲ್ಲೇ ಅಲ್ಲದೆ ಸಹಜ ಶೈಲಿಗಳ ಚಿತ್ರಗಳೂ ದೊರಕಿವೆ. ಮೀನು, ಕಾಂಗರೂ, ಕಡಲಾಮೆಗಳು, ಸಮಕಾಲೀನ ಜನರ ಕುಲದೇವತಾ ಪದ್ಧತಿಯ ನಂಬಿಕೆಗಳು, ಬೇಟೆ ಇತ್ಯಾದಿಗಳೂ ಕಾಣಿಸಿಕೊಂಡಿವೆ. ನೈಜವಾಗಿಯೂ ಮತ್ತು ಎಕ್ಸರೇಶೈಲಿಯಲ್ಲೂ ಪ್ರಾಣಿಗಳು ಚಿತ್ರಿತಗೊಂಡಿವೆ. ಇಲ್ಲಿ ಬೇಟೆಗಾರನಿಗೆ ಆಸಕ್ತಿಯಿರುವ ಪ್ರಾಣಿಯ ಅಸ್ಥಿಪಂಜರ ಮತ್ತು ಅಂಗಗಳ ಸ್ಥೂಲಚಿತ್ರ, ಚಿತ್ರಿತ ಪ್ರಾಣಿಯ ದೇಹದ ಹೊರರೇಖಾ ಅಂಚಿನ ಒಳಭಾಗದಲ್ಲೇ ಚಿತ್ರಿಸಲ್ಪಟ್ಟಿದೆ. ಆಸ್ಟ್ರೇಲಿಯಾದ ಈ ಕಲೆಯನ್ನು ಉಳಿಸಿಕೊಳ್ಳಲು ಆ ದೇಶದಲ್ಲಿ ಹಲವು ಕ್ರಮಗಳನ್ನು ಕೈಗೊಳ್ಳಲಾಗಿದೆ.

ಕೆ.ವಿ.ಸು.

## ಇಂಡಿಯನ್ ಇಂಕ್

ಶಾಶ್ವತವಾದ ಶುದ್ಧವಾದ ಇಂಡಿಯನ್ ಇಂಕನ್ನು ಉಪಯೋಗಿಸಿ ಅಕ್ಷರಗಳನ್ನು ಬರೆಯಲಾಗುತ್ತದೆ ಹಾಗೂ ಚಿತ್ರಗಳನ್ನು ರಚಿಸಲಾಗುತ್ತದೆ. ಇದನ್ನು ಮೂಲತಃ ದೀಪದ (ಲಾಟೀನ) ಕಾಡಿಗೆಯನ್ನು ಅಥವಾ ಕಟ್ಟಿಗೆ ಇದ್ದಲಿನ ಪುಡಿಯನ್ನು ಅಂಟು ನೀರಿನಲ್ಲಿ ಮಿಶ್ರಗೊಳಿಸಿ ಸಿದ್ಧಪಡಿಸಲಾಗುತ್ತದೆ. ಇದನ್ನು ಚೈನೀಜ ಇಂಕ ಹಾಗೂ 'ಸುಮಿ ಇಂಕ್' ಎಂತಲೂ ಕರೆಯುತ್ತಾರೆ.

ಅ. ಹಿ.

## ಇಂಪಾಸಿಬಲ್ ಆರ್ಟ್

ಈ ಕಲೆ ಇತ್ತೀಚಿನ ಚಳುವಳಿಯಿಂದ ರೂಪಿತವಾದದ್ದು ಮತ್ತು ಪರಿಸರ ಹಾಗೂ ಕಲ್ಪನಾ ವಿಶೇಷದಿಂದ ಕೂಡಿರುವಂತಹದು. ಈ ಅಸಾಧ್ಯ ಕಲೆಯನ್ನು ವ್ಯಕ್ತಗೊಳಿಸುವುದಕ್ಕಾಗಲಿ, ಸಂಗ್ರಹಿಸುವುದಕ್ಕಾಗಲಿ ಅಥವಾ ಸಾಂಪ್ರದಾಯಿಕ ಪದ್ಧತಿಗಳಿಂದ ಮೌಲ್ಯ ಕಟ್ಟುವುದಕ್ಕಾಗಲಿ ಆಗುವುದಿಲ್ಲ.

ದುರಿ

## ಇಂಪ್ಯಾಸ್ಟೋ (Impasto)

ಕುಂಚ ಅಥವಾ ಪ್ಯಾಲೆಟ್ ನೈಫ್ ಬಳಸಿ ದಟ್ಟವಾಗಿ(Thick) ವರ್ಣವನ್ನು ಮೂಡಿಸಿದಾಗ ಅದನ್ನು ಇಂಪ್ಯಾಕ್ಟೋ ಎನ್ನಬಹುದು. ಈ ದಟ್ಟವರ್ಣ ಬಳಕೆಯು ಆಳ, ಮೈವಳಿಕೆ (Texture) ಮುಂತಾದುವನ್ನು ಮೂಡಿಸುತ್ತದೆ. ಈ ರೀತಿ ಇಂಪ್ಯಾಸ್ಟೋವನ್ನು(ದಟ್ಟವರ್ಣವನ್ನು) ತೈಲವರ್ಣ, ಗೌವಾಶ್(Gouaucho) ಎನ್‌ಕಾಸ್ಟಿಕ್, ಆಕ್ರಲಿಕ್ ಮುಂತಾದ ವಿವಿಧ ಮಾಧ್ಯಮಗಳಿಂದ ಮೂಡಿಸಬಹುದು.

ವ್ಯಾನ್ ಗಾಗ್, ರೆಂಬ್ರಾಂಟ್, ಆಸ್ಕರ್ ಕೊಕ್ಕೋಷ, ಲಿಯೋನ್ ಕಾನೊಫ್ ಮುಂತಾದವರು ಇಂಪ್ಯಾಸ್ಟೋವನ್ನು ವೈವಿಧ್ಯಮಯವಾಗಿ ಬಳಸಿದ್ದಾರೆ.

ಕರ್ನಾಟಕದಲ್ಲಿ ರುಮಾಲೆ ಚನ್ನಬಸವಯ್ಯ, ಹನುಮಯ್ಯನವರ ನಿಸರ್ಗ ಕೃತಿಗಳಲ್ಲಿ ಹಾಗೂ ತಮಿಳುನಾಡಿನ ಆದಿಮೂಲಂರ ಅಮೂರ್ತ ಕೃತಿಗಳಲ್ಲಿ ಈ ಇಂಪ್ಯಾಸ್ಟೋತಂತ್ರದ ವೈವಿಧ್ಯಮಯ ಬಳಕೆಯುಂಟು.

ಎಚ್. ಎ. ಅ.

## ಇಂಪ್ರೆಷನಿಸಂ

ಹತ್ತೊಂಬತ್ತನೇ ಶತಮಾನದ ಆಧಿ ಭಾಗದಲ್ಲಿ ಫ್ರಾನ್ಸಿನಲ್ಲಿ ಪ್ರಾರಂಭವಾದ ಈ ಪಂಥದ್ದಲ್ಲಿ ಚಿತ್ರಬರೆಯುವ ರೀತಿ ಬೇರೆಯಾಯಿತು. ಒಂದು ವಸ್ತುವನ್ನು ನೋಡಿದಾಗ ಮನಸ್ಸಿನಲ್ಲಿ ಆಗುವ ಅನುಭವವನ್ನು ಚಿತ್ರಿಸುವುದು,. ಮನಸ್ಸಿನಲ್ಲಾದ ಪರಿಣಾಮ ಹಾಗೂ ದೃಷ್ಟಿ ಕೇಂದ್ರವನ್ನು ಬದಲಾಯಿಸುತ್ತ ಹೋದಂತೆ ಬೇರೆ ಬೇರೆ ಅಂಶಗಳು ಕಂಡು, ಎಲ್ಲವನ್ನು ಒಟ್ಟಿಗೆ ಗ್ರಹಿಸಲು ಅನುಕೂಲವಾಗುವಂತೆ ವಿವರಗಳನ್ನು ಚಿತ್ರಿಸುವುದು. ಬಣ್ಣಗಳನ್ನು ಬಳಸುವ ವಿಧಾನದಲ್ಲೂ ವ್ಯತ್ಯಾಸವಾಗಿ ಕಲಾವಿದನಿಗೆ ಮನ ಸೆಳೆದ ವಸ್ತುವು ಚಿತ್ರಕ್ಕೆ ಸಮ್ಮತ ವಸ್ತುವಾಗಿ ದೈನಂದಿನ ಜೀವನದ ವಿಷಯಗಳೆಲ್ಲವೂ ಮುಖ್ಯವಾಯಿತು. ವ್ಯಕ್ತಿಗತ ಭಾವಾವಿಶಿಷ್ಟತೆಯಿಂದ ನೈಸರ್ಗಿಕ ವಸ್ತುಗಳನ್ನು ನೋಡಿ, ಅದನ್ನು ಬಣ್ಣ ಮತ್ತು ಬೆಳಕುಗಳ ಮೂಲಕ ಬಿಂಬಿಸುವುದು ಪ್ರಾರಂಭವಾಯಿತು. ನಾವು ಯಾವುದೇ ರೂಪವನ್ನು ಅಥವಾ ದೃಶ್ಯವನ್ನು ಒಂದೇ ಒಂದು ಕ್ಷಣ ನೋಡಿದ್ದಾದರೆ ಆ ವಸ್ತು ನಮಗೆ ಹೇಗೆ ಆ ಕ್ಷಣದಲ್ಲಿ ಕಾಣಿಸಿತು ಎಂಬುದನ್ನು



ಎಮಿಲಿ ಬರ್ನಾಡ

ಚಿತ್ರಿಸುವುದು. ಇಂಪ್ರೆಷನಿಸಂ ಚಿತ್ರಕಾರರಿಗೆ ತಾವು ದೃಶ್ಯದಲ್ಲಿ ಕಾಣುವ ಬಣ್ಣಗಳು ಮುಖ್ಯ ಅವನ್ನು ಕಂಡಷ್ಟೆ ನಿಜವಾಗಿ ಬರೆಯಬೇಕು ಮತ್ತು ದೃಶ್ಯದಲ್ಲಿ ಕಾಣಿಸುವ ಬಣ್ಣದ ನೆರಳು ಬೆಳಕುಗಳೆರಡರಲ್ಲೂ ಅಸಂಖ್ಯ ಕಡಪು, ಎಳಸು ಛಾಯೆಗಳು ಕಾಣಿಸುತ್ತವೆಯೋ ಹೊರತು, ಅವು ಕಪ್ಪು-ಬಿಳುಪುಗಳಾಗಿ ಕಾಣಿಸುವುದಿಲ್ಲ.

ಕಲಾವಿದ ಬಯಲಿನಲ್ಲಿ ಕುಳಿತು ಪ್ರಕೃತಿ ದೃಶ್ಯಗಳನ್ನು ರಚಿಸುತ್ತಿದ್ದರು ಮತ್ತು ತಮ್ಮ ಕ್ಯಾನ್‌ವಾಸ್ ಮೇಲೆ ನೇರವಾಗಿ ಬಣ್ಣಗಳಿಂದಲೇ ಚಿತ್ರಿಸುತ್ತಿದ್ದರು. ಅಲ್ಲಿ ವಸ್ತುವಿನ ಆಕಾರಕ್ಕಿಂತ ಅದರ ಮೇಲೆ ಬಿದ್ದ ಬೆಳಕಿನಿಂದ ಆದ ಪರಿಣಾಮ ಮುಖ್ಯವಾಗಿತ್ತು ಹಾಗೂ ಚಿತ್ರದಲ್ಲಿ ಪ್ರತಿಬಿಂಬಿತವಾದ ಬೆಳಕಿನ ಬಣ್ಣಗಳ ವಿವಿಧ ಛಾಯೆಗಳು, ಬೆಡಗು ಮುಖ್ಯ. ಇವುಗಳಿಂದ ವಸ್ತು ಮತ್ತು ಸೌಂದರ್ಯ ಕಾಣಬೇಕು. ೧೮೭೪ರಲ್ಲಿ ಕ್ಲಾಡ್‌ಮಾನೆ ಪ್ಯಾರಿಸಿನಲ್ಲಿ ನಡೆದ ಕಲಾ ಪ್ರದರ್ಶನದಲ್ಲಿ ಒಂದು ಚಿತ್ರ ಪ್ರದರ್ಶಿಸಿದ. ಆ ಚಿತ್ರಕ್ಕೆ "ಇಂಪ್ರೆಷನ್ ಸನ್‌ರೈಸ್" ಎಂಬ ಶೀರ್ಷಿಕೆ ನೀಡಿದ. ಅವನು ಸುರ್ಯೋದಯದ ಅನುಭವವನ್ನು ಚಿತ್ರಿಸಿದ್ದ. ಈ ಚಿತ್ರವನ್ನು ನೋಡಿದ ಸಂಪ್ರದಾಯವಾದಿಗಳು ಇದನ್ನು ವಿರೋಧಿಸಿದರು. ಆದರೆ ಅನೇಕ ಕಲಾವಿದರು ಈ ಶೈಲಿಯನ್ನು ಬಳಸಿಕೊಂಡರು. ಇಂಪ್ರೆಷನಿಸ್ಟು ಕಲಾವಿದರು ತಾವು ಕಾಣುವ ದೃಶ್ಯಗಳನ್ನು ಕಂಡಷ್ಟೇ ಉಜ್ವಲವಾಗಿ ಚಿತ್ರಿಸುತ್ತಿದ್ದರು. ಪ್ರಕೃತಿ ದೃಶ್ಯಗಳಲ್ಲಿ ಭಾವಚಿತ್ರಗಳಲ್ಲಿ, ಕ್ರಿಯಾತ್ಮಕ ಕಥಾನಕಗಳಲ್ಲಿ ಚೈತನ್ಯವಿರುವಂತೆ ಮಾಡಿ, ಬಣ್ಣಗಾರಿಕೆಯ ತಂತ್ರದಲ್ಲಿ ಅದ್ಭುತ ಕ್ರಾಂತಿಯನ್ನು ಮಾಡಿದರು.

ಈ ಪಂಥದ ಆದ್ಯ ಪ್ರವರ್ತಕ ಮಾನೆ ಮೋನೆ, ರಿನೋಯರ್ ಸಿಸಲಿ, ಪಿಸ್ಸರೋ, ದೇಗಾ, ಮುಂತಾದವರು ಈ ಪಂಥದ ಪ್ರಮುಖ ಕಲಾವಿದರಾಗಿದ್ದು, ತಮ್ಮ ಚಿತ್ರಗಳಲ್ಲಿ ಬೆಳಕು ಮತ್ತು ನಿಸರ್ಗದ ಸಂಬಂಧವನ್ನು ಅಭಿವ್ಯಕ್ತಿಸಿದ್ದಾರೆ. ರಿನೋಯರ್‌ನ'ಬೇಟೆಗಾತಿ-ಡಯಾನ' -ಅತಿ ನೈಜಕತೆಯಿಂದ ಕೂಡಿದೆ. ಮಾನೆಯ 'ಹುಲ್ಲುಗಾವಲ ಭೋಜನ' ಹಾಗೂ 'ಒಲಂಪಿಯಾ' ನೈಜಶೈಲಿಯಲ್ಲಿದೆ. ಛಾಯಾಚಿತ್ರದ ತತ್ವದ ಆಧಾರದ ಮೇಲೆ ಎಡ್ಗರ್ ದೇಗಾ ಚಿತ್ರಗಳನ್ನು ರಚಿಸಿದ್ದಾರೆ. ಆಲ್ಬರ್ಡ್ ಸಿಸಲಿ ಪ್ರಕೃತಿ ಚಿತ್ರಗಳನ್ನು ರಚಿಸುವುದರಲ್ಲಿ ನಿಷ್ಣಾವಂತನಾಗಿದ್ದು, ಅದರಲ್ಲೂ ನದೀ ನೀರಿನ ಚಿತ್ರಗಳು ಪ್ರಸಿದ್ಧಿ ಪಡೆದಿವೆ. ಇಂಪ್ರೆಷನಿಸ್ಟು ಕಲಾವಿದರಾದ ದೇಗ, ಸೆಜನ್, ಗೋನ್ನೈನ್, ರಿನೋಯರ್ ಮುಂತಾದವರು ಶಿಲ್ಪಗಳನ್ನೂ ರಚಿಸಿದ್ದಾರೆ. ಇಂಪ್ರೆಷನಿಸ್ಟ್ ಕಲಾವಿದರು ಸಮಕಾಲೀನ ವಿಷಯಗಳನ್ನು ತಮ್ಮ ಚಿತ್ರಗಳಲ್ಲಿ ಚಿತ್ರಿಸಿದರು. ಇಂಪ್ರೆಷನಿಸಂ ಪಂಥ ಕಲಾ ಇತಿಹಾಸದಲ್ಲಿ ಮಹತ್ತರ ಸ್ಥಾನವನ್ನು ಪಡೆದಿದೆ.

ಭಾರತದಲ್ಲಿ ಇಂಪ್ರೆಷನಿಸಂ ಪಂಥದಲ್ಲಿ ಕೃತಿ ರಚಿಸಿದವರಲ್ಲಿ ಅಮೃತಾಶೇರ್‌ಗಿಲ್, ಕೆ.ಕೆ.ಹೆಬ್ಬಾರ್, ದೇವಿ ಪ್ರಸಾದ್‌ರಾಯ್ ಚೌದುರಿ, ರಾಮಕಿಂಕರ್ ಬೈಜ್ ಮುಂತಾದವರು ಪ್ರಮುಖ ಕಲಾವಿದರು. ಕರ್ನಾಟಕದ ಕಲಾವಿದರಾದ ಎನ್. ಜಿ. ಪಾವಂಜೆ, ಎಸ್.ಆರ್. ಐಯ್ಯಂಗಾರ್ ಎಂ. ವಿ. ಮಿಣಜಗಿ, ಎಸ್. ಎಂ. ಪಂಡಿತ್, ಡಿ.ವಿ. ಹಾಲಭಾವಿ, ಎನ್. ಹನುಮಯ್ಯ, ರುಮಾಲೆ ಚನ್ನಬಸವಯ್ಯ ಮುಂತಾದ ಕಲಾವಿದರು ಇಂಪ್ರೆಷನಿಸ್ಟು ಶೈಲಿಯಲ್ಲಿ ಕೃತಿಗಳನ್ನು ರಚಿಸಿದ್ದಾರೆ.

**ಮರಿ**

## ಇಂಪ್ರೆಷನಿಸಂ, ನವ (Neo-Impressionism)

ಇದು ಫ್ರಾನ್ಸದ ಪೋಸ್ಟ್ ಇಂಪ್ರೆಶನಿಸ್ಟ್ ಚಿತ್ರಕಾರರೆನಿಸಿದ ಜಾರ್ಜಸ್ಯೂರಟ್ ಮತ್ತು ಪಾಲ್ ಸಿಗ್ನಾಕ್‌ರಿಂದ ೧೮೮೦ರಲ್ಲಿ ಪ್ರಚಾರಗೊಂಡ ಕಲಾಶೈಲಿ. ೧೯ನೆಯ ಶತಮಾನದ ಅಂತ್ಯಭಾಗದಲ್ಲಿ ಪ್ರಚಾರಕ್ಕೆ ಬಂದ ನವ ಪ್ರಭಾವವಾದ ಪಂಥದ ಕಲಾವಿದರು ಅಭಿವ್ಯಕ್ತಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದರು. ಚಿತ್ರಕಲೆಯ ವಿಷಯದಲ್ಲಿ ಇದು ಒಂದು ಆಂದೋಲನದಂತೆ ತೀವ್ರ ಪ್ರಚಾರಕ್ಕೆ ಬಂದಿತು. ಕ್ಯಾನ್ವಾಸ್ ಮೇಲೆ ಬಣ್ಣ ಹಾಗೂ ಬೆಳಕಿನ ವೈಜ್ಞಾನಿಕ ನಿರೂಪಣೆಯನ್ನು ಅನ್ವೇಷಿಸಿದ ಸ್ಯೂರಟ್‌ನು ಬಿಂದುವಾದ(Pointillism)ವನ್ನು ಮಂಡಿಸಿದನು. ಇದೇ ವಾದದ ತಾತ್ವಿಕ ನೆಲೆಗಟ್ಟಿನ ಮೇಲೆ ಚಿತ್ರಕಲಾ ಆಂದೋಲನ ಬೆಳೆದು ಬಂದಿತು. ಮುಂದೆ ಸಿಗ್ನಾಕ್‌ನು ಬಣ್ಣದ ಸೂಕ್ಷ್ಮ ಉಪಯೋಗಕ್ಕೆ ಹೆಚ್ಚು ಮಹತ್ವ ನೀಡಿದನು. ("D"Eugene Delacroix au Neo-Impressionism)(೧೮೯೯) ಎಂಬ ಗ್ರಂಥವು ನವಪ್ರಭಾವವಾದ ಪಂಥದ ಬೈಬಲ್ ಎನಿಸಿದೆ.

**ಎಸ್. ಎಂ. ಮಿ.**

## ಇಟಲಿಯ ಕಲೆ

ಪ್ರಾಚೀನ ರೋಮನ್ ಚಕ್ರಾಧಿಪತ್ಯದ ವೈಭವಯುತ ಕಲೆ ಇಟಲಿಯ ಕಲೆಗೆ ಭದ್ರವಾದ ತಳಹದಿಯಾಯಿತು. ಕಲೆಯಲ್ಲಿ ತನ್ನದೆ ಆದ ನೆಲೆಯನ್ನು ಮುಟ್ಟಲು ಇಟಲಿ ೬ನೆಯ



ಮೈಕೆಲ್ ಏಂಜಲೋ

ಶತಮಾನದವರೆಗೂ ಕಾಯಬೇಕಾಯಿತು. ಹೊಸ ಅಭಿವ್ಯಕ್ತಿಗಳು ಇಟಲಿಯ ಕಲೆಯ ಪ್ರಥಮ ಘಟ್ಟದಲ್ಲಿ ಮೂಡಿ ಬಂದವು. ಈ ವೇಳೆಯಲ್ಲಿ ಉಜ್ವಲ ಚಿತ್ತಾರಗಳು ಕ್ರೈಸ್ತ ಮಂದಿರಗಳನ್ನು ಅಲಂಕರಿಸಿದವು ಮತ್ತು ಶಿಲ್ಪದಲ್ಲೂ ಬದಲಾವಣೆಗಳಾದವು. ಚಿತ್ರ, ಶಿಲ್ಪ ಮತ್ತು ವಾಸ್ತುಶಿಲ್ಪಗಳಲ್ಲಿ ಒಂದು ಸಾಮಾನ್ಯ ಅಭಿವ್ಯಕ್ತಿಗೋಸ್ಕರ, ಇಟಲಿಯ ಕಲೆ ಪ್ರಾಚೀನ ರೋಮಿನ ವಿಚಾರಧಾರೆಯಿಂದ ನವೋದಯವನ್ನು ಮುಟ್ಟಿತು. ೧೩ನೆಯ ಶತಮಾನದಲ್ಲಿ ಗಾನಿಕ್‌ಕಲೆ ಇಟಲಿಗೆ ಬಂದಿತು. ೧೪ನೆಯ ಶತಮಾನದಲ್ಲಿ ಚಲನಶೀಲತೆ ಹಾಗೂ ಲಲಿತ ರೇಖೆಗಳು ಕಲೆಯಲ್ಲಿ ಮೂಡಿದವು. ೧೫ನೆಯ ಶತಮಾನದ ಆದಿ ಕಾಲದಲ್ಲಿ ನವೋದಯ ಆರಂಭವಾಯಿತು. ಬಾಟಿಶೆಲ್ಲಿ, ವೆರೋಕಿಯೋ, ಡೊನಾಟಿಟೋ ಪ್ರಮುಖ ಕಲಾವಿದರು. ಅನಂತರ ನವೋದಯದ ಉಚ್ಛ್ರಾಯ ಕಾಲವಾಯಿತು. ರಾಫೇಲ್, ಲಿಯೋನಾರ್ಡೋ ಡಾ ವಿಂಚಿ, ಮೈಕಲ್ ಏಂಜಲೋ ಪ್ರಮುಖ ಕಲಾವಿದರು. ಇವರು ಅಲ್ಲಿನ ಕಲೆಯಲ್ಲಿ ಸಾಧಿಸಿದ ಸಮನ್ವಯದಿಂದಾಗಿ, ಇಡೀ ಯುರೋಪ್ ಕಲೆಯ ಮಾರ್ಗದರ್ಶನಕ್ಕಾಗಿ, ಇಟಲಿಯತ್ತ ನೋಡಿತು. ೧೬ನೆಯ ಶತಮಾನದಲ್ಲಿ ಕಲೆಯಲ್ಲಿ ಶೈಲಿಗೆ ಮಹತ್ವ ಬಂದು ವಸ್ತುವಿಗಿಂತ ನಿರೂಪಿಸುವ ರೀತಿ ಮುಖ್ಯವಾಯಿತು. ೧೭ನೆಯ ಶತಮಾನದಲ್ಲಿ ಬಾರೋಕ್ ಕಲೆ ಮೂಡಿ ಬಂದಿತು. ಅನಂತರ ಚಲನೆಯನ್ನು ಪ್ರತಿಪಾದಿಸುವ ಪಂಥ ಪ್ರಾರಂಭವಾಯಿತು.

ಎಸ್. ವಿ.

## ಇದ್ದಿಲು ಕಡ್ಡಿ (Charcoal)

ಚಿತ್ರದ ಕರಡು ಪ್ರತಿಯನ್ನು ತಯಾರಿಸಲು ಇದ್ದಿಲು ಕಡ್ಡಿ ಅಥವಾ ಚಾರಕೋಲ ಅತ್ಯುತ್ತಮ ಮಾದರಿಯಾಗಿದೆ. ಕೆಲವು ಸಲ ಕಲಾಕೃತಿಗಳನ್ನು ಸಂಪೂರ್ಣವಾಗಿ ಇದ್ದಿಲು ಕಡ್ಡಿಯಿಂದಲೇ ಚಿತ್ರಿಸಲಾಗುತ್ತದೆ. ನೆಳಲು, ಬೆಳಕನ್ನು ಇದ್ದಿಲು ಕಡ್ಡಿಯಿಂದ ಪರಿಣಾಮಕಾರಿಯಾಗಿ ಚಿತ್ರಿಸಲು ಸಾಧ್ಯವಿದೆ.

ಮೃದು, ಕಠಿಣ ಹಾಗೂ ಮಧ್ಯಮ ಗುಣಗಳ ಇದ್ದಿಲು ಕಡ್ಡಿಗಳು ದೊರೆಯುತ್ತಿದ್ದು ಕಡ್ಡಿ ಮತ್ತು ಸೀಸದಕಡ್ಡಿಯ ರೂಪಗಳಲ್ಲಿಯೂ ದೊರೆಯುತ್ತವೆ. ಸುಟ್ಟ ಮರದ ಉದ್ದನೆಯ ಕಡ್ಡಿಗಳನ್ನು ಮೊದಲು ಉಪಯೋಗಿಸಲಾಗುತ್ತಿತ್ತು ಈಗ ವಿಲ್ಲೋ (Willow) (ನೀರುಹಬ್ಬೆ ಗಿಡ) ಮರದ ಕೊಂಬೆಯನ್ನು ಸುಟ್ಟು ಚಾರಕೋಲಾಗಿ ಬಳಸಲಾಗುತ್ತದೆ. ಈಗಲೂ ಕೂಡ ಚಾರಕೋಲ ಅತ್ಯುತ್ತಮ ಮಾಧ್ಯಮವಾಗಿ ಬಳಕೆಯಲ್ಲಿರುತ್ತದೆ. ಚರ್ಮ, ಬಟ್ಟೆಗಳ ಮೇಲೆ ಕಲಾಕೃತಿಗಳನ್ನು ರಚಿಸಲು ಚಾರಕೋಲ ಸಹಾಯಕಾರಿ. ರಬ್ಬರಿನಿಂದ ಬೇಡವಾದ ಅನಗತ್ಯವಾದ ರೇಖೆಗಳನ್ನು ಸುಲಭವಾಗಿ ಅಳಿಸಬಹುದು. ಚಾರಕೋಲ ಮಾಧ್ಯಮದಲ್ಲಿ ಕಲಾಕೃತಿಗಳನ್ನು ರಚಿಸುವಲ್ಲಿ ಜಾರ್ಜ್ ಸ್ಯೂರಾತ್(George Searat)ನು ಅಗ್ರಗಣ್ಯ ಕಲಾವಿದನಾಗಿದ್ದನು.

ಅ.ಟಿ.ಅ.

## ಇಲ್ಯೂಷನಿಸಂ (Illusionism)

ನಾವು ಎದುರು ನೋಡುತ್ತಿರುವ ಚಿತ್ರ-ಚಿತ್ರವಲ್ಲ, ನಿಜವಾದ ಪ್ರಪಂಚದ ವಸ್ತುವೋ ಎಂಬ 'ಭ್ರಮೆ' ಹುಟ್ಟಿಸುವುದೇ ಈ ರೀತಿಯ 'ಭ್ರಮಾತ್ಮಕ ಚಿತ್ರಕೃತಿಗಳ' ಉದ್ದೇಶ. ರೆನಾಯಸಾನ್ಸ್(Renaissance) ಹಾಗೂ ಬರೊಕ್(Baroque) ಕಲೆಗಳಲ್ಲಿ ಬಹುಪಾಲು ಭ್ರಮಾತ್ಮಕತೆಯು ವಾಸ್ತುಕಲೆಯಲ್ಲಿ ಕಂಡುಬರುತ್ತದೆ. ಆಕಾರ, ಮೇಲ್ಭಾವಣಿ ಮತ್ತು ಇಡೀ ನಿರ್ಮಾಣವನ್ನೇ ಭ್ರಮಾತ್ಮಕಗೊಳಿಸಿ, ಜೊತೆಗೆ ಅನೇಕ ಕಾಲ್ಪನಿಕ ಅಂಶಗಳನ್ನು(Fictive Elements) ಭ್ರಮೆಯನ್ನು ಹೆಚ್ಚಿಸುವ ಸಲುವಾಗಿ ಉಪಯೋಗಿಸಲಾಗಿದೆ. ಅಂದರೆ ಪರ್‌ಸ್ಪೆಕ್ಟೀವ್(Perspective) ಹಾಗೂ ಎದಿರು ಕುಬ್ಜತೆ(Foreshortening- ಅದರಲ್ಲೂ ಕೆಳಗಿನಿಂದ ನೋಡುವಂತಹ ಎದಿರು ಕುಬ್ಜತೆಯನ್ನು Di sotto in su(ಡೈ ಸೊಟ್ಟೊ ಇನ್ ಸು) ಎಂದು ಕರೆಯಲಾಗುತ್ತದೆ)ಗಳು ಭ್ರಮಾತ್ಮಕತೆಯ ಅನಿವಾರ್ಯ ಅಂಶಗಳಾಗಿದ್ದವು.

ಭ್ರಮಾತ್ಮಕತೆಯ ಅತ್ಯುತ್ತಮ ಉದಾಹರಣೆಗಳೆಂದರೆ ರೆನಾಯಸಾನ್ಸ ಕಾಲದ ಆಂಡ್ರಿಯಾ ಮ್ಯಾಂಟೆಗ್ನನ(Andreau Mantegna) ಕ್ಯಾಮೆರ ಡೆಗ್ಲಿ ಸ್ಪೋಸಿ(Camera Degli Sposi) ಮಾಂಟುವ(Mantua)ದಲ್ಲಿ; ಮಿಲನ್ ನಗರದಲ್ಲಿರುವ ಸೇಂಟ್ ಮಾರಿಯಾ ಪ್ರೆಸ್ಸೋ ಸ್ಯಾನ್ ಸಾಟಿರೋ(S. Maria Presso san satiro)ದಲ್ಲಿನ ಬ್ರಮಂಟೆ ಕಲಾವಿದನ ಬ್ರಮಾತ್ಮಕ ದೇವಾಲಯ-ಕಛೇರಿ (Choirಎಂದು ಇದನ್ನು ಕರೆಯಲಾಗುತ್ತದೆ); ಪರ್ಮಾ (Parma) ನಗರದಲ್ಲಿನ ಕೊರಿಜಿಯೋ ಕಲಾಕಾರನ ಭಿತ್ತಿಚಿತ್ರಗಳು ಮುಂತಾದವು.

ಬರೊಕ್ ಕಾಲದ ಕಲೆಯಲ್ಲಿ ಭ್ರಮಾತ್ಮಕತೆಯನ್ನು ಇನ್ನೂ ಹೆಚ್ಚು ತೀವ್ರಗೊಳಿಸಲಾಯಿತು: ಪಿಯಟ್ರೋ ಡ ಕೊರ್ಟೋನ ನಿರ್ಮಿಸಿದ ಪಲಾಜೋ ಬಾರ್ಬೆರಿನಿ(Palazzo Barberini)ಯಲ್ಲಿನ ಮೇಲ್ಛಾವಣಿ; ರೋಮ್ ನಗರದಲ್ಲಿ ಬಾಜಿಜಿಯಾ ಎಂಬಾತ ನಿರ್ಮಿಸಿದ ಗೆಸು(Gesu) ಚರ್ಚಿನ ಮೇಲ್ಛಾವಣಿ; ರೋಮಿನ ಮತ್ತೊಂದು ಚರ್ಚಿನಲ್ಲಿರುವ ಆಂಡ್ರಿಯಾ ಪೂಜ್ಜೋವಾನ ಚಿತ್ತಾರಗಳು(Decorations) ಇತ್ಯಾದಿ.

೧೮ನೇ ಶತಮಾನದಲ್ಲಿ, ದಕ್ಷಿಣ ಜರ್ಮನಿಯ ಚರ್ಚುಗಳಲ್ಲಿ ಅಸಮ್ ಸಹೋದರರ, ಟೈಪೋಲೋ ಎಂಬ ಕಲಾವಿದನ ಇಟಲಿ ದೇಶದ ಅರಮನೆ ಶೃಂಗಾರಗಳಲ್ಲಿಯು ಭ್ರಮಾತ್ಮಕತೆ ಕಂಡುಬರುತ್ತದೆ.

ಮಹಾಭಾರತದ ಕಥೆಯಲ್ಲಿ ದುರ್ಯೋಧನನು ಪಾಂಡವರು ನಿರ್ಮಿಸಿದ ಹೊಸ ಅರಮನೆಯಲ್ಲಿ ನೀರನ್ನು ನೆಲವೆಂದು ಭಾವಿಸಿ, ಮುನ್ನಡೆದು, ಮುಗ್ಗರಿಸಿ- ದ್ರೌಪದಿ ಅಟ್ಟಹಾಸಗೈದು- ಅದೇ ಕಾರಣಕ್ಕೆ ಮುಂದೆ ಮಹಾಭಾರತದ ಕಥೆ ವಿಚಿತ್ರ ತಿರುವುಗಳನ್ನು ಪಡೆಯುವುದು ಜನಪ್ರಿಯವಾಗಿದೆ. ಅಂದರೆ ಭಾರತೀಯ ಪುರಾತನ ಕಥೆಗಾರರಿಗೂ ಈ 'ಭ್ರಮಾತ್ಮಕ ನಿರ್ಮಾಣ'ದ ಕಲ್ಪನೆ ಇದ್ದಿತು.

**ಎಚ್. ಎ. ಅ.**

## ಇಸ್ಲಾಮಿಕ್ ಕಲೆ

ಏಳನೇ ಶತಮಾನದಿಂದ ಇಲ್ಲಿಯವರೆಗೆ ಮುಸ್ಲಿಮರ ಆಡಳಿತವಿರುವ ರಾಜ್ಯಗಳಲ್ಲೆಲ್ಲ 'ಇಸ್ಲಾಮಿಕ್ ಕಲೆ' ಜಾರಿಗೆ ಬಂದಿತು. ಆಗಿನಿಂದಲೂ ಮುಸ್ಲಿಂ ಆಗಿದ್ದವರಲ್ಲಿ ಕೆಲವರನ್ನು ಹೊರತುಪಡಿಸಿ ಉಳಿದವರೆಲ್ಲ ಸುಂದರ ಲಿಪಿಗಾರರಾಗಿದ್ದರು. ಕುಶಲಕರ್ಮಿಗಳಾಗಿ ಚಿತ್ರಕಲೆಯ ಕೆಲಸವನ್ನು ಮಾಡುತ್ತಿದ್ದರು. ಇಸ್ಲಾಮಿಕ್ ಕಲೆಯನ್ನು ಬಲ್ಲವರಲ್ಲಿ ಕೆಲವರು ಕ್ರಿಶ್ಚಿಯನ್ನರು ಹಾಗೂ ಯಹೂದಿಗಳೂ ಇದ್ದರು. ಮಧ್ಯಯುಗದ ವಾಸ್ತವಿಕತೆ ಹಾಗೂ ನಾಗರಿಕತೆಯ ವೈವಿಧ್ಯತೆಯನ್ನು ಈ ಕಲೆಯ ಮೂಲಕ ಪ್ರತಿಬಿಂಬಿಸುವದಾಗಿತ್ತು. ಇಸ್ಲಾಮಿಕ್ ಕಲೆಯ ಮುಖ್ಯ ಕೇಂದ್ರಗಳೆಂದರೆ ಈಜಿಪ್ತ, ಸಿರಿಯಾ, ಇರಾಕ್, ಪರ್ಶಿಯಾ, ಸೆಂಟ್ರಲ್ ಏಶಿಯಾ, ಅಫಘಾನಿಸ್ತಾನ ಮತ್ತು (೧೨ನೇ ಶತಮಾನದಿಂದ) ತುರ್ಕಿ ದೇಶಗಳು.

ಇಸ್ಲಾಮಿಕ್ ಕಲೆಯ ರಚನೆ ಮತ್ತು ವಿಷಯ ವಾಸ್ತವಿಕತೆಗೆ ಹೊಂದುವ ಹಾಗೆ ಇದ್ದುದರಿಂದ ಗಮನಾರ್ಹ ಎನಿಸಿಕೊಂಡವು. ಆದರೆ ಅಲ್ಲಿಯೂ ಕೆಲವು ಪ್ರತ್ಯೇಕವಾದ ಶೈಲಿಯನ್ನು ಇದು ಹೊಂದಿದ್ದಿತು. ಅವುಗಳಲ್ಲಿ 'ಇಂಡೋ-ಮುಸ್ಲಿಂ' ಕಲೆ ಮತ್ತು ಇಸ್ಲಾಮಿಕ್-ಸ್ಪೇನಿನ 'ಹಿಸ್ಪ್ಯಾನೋ-ಮಾರೆಸ್ಕ' ಕಲೆ (೭೧೧-೧೪೯೨), ಮೊರೊಕ್ಕೊ, ಅಲ್ಜಿರಿಯಾ ಮತ್ತು ಟುನಿಸಿಯಾ ಕಲೆಯನ್ನು ನಾವಿಲ್ಲಿ ಹೆಸರಿಸಬಹುದಾಗಿದೆ. ಮಧ್ಯಯುಗ ಇಸ್ಲಾಮಿಕ್ ನಾಗರಿಕತೆಯು ಅಂತರ್‍ರಾಷ್ಟ್ರೀಯ ಗುಣಗಳನ್ನಲ್ಲದೇ ರಾಷ್ಟ್ರೀಯತೆಯನ್ನು ಅರೇಬಿಕ್, ಪರ್ಶಿಯನ್ ಮತ್ತು ತುರ್ಕಿಷ್ ಪದ್ಧತಿಗಳಲ್ಲಿ ಬೆಳೆಯುವಂತೆ ಪ್ರಯತ್ನಿಸಿತು.

ಮುಸ್ಲಿಂ ಧರ್ಮದ ಬಹುಮುಖ್ಯವಾದ ಕುರಾನಿನ ಸುಂದರ ಪ್ರತಿಗಳನ್ನು ಕಲಾತ್ಮಕವಾಗಿ



ಅಫಜಲ್ ಆಲ್ ಹುಸೇನಿ

ಸಿದ್ಧಪಡಿಸಲಾಯಿತು. ಇಸ್ಲಾಮಿಯ ಸುಂದರ ಲಿಪಿಗಳನ್ನು ರಚಿಸಿ ಪುಸ್ತಕವನ್ನು ಬೈಂಡ್ ಮಾಡಿಸಿ ಉತ್ತಮವಾಗಿ ಸಿದ್ಧಗೊಳಿಸಲಾಯಿತು. ಪ್ರವಾದಿಗಳ ಜೀವಿತ ಕಾಲದಲ್ಲಿ ಇಸ್ಲಾಮಿನ ಪವಿತ್ರ ಗ್ರಂಥದ ರಚನೆಯಾಗುತ್ತಿರುವಾಗ ಅರಬ್ಬೀ ಅಕ್ಷರ ಮಾಲಿಕೆ ಅಸಮಗ್ರವಾಗಿತ್ತು. ಸಮಗ್ರವಾದ ಅಕ್ಷರ ಮಾಲಿಕೆಯನ್ನು ವ್ಯಾಕರಣ ಸೂತ್ರಗಳನ್ನು ರಚಿಸಿ ಗ್ರಂಥವನ್ನು, ಅದರ ಪುಟಗಳನ್ನು ಕೆಡದ ಹಾಗೆ ಸಂರಕ್ಷಿಸುವುದು ಕ್ಷಿಪ್ರವಾಗಿ ನಡೆಯಿತು. ಇಸ್ಲಾಂ ಪೂರ್ವದ ಕವಿಗಳ ಕೃತಿಗಳ ಸಂಗ್ರಹಣೆ ಅವಶ್ಯವಾಯಿತು. ಕುರಾನು ಮತ್ತು ಸಂಪ್ರದಾಯಗಳ ಕಲಿಕೆ, ದೈವ ಮತ್ತು ಧರ್ಮಶಾಸ್ತ್ರಗಳ ನಿರ್ಮಾಣಕ್ಕೆ ಒಳ್ಳೆ ತಳಪಾಯವನ್ನು ಒದಗಿಸಿತು. ಇಸ್ಲಾಂ ಪೂರ್ವದ, ಅರೇಬಿಯದ ಪೌರಾಣಿಕ ಕಥಾವಸ್ತುಗಳನ್ನು ಸಂಗ್ರಹಿಸುವಲ್ಲಿ ಬೈಬಲ್ ಮತ್ತು ಜೂಡೋ ಕ್ರಿಶ್ಚಿಯನ್ ಮೂಲಗಳಿಂದ ಅನೇಕ ವಿಷಯಗಳನ್ನು ಎರವಲು ಪಡೆಯಲಾಯಿತು. ಆ ಕಾಲದಲ್ಲಿ ಮುಸ್ಲಿಂ ಕಲಾವಿದರೂ ಮುಸ್ಲಿಮೇತರ ಕಲಾವಿದರೂ ಇದ್ದರು.

ಸಿರಿಯಾದ ಡಮಾಸ್ಕಸ್‌ನಲ್ಲಿ ೬೬೧ ರಿಂದ ೭೫೦ರ ವರೆಗೆ ಉಮಯ್ಯದ ವಂಶಜರಿಂದ ಇಸ್ಲಾಮಿಕ್ ಕಲೆಯು ಉದಯಿಸಿ ಗುರುತಿಸಲ್ಪಟ್ಟಿತು, ಡಮಾಸ್ಕಸ್‌ನ ದೊಡ್ಡ ಮಸೀದಿಯಲ್ಲಿ, ಜರುಸಲೇಮದ ಕಲ್ಲಿನ ಗುಮ್ಮಟದಲ್ಲಿ ಹಾಗೂ ಸಿರಿಯಾದ ಹಳ್ಳಿಗಾಡಿನ ಕೆಲವು ಪವಿತ್ರ ಅರಮನೆಗಳಲ್ಲಿ ಇಸ್ಲಾಮಿಕ್ ಕಲೆಯನ್ನು ಈಗಲೂ ಕಾಣಬಹುದಾಗಿದೆ. ಅಲಂಕೃತಗೊಂಡ ಈ ಕಟ್ಟಡಗಳಲ್ಲಿ ಬೆಲೆಬಾಳುವ ಸುಂದರ ಮೊಸೆಯಿಕ್ ಕಲ್ಲುಗಳಲ್ಲಿ ಕಲಾಕೃತಿಗಳು ಚಿತ್ರಿತಗೊಂಡಿವೆ.

ಧಾರ್ಮಿಕತೆ ಮತ್ತು ಜಾತ್ಯಾತೀತತೆಯ ನಡುವಿನ ಅಂತರವನ್ನು ಅವು ವಿಶೇಷವಾಗಿ ಎತ್ತಿ ತೋರಿಸುತ್ತವೆ. ಮೂರ್ತಿ ಪೂಜಕರಿಗೆ ಕುರಾನದಲ್ಲಿ ಘೋರ ಶಿಕ್ಷೆಯನ್ನು ನೀಡಲಾಗಿದೆ. ಪ್ರಾಣಿಗಳನ್ನು ಹೊರತು ಪಡಿಸಿ ಮಾನವ ಜನಾಂಗವನ್ನು ಪ್ರತಿನಿಧಿಸುವ ಪ್ರತಿಯೊಬ್ಬನೂ ಇದನ್ನು ಪಾಲಿಸುವಂತೆ ಮಸೀದಿಯಲ್ಲಿ ಚಿತ್ರಿಸಲಾಗಿದೆ. ಗತಕಾಲದ ಪರಂಪರೆಯಲ್ಲಿ ಕೆಲಸ ಮಾಡಿದ ಉಮಯ್ಯದ ಮೊಸೆಯಿಕ್ ಶಿಲ್ಪಿಗಳು ಚಿತ್ರರಹಿತ ಶಾಸ್ತ್ರೀಯ ಕಲೆಯನ್ನು ರೂಢಿಮಾಡಿಕೊಂಡರು. ಇದಕ್ಕೂ ಹಿಂದೆ ರಚಿಸಿದ್ದ ಮನುಷ್ಯನ ಭಾವಚಿತ್ರಗಳಿರುವ ಕಲಾಕೃತಿಗಳೇ ಉಮಯ್ಯದ ಅರಮನೆಗಳಲ್ಲಿ ತುಂಬಿದ್ದವು. ಅದಕ್ಕೆ ವ್ಯತಿರಿಕ್ತವಾಗಿ ಇಸ್ಲಾಮಿಕ್ ಕಲೆ ಬದಲಾವಣೆ ಹೊಂದಿತು.

೭೫೦ ರಿಂದ ೧೨೫೮ರ ವರೆಗೆ ಆಳಿದ ಇರಾಕಿನ ಬಗದಾದ ಮತ್ತು ಸಮರ್‍ರಾದ ಅಬ್ಬಾಸಿಡ್ ಕಲೀಫರು (ಉತ್ತರಾಧಿಕಾರಿಗಳು) ಈ ಪರಂಪರೆಯನ್ನು ಮುಂದುವರೆಸಿಕೊಂಡು ಬಂದರು. ಮಾನವನನ್ನು ಪ್ರತಿನಿಧಿಸುವ ಚಿತ್ರಗಳು ಕ್ರಮೇಣ ಜಾತ್ಯಾತೀತ ಕಲಾರಂಗವಾಗಿ ವಿಸ್ತಾರಗೊಂಡವು. ವೈಭವೀಕರಿಸುವ ೧೨ನೇ ಶತಮಾನದಲ್ಲಿಯ ಇಸ್ಲಾಮಿಕ್ ಕಲಾಪರಂಪರೆಯು ಉಮಯ್ಯದ ವಂಶದವರ ನಂತರ ಹೆಚ್ಚು ಬೆಳವಣಿಗೆಯನ್ನು ಹೊಂದಿತು. ಸುರುಳಿಯ ಹಾಗೆ ಸುತ್ತುವ ಬಳ್ಳಿಗಳನ್ನೊಳಗೊಂಡ ಶಾಸ್ತ್ರೀಯ ಕಲೆ ಸೇರ್ಪಡೆಯಾಯಿತು. ಅರಬ ಪ್ರದೇಶದಲ್ಲಿ ಬೆಳೆದ ಈ ಸುರುಳೀ ಬಳ್ಳಿಯ ಕಲೆಯನ್ನು ಪಾಶ್ಚಿಮಾತ್ಯ ದೇಶಗಳಲ್ಲಿ 'ಅರಾಬಸ್ಕ' ಎಂದು ಕರೆದರು. ಈ ಬಳ್ಳಿಯ ಸುರುಳಿ ಕೆತ್ತನೆ ಚಿತ್ರಗಳ, ಸುಂದರ ಲಿಪಿಯ ಪಡಿಯಚ್ಚುಗಳ, ರೇಖಾ ಪದ್ಧತಿಯ ಚಿತ್ರಗಳು ೧೩ನೇ ಶತಮಾನದಲ್ಲಿ ಮಧ್ಯಪೂರ್ವಜರ ಮೇಲೆ ಮೊಗಲರ ದಾಳಿಯಾದ ನಂತರ ಜಾರಿಗೆ ಬಂದವು. ಚೀನಾ ದೇಶದ ಹೂವಿನ ಚಿತ್ರಗಳೂ ಇದರಲ್ಲಿ ಸೇರ್ಪಡೆಯಾದವು. ಹೀಗೆ ಇಸ್ಲಾಮಿಕ್ ಕಲೆ ಬಹು ಪ್ರಾಚೀನ ವೈವಿಧ್ಯತೆಯ ಪರಂಪರೆಯನ್ನು ಹೊಂದಿ ಬೆಳೆಯುತ್ತ ಬಂದಿತು.

ಅ. ಹಿ.

## ಈಕೋಲೆ ಡಿ ಬೋ ಆರ್ಟ್ಸ್

ಕ್ರಾಂತಿಯ ನಂತರ ಅಕಾಡೆಮಿ ರಾಯಲ್ ಡಿ ಬೋ ಆರ್ಟ್ಸ್‌ನ್ನು ಸ್ಥಾನ ಪಲ್ಲಟ ಮಾಡಿತ್ತು. ಈ ಶಾಲೆಯು ಚಿತ್ರಕಲೆಗೆ ನಾಲ್ಕು, ಶಿಲ್ಪಕಲೆಗೆ ನಾಲ್ಕು ಮತ್ತು ವಾಸ್ತುಶಿಲ್ಪಕ್ಕೆ ಏಳು ಸ್ಟುಡಿಯೋಗಳನ್ನು ಹೊಂದಿತ್ತು. ಪ್ರವೇಶ ಮಟ್ಟವು ಅತ್ಯಂತ ಉನ್ನತವಾಗಿತ್ತು ಮತ್ತು ಶಾಲೆಯು ಎಲ್ಲ ಕ್ಷೇತ್ರಗಳಲ್ಲಿ ಪಕ್ಕಾ ಅಡಿಪಾಯ ನೀಡಿತು. ವಾಸ್ತುಶಿಲ್ಪಕ್ಕೆ ಮತ್ತು ೧೯ನೇ ಶತಮಾನದ ಮಧ್ಯದಿಂದ ಎಲ್ಲ ಐರೋಪಿಯನ್ ವಾಸ್ತು ಪ್ರಭಾವ ಶಿಲ್ಪ ಅಲಂಕಾರಗಳಿಗೆ ಅತ್ಯಂತ ಹೆಸರುವಾಸಿಯಾಗಿದೆ. ಚಿತ್ರಕಲೆ ಕುರಿತ ಇದರ ಪ್ರಭಾವ 'ರಿಯಲಿಸಂ' ಮತ್ತು 'ಇಂಪ್ರೆಷನಿಸಂ' ಎಂದು ಹೇಳಬಹುದು.

ಶಾ

## ಈಜಿಪ್ಟ್ (ಪುರಾತನ)


ಈಜಿಪ್ಷಿಯನ್ ಕಲೆ

ಈಜಿಪ್ಷಿಯನ್ ಕಲಾಸಂಸ್ಕೃತಿಯು ನೈಲ್ ನದಿಯ ದಂಡೆಗುಂಟ ಬೆಳೆದು ಬಂದ ಸಂಸ್ಕೃತಿಯಾಗಿದೆ. ಕ್ರಿ. ಪೂ. ೩,೧೦೦ ರಿಂದ ಕ್ರಿ. ಪೂ. ೫೨೫ ರವರೆಗಿನ ಕಾಲವು ಈ ಕಲಾಸಂಸ್ಕೃತಿಯ ಪುರಾತನ ರೂಪವಾಗಿದೆ. ಈಜಿಪ್ಟ್‌ನ ಫೇರೋ ಅರಸರು ಈ ಕಲಾಸಂಸ್ಕೃತಿಯ ಬೆಳವಣಿಗೆಗಾಗಿ ಬಹುವಾಗಿ ಶ್ರಮಿಸಿದರೆಂಬುದಕ್ಕೆ ಅವರು ಕಟ್ಟಿಸಿದ ಭವ್ಯವಾದ ದೇವಾಲಯಗಳೂ ದೊಡ್ಡ ದೊಡ್ಡ ಪಿರಮಿಡ್ಡುಗಳೂ ಅತ್ಯುತ್ತಮ ಉದಾಹರಣೆಗಳಾಗಿವೆ. ಪಿರಮಿಡ್ಡುಗಳು ಫೇರೋ ಅರಸರ ಸಮಾಧಿಗಳಾಗಿದ್ದು ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿ ಕಟ್ಟಿದವುಗಳಾಗಿವೆ. ಒಂದೊಂದು ಕಲ್ಲೂ ಸುಮಾರು ಎರಡೂವರೆ ಟನ್ನು ಭಾರವಾಗಿದ್ದು ಗೀಝಾ ಎಂಬಲ್ಲಿ ಕಟ್ಟಿದ ಪಿರಮಿಡ್ಡು ಅತೀ ದೊಡ್ಡ ಪಿರಮಿಡ್, ಆಗಿರುತ್ತದೆ. ಪ್ರಥಮ ರಾಜ ಮನೆತನದ ಕಾಲದ ಅಂದರೆ ಸುಮಾರು ಕ್ರಿ. ಪೂ. ೩,೦೦೦ ವರುಷಗಳಷ್ಟು ಹಿಂದೆಯೇ ನಾರ್ಮೆರ್ ಎಂಬ ಅರಸನಿಂದ ಚಿತ್ರಿಸಲ್ಪಟ್ಟ ಕಲಾಕೃತಿಗಳು ಹೀರಾಕಾನ್ಪೊಲಿಸ್(Hieraconpolis) ಎಂಬ ದೇವಾಲಯಗಳಲ್ಲಿದ್ದು ಪ್ರಾಯಶಃ ಈ ಕಲಾಕೃತಿಗಳೇ ಈಜಿಪ್ಟಿನ ಪುರಾತನ ಕಲಾಕೃತಿಗಳಾಗಿರುತ್ತವೆ. ಅರಸನ ವಿಜಯೋತ್ಸವಗಳನ್ನು ಪ್ರತಿಬಿಂಬಿಸುವ ಈ ಕೆತ್ತನೆಯ ಉಬ್ಬು ಚಿತ್ರಗಳು ಅತ್ಯುತ್ತಮ ಕಲಾಕೃತಿಗಳಾಗಿವೆ. ಈ ಕಾಲದಲ್ಲಿ ಈಜಿಪ್ಟ್ ಕಲಾವಿದರಿಗೆ ಯಥಾದರ್ಶನ (Perspective)ವಿಧಾನವು ತಿಳಿದಿರಲಿಲ್ಲವಾದ ಕಾರಣ ಈ ಕಾಲದ ಕಲಾಕೃತಿಗಳು ಸಾಂಪ್ರದಾಯಿಕವಾಗಿರುತ್ತವೆ. ಮೂರನೆಯ ಅರಸು ಮನೆತನದ ಕಾಲದಲ್ಲಿ ಮಣ್ಣಿನ ಇಟ್ಟಿಗೆಗಳ ಬದಲಾಗಿ ಕಲ್ಲುಗಳನ್ನು ಬಳಸಿ ಸಮಾಧಿಯ ಕಟ್ಟಡಗಳನ್ನು ಕಟ್ಟಲಾಯಿತು. (ಕ್ರಿ. ಪೂ. ೨,೮೦೦) ಜೇಸರ್(Djeser)ದ ಸ್ಟೆಪ್ ಪಿರಮಿಡ್ ಈ ಕಾಲದ ಅತ್ಯುತ್ತಮ ಉದಾಹರಣೆಯಾಗಿದೆ. ಮುಂದೆ ನಾಲ್ಕನೆಯ ಅರಸುಮನೆತನದ ಕಾಲದಲ್ಲಿ ವಾಸ್ತುಶಿಲ್ಪ, ಪ್ರತಿಮೆಗಳು ಮತ್ತು ವರ್ಣರಂಜಿತ ಉಬ್ಬುಚಿತ್ರಗಳೇ ಮುಂತಾದ ಕಲಾಪ್ರಕಾರಗಳು ಪ್ರಬುದ್ಧಮಾನವಾಗಿ ಅಭಿವೃದ್ಧಿಗೊಂಡವಲ್ಲದೇ ಮುಂದಿನ ಪೀಳಿಗೆಯ ಕಲಾವಿದರಿಗೆ ಸ್ಫೂರ್ತಿದಾಯಕವಾದವು. ಆರನೆಯ ಅರಸು ಮನೆತನದ ಕಾಲದಲ್ಲಿ ಅರಾಜಕತೆಯುಂಟಾಗಿ (ಕ್ರಿ.ಪೂ.೨೨೫೦) ಕ್ರಿ.ಪೂ.೨೧೫೦ರಲ್ಲಿ ಬೆಳವಣಿಗೆಯಾದ ಕಲಾಕೃತಿಗಳು ವಿಭಿನ್ನ ರೀತಿಯಲ್ಲಿ ವೃದ್ಧಿಗೊಂಡವು. ಇಪ್ಪತ್ತನೆಯ ಅರಸುಮನೆತನದ ಕಾಲದವರೆಗೂ ಅಂದರೆ. ಕ್ರಿ. ಪೂ. ೧೦೫೦ರವರೆಗೆ ಅನೂಚಾನವಾಗಿ ಪ್ರವರ್ಧಮಾನರೂಪದಲ್ಲಿ ಬೆಳೆದುಬಂದ ಈಜಿಪ್ಟ್

ಸಂಸ್ಕೃತಿಯು ಇಪ್ಪತ್ತನೆಯ ಅರಸು ಸಂತತಿಯ ವಿನಾಶದೊಂದಿಗೆ ಪರ್ಯವಸಾನಗೊಂಡಿತು. ಹೈರೋಗ್ಲಾಫಿಕ್ ಎಂದು ಕರೆಯಲ್ಪಡುವ ಲಿಪಿಯನ್ನು ಪರಿಶೋಧಿಸಿದ ಈ ಈಜಿಪ್ಷಿಯನ್ನರ ಪ್ರಮುಖ ಪಟ್ಟಣಗಳೆಂದರೆ ಮೆಂಫಿಸ್, ಥೀಬ್ಸ್, ಅಖೆಟೇಟನ್ ಮತ್ತು ಅಲೆಕ್ಸಾಂಡ್ರಿಯ ಮುಂತಾದವುಗಳು. ಕೊನೆಯಲ್ಲಿ ಕುಪೈಟ್ಸರು ಈಜಿಪ್ಷಿಯನ್ನರನ್ನು ಗೆದ್ದುಕೊಂಡರು.

ಎ. ಟಿ. ಕಾ.

## ಈಸಲ್ ಚಿತ್ರಗಳು (Easal Paintings)

ಈಸಲ್ಲಿನ ಆಧಾರದಿಂದ ಹಾಗೂ ಈಸಲ್ಲಿನ ಮೇಲೆ ಇರಿಸಲಿಕ್ಕಾಗಿಯೇ ಸೃಷ್ಟಿಸಲಾದ ಚಿತ್ರಗಳನ್ನು ಈಸಲ್ ಚಿತ್ರಗಳು ಎನ್ನಬಹುದು. ಈ ಕಲಾಪ್ರಕಾರದ ಚಿತ್ರಗಳು ೧೪ನೇ ಶತಮಾನದ ರೆನಾಯಸಾನ್ಸ್ ಕಾಲದ(ಯೂರೋಪಿನಲ್ಲಿ) ಸೃಷ್ಟಿಯಾದುದು. ೧೭ನೇ ಶತಮಾನದಲ್ಲಿ ಹಾಗೂ ನಂತರ ಫ್ರಾನ್ಸ್ ಹಾಗೂ ಹಾಲೆಂಡ್ ದೇಶಗಳಲ್ಲಿನ ಮಧ್ಯಮ ದರ್ಜೆಯ ಜನ(Middle class)ರು ಇಂತಹ ಚಿತ್ರಗಳನ್ನು ಹೆಚ್ಚು ಬೇಡತೊಡಗಿದರು. (ತಮ್ಮ ಮನೆಗಳಲ್ಲಿ ತೂಗಹಾಕಲಿಕ್ಕಾಗಿ. ಏಕೆಂದರೆ ಈಸಲ್ ಚಿತ್ರಗಳು ಸೃಷ್ಟಿಗೊಳ್ಳುವ ಮುನ್ನ ಭಿತ್ತಿಚಿತ್ರ ಪ್ರಕಾರವಿದ್ದು ಇಂತಹ ಭಿತ್ತಿಚಿತ್ರಗಳು ಚರ್ಚ್‌ಗಳು ಹಾಗೂ ಇತರ ಪ್ರಮುಖ ಕಟ್ಟಡಗಳ ಗೋಡೆಗಳ ಮೇಲೆ Permanent ಆಗಿ ಸೃಷ್ಟಿಗೊಂಡು, ಅಂತಹುವುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸ್ಥಳಾಂತರಿಸಲಾಗುತ್ತಿರಲಿಲ್ಲ. ಆದರೆ ಈಸಲ್ ಚಿತ್ರಗಳನ್ನು ಹಾಗೆ



ಸ್ಥಳಾಂತರಿಸಬಹುದಾಗಿತ್ತು. ಆದ್ದರಿಂದಲೇ ಮಧ್ಯಮ ವರ್ಗದ ಜನರು ಮಧ್ಯಮ ಹಾಗೂ ಚಿಕ್ಕಪುಟ್ಟ ಅಳತೆಯ ಚಿತ್ರಗಳನ್ನೇ ಬೇಡತೊಡಗಿದ್ದು (ಇದಕ್ಕೆ ತದ್ವಿರುದ್ಧವಾಗಿ ಮ್ಯೂರಲ್ (ಭಿತ್ತಿಚಿತ್ರಗಳು) ಬೃಹತ್ ಅಳತೆಯದಾಗಿರುತ್ತಿದ್ದವು).

ಈಸಲ್: ಈಸಲ್ ಸಹ ಕಾಲಾನುಕ್ರಮವಾಗಿ ರೂಪ ಬದಲಿಸಿಕೊಂಡೇ ಬಂದಿದೆ. ಇಂದಿನ ಈಸಲ್‌ಗಳು ಹೆಚ್ಚು ಸಂಕೀರ್ಣವಾಗಿದ್ದಾಗ್ಯೂ ಮುಂಚಿನವು, ಹಾಗೂ ಇಂದೂ ಹೆಚ್ಚಾಗಿ ಕಂಡುಬರುವ ರೂಪವೆಂದರೆ.

ಅದಕ್ಕೆ ಮೂರು ಮರದ ಅಗಲ ಕಾಲುಗಳಿರುತ್ತವೆ. ಮುಂದೆ ಎರಡು ಕಾಲುಗಳಿದ್ದು, ಕ್ಯಾನ್ವಾಸನ್ನೂ ಯಾವ ಎತ್ತರಕ್ಕೆ ಬೇಕಾದರೂ ಇರಿಸಿಕೊಳ್ಳುವ ಸಲುವಾಗಿ ಎರಡೂ ಬದಿಯಲ್ಲಿ, ಒಂದೇ ಅಳತೆಯ ರಂಧ್ರಗಳಿರುತ್ತವೆ. ಹಿಂದಿನ ಕಾಲನ್ನು ಬೇಕಾದ ಕೋನಕ್ಕೆ (Angle) ಹೊಂದಿಸಿಕೊಳ್ಳುವ ಸಲುವಾಗಿ ಮಡಿಚಬಲ್ಲುದಾಗಿರುತ್ತದೆ. ಇಂತಹ ಈಸಲ್‌ನ ಚಿತ್ರ ರೆಂಬ್ರಾಂಟನ An Artist in the Studio (1628) ಎಂಬ ಕೃತಿಯಲ್ಲಿ ಮತ್ತು ವಿಲಿಯಂ ಹೊಗಾರ್ತನ(William Hogarth) ಒಂದು ಸ್ವಭಾವ ಚಿತ್ರದಲ್ಲಿ ಕಾಣಬರುತ್ತದೆ.

ಇಂದು ಭಾರತ ಹಾಗೂ ಕರ್ನಾಟಕದ ಹೆಚ್ಚಿನ ಗ್ಯಾಲರಿಗಳಲ್ಲಿ ಕಂಡುಬರುವ ಮುಖ್ಯ ಚಿತ್ರಪ್ರಕಾರ. ಈಸಲ್ ಚಿತ್ರಗಳು: ವಾಸುದೇವ್, ಯೂಸಫ್, ಅರಕ್ಕಾಲ್, ಕ್ಯಾನ್ವಾಸ್‌ಗಳನ್ನು ಕೆ.ಜಿ.ಸುಬ್ರಹ್ಮಣ್ಯನ್‌ರ ಆಕ್ರಿಲಿಕ್ ಬೋರ್ಡಿನ ಚಿತ್ರಗಳನ್ನು ಈಸಲ್ ಚಿತ್ರಗಳೆಂದೇ ಕರೆಯಬಹುದು.

**ಎಚ್. ಎ. ಅ.**

## ಉದಯಪುರ

ಭೀಲಾಯಿಯಿಂದ ೨೦ ಮೈಲಿಗೂ ಹೆಚ್ಚು ದೂರದಲ್ಲಿರುವ ಪ್ರಸಿದ್ಧ ಸ್ಥಳ. ಇಲ್ಲಿನ ಉದಯೇಶ್ವರ ದೇವಾಲಯವನ್ನು ಕ್ರಿ.ಶ. ೧೦೫೯-೮೦ರಲ್ಲಿ ಆಳಿದ ಪರಯರ ರಾಜ ಉದಯಾದಿತ್ಯನು ಕಟ್ಟಿಸಿದ. ಅವನಿಗೆ ಮೊದಲಿದ್ದ ಭೋಜ, ಒಬ್ಬ ಮಹಾನ್ ಕಲಾವಿದ ಹಾಗೂ ತಾಂತ್ರಿಕ ಶಿಲ್ಪಿ. 'ಭೋಜಸಾಗರ'ವೆಂಬ ಜಲಾಶಯವನ್ನು ಕಟ್ಟಿಸಿದ. ಉದಯಾದಿತ್ಯನೂ "ಉದಯ ಸಮುದ್ರ"ವೆಂಬ ದೊಡ್ಡ ಕೆರೆಯೊಂದನ್ನು ಕಟ್ಟಿಸಿದ.

ಉದಯೇಶ್ವರ ದೇವಾಲಯ,ವಿಸ್ತಾರವಾದದ್ದು. ಚಚ್ಚೌಕನಾದ ಮುಂಚಾಚುಗಳು, ಸುತ್ತ ಹಜಾರ, ಮೊಗಸಾಲೆಗಳಿವೆ. ಒಂದು ನಡುವಣ ಅಂಗಳ, ಕಂಬಸಾಲಿನ ಕೈಸಾಲೆ, ಉದ್ದವಾದ ಪ್ರಾಂಗಣವಿದೆ. ಪ್ರವೇಶ ದ್ವಾರಕ್ಕೆ ಮೆಟ್ಟಿಲೇರಿ ಮುನ್ನಡೆಯಬೇಕು.

ಶಾತವಾಹನರ ಸ್ತೂಪ ನಿರ್ಮಿತಿ, ತೋರಣಶಿಲ್ಪ, ಶಿಲಾಕುಂಜನದ ಸಾಲು, ಎಲ್ಲವೂ ಅಂದವಾಗಿದೆ. ಇಲ್ಲಿಸ್ತೂಪ ನಿರ್ಮಾಣದ ವೈವಿಧ್ಯ, ವೈಶಿಷ್ಟ್ಯವನ್ನೂ ಗಮನಿಸಬಹುದು. ಉದಯಪುರದ ಅರಮನೆಗಳಲ್ಲಿ ಅನೇಕ ಹಳೆಯ ಚಿಕಣಿ ಚಿತ್ರಗಳನ್ನು ಕಾಣಬಹುದು. ಅದೇ ಶೈಲಿಯ ಚಿತ್ರಗಳನ್ನು ವಿಸ್ತಾರವಾಗಿ ಭಿತ್ತಿಯಲ್ಲಿ ಚಿತ್ರಿಸಿರುವುದೂ ಉಂಟು.

**ನಿಕ್ಕಾ**

## ಉದ್ಧರಣೆ ಚಿತ್ರಪಟಗಳು (ಹ.ಪ್ರ)



ಉದ್ಧರಣೆ ಚಿತ್ರಪಟಲಗಳು ವೀರಶೈವ ಹಸ್ತಪ್ರತಿಗಳ ಒಂದು ಮಹತ್ವದ ಭಾಗವಾಗಿವೆ. ವೀರಶೈವ ತಾತ್ವಿಕ ಹಿನ್ನೆಲೆಯಲ್ಲಿ ಸಾಧಕನೂ ಕಲಾವಿದನೂ ಆಗಿರುವ ವ್ಯಕ್ತಿಯು ಇಂಥ ಚಿತ್ರರಚನೆಗಳನ್ನು ಮಾಡಿರಬೇಕು. ಇಲ್ಲವೆ, ನುರಿತ ಸಾಧಕನೊಬ್ಬನ ಮಾರ್ಗದರ್ಶನದಲ್ಲಿ ಸಮರ್ಥ ಚಿತ್ರಕಾರನೊಬ್ಬನು ಬಿಡಿಸಿರ ಬಹುದಾಗಿದೆ. ಉದ್ಧರಣೆ ಚಿತ್ರಗಳನ್ನು ಉದ್ಧರಣೆ ಪಟಲಗಳೆಂದೂ ಕರೆಯುತ್ತಾರೆ. ಹದಿನೈದನೆಯ ಶತಮಾನದಿಂದ ಈಚೆಗೆ ಇಂಥ ರಚನೆಗಳು ಬೆಳೆದು ಬಂದಿವೆ ಎಂಬುದು ತಿಳಿದು ಬರುತ್ತದೆ.

ಉದ್ಧರಣೆಗಳಲ್ಲಿ ಚಕ್ರಗಳು, ಮಂಡಲಗಳು, ಪ್ರಾಣಿ ಮಾನವಾಕೃತಿಗಳು, ಅರ್ಧಮಾನವಾಕೃತಿಗಳು, ಒಂದೇ ಪ್ರಾಣಿಗೆ ಭಿನ್ನ ಭಿನ್ನ ಪ್ರಾಣಿಗಳ ಅಂಗಾಂಗಗಳನ್ನು ಸಾಂಕೇತಿಕವಾಗಿ ಚಿತ್ರಿಸಿರುತ್ತಾರೆ. ಇದು ತಾಂತ್ರಿಕ ಕಲೆಗೆ ಸಮೀಪವೆನಿಸುವ ಅರ್ಥ ಪೂರ್ಣವಾದ ಸಾಂಕೇತಿಕ ಚಿತ್ರರಚನೆಗಳಾಗಿದ್ದು ಇಲ್ಲಿನ ಆಕೃತಿಗಳ ಒಂದೊಂದು ಅಂಶ. ಪಶು, ಪ್ರಾಣಿ, ಆಯುಧ, ಆಭರಣಾದಿ ಅಲಂಕಾರಗಳೆಲ್ಲವಕ್ಕೂ ಆಧ್ಯಾತ್ಮಿಕವಾದ ವಿವರಣೆ ಇರುತ್ತದೆ. ಲಿಂಗೋದ್ಧಾರಣೆ, ವೃಷಭೋದ್ಧರಣೆ, ಜಂಗಮೋದ್ಧರಣೆ, ಊರ್ಧ್ವ ಅದೋಕುಂಡಲಿನಿ ಉದ್ಧರಣೆ ಮುಂತಾಗಿ ವೈವಿಧ್ಯಪೂರ್ಣವಾದ ಚಿತ್ರರಚನೆಗಳನ್ನು ಕಾಣಬಹುದು. ಇಂಥ ಚಿತ್ರಗಳನ್ನು ತಾಳೆಗರಿಗಳ ಮೇಲೆ ಗೀರಿಯೂ, ಕಾಗದಗಳ ಮೇಲೆ ಕುಂಚ ಇಲ್ಲವೆ ಲೆಕ್ಕಣಿಕೆಯಿಂದಲೂ ರಚಿಸಿದ್ದು ಕಂಡು ಬರುತ್ತದೆ.

ಈ ಚಿತ್ರಗಳನ್ನು ಉದ್ದೇಶ ಹಾಗೂ ರಚನೆಯ ದೃಷ್ಟಿಯಿಂದ ತಿಬೇಟಿನ ಬೌದ್ಧ 'ಠಂಕಾ' ಚಿತ್ರಗಳಿಗೆ ಹೋಲಿಸಬಹುದಾಗಿದೆ. ಉದ್ಧರಣೆ ಚಿತ್ರಪಟಗಳು ಚಿತ್ರಕಲೆ, ಕಲಾಸಾಂಪ್ರದಾಯ, ಕಲಾಶೈಲಿಗಳ ಅಧ್ಯಯನದ ದೃಷ್ಟಿಯಿಂದ ಮಹತ್ವದವಾಗಿದ್ದು ಭಾರತೀಯ ಅದರಲ್ಲೂ ಕರ್ನಾಟಕದ ಅಪೂರ್ವ ಕಲಾವಸ್ತುಗಳೆನಿಸಿವೆ.

ಬಿ. ಕೆ. ಹಿ.

## ಉಪಪೀಠ ಮತ್ತು ಅಧಿಷ್ಠಾನ

ಉಪಪೀಠವೆಂದರೆ ಕೆಳಗಿನ ಆಸನ. ಅಧಿಷ್ಠಾನವೆಂದರೆ (ಪೀಠದ) ಮೇಲೆ ನಿಂತಿರುವುದು,

ಎರಡೂ ಸಹ ಒಂದೇ ವಿಧವಾದ ಆಕೃತಿಯನ್ನು ಹೊಂದಿದ್ದು ಕೆಲವು ಆಕೃತಿ ಭೇದಗಳನ್ನು ಹೊಂದಿರುತ್ತವೆ. ಉಪ ಪೀಠವು ಸ್ತಂಭಗಳಿಗೆ ಅರ್ಧ ಸ್ತಂಬಗಳಿಗೇ ಅಲ್ಲದೆ ಬಿಡಿಯಾಗಿ ಅಧಿಷ್ಠಾನದ ಜೊತೆಗೂಡಿ ದೇವಾಲಯ ಕುಡ್ಯಗಳ ಕೆಳಗೆ ವಿಗ್ರಹಗಳ ತಳಗೆ ಅನೇಕ ರೀತಿಯಲ್ಲಿ ಬಳಕೆಯಾಗಿರುತ್ತದೆ.

ಉಪಪೀಠದಲ್ಲಿ ಮತ್ತು ಅಧಿಷ್ಠಾನದಲ್ಲಿ ಬಳಸಲಾದ ಅಂಗಗಳಿಗೆ ಕೆಲವು ಹೆಸರುಗಳು ಇರುತ್ತವೆ. ಅವು ೧) ಅಪಾನ ೨)ಕಂಪ, ೩) ಗಳ, ಗ್ರೀವ, ಕಂದರ, ೪) ಉತ್ತರ, ೫)ವಾಜನ, ೬)ಪ್ರತಿವಾಜನ, ೭) ಪಟ್ಟಿಕಾ ೮) ಲಿಂಗ, ೯) ಅಂತರಿತ ಎಂಬವು. ಸಾಧಾರಣವಾಗಿ ಇವುಗಳೆಲ್ಲವೂ ಚತುರ್ಭುಜಕಾರವಾಗಿರುತ್ತವೆ. ೧೦)ಕುಮುದ ೧೧) ಪದ್ಮ ೧೨) ಕಪೋತ ಮೊದಲಾದವು ವೃತ್ತಾಕಾರವಾಗಿರುತ್ತವೆ. ಈ ಆಕೃತಿಗಳಲ್ಲೆವನ್ನೂ ಉಪಪೀಠ, ಅಧಿಷ್ಠಾನಗಳಿಗೆ ಹೊಂದಿಕೊಂಡಂತೆ ಮಾಡಲಾಗುತ್ತದೆ.

**ದೇಶೂರ**

## ಉಳಿ (Chisel)

ಲೋಹದ ಅಲಗಿನ ಹರಿತವಾದ ಅಂಚಿನಿಂದ ಕತ್ತರಿಸಲು, ಕೆತ್ತಲು ಬಳಕೆಯಾಗುವ ಉಪಕರಣ. ಸಾಮಾನ್ಯವಾಗಿ ಇದು ಉಕ್ಕಿನ ಅಲಗನ್ನು ಮತ್ತು ಕಟ್ಟಿಗೆಯ ಹಿಡಿಕೆಯನ್ನು ಹೊಂದಿರುತ್ತದೆ. ಹಿಡಿಕೆಯ ಮೇಲೆ ಸುತ್ತಿಗೆಯಿಂದ ಹೊಡೆತ ಹಾಕಿ ಘನವಸ್ತುಗಳಾದ ಕಟ್ಟಿಗೆ, ಕಲ್ಲು, ಲೋಹಗಳನ್ನು ಕತ್ತರಿಸುತ್ತಾರೆ, ತಿದ್ದುತ್ತಾರೆ, ತೀಡುತ್ತಾರೆ.

ಕ್ರಿ. ಪೂ. ೮೦೦೦ ವರ್ಷಗಳಷ್ಟು ಹಿಂದೆಯೇ ಉಳಿಯ ಬಳಕೆ ಇದ್ದುದು ತಿಳಿಯುತ್ತದೆ. ಈಜಿಪ್ತದವರು ಮೊದಲು ತಾಮ್ರದ ಉಳಿಗಳನ್ನು, ನಂತರ ಕಂಚಿನ ಉಳಿಗಳನ್ನು ಕಟ್ಟಿಗೆ ಮತ್ತು ಮೆದುವಾದ ಕಲ್ಲನ್ನು ಕೆತ್ತಲು ಬಳಸಿದರು. ಇಂದಿನ ಉಳಿಗಳು ಉಕ್ಕಿನವುಗಳು. ಇವು ಅನೇಕ ಅಳತೆಗಳಲ್ಲಿ ಲಭ್ಯವಿವೆ. ಇವುಗಳ ಕಾಠಿಣ್ಯದ ಪ್ರಮಾಣದಲ್ಲಿ ಉಪಯೋಗಕ್ಕೆ ತಕ್ಕಂತೆ ಭಿನ್ನತೆ ಇರುವುದುಂಟು. ಇಚ್ಛಿತ ಪರಿಣಾಮ ಪಡೆಯಲು ಬಗೆಬಗೆಯ ಉಳಿಗಳನ್ನು ಬಳಸಲಾಗುತ್ತದೆ.

**ಶಿ. ಪ.**

## ಉಳಿ (ಬುಶ್ ಆಧಾರದ) (Bush Chisel)

ಇದೊಂದು ವಿಶಿಷ್ಟ ಬಗೆಯ ಉಳಿ. ಕಲ್ಲನ್ನು ಕಡಿಯುವುದಕ್ಕಿಂತ ಅದರ ಮೇಲ್ಮೈಯ ಮೇಲೆ ಪೆಟ್ಟು ಹಾಕಲು ಇದನ್ನು ಉಪಯೋಗಿಸುತ್ತಾರೆ. ಉಳಿಯ ಮುಖದಲ್ಲಿ ಚೂಪಾದ ಹಲ್ಲುಗಳ ಸಾಲುಗಳಿರುತ್ತವೆ ಮತ್ತು ಇವು ಉಳಿಯ ಹಿಡಿಕೆಗೆ ಲಂಬವಾಗಿರುತ್ತವೆ.

**ಶಿ. ಪ.**

## ಎಕ್ಸ್‌ಪ್ರೆಷನಿಸಮ್

ಎಕ್ಸ್‌ಪ್ರೆಸ್ ಎಂದರೆ ವ್ಯಕ್ತಪಡಿಸುವುದು ಎಂದು ಅರ್ಥ. ಈ ಪಂಥದ ತತ್ವನಿಷ್ಠೆ ಕಲೆಯಲ್ಲಿ ಕಲಾವಿದನ ಒಂದು ಅಂಶವೂ ವ್ಯಕ್ತವಾಗಬೇಕು. ಅದರಲ್ಲಿ ಅವನ ಮನಸ್ಸಿನ ಆಳದಿಂದ ಬರುವ ಗಾಢವಾದ ಭಾವಗಳು ಬಿಂಬಿತವಾಗಬೇಕು. ಆದುದರಿಂದ ಇದು ಭಾವಪ್ರಧಾನವಾದ ಪಂಥ. ಇಲ್ಲಿ ವಸ್ತುವೂ ನಿಮಿತ್ತ. ಭಾವ ತರಂಗಗಳು ಪ್ರಧಾನ. ನೋಡುವವರ ಮನಸ್ಸಿನ ಮೇಲೆ ಪರಿಣಾಮ ಉಂಟಾಗಬೇಕು. ಇಲ್ಲಿ ಶೈಲಿ ಸರಳವಾದುದು. ಆದರೆ ವರ್ಣಲೇಪನ ಭಾವತರಂಗಗಳನ್ನು ಎತ್ತಿ ತೋರುತ್ತದೆ. ಈ ಪಂಥ ಬಹುವಾಗಿ ಉತ್ತರ ಯೂರೋಪ್ ಅದರಲ್ಲಿಯೂ ಜರ್ಮನಿಯಲ್ಲಿ ಜನಪ್ರಿಯವಾಗಿ ಪ್ರಚಾರದಲ್ಲಿತ್ತು.



ಎರ್ನ್‌ಸ್ಟ್ ಕೀರ್ಶ್‌ನರ್

ಎಕ್ಸ್‌ಪ್ರೆಸನಿಸಂ ಪಂಥವು ೧೯೦೫ರಲ್ಲಿ ಜರ್ಮನಿಯಲ್ಲಿ ಸ್ಥಾಪಿತವಾಗಿ, ಅದನ್ನು 'ದಿ ಬ್ರಿಡ್ಸ್' ಎಂದು ಕರೆದರು. ಆ ಪಂಥವು ಕ್ರಮೇಣ ಅಮೆರಿಕಾ ಬ್ರಿಟನ್‌ಗಳಿಗೂ ಹಬ್ಬಿತು. ಅದು ಚಿತ್ರಕಲೆಗೆ ಮಾತ್ರ ಸೀಮಿತವಾಗಲಿಲ್ಲ. ಸಂಗೀತ ನಾಟಕಾದಿ ಇತರ ಕ್ಷೇತ್ರಗಳಿಗೂ ವ್ಯಾಪಿಸಿತು. ಈ ಅಭಿವ್ಯಕ್ತಿವಾದವನ್ನು ಎತ್ತಿಹಿಡಿದ ಮೊದಲಿಗರಲ್ಲಿ ಬೆನೆಡಿಲೊ ಕ್ರೋಚ್ ಎಂಬುವನು ಪ್ರಮುಖನು. ಈ ಅಭಿವ್ಯಕ್ತಿ ಪ್ರವೃತ್ತಿಯು ಪ್ಯಾರಿಸ್, ಕ್ರೆಸ್ಡನ್ ಮೊದಲಾದ ನಗರಗಳಲ್ಲೂ ಕಾಣಿಸಿಕೊಂಡಿತ್ತು. ಆದರೆ ಅದು ಕಳೆದುದು ಜರ್ಮನಿಯಲ್ಲಿ. ಮಹಾಯುದ್ಧದ ಸೋಲು,

ಹಣದುಬ್ಬರ ರಾಜಕೀಯ ಕ್ಷೋಬೆಗಳ ದೆಸೆಯಿಂದ ಅಲ್ಲಿ ಅಶಾಂತಿ ಹೆಚ್ಚಿತ್ತು. ಅವರ ಮನಸ್ಸಿನ ಕ್ಷೋಬೆಯು ಈ ಕಲಾ ಚಳವಳಿಯಲ್ಲಿ ಪ್ರತಿಬಿಂಬಿಸಿದೆ ಎನ್ನುತ್ತಾರೆ. ಈ ಅಭಿವ್ಯಕ್ತಿ ಕಲೆಗಾರರ ಮೇಲೆ ವಾನ್‌ಗಾಗ್ ಮತ್ತು ಗೌಗಿನ್‌ರ ಪ್ರಭಾವಗಳು ಕಂಡು ಬರುತ್ತವೆ.

ಆರ್ನೆಸ್ಟ್, ಎರಿಕ್ ಹೆಕಲ್, ಎಮಿಲ್‌ನೊವಾ, ಲಡ್‌ವಿಗ್ ಕ್ರಿಶನರ್, ಕೊಕೊಶ್‌ಬ್ಕಾ, ಫ್ರಾಂಕ್‌ಮಾರ್ಕ್, ಎಡ್ವರ್ಡ್ ಮಂಕ್, ಸೂಜಿನ್ ಮೊದಲಾದವರು ಈ ಪಂಥದ ಕಲಾವಿದರಲ್ಲಿ ಪ್ರಮುಖರು. ಅವರಲ್ಲಿ ಹೆಚ್ಚಿನವರು ಜ್ಞಾನ ಪ್ರೇಮಿಗಳು ಮತ್ತು ಪಾರಮಾರ್ಥಿಕ ತತ್ವಜ್ಞಾನವನ್ನು ಅಭ್ಯಸಿಸಿದರು. ರೂವಾ ಎಂಬ ಅಭಿವ್ಯಕ್ತಿವಾದಿ ಕಲಾವಿದನು ತನ್ನ ಕೃತಿಗಳಲ್ಲಿ ದಪ್ಪನಾದ ಗೆರೆಗಳನ್ನು ವಿಶೇಷ ವಿಷಯ ವರ್ಣಗಳನ್ನು ಬಳಸಿದ. ಈ ಶತಮಾನದ ಆರಂಭದಲ್ಲಿ ಅಭಿವ್ಯಕ್ತಿ ಪಂಥದ ಸ್ಫೂರ್ತಿಗೆ ಕಾರಣರಾದವರಲ್ಲಿ ಪ್ರಮುಖ ಕಲಾವಿದನೆಂದರೆ ಎಡ್ವರ್ಡ್ ಮುಂಕನು. ಆತನ 'ಚಿತ್ಕಾರ' ಎಂಬ ಕೃತಿಯು ಬಸ್ಲೊ ನಗರದ ಕಲಾಸಂಗ್ರಹಾಲಯದಲ್ಲಿದೆ. ಅದು ಒಬ್ಬ ವ್ಯಕ್ತಿಯು ಭಯಭೀತಿಯಿಂದ ಕಿರುಚುವ ಚಿತ್ರ. ಅದರಲ್ಲಿ ಆತನು ಕೆನ್ನೆಗಳಿಗೆ ಕೈಯೊತ್ತಿ ಬೊಬ್ಬಿಡುವಂತಿದೆ. ಉಜ್ವಲ ವರ್ಣ ಪ್ರವಾಹಗಳು ಭಯಭೀತಿಗಳನ್ನೂ ತಲಮಳವನ್ನೂ ಕಾಣಬಹುದು. ಜರ್ಮನಿಯ ಕಲಾವಿದರು ಆತನ ಕೃತಿಗಳಿಂದ ಪ್ರಭಾವಿತರಾದರು.

ಆಸ್ಕರ್ ಕೊಕೊಶ್‌ಸ್ಕಾನು ತನ್ನ ಆಂತರಿಕ ಅನುಭವಗಳನ್ನು ಚಿತ್ರಗಳಲ್ಲಿ ಪ್ರತಿಬಿಂಬಿಸಲು ವಾನ್‌ಗಾಗ್‌ನಂತೆ ಹೋರಾಡಿದ ಆತನಂತೆ ಈತ ಕೂಡ ತನ್ನ ಕೃತಿಗಳಲ್ಲಿ ಕುಂಚಗಳ ಎಳೆತಗಳನ್ನು ತಿರುಚುತ್ತಿದ್ದ. ಸೂಜಿನನು ಫ್ರೆಂಚ್ ಕಲಾವಿದ. ಆಕೃತಿಗಳನ್ನು ಗುರುತಿಸಿಕೊಳ್ಳದೆ ಅಭಿವ್ಯಕ್ತಿಗಾಗಿ ಬಣ್ಣಗಳನ್ನು ನೇರವಾಗಿ ಹಚ್ಚುತ್ತಿದ್ದ. ಆಕಾರಗಳು ವಿಕಾರವಾಗಿ ಕಾಣುತ್ತಿದ್ದವು. ಆದರೆ ಅವು ಭಾವಾಭಿವ್ಯಕ್ತಿಗೆ ಪೂರಕಗಳಾಗಿದ್ದವು. ೧೯೩೦ರಲ್ಲಿ ಜರ್ಮನಿಯಲ್ಲಿ ಅಭಿವ್ಯಕ್ತಿವಾದದ ಅವನತಿಯು ಪ್ರಾರಂಭವಾಯಿತು.

ಭಾರತದಲ್ಲಿ ಕವಿ ರವೀಂದ್ರನಾಥ ಠಾಗೂರ್ ಅಮೃತಾಶೇರ್‌ಗಿಲ್, ರಾಮಕಿಂಕರ್ ಬೈಜ್, ರಾಮಕುಮಾರ್, ಸತೀಶ್‌ಗುಜ್ರಾಲ್, ಫ್ರಾನ್ಸಿಸ್ ನ್ಯೂಟನ್ ಸೌಜಾ, ಕೆ.ಸಿ.ಎಸ್. ಪಣಿಕ್ಕರ್, ಕೆ. ಕೆ. ಹೆಬ್ಬಾರ್, ಎಂ. ಎಫ್. ಹುಸೇನ್ ಮುಂತಾದವರು ಎಕ್ಸ್‌ಪ್ರೆಸ್‌ನಿಸಂ ಶೈಲಿಯಲ್ಲಿ ಕೃತಿಗಳನ್ನು ರಚಿಸಿದ್ದಾರೆ.

ಮರಿ

## ಎಕ್ಸ್‌ಪ್ರೆಷನಿಸಂ ಅಮೂರ್ತ (Abstract Expressionism)

ಇದು ೧೯೪೦ರ ದಶಕದ ಮಧ್ಯದ ಅವಧಿಯಲ್ಲಿ ರೂಪುಗೊಂಡ ಒಂದು ಕಲಾ ಚಳುವಳಿಯಾಗಿದ್ದು ಅಮೂರ್ತಕಲೆ ಮತ್ತು ಅಭಿವ್ಯಕ್ತಿವಾದದ ಸಮನ್ವಯವಾಗಿದೆ. ಸಾಂಪ್ರದಾಯಿಕತೆಯಲ್ಲಿ ಕಳೆದುಕೊಂಡ ನಂಬಿಕೆ, ವ್ಯಕ್ತಿ ಪ್ರಜ್ಞೆಯನ್ನು ಉಳಿಸಿಕೊಳ್ಳುವ ಹೋರಾಟ, ಯುದ್ಧಾನಂತರದ ಹತಾಶೆ- ಈ ಹಿನ್ನೆಲೆಯಲ್ಲಿ ನ್ಯೂಯಾರ್ಕ ಸ್ಕೂಲಿನ ಯುವ ಕಲಾವಿದರು ಸಮಕಾಲೀನ ಬದ್ಧತೆಯನ್ನು ಒಳಗೊಂಡ ಅಮೂರ್ತ ಕಲೆಗೆ ಮೊರೆ ಹೊಕ್ಕರು. ಇದರ ಹಿಂದೆ ಯುರೋಪಿನ ನವ್ಯ ಸಂಪ್ರದಾಯವನ್ನು ವಿರೋಧಿಸಿ ಅದಕ್ಕೆ ಸಮನಾದ ರಾಷ್ಟ್ರೀಯ ಸ್ವರೂಪದ ಕಲೆಯನ್ನು ರೂಪಿಸುವ ಉದ್ದೇಶವಿತ್ತು.

ಎರಡನೆಯ ಜಾಗತಿಕ ಯುದ್ಧದ ಅವಧಿಯಲ್ಲಿ ಗಡಿಪಾರಾಗಿ ನ್ಯೂಯಾರ್ಕನಲ್ಲಿ ವಾಸಿಸುತ್ತಿದ್ದ ಮಾಸೋನ್ ಮತ್ತು ಮಟ್ಟಾ ಈ ಕಲಾವಿದರು- ಕಲಾವಿದನ ಸುಪ್ತ ಪ್ರಜ್ಞೆಯಲ್ಲಿನ ಕಲ್ಪನೆಗಳ ಮುಕ್ತ ಅಭಿವ್ಯಕ್ತಿಗೆ 'ಸ್ವಯಂಚಾಲಿತ'(automatic) ತಂತ್ರದ ಮೂಲಕ ದಾರಿ ತೋರಿದರು. ಇವರು ಈ ಪಂಥದ ಪ್ರಮುಖ ಕಲಾವಿದ ಜಾಕ್ಸನ್ ಪೊಲೊಕ್‌ನ 'ಡ್ರಿಪ್' ಕಲಾಕೃತಿಗಳಿಂದ ತುಂಬಾ ಪ್ರಭಾವಿತರಾದವರು. ಕ್ರಮೇಣ ೧೯೪೭ರ ಹೊತ್ತಿಗೆ ಪೊಲೊಕ್ ಆಕೃತಿಗಳ ಬಳಕೆಯನ್ನು ಪೂರ್ಣವಾಗಿ ಕೈಬಿಟ್ಟನು. ನೆಲದ ಮೇಲೆ ಹರಡಿದ ದೊಡ್ಡ ಆಕಾರದ ಕ್ಯಾನ್ವಾಸಿನ ಮೇಲೆ ಬಣ್ಣಗಳನ್ನು ಸುರಿಸಿ ಕಲಾಕೃತಿ ರಚಿಸತೊಡಗಿದನು. ಇಂಥ ರಚನೆಗಳಲ್ಲಿ ಪೊಲೊಕ್ ತೋರುತ್ತಿದ್ದ ತೀವ್ರತೆ, ಸತ್ವ ಮತ್ತು ಸಮತೋಲನಗಳು, 'ಕಲಾಕೃತಿ ಎಂಬುದು ಕಲಾವಿದನ ಅನುಭೂತಿಯಷ್ಟೇ ಅಲ್ಲ ಅದು ಆ ಕಾಲದ ಒಂದು ಸಂಭವ' ಎಂಬುದಾಗಿ ಪುನಃ ಸೂತ್ರಿಸುವಷ್ಟು ಅಸಾಂಪ್ರದಾಯಿಕವಾಗಿದ್ದವು.

ಪೊಲೊಕ್ ಮೊದಲಾದ ಸಂಜ್ಞಾ(Gestural) ಕಲಾವಿದರಿಗೆ ಅಸ್ತಿತ್ವವಾದವು ಪ್ರಾಮಾಣ್ಯವಾಗಿ ನಿಂತಿದೆ. ಶೈಲಿಯ ದೃಷ್ಟಿಯಿಂದ 'ಆ್ಯಕ್ಷನ್ ಪೇಂಟಿಂಗ್' (ಪೊಲೊಕ್, ಡಿ. ಕೂನಿಂಗ್, ಮದರ ವೆಲ್, ಕ್ಲೈನ್) ಮತ್ತು 'ಕಲರ್ ಫೀಲ್ಡ ಪೇಂಟಿಂಗ್' (ರೋಥ್ಕೊ, ನ್ಯೂಮನ್, ಸ್ಟಿಲ್)ಗಳು ಅಮೂರ್ತ ಅಭಿವ್ಯಕ್ತಿವಾದಕ್ಕಿಂತ ಭಿನ್ನವಾದವುಗಳು.

ಶಂ. ಮೂ.



ಡಿ. ಕೂನಿಂಗ್

## ಎಕ್ಸ್‌ಪ್ರೆಷನಿಸಂ ನವ (Neo-Expressionism)

ಇದು ೧೯೭೦ರ ದಶಕದಲ್ಲಿ ಯುರೋಪ್ ಹಾಗೂ ಅಮೇರಿಕೆಗಳಲ್ಲಿ ಪ್ರಚಾರದಲ್ಲಿದ್ದ 'ಅಭಿವ್ಯಕ್ತಿವಾದ' ಪಂಥದ ಪುನರುಜ್ಜೀವನ ಎಂಬ ಅರ್ಥದಲ್ಲಿ ಬಳಸಲಾದ ಶಬ್ದ. ಈ ಪಂಥದವರು ಪರಿಸ್ಫುಟವಾದ, ಆವೇಶಪೂರ್ಣ ಹಾಗೂ ಲಾಕ್ಷಣಿಕ ಚಿತ್ರ ಬಿಡಿಸುವತ್ತ ಲಕ್ಷ್ಯವಹಿಸಿದರು. ಇದನ್ನು ಅಮೆರಿಕೆಯಲ್ಲಿ 'ಕೆಟ್ಟ ಚಿತ್ರಕಲೆ'(Bad Painting), ಇಟಲಿಯಲ್ಲಿ ಟ್ರಾನ್ಸ್‌ವಾನ್‌ಗಾರ್ಡಿಯಾ ಮತ್ತು ಜರ್ಮನಿಯಲ್ಲಿ ನ್ಯೂವೈಲ್ಡನೆಸ್(New wildness) ಎಂದು ಗುರುತಿಸಲಾಯಿತು. ಜರ್ಮನ್ನಿನ ಕೈಫರ್, ಬೇಸ್‌ಲಿಜ್ ಮತ್ತು ಫೆಟ್ಟಿಂಗ್, ಅಮೆರಿಕೆಯ ಜ್ಯೂಲಿಯನ್ ಶ್ನೆನಾಬಲ್ ಮತ್ತು ಇಟಲಿಯ ಚಿಯಾ ಹಾಗೂ ಕ್ಲೆಮೆಂಟ್ ಮುಂತಾದವರು ಈ ಪಂಥದ ಪ್ರಮುಖ ಕಲಾಕಾರರೆನಿಸಿರುವರು. ನವ ಅಭಿವ್ಯಕ್ತಿವಾದವು ಕಲಾಜಗತ್ತಿನ ವಿಶಿಷ್ಟ ಸಿದ್ಧಾಂತವೆನಿಸಿದೆ.

ಎಸ್. ಎಂ. ಮಿ.

## ಎಜೆಟಿಕ್ ಕಲೆ

ಸರಿಸುಮಾರು ೧೪ರಿಂದ ೧೬ನೇ ಶತಮಾನದಲ್ಲಿ, ಈಗಿನ ಮೆಕ್ಸಿಕೋ ಪಟ್ಟಣದ ಸುತ್ತ ಮುತ್ತಲ ಪ್ರದೇಶಗಳಲ್ಲಿ ಪ್ರವರ್ಧಮಾನಕ್ಕೆ ಬಂದ ಎಜೆಟಿಕ್ ಜನಾಂಗದವರ ಕಲೆ ಇದು. ಈ ಬಗೆಯ ಕಲೆಯು ಮುಖ್ಯವಾಗಿ ಶಿಲ್ಪಕಲೆ ಹಾಗೂ ಮಣ್ಣಿನ ಪಾತ್ರೆಗಳಲ್ಲಿರುವುದರಿಂದಾಗಿ, ಈಗ ಉಳಿದುಕೊಂಡಿರುವುದು ಕೆಲವು ಚಿತ್ರಗಳು ಮಾತ್ರ ಇದರಲ್ಲಿ ಹೆಚ್ಚಿನ ಚಿತ್ರಗಳು ಎಜೆಟಿಕ್ ಜನಾಂಗದ ಮತ-ಧರ್ಮದ ಒಳಾರ್ಥವನ್ನು ಸೂಚಿಸುವ ಸಾಂಕೇತಿಕ ರೀತಿಯಲ್ಲಿವೆ. ವಿವಿಕ್ತ ಶೈಲಿಯ ಈ ಶಿಲ್ಪಗಳಲ್ಲಿ ಹೆಚ್ಚಿನವು ಸೂರ್ಯದೇವನ ಆರಾಧನೆಗೆ ಸಂಬಂಧಿಸಿ ಇವೆ; ಮತ್ತು ಇವು ಅಭಿವ್ಯಕ್ತಿಸುವ ಭಾವ ಗುಹ್ಯವಾಗಿದ್ದು, ಯಾವುದೇ ಏಕವ್ಯಕ್ತಿ ಸ್ವರೂಪವಲ್ಲದವುಗಳು ಹಾಗೂ ತೋರಿಕೆಗೆ ಒಂದು ಸಾಮೂಹಿಕ ಅಭಿಪ್ರಾಯವನ್ನು ಬಿಂಬಿಸುವಂತಿವೆ. ಹೀಗೆ ಸಾಂಕೇತಿಕವಾಗಿ ಭಾವವನ್ನು ವ್ಯಕ್ತಪಡಿಸುವ ಈ ಶಿಲ್ಪಕಲೆಯಲ್ಲಿ ವಿಶೇಷತಃ ಪ್ರಾಣಿಗಳ ಶಿಲ್ಪಕೃತಿಗಳು ಮೂರ್ತಶೈಲಿಯಲ್ಲಿವೆ.

ಇದರಲ್ಲಿ ಹೆಚ್ಚಿನ ಕೃತಿಗಳು ಆ ಪ್ರದೇಶದ ಪುರಾಣ ಸಾಹಿತ್ಯದಲ್ಲಿ ಬರುವ ಮೃತ್ಯುವಿನ ಪಾತ್ರಗಳಿಗೆ ಸಂಬಂಧಿಸಿದವುಗಳಾಗಿವೆ. ಕಪ್ಪು ಹಾಗೂ ಬಿಳಿಯಬಣ್ಣಗಳಿಂದ ಕಸುರಿ ಮಾಡಲ್ಪಟ್ಟ ಮಣ್ಣಿನ ಪಾತ್ರೆಗಳು, ಕಡುಕೇಸರಿಯ ಪಾತ್ರೆಗಳು ಮತ್ತು ಕೆಂಪಗಿನ ಮಿದುಜೇಡಿಯ ಪಾತ್ರೆಗಳೂ ಕಾಣಸಿಗುತ್ತವೆ. ಇವುಗಳಷ್ಟೇ ಅಲ್ಲದೇ ಅಸಂಖ್ಯಾತ ಜೇಡಿಮಣ್ಣಿನ ದೇವರ ಹಾಗೂ ವೀರಯೋಧರ ಪುಟ್ಟಪ್ರತಿಮೆಗಳೂ ಈ ಎಜೆಟಕ್ ಶೈಲಿಯಲ್ಲಿ ಕಾಣಸಿಗುತ್ತವೆ.

ಮ.ಹೆ.

## ಎನಿಮಲ್ ಸ್ಟೈಲ್ (Animal Style)

ಒಂದು ನಿರ್ದಿಷ್ಟ ಕಾಲದಲ್ಲಿದ್ದ ಯುರೋಪು, ಮಧ್ಯಏಷಿಯಾ ಅಲೆಮಾರಿಗಳ ಕಲೆಯನ್ನು ಈ ಹೆಸರಿನಿಂದ ಕರೆಯಲಾಗಿದೆ. ಆ ಜನರಿಗೆ ಅತ್ಯಂತ ಪ್ರಿಯವಾಗಿದ್ದ ಕಲೆಯಿದು. ವಿವಿಧ ಪ್ರಾಣಿರೂಪಗಳನ್ನು ಹಲವು ಮಾಧ್ಯಮಗಳಲ್ಲಿ ರೂಪಿಸಿದ್ದು ಈ ಶೈಲಿಯ ವಿಶಿಷ್ಟತೆ. ಕಾರ್ಕ್‌ಸನ್ ಪರ್ವತ ಪ್ರಾಂತ್ಯಗಳಲ್ಲಿ ಇದು ಮೊದಲು ರೂಪುಗೊಂಡು ಹಲವು ಅಲೆಮಾರಿ ಜನಾಂಗಗಳ ಮೂಲಕ ಉಳಿದ ಪ್ರದೇಶಗಳಿಗೆ ಹರಡಿರಬಹುದು. ಈ ದೃಷ್ಟಿಯಿಂದ ಸಿಲೆಯನ್ ಜನಾಂಗದ ಕೊಡುಗೆ ಬಹುಮುಖ್ಯವೆಂದು ಪರಿಗಣಿಸಲಾಗಿದೆ. ಈ ಶೈಲಿಯ ಪ್ರಾಣಿರೂಪಗಳೆಲ್ಲ ಸಾಮಾನ್ಯವಾಗಿ ಕಾಡು ಪ್ರಾಣಿಗಳೇ ಆಗಿರುವುದರಿಂದ ಆದಿಮ ನಾಗರಿಕ ಜನಾಂಗಗಳು ಬೇಟೆ, ತಾಂತ್ರಿಕಾರಾಧನೆ ಇತ್ಯಾದಿಗಳು ಈ ಶೈಲಿಗೆ ಸ್ಫೂರ್ತಿ ನೀಡಿರಬಹುದು. ಈ ಶೈಲಿಯ ಹಲವು ಕಲಾಕೃತಿಗಳು ಸಾಮಾನ್ಯವಾಗಿ ಶವಪೆಟ್ಟಿಗೆಗಳಲ್ಲಿ ದೊರಕಿವೆ. ಎಲುಬು, ಕೊಂಬು, ಕಾಡುಹಂದಿ ದಂತ, ಲೋಹ ಇತ್ಯಾದಿ ಮಾಧ್ಯಮಗಳಲ್ಲಿ ಈ ಶೈಲಿಯ ಕೃತಿಗಳು ಕಂಡು ಬಂದಿವೆ. ದಿನನಿತ್ಯ ಬಳಸುವ ವಸ್ತುಗಳ ಹಿಡಿಗಳಾಗಿಯೋ ಅಥವಾ ಇನ್ನಾವುದೋ ವಸ್ತುವಿನ ಉಪಾಂಗವಾಗಿಯೋ ಬಳಕೆಯಲ್ಲಿದ್ದುದರಿಂದ ಮೃತನೊಂದಿಗೆ ಶವಪೆಟ್ಟಿಗೆಯಲ್ಲಿ ಇಡುವ ಸಂಪ್ರದಾಯವಿದ್ದಿರಬಹುದು. ಸಾಮಾನ್ಯವಾಗಿ ಒಂದು ಪ್ರಾಣಿಯ ಆಕಾರದೊಳಗಿನಿಂದ ಮತ್ತೊಂದು ಹೊರಬೀಳುವಂಥ ಅಥವಾ ಮತ್ತೊಂದರೊಳ ಹೊಕ್ಕು ಕಾಣದಾಗುವಂಥ ಪ್ರಾಣಿರೂಪಣಗಳು ಅಲಂಕರಣಗೊಂಡಿರುವುದನ್ನು ಈ ಶೈಲಿಯಲ್ಲಿ ವಿಶೇಷವಾಗಿ ಗುರುತಿಸಬಹುದು.

ಕೆ.ವಿ.ಸು.

## ಎರಕ ಹೊಯ್ಯುವುದು

ಅತ್ಯಂತ ಪ್ರಾಚೀನ ಶಿಲ್ಪ ತಂತ್ರಗಳಲ್ಲಿ ಎರಕ ಹೊಯ್ಯುವುದೂ ಒಂದು. ಕಂಚಿನ ಯುಗದ ಮನುಷ್ಯನಿಗೆ ಈ ತಂತ್ರದ ಅರಿವಿತ್ತೆಂದು ಭಾವಿಸಲಾಗಿದೆ (ಇದರಿಂದಲೇ ಆ ಹೆಸರು ಬಂದಿದೆ). ಕೆತ್ತಲು ಅಥವಾ ಮೆತ್ತಲು ಸಾಧ್ಯವಾಗದಂತಹ ಲೋಹಗಳು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಂತಹ ವಸ್ತುಗಳಿಂದ ಶಿಲ್ಪ ರಚಿಸಲು ಈ ತಂತ್ರ ಉಪಯುಕ್ತ. ಅದರ ವಿಧಾನ ಹೀಗಿದೆ: ಮೇಣದಂತಹ ಸುಲಭವಾಗಿ ಕರಗುವಂತಹ ವಸ್ತುವಿನಿಂದ ಮೂಲಕೃತಿಯನ್ನು ರಚಿಸುತ್ತಾರೆ. ಇದರ ಸುತ್ತ ಜೇಡಿಮಣ್ಣು, ಮತ್ತಿತರ ವಸ್ತುಗಳಿಂದ ಅಚ್ಚಿನ ಗೂಡು ಕಟ್ಟುತ್ತಾರೆ. ನಂತರ ಅದನ್ನು ಬಿಸಿ ಮಾಡುವುದರ ಮೂಲಕ ಒಳಗಿನ ಮೇಣವನ್ನು ಕರಗಿಸುತ್ತಾರೆ. ಇದರಿಂದಾಗಿ ಮೇಣವಿದ್ದ ಭಾಗ ಟೊಳ್ಳಾಗುತ್ತದೆ. ಈ ಟೊಳ್ಳು ಭಾಗಕ್ಕೆ ಲೋಹ ಅಥವಾ ಪ್ಲಾಸ್ಟರ್ ಅನ್ನು ಸುರಿಯುತ್ತಾರೆ. ನಂತರ ಅಚ್ಚನ್ನು ಒಡೆದು ಪ್ರತಿಕೃತಿಯನ್ನು ಹೊರತೆಗೆಯುತ್ತಾರೆ. ಜಾಣ್ಮೆಯಿಂದ ಅಚ್ಚು ರಚಿಸಿ ಒಂದೇ ಅಚ್ಚಿನಿಂದ ಹಲವಾರು ಪ್ರತಿತೆಗೆಯಲೂ ಸಾಧ್ಯವುಂಟು.

ವಿಧಾನಗಳು: ಲಾಸ್ಟ್ ವ್ಯಾಕ್ಸ್ ವಿಧಾನ- Cire perdue ಎಂದು ಫ್ರೆಂಚ್‌ನಲ್ಲಿ ಹೇಳುತ್ತಾರೆ. ಇದು ತುಂಬಾ ಸರಳವಾದ ವಿಧಾನ. ಮೇಣದಲ್ಲಿ ಬೇಕಾದ ಆಕೃತಿ ರಚಿಸಿ ಒಳಭಾಗವನ್ನು ಟೊಳ್ಳು ಮಾಡುತ್ತಾರೆ. ಆ ಜಾಗಕ್ಕೆ ಜೇಡಿ ಮಣ್ಣನ್ನು ತುಂಬುತ್ತಾರೆ. ಹೊರ



ಭಾಗವನ್ನು ಜೇಡಿ ಮಣ್ಣಿನ ಮಿಶ್ರಣದಿಂದ ತುಂಬುತ್ತಾರೆ. ಈ ಜೇಡಿಮಣ್ಣನ್ನು ವಿಶೇಷವಾಗಿ ಹದಗೊಳಿಸಿರುತ್ತಾರೆ. ಸಾಧಾರಣವಾಗಿ ಸಮ ಪ್ರಮಾಣದಲ್ಲಿ ಬೂದಿಯಾದ ಮತ್ತು ತಾಜಾ ಇಟ್ಟಿಗೆ ಚೂರುಗಳನ್ನು ಬೆರೆಸಿ ತಯಾರಿಸುತ್ತಾರೆ. ಇದು ಬಿರುಕು ಬಿಡದಂತೆ ಮಾಡಲು ಹಳೆಯ ತಲೆಮಾರಿನವರು ಹುಲ್ಲು, ನಾರು, ಕುದುರೆ ಲದ್ದಿಯನ್ನೂ ಸಹಾ ಬಳಸುತ್ತಿದ್ದರು. ಇತ್ತೀಚಿನವರು ಮೊದಲು ಒಂದು ಪದರ ಜೇಡಿ ಬಳಿದ ಮೇಲೆ ತೆಳ್ಳನೆಯ ತಂತಿಯನ್ನು ಸುತ್ತಿ ಮತ್ತೆ ಮಣ್ಣು ಮೆತ್ತುತ್ತಾರೆ. ತುಂಬಾ ನಾಜೂಕಾದ ತೆಳ್ಳನೆಯ ಭಾಗಗಳಿಗೆ ಕೆಲವೊಮ್ಮೆ ಆಧಾರಕ್ಕಾಗಿ ಸೇರು ಸರಿಗೆಗಳನ್ನು(Jumpers) ಕೊಡುವ ಪರಿಪಾಠವಿದೆ. ಇವನ್ನು ಎರಕ ಹೊಯ್ದಾದ ನಂತರ ಕತ್ತರಿಸುತ್ತಾರೆ.

ಬಹಳ ದೊಡ್ಡ ಮೂರ್ತಿಗಳಾದರೆ ಅದಕ್ಕೆ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಅಚ್ಚಿನ ಗೂಡು ಕಟ್ಟುತ್ತಾರೆ. ವೆಂಕಟಾಲಚಲಪತಿಯವರು ಇತ್ತೀಚೆಗೆ ರಚಿಸಿದ ಒಂದೆರಡು ದೊಡ್ಡ ಪ್ರಮಾಣದ ಶಿಲ್ಪಗಳನ್ನು ಬಿಟ್ಟರೆ ನಮ್ಮಲ್ಲಿ ಬೃಹತ್ ಕಂಚುಗಳ ಉದಾಹರಣೆ ಕಡಿಮೆ. ಈ ಗೂಡನ್ನು ಉಬ್ಬೆಯಲ್ಲಿ ಕಾಯಿಸುತ್ತಾರೆ. ಮೇಣ ಆಗ ಕರಗಿ ಹೊರಬರುತ್ತದೆ. ಆ ಜಾಗಕ್ಕೆ ಬೇಕಾದ ಲೋಹವನ್ನು ಎರಕ ಹೊಯ್ಯುತ್ತಾರೆ. ಲೋಹ ಸರಿಯಾಗಿ ಒಳಸೇರುವಂತೆ ಅಲ್ಲಲ್ಲಿ ಕೊಳವೆಗಳನ್ನು ನೆಟ್ಟಿರುತ್ತಾರೆ. ಹೊರಬಂದ ಮೇಣದ ಪ್ರಮಾಣದಿಂದ ಬೇಕಾಗುವ ಲೋಹದ ಪ್ರಮಾಣವನ್ನು ಅಳೆಯಬಹುದು. ಒಳಗಿರುವ ಬಿಸಿ ಹಾಗೂ ಕರಗಿರುವ ಲೋಹ ತಣ್ಣಗಾಗಿ ಗಟ್ಟಿಯಾದ ಮೇಲೆ ಅಚ್ಚನ್ನು ಒಡೆದು ಶಿಲ್ಪವನ್ನು ಹೊರತೆಗೆಯುತ್ತಾರೆ. ಈ ವಿಧಾನದಿಂದ ಮೂಲಕೃತಿಗಿಂತ ಯಾವುದೇ ವ್ಯತ್ಯಾಸವೂ ಇಲ್ಲದ ಪ್ರತಿಕೃತಿ ದೊರೆಯುತ್ತದೆ. ಆದರೆ ಸಮಸ್ಯೆ

ಎಂದರೆ ಇದರಿಂದ ಒಂದಕ್ಕಿಂತ ಹೆಚ್ಚು ಪ್ರತಿಗಳನ್ನು ತೆಗೆಯುವುದ ಕಷ್ಟದ ಕೆಲಸ. ಈ ವಿಧಾನ ನಮ್ಮಲ್ಲಿ ಹಬ್ಬಗಳಲ್ಲಿ ಸಕ್ಕರೆ ಅಚ್ಚು ತಯಾರಿಸುವ ಅಥವಾ ಮುದ್ರಕರು ರಬ್ಬರ್ ಸ್ಟ್ಯಾಂಪ್ ತಯಾರಿಸುವ ವಿಧಾನಕ್ಕಿಂತ ಹೆಚ್ಚೇನಲ್ಲ.

ಇನ್ನೊಂದು ವಿಧಾನದಲ್ಲಿ ಹಲವಾರು ಸಣ್ಣ ಸಣ್ಣ ಅಚ್ಚುಗಳನ್ನು ಮಾಡಿ ಎರಕ ಹೊಯ್ಯುವುದು. ಇದರಿಂದ ಪ್ರತಿಗಳನ್ನು ತೆಗೆಯುವುದು ಸಾಧ್ಯವಾದರೂ ಕ್ಲಿಷ್ಟ ರೂಪಗಳನ್ನು ಹೊಂದಿರುವ ಶಿಲ್ಪ ವಿನ್ಯಾಸಗಳನ್ನು ಇದರಿಂದ ತಯಾರಿಸುವುದು ಕಷ್ಟಸಾಧ್ಯ.

ಇಷ್ಟೆಲ್ಲಾ ಕ್ಲಿಷ್ಟತೆಗಳಿದ್ದರೂ ಎರಕಹೊಯ್ಯುವುದು ಜನಪ್ರಿಯವೇ ಆಗಿದೆ. ಅದಕ್ಕೆ ಈ ವಿಧಾನದಲ್ಲಿ ಅತ್ಯಂತ ಸೂಕ್ಷ್ಮ ವಿವರಗಳನ್ನೂ ಪ್ರತಿಪಾದಿಸಬಲ್ಲ ಸಾಮರ್ಥ್ಯವೇ ಕಾರಣ. ಕಂಚು, ಹಿತ್ತಾಳೆ, ಅಲ್ಯುಮಿನಿಯಂ, ಉಕ್ಕು, ಫೈಬರ್, ಗಾಜು, ಪ್ಲಾಸ್ಟರ್ ಆಫ್ ಪ್ಯಾರಿಸ್, ಮೊದಲಾದವು ಎರಕ ಹೊಯ್ದು ರಚಿಸುವ ಶಿಲ್ಪದ ಮಾಧ್ಯಮಗಳು. ಇವುಗಳಲ್ಲಿ ಕಂಚು ಪ್ರಾಚೀನ ಮಾಧ್ಯಮ. ಮಧ್ಯಯುಗದ ಶಿಲ್ಪಿಗಳು ಕಂಚಿನ ಪ್ರತಿಮೆಗಳನ್ನು ನಯವಾಗಿ ಪಾಲಿಷ್ ಮಾಡುತ್ತಿದ್ದರು. ಎರಕ ಹೊಯ್ದ ನಂತರ ಪ್ರತಿಮೆಯನ್ನು ಆಮ್ಲೀಯ ದ್ರಾವಣಗಳಲ್ಲಿ ಅದ್ದಿ ಅದಕ್ಕೆ ಮೆರುಗೂ ಕೊಡುತ್ತಿದ್ದರು. ಇದಕ್ಕೆ Patina ಎನ್ನುತ್ತಾರೆ. ಇದರಿಂದಾಗಿ ಶಿಲ್ಪಕ್ಕೆ ಕಂಚಿನ ಬಣ್ಣವಲ್ಲದೇ ತೆಳು ನೀಲಿ ಅಥವಾ ಹಸಿರು ಬಣ್ಣ ಬರುತ್ತಿತ್ತು. ರೊಡಾನ್, ಎಪ್ಸ್ಟೀನ್ಸ್ ಶಿಲ್ಪಗಳು ಉದಾಹರಣೆ. ನವಾಸಾಗರ ಮತ್ತು ಮೈಲುತುತ್ತದ ದ್ರಾವಣದಲ್ಲಿ ಅದ್ದಿ ನೀಲಿ ಛಾಯೆ ತರಿಸುವುದು ನಮ್ಮಲ್ಲಿ ಅನುಸರಿಸುತ್ತಿರುವ ರೀತಿ. ಅಲ್ಲದೇ ಕಂಚಿನ ಬಣ್ಣದ ಏಕತಾನತೆಯನ್ನು ತೊಡೆಯಲು ಕಂಚನ್ನು ತಯಾರಿಸುವಾಗಲೇ ಅದರ ಮೂಲವಸ್ತುಗಳ ಪ್ರಮಾಣ ವ್ಯತ್ಯಾಸ ಮಾಡುವುದು ಇನ್ನೊಂದು ತಂತ್ರ. ತಾಮ್ರದ ಅಂಶ ಹೆಚ್ಚಾದರೆ ಬಣ್ಣ ಸ್ವಲ್ಪ ಕೆಂಪಾಗುತ್ತದೆ- ಹೀಗೆ. ನವ್ಯ ಶಿಲ್ಪಿಗಳು ಈ ಬಗೆಯ ನಾಜೂಕನ್ನು ಕೈ ಬಿಟ್ಟು, ಎರಕದಿಂದ ಹೊರಬಂದ ಕರಡು ಮೈಯನ್ನು ಹಾಗೆಯೇ ಬಿಡುತ್ತಿದ್ದರು. ನಮ್ಮ ಸಾಂಪ್ರದಾಯಿಕ ಶಿಲ್ಪಿಗಳು ಅಚ್ಚಿನಿಂದ ಹೊರಬಂದ ಶಿಲ್ಪವನ್ನು ಪುನಃ ಪರಿಷ್ಕರಿಸುತ್ತಾರೆ. ಕರಡಾಗಿ ಹೊರಬಂದ ಪ್ರತಿಮೆಯನ್ನು ಮತ್ತೆ ಚಾಣದ ಸಹಾಯದಿಂದ ಕೆತ್ತಿ, ಮೇಲ್ಮೈಯನ್ನು ಸಾಧ್ಯವಾದಷ್ಟೂ ನಯಗೊಳಿಸುತ್ತಾರೆ. ರೆಸೀನ್, ಫೈಬರ್ ಗಾಜು, ನಾರು ಸಿಮೆಂಟ್, ನಿಯಾನ್ ದೀಪಗಳು, ಸಿಕ್ಕ ವಸ್ತುಗಳು,(Found objexts) ಇತ್ತೀಚಿನ ಮಾಧ್ಯಮಗಳು. ಬಾಲನ್ ನಂಬಿಯಾರ್ ಅವರು ನಾರು ಸಿಮೆಂಟ್ ಅನ್ನು ಪ್ರಭಾವೀ ಮಾಧ್ಯಮವಾಗಿ ಬೆಳೆಸಿದ್ದಾರೆ. ಜೋಡಣೆ-Installation- ಇತ್ತೀಚೆಗೆ ಬಹಳ ಜನಪ್ರಿಯವಾಗುತ್ತಿರುವ ಮಾಧ್ಯಮ. ವಿವಾನ್ ಸುಂದರಂ ಮತ್ತಿತರರು ಇತ್ತೀಚೆಗೆ ಇದರಲ್ಲಿ ಆಸಕ್ತಿ ವಹಿಸುತ್ತಿದ್ದಾರೆ. ಪಿಂಗಾಣಿಯನ್ನು ಶಿಲ್ಪಕ್ಕೆ ಉಪಯೋಗಿಸುವುದು ಹೊಸತಲ್ಲದಿದ್ದರೂ ಸತೀಶ್ ಗುಜ್ರಾಲ್ ಇದರಲ್ಲಿ ಸಾಕಷ್ಟು ಪ್ರಯೋಗ ನಡೆಸಿದ್ದಾರೆ. ಓಲ್ಡನ್‌ಬರ್ಗ್‌ನ ಮೃದು ಶಿಲ್ಪಗಳಲ್ಲಿ ಹತ್ತಿ, ನಾರು ಮುಂತಾದ ಬಳುಕುವ ವಸ್ತುಗಳನ್ನು ಉಪಯೋಗಿಸಿದ್ದರೆ, ಮೃಣಾಲಿನೀ ಮುಖರ್ಜೀ ಹಗ್ಗಗಳಿಂದ ಹೆಣೆದ ಶಿಲ್ಪಕ್ಕಾಗಿ ೯೭ರ ರಾಷ್ಟ್ರಪ್ರಶಸ್ತಿಯನ್ನೂ ಪಡೆದರು. ರಾಘವ ಕನೇರಿಯಾರು ಹಾಳು-ಲೋಹಗಳಿಂದ(Scrape metal) ಹಲವಾರು ಶಿಲ್ಪ ರಚಿಸಿದ್ದರೆ, ಹಡಪದರು ಹಾಳು-ಪ್ಲಾಸ್ಟಿಕ್ ವಸ್ತುಗಳಿಂದ ಶಿಲ್ಪಗಳನ್ನೊಮ್ಮೆ ರಚಿಸಿದ್ದರು.

ರ.ಡಾ.

## ಎಲುಬುಗಳ ಮೇಲಿನ ಕೆತ್ತನೆ (Bone Carving)

ಪ್ರಾಗೈತಿಹಾಸಿಕ ಕಾಲದಿಂದಲೂ ಕೆತ್ತನೆಯ ಅಲಂಕಾರಕ್ಕಾಗಿ ಹಸ್ತಿದಂತದ ಬದಲಾಗಿ ಎಲುಬುಗಳನ್ನು ಬಳಸಲಾಗುತ್ತಿತ್ತು. ಎಸ್ಕಿಮೊ ಜನರು ಗೃಹಬಳಕೆಯ ಹಾಗೂ ಬೇಟೆಯ ಅಲಂಕೃತ ಉಪಕರಣಗಳಿಗಾಗಿ 'ವ್ಹೇಲ್'ಪ್ರಾಣಿಯ ಎಲುಬುಗಳನ್ನು ಬಳಸುತ್ತಿದ್ದರು. ಅಮೆರಿಕೆಯ ಪಶ್ಚಿಮ ಕರಾವಳಿಯ ರೆಡ್ ಇಂಡಿಯನ್, ಜನಾಂಗದವರೂ ಸಹ ವ್ಹೇಲ್ ಪ್ರಾಣಿಯ ಎಲುಬುಗಳನ್ನೇ ತಮ್ಮ ಉಪಕರಣಗಳಿಗಾಗಿ ಬಳಸುತ್ತಿದ್ದರು. ಇದೇ ಮಾದರಿಯ ಕೆತ್ತನೆ ಮಾಡಿದ ಎಲುಬುಗಳು ಈಜಿಪ್ಟಿನ ಸಾರ್ವಭೌಮಪೂರ್ವ ಸಮಾಧಿಗಳಲ್ಲಿಯೂ ಗ್ರೀಸ್ ಮತ್ತು ಭಾರತದ ಇತಿಹಾಸ ಪೂರ್ವಕಾಲದ ಅವಶೇಷಗಳಲ್ಲಿಯೂ ಕಂಡು ಬಂದಿವೆ. ಜಪಾನಿನಲ್ಲಿ ಎಲುಬುಗಳ ಕೆತ್ತನೆಯ ಕಲೆಯು ನೂತನ ಶಿಲಾಯುಗದಿಂದ ಮೊದಲುಗೊಂಡು ಇತ್ತೀಚಿನ ೧೮ನೆಯ ಶತಮಾನದವರೆಗೂ ವಿಸ್ತರಿಸಿಕೊಂಡು ಬಂದುದಾಗಿದೆ. ೧೮ ಮತ್ತು ೧೯ನೆಯ ಶತಮಾನಗಳಲ್ಲಿ ಈ ಎಲುಬುಗಳ ಕೆತ್ತನೆಯ ಕಲೆಯು ಅಮೆರಿಕೆಯ ವ್ಹೇಲ್ ಪ್ರಾಣಿಯ ಬೇಟೆಗೆ ಬಳಸಲಾಗುತ್ತಿದ್ದ ಹಡಗುಗಳ ನಾವಿಕರಲ್ಲಿ ಜನಪ್ರಿಯವಾಗಿ ಪ್ರಚಲಿತವಾಗಿತ್ತು. ತೈವಾನ್‌ನಂಥ ಸ್ಥಳಗಳಲ್ಲಿ ಇಂದಿಗೂ ಬಟ್ಟೆಗಳ ಗುಂಡಿಗಳನ್ನೂ ಕಾಗದ ಕತ್ತರಿಸುವ ಚಾಕುಗಳನ್ನು ಎಲುಬಿನಿಂದಲೇ ತಯಾರಿಸಲಾಗುತ್ತದೆ.

**ಮ್ಮ. ಹೊ.**

## ಎಲ್ಲೋರ

ಮಹಾರಾಷ್ಟ್ರದಲ್ಲಿ ಗೋದಾವರಿಯ ಉಪನದಿಯೊಂದರ ದಂಡೆಯ ಮೇಲೆ ಎಲ್ಲೋರ ಇದೆ. ಈ ಸ್ಥಳವು ರಾಷ್ಟ್ರಕೂಟರ ರಾಜ ೧ನೆಯ ಕೃಷ್ಣನಿಂದ ನಿರ್ಮಿತವಾದ ಕೈಲಸನಾಥದೇವಾಲಯ ಮತ್ತು ಅಲ್ಲಿರುವ ಗುಹಾಂತರ ದೇವಾಲಯಗಳಿಂದಲೂ ಪ್ರಸಿದ್ಧಿಯನ್ನು ಪಡೆದಿದೆ.

ಬೌದ್ಧ, ಹಿಂದೂ ಮತ್ತು ಜೈನ ಮತಗಳಿಗೆ ಸೇರಿದ ೩೪ ಗುಹೆಗಳು ಮತ್ತು ಒಂದೇ ಕಲ್ಲಿನಲ್ಲಿ ಕಡೆಯಲಾದ ದ್ರಾವಿಡಶೈಲಿಯ ಸುಪ್ರಸಿದ್ಧ ಕೈಲಾಸನಾಥ ದೇವಾಲಯವು ಪ್ರಖ್ಯಾತಿಯನ್ನು ಪಡೆದಿದೆ. ಇಳಿಜಾರಾದ ಬೆಟ್ಟದ ಪಶ್ಚಿಮದ ಅಂಚಿನಲ್ಲಿ ಕಡೆದಿರುವ ಗುಹಾಂತರ ದೇವಾಲಯಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ೧೨ ಗುಹೆಗಳ ಬೌದ್ಧಮತಕ್ಕೂ ೧೭ ಗುಹೆಗಳು ಹಿಂದೂ ಧರ್ಮಕ್ಕೂ ಮತ್ತು ೫ ಗುಹೆಗಳು ಜೈನ ಧರ್ಮಕ್ಕೂ ಸೇರಿವೆ.

ಕ್ರಿ.ಶ. ೩೫೦-೭೫೦ರ ಮಧ್ಯದಲ್ಲಿ ನಿರ್ಮಿಸಲಾದ ಬೌದ್ಧ ಜೈನವಿಹಾರಗಳಲ್ಲೂ ಎರಡು ಗುಂಪುಗಳಿವೆ. ಮೊದಲ ಐದು ಗುಹೆಗಳು ದೇರ್‍ವಾರ ಗುಂಪಿಗೂ ಉಳಿದ ೭ ಎರಡನೆಯ ಗುಂಪಿಗೂ ಸೇರುತ್ತವೆ. ಮೊದಲ ಗುಂಪಿನ ಗುಹೆಗಳಲ್ಲಿ ಮನಾಹ್‌ವಾಡ ಎಂಬ ಕಂಬಗಳಿಂದ ಕೊರೆದು ವಿಶಾಲ ಹಜಾರವನ್ನು ಪ್ರಾರ್ಥನಾ ಮಂದಿರವಾಗಿ ಬಳಸುತ್ತಿದ್ದರು. ಎರಡನೆಯ ಗುಂಪಿನ ಚೈತ್ಯಮಂದಿರದಲ್ಲಿ ಪ್ರಾರ್ಥನೆ ನಡೆಯುತ್ತಿತ್ತು. ಈ ಎಲ್ಲ ಗುಹೆಗಳ ಹಿಂದಂತಸ್ತಿನವುಗಳಾಗಿದ್ದು ಕೈಸಾಲೆ, ಕಂಬಗಳಿಂದ ಕೂಡಿದ್ದ ಹಜಾರ ಮತ್ತು ಚೈತ್ಯ ಅಥವಾ ಗರ್ಭಗುಡಿಯನ್ನೊಳ ಗೊಂಡಿರುತ್ತಿದ್ದವು.



ಎರಡನೆಯ ಗುಂಪಿನ ಬೌದ್ಧ ಗುಹೆಗಳಲ್ಲಿ ವಿಶಾಲವಾದ ವಿಹಾರಿಗಳಿದ್ದು ಸುಂದರ ಚೈತ್ಯಗಳು ಇರುತ್ತಿದ್ದವು. ಮುಂಭಾಗದಲ್ಲಿ ದೊಡ್ಡ ಪ್ರಾಂಗಣಗಳಿರುತ್ತವೆ. ಅವುಗಳಲ್ಲಿ ಮೂರು ಗುಹೆಗಳು ಮೂರಂತಸ್ತಿನ ನಿರ್ಮಾಣಗಳಾಗಿವೆ.

ಬೌದ್ಧಮತವು ೮ನೆಯ ಶತಮಾನದ ನಂತರ ಕ್ಷೀಣಿಸುತ್ತಿದ್ದಂತೆ ಹಿಂದೂಗಳ ಕಾರ್ಯವು ಇಲ್ಲಿ ಬೆಳೆಯಲಾರಂಭಿಸಿತು. ಬೌದ್ಧವಾಸ್ತುಶಿಲ್ಪಗಳ ಮಾದರಿಯಲ್ಲಿಯೇ ಆದರೂ ತಮ್ಮ ಸಂಪ್ರದಾಯಕ್ಕೆ ಅನುಸಾರವಾಗಿ ಮಾರ್ಪಡಿಸಿಕೊಂಡ ಈ ಗುಹೆಗಳಲ್ಲಿ ೧೪ನೆಯ ರಾವಹ್-ಕಾ-ಖಾಈ, ೧ ನೆಯ ದಶಾವತಾರ, ೧೬ನೆಯ ಕೈಲಾಸ. ೨೧ನೆಯ ರಾಮೇಶ್ವರ ಮತ್ತು ೨೯ನೆಯ ದುಮಾರಲೀನ ಅಥವಾ ಸೀತೆಯ ಸ್ನಾನದ ಗುಹೆಗಳು ಮುಖ್ಯವಾದವು. ಬದಲಾವಣೆ ಹೊಂದುತ್ತಿದ್ದು ಈ ಗುಹಾಶೈಲಿಗಳಲ್ಲಿ ಮೊದಲನೆಯ ಗುಂಪಿನಲ್ಲಿರುವ ದಶಾವತಾರ ಗಹೆ. ಬೌದ್ಧ ಗುಹೆಗಳನ್ನು ಹೋಲುತ್ತದೆ. ಪ್ರದಕ್ಷಿಣಪಥವಿರುವ ರಾಮೇಶ್ವರ ಮತ್ತು ರಾಮ್-ತಾ-ಬಾಈ ಎರಡನೆಯ ಹಂತವನ್ನು ಶಿಲಬೆಯಾಕೃತಿಯ ತಳಕಟ್ಟಿನ ಮಧ್ಯದಲ್ಲಿ ಗರ್ಭಗುಡಿಯಿರುವ ಮತ್ತು ಒಂದಕ್ಕಿಂತಲೂ ಹೆಚ್ಚು ಪ್ರವೇಶ ದ್ವಾರವುಳ್ಳ ದುಮಾರಲೀನ ಗುಹೆಯ ಮೂರನೆಯ ಹಂತವನ್ನು, ಗುಹೆಯ ಬದಲು ಕಟ್ಟಿದ ಭವನವನ್ನು ಹೋಲುವ ಒಂದೇ ಕಲ್ಲಿನಲ್ಲಿ ಕೊರೆಯಲಾದ ಕೈಲಾಸ ದೇವಾಲಯ ನಾಲ್ಕನೆಯ ಹಂತವನ್ನು ಸೂಚಿಸುತ್ತದೆ.

ಜೆ.ಟಿ.ಜ.

## ಎಸ್ಕಿಮೋ ಕಲೆ

ಎಸ್ಕಿಮೋಗಳು ಸುಮಾರು ಆರುಸಾವಿರ ಮೈಲುಗಳಷ್ಟು ವಿಸ್ತಾರವಾದ ಉತ್ತರ ಧ್ರುವೀಯ ಪ್ರದೇಶಗಳಲ್ಲಿ ವಾಸಿಸುವ ಪ್ರಾಚೀನ ಜನಾಂಗ. ಸೈಬೀರಿಯಾ, ಅಲಾಸ್ಕಾ, ಕೆನಡಾ, ಗ್ರೀನ್‌ಲೆಂಡ್‌ಗಳಲ್ಲಿಯೂ ಇವರು ವಾಸಿಸಿದ್ದಾರೆ. ಇವರ ಒಟ್ಟು ಜನಸಂಖ್ಯೆ ೭೩,೦೦೦ ಎಂದು ಒಂದು ಸಮೀಕ್ಷೆಯಿಂದ ತಿಳಿದುಬರುತ್ತದೆ.

ಎಸ್ಕಿಮೋಗಳು ತಮ್ಮ ವಿಶಿಷ್ಟವಾದ ಆಕಾರಗಳಿಂದ ಗುರುತಿಸಿಕೊಳ್ಳುತ್ತಾರೆ. ಅವರ ಆಕಾರ. ಶರೀರದ ವಿವರಗಳು ಒಂದೇ ಬಗೆಯವು. ಕಟ್ಟುಮಸ್ತಾದ ಮೈ ಉದ್ದುದ್ದದ ತಲೆ, ಸಣ್ಣಮುಖ, ಮಂಗೋಲಾಯ್ಡ ಪದರುಳ್ಳ ಬಾಗಿದ ಸಣ್ಣ ಕಣ್ಣುಗಳು ಇವರ ಪ್ರಮುಖ ಲಕ್ಷಣಗಳಾಗಿವೆ.

'ಎಸ್ಕಿಮೋ' ಎನ್ನುವುದು ಅವರೇ ಇಟ್ಟುಕೊಂಡ ಹೆಸರಲ್ಲ. 'ಇನ್ಯೂಟ್' ಎಂದು ಅವರು ತಮ್ಮನ್ನು ಕರೆದುಕೊಳ್ಳುತ್ತಾರೆ. ಅವರ ಭಾಷೆಯಲ್ಲಿ 'ಇನ್ಯೂಟ್' ಎಂದರೆ 'ಮನುಷ್ಯರು' ಎಂದು ಅರ್ಥ. ತುಂಬಾ ಸ್ವಾಭಿಮಾನಿಗಳಾದ ಇವರು ಇತರರಿಗಿಂತ ತಾವೇ ಶ್ರೇಷ್ಠರಾದ ಜನ ಎಂಬ ನಂಬಿಕೆಯುಳ್ಳವರಾಗಿದ್ದಾರೆ. ಸೈಬೀರಿಯಾದ ಎಸ್ಕಿಮೋಗಳು ತಮ್ಮನ್ನು 'ಯುಪಿಕ್' (ಎಂದರೆ ನಾಗರಿಕರು) ಎಂದು ಕರೆದುಕೊಳ್ಳುತ್ತಾರೆ. ಬಿಳಿಮನುಷ್ಯರು ಅವರನ್ನು ಎಸ್ಕಿಮೋಗಳೆಂದು ೧೬೧೧ರಲ್ಲಿ ಸಂಬೋಧಿಸಿದರು. ಉತ್ತರ ಅಮೆರಿಕದ ಇಂಡಿಯನ್ ಜನರು ಅವರನ್ನು ಎಸ್ಕಿಮಾಂಟಿಕ್ (ಎಂದರೆ ಹಸಿಮಾಂಸವನ್ನು ತಿನ್ನುವವರು) ಎಂದು ಹೇಳುತ್ತಾರೆ. ಎಸ್ಕಿಮೋ ಎಂಬ ಹೆಸರನ್ನು 'ಜೆಸ್ಯೂಟ್' ಎಂಬ ಪಾದ್ರಿಯು ಹೆಚ್ಚು ಬೆಳಕಿಗೆ ತಂದನೆಂದು ಹೇಳಲಾಗುತ್ತಿದೆ.

ಎಸ್ಕಿಮೋಗಳದು ತುಂಬಾ ಕಷ್ಟಕರವಾದ ಹೋರಾಟದ ಜೀವನವಿದ್ದರೂ ಅವರ ಸಂಸ್ಕೃತಿಯ ಭೌತಿಕ ನೆಲೆ ಅಚ್ಚುಕಟ್ಟಾದದ್ದು. ಅವರಲ್ಲಿ ಕಲೆ ಸೊಗಸಾಗಿ ಬೆಳೆದು ಬಂದಿದೆ. ಕಲೆ ಅವರ ಜೀವನದ ಒಂದು ಪ್ರಮುಖ ಆಕರ್ಷಣೆಯಾಗಿದೆ. ಅವರಲ್ಲಿ ಪ್ರತಿಯೊಬ್ಬನೂ ಕಲಾವಿದನೇ. ಮಂಜಿನ ಪಾದರಕ್ಷೆಗಳು, ಆಯುಧಗಳು, ಅಡುಗೆ ಉಪಕರಣಗಳು, ಮನೆಯ ಸಾಮಗ್ರಿಗಳು ಎಲ್ಲವನ್ನು ಅತ್ಯಂತ ಕಲಾತ್ಮಕವಾಗಿ ಇವರು ಮಾಡಿಕೊಳ್ಳುತ್ತಾರೆ. ಅವರ ಉಡುಗೆ ತೊಡುಗೆ, ಆಭರಣಗಳಲ್ಲಿ ಕಲಾವಂತಿಕೆ ರಸಿಕತೆಯಿಂದ ಕೂಡಿರುತ್ತದೆ. ಮತ್ತು ಹೊಗೆ ಬತ್ತಿ ಕುಡಿಯುವ ದಂತದ ಪೈಪಿನ ಮೇಲೆ ಬೇಟೆಯ ದೃಶ್ಯಗಳನ್ನು ಚಿತ್ರಿಸಿರುವುದು, ಕೊರೆದಿರುವುದು ಹಲವಾರು ಕಡೆಗೆ ಕಂಡುಬರುವ ಸಾಮಾನ್ಯ ದೃಶ್ಯವಾಗಿದೆ. ಇವರು ಬೇಟೆಗಾಗಿ ಬಳಸುವ 'ಹಾರ್ಪೂನ್' ಎಂಬ ಭರ್ಜಿಗಳು ಬಿಲ್ಲು ಬಾಣಗಳು ತುಂಬಾ ಕಲಾತ್ಮಕವಾಗಿ ವಿನ್ಯಾಸಗೊಂಡಿರುತ್ತವೆ.

ಎಸ್ಕಿಮೋಗಳು ಹಗಲು, ರಾತ್ರಿ, ನೀರು, ಗಾಳಿಯನ್ನು ತಮ್ಮ ದೇವತೆಗಳಾಗಿ ನಂಬುತ್ತಾರೆ. ಇವುಗಳ ಆರಾಧನೆಗಾಗಿ ಈ ದೇವತೆಗಳ ಉತ್ಕೃಷ್ಟ ಮಟ್ಟದ ಕಲಾವಂತಿಕೆಯನ್ನು ಹೊಂದಿರುವ ಮುಖವಾಡಗಳನ್ನು ರಚಿಸುತ್ತಾರೆ. ಇವುಗಳನ್ನು ಮರದಲ್ಲಿಯೇ ವಿನ್ಯಾಸಗೊಳಿಸುವ ಪದ್ಧತಿಯೂ ಇದೆ. ಒಂದೊಂದು ಋತುವಿನಲ್ಲೂ ಇಂತಹ ಮುಖವಾಡಗಳ ಬಳಕೆ ಇರುತ್ತದೆ. ಒಮ್ಮೆ ಬಳಸುವ ಮುಖವಾಡಗಳನ್ನು ಮತ್ತೊಂದು ಋತುವಿಗೆ ಬಳಸಲಾಗುವುದಿಲ್ಲ. ಆಗ ಮತ್ತೆ ಹೊಸದಾಗಿಯೇ ಮುಖವಾಡಗಳು ಸಿದ್ಧಗೊಳ್ಳುತ್ತವೆ. ಈ ಮುಖವಾಡಗಳಲ್ಲಿ ಇರುವ ಕಲಾವಂತಿಕೆ ಉತ್ಕೃಷ್ಟ ಮಟ್ಟದಲ್ಲಿ ಕಂಡುಬರುತ್ತದೆ.

ಎಸ್. ಸಿ. ಪಾ

## ಓಟೋನಿಯನ್ ಕಲೆ (Ottonian Art)

ಕ್ರಿ.ಶ. ೧೦ ಹಾಗೂ ೧೧ನೆಯ ಶತಮಾನದಲ್ಲಿ ರೋಮನ್ ಸಾಮ್ರಾಜ್ಯದ ಕಾಲಕ್ಕೆ ಓಟೋನಿಯನ್ ಕಲೆಯು ಹುಟ್ಟಿಕೊಂಡಿತು. ೯ನೆಯ ಶತಮಾನದ ಮಧ್ಯಭಾಗದಲ್ಲಿ ಕ್ಯಾರೋಲಿಂಜಯನ್ ಕಲೆಯು ಆತಂಕಕ್ಕೊಳಗಾಗಿ, ರೋಮ್ ಚಕ್ರವರ್ತಿ ಮೊದಲನೆಯ ಓಟ್ಟೋ ಹಾಗೂ ಅವನ ರಾಜವಂಶದಿಂದಾಗಿ (ಕ್ರಿ. ಶ. ೯೩೬-೯೭೩) ಈ ಕಲೆಗೆ ಓಟೋನಿಯನ್ ಹೆಸರು ಬಂದಿತು. ಇದು ಕ್ಯಾರೋಲಿಂಜಿಯನ್ ಕಲೆಗಿಂತ ಭಿನ್ನವಾದುದು ಹಾಗೂ ಜರ್ಮನ್ ಮತ್ತು ಸ್ವಿಟರ್ಝರಲಂಡ್‌ಗಳಲ್ಲಿ ಪ್ರಮುಖವಾಗಿತ್ತು. ಓಟೋನಿಯನ್ ಕಲೆಯ ತಿಥಿಕ ಭಾಗವನ್ನು ಕ್ಯಾರೋಲಿಂಜಿಯನ್ ಮಾದರಿಗೆ ಬಳಸಲಾಗುತ್ತಿತ್ತು. ಕೆಲವು ಸಲ ಪ್ರಾಚೀನ ಕ್ರಿಶ್ಚಿಯನ್ ಕಲೆಗೆ ಮರಳುತ್ತಿತ್ತು. ಇದು ಸಮಕಾಲೀನ ಬೈಝಂಟೈನಾದ ಶೈಲಿಯಿಂದಲೂ ಹೆಚ್ಚು ಪ್ರಭಾವಿತಗೊಂಡಿತ್ತು.

ಓಟೋನಿಯನ್ ಕಲೆಯು ೧೦ ನೆಯ ಶತಮಾನದ ಪೂರ್ವದಲ್ಲಿ ಕೋಲೋನ್ ಕ್ರಿಸ್ತ ಮಂದಿರದ ಮೇಲಿರುವ ಅತಿದೊಡ್ಡ ಕಟ್ಟಿಗೆಯ ಶಿಲುಬೆ ಹಾಗೂ ೧೧ನೆಯ ಶತಮಾನದ ಪೂರ್ವದಲ್ಲಿ ಹಿಲ್ಡೇಶಿಯಮ್ ಕ್ರಿಸ್ತ ಮಂದಿರದ ಕಂಚಿನ ಬಾಗಿಲು ಹಾಗೂ ಕಂಬಗಳ ಮೇಲೆ ಕಂಡು ಬರುತ್ತದೆ.

ಅ.ಜಾ.

## ಕಂಚಿ

ಕ್ರೈಸ್ತಶಕದ ಆರಂಭದಲ್ಲಿಯೇ ಕಂಚಿ ಪ್ರಮುಖ ಸ್ಥಳವಾಗಿದ್ದು ಪುರಾಣೋಕ್ತವಾಗಿದೆ. ಮೂರರಿಂದ ಒಂಬತ್ತನೇ ಶತಮಾನದವರೆಗೆ ಕಂಚಿ ಪಲ್ಲವರ ರಾಜಧಾನಿಯಾಗಿದ್ದು ಶಿಲ್ಪ, ಚಿತ್ರಗಳೂ ಸೇರಿದಂತೆ ಲಲಿತಕಲೆಗಳಿಗೆ. ಆಧ್ಯಾತ್ಮ ವಿಚಾರಗಳಿಗೆ ಕೇಂದ್ರವಾಗಿ ಮೆರೆದಿದ್ದು, ಚೋಳರ ಕಾಲದಲ್ಲೂ ಮುಂದುವರಿದು ಇಂದಿಗೂ ಪರಂಪರೆ ಅಲ್ಲಿ ಉಳಿಯುವಂತಾಗಿದೆ.

ವೈಕುಂಠನಾಥ ದೇವಾಲಯದಲ್ಲಿ (೭ನೆಯ ಶತಮಾನ) ಸಿಂಹಗಳು ಹೊತ್ತಿರುವ ಕಂಬಗಳು ಹಾಗೂ ಯಾವುದೋ ಐತಿಹಾಸಿಕ ಯುದ್ಧವನ್ನು ನಿರೂಪಿಸುವ ಉಬ್ಬುಶಿಲ್ಪಗಳಿವೆ. ಕೈಲಾಸನಾಥ ದೇವಾಲಯ(೮ನೇ ಶತಮಾನ)ಕ್ಕೆ ಬಾದಾಮಿ ಚಾಳುಕ್ಯರೂ ದತ್ತಿದಾನ ನೀಡಿದ್ದು ಅನೇಕ ಗಾರೆಯ ಶಿಲ್ಪಗಳಿಂದ ಕೂಡಿದ ಕಲಾತ್ಮಕ ರಚನೆಯಾಗಿದೆ. ಹೊರ ಪ್ರಾಕಾರದ ಗೂಡುಗಳಲ್ಲಿ ವರ್ಣ ಚಿತ್ರಗಳಿವೆ. ಊರೊಳಗೆ ಇರುವ ವರದರಾಜ ದೇವಾಲಯ ೧೬ನೇ ಶತಕದ ವಿಜಯನಗರ ಕಾಲದ ವಿಶಾಲ ದೇವಾಲಯವಾಗಿದ್ದು ಮುಖ್ಯದ್ವಾರದಿಂದ ಹಿಡಿದು ಗರ್ಭಗುಡಿಯ ಹೊರ ಪ್ರಾಕಾರದ ಭರ್ತಿ ನೂರಾರು ಭಿತ್ತಿಚಿತ್ರಗಳನ್ನು ಹೊಂದಿದೆ. ಇದೇ ಕಾಲದ ಬೃಹದಾಕಾರದ ಏಕಾಂಬರನಾಥ ದೇವಾಲಯದಲ್ಲಿ ಬಣ್ಣದಲ್ಲಿ ಬರೆದ ಡಿಸೈನ್‌ಗಳಿವೆ. ಹೊರ ಪ್ರಕಾರದಲ್ಲಿ ಬೇರೆಡೆಯಿಂದ ತಂದಿರಿಸಿದ ಹಲವಾರು ಬೌದ್ಧ ಶಿಲ್ಪಗಳಿವೆ. ಊರ ಹೊರಗೆ ಇರುವ ತಿರುಪುರತ್ತಿಕುನ್ರಂ/ಅಥವ ಜಿನಕಂಚಿಯ ವರ್ಧಮಾನ ದೇವಾಲಯ ವಿಜಯನಗರದ ಸೈನಾಧಿಕಾರಿ ಇರುಗಪ್ಪ ಒಡೆಯ ಸುಮಾರು ೧೩೯೦ರ ವೇಳೆಯಲ್ಲಿ

ಕಟ್ಟಿಸಿದ್ದು ಮುಖಮಂಟಪದ ಮಚ್ಚಿಗೆಯಲ್ಲಿ ಜೈನ ಭವಾವಳಿಗೆ ಸಂಬಂಧಿಸಿದ ಕಥೆಗಳನ್ನು ಚಿತ್ರಿಸಿದೆ. ಸಪೂರಾದ ಆಕಾರಗಳು ಉದ್ದನೆಯ ಕಿರೀಟ, ತ್ರಿಭಂಗಿಯಲ್ಲಿರುವ ವ್ಯಕ್ತಿಗಳು ರಾಜರ ವೈಭವಯುತ ಅಲಂಕಾರ. ಸನ್ಯಾಸಿಗಳ ನಗ್ನ ವಿರಕ್ತತೆ, ಅಂಕಣಗಳಲ್ಲಿ ಕಥಾ ನಿರೂಪಣೆ ಶೈಲೀಕೃತವಾಗಿರುವ ಪ್ರಕೃತಿ ದೃಶ್ಯ ಇತ್ಯಾದಿಗಳಿಂದಾಗಿ ಇವು ವಿಜಯನಗರ ಕಾಲದ ಚಿತ್ರಕಲೆಯ ಉತ್ತಮ ಉದಾಹರಣೆಯಾಗಿದೆ.

ಎಚ್. ಜಿ.

## ಕಂಟ

ಕಂಟಗಳು ತಾಳೆಗರಿಯ ಮೇಲೆ ಬರೆಯಲು ಚಿತ್ರಿಸಲು ಬಳಸುವ ಚೂಪಾದ ಮೊನೆಯುಳ್ಳ ಲೋಹದ ಲೇಖನಿಗಳು. ಮುಖ್ಯವಾಗಿ ಕಬ್ಬಿಣದಿಂದ ಅಲಂಕಾರಕ್ಕಾಗಿ ಹಿತ್ತಾಳೆ, ಕಂಚು ಲೋಹಗಳನ್ನು ಬಳಸಿಕೊಂಡು ಇವುಗಳನ್ನು ತಯಾರಿಸುತ್ತಿದ್ದುದು ಕಂಡು ಬರುತ್ತದೆ. ಕಂಟಗಳು ಸುಂದರವಾಗಿಯೂ ವೈವಿಧ್ಯಪೂರ್ಣವಾದ ಅಲಂಕಾರ ಹೊಂದಿಯೂ ತಯಾರಿಸಲ್ಪಡುತ್ತಿದ್ದವು. ಇವುಗಳ ಒಂದು ತುದಿಯು ಚೂಪಾಗಿಯೂ ಬಿರುಸಾಗಿಯೂ ಇರುತ್ತದೆ. ಇವುಗಳ ಇನ್ನೊಂದು ತುದಿಯು ಕೂಡ ಚೂಪಾಗಿಯೇ ಇರಬಹುದು. ಇಲ್ಲವೆ ಒಂದಕ್ಕೊಂದು ಹತ್ತಿಕೊಂಡ ಗರಿಗಳನ್ನು ಬಿಡಿಸಿಕೊಳ್ಳಲು ಬರುವಂತೆ ಚಾಕುವಿನ ಆಕಾರ ಹೊಂದಿರಬಹುದಾಗಿದೆ. ಬರೆಯುವಾಗ ಗೆಜ್ಜೆಯ ಸದ್ದಿನಂತೆ ಮಧುರವಾದ ಸದ್ದು ಕೇಳುವಂತೆ ಕಲಾತ್ಮಕವಾಗಿ ನಿರ್ಮಿಸಿದ ಕಂಟಗಳು ದೊರಕುತ್ತವೆ. ತಾಳೆಗರಿಯ ಮೇಲೆ ಗೀರಿ ಬರೆಯಲು ಕಂಟದ ಮುಳ್ಳಿನ ಮೊನೆಯಂತಹ ಚೂಪಾದ ಭಾಗವನ್ನು ಉಪಯೋಗಿಸುತ್ತಾರೆ.

ಬಿ.ಕೆ.ಹಿ.

## ಕಂಪ್ಯೂಟರ್ ಕಲೆ

ಅಭಿವ್ಯಕ್ತಿಯ ಇತಿಹಾಸದಲ್ಲಿ ಕಲಾವಿದರು ದುಡಿಸಿಕೊಳ್ಳಲು ಹುಡುಕಿಕೊಂಡ ಮಾಧ್ಯಮಗಳು ಹಲವು. ೧೯೫೦ರಲ್ಲಿ ಕಂಪ್ಯೂಟರ್ ಹುಟ್ಟುಹಾಕಿದ ಸಂಚಲನಾತ್ಮಕ ಕ್ರಿಯೆಗಳು ಅಸಂಖ್ಯವಾದವು. ಕಲಾವಿದರು ಸೃಜನಶೀಲ ಮಾಧ್ಯಮವನ್ನಾಗಿ ಇದನ್ನು ೧೯೬೦ರಿಂದಲೂ ಕಂಡುಕೊಂಡಿದ್ದಾರೆ. ಹೆರಾಲ್ಡ್ ಕೊಹೆನ್ ಯಾವುದಾದರೂ ಒಂದು ನಿರ್ದಿಷ್ಟ ಗುರುತು ಅಥವಾ ಆಕಾರವನ್ನು ಹೇಗೆ ಚಿತ್ರಿಸಬೇಕೆಂಬ ರೀತಿಯನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಕಂಪ್ಯೂಟರ್‌ಗೆ ಕಲಿಸುವುದರಲ್ಲಿ ಹಲವು ವರ್ಷಗಳನ್ನು ವ್ಯಯಿಸಿದನು. ಮತ್ತೆ ಕೆಲವರು ವೀಕ್ಷಕರ ಚಲನೆ ಮತ್ತು ಶಬ್ದದ ಅಲೆಗಳಿಗೆ ಕಂಪ್ಯೂಟರ್ ಪ್ರತಿಕ್ರಿಯಿಸುವಂಥ ಕಾರ್ಯಕ್ರಮಗಳನ್ನು ತುಂಬಲು ಪ್ರಯತ್ನಿಸಿದರು. ೧೯೬೯ರಲ್ಲಿ ಈ ನಿಟ್ಟಿನ ಗಮನಾರ್ಹ ಸಾಧನೆಯಾಗಿ ಎಡ್ವರ್ಡ್ ಇಹನಟೋವಿಕ್ಜ್ ಕಂಪ್ಯೂಟರ್ ಶಿಲ್ಪವೊಂದನ್ನು ಸೃಷ್ಟಿಸಿದನು. ಒಂದು ರೀತಿಯಲ್ಲಿ 'ಕೈನೆಟಿಕ್ ಕಂಪ್ಯೂಟರ್ ಶಿಲ್ಪ'ದ ಕಲ್ಪನೆಯಿದು. ೨೫೬ ಪ್ರೊಸೆಸಿಂಗ್ ಎಲಿಮೆಂಟ್‌ಗಳು, ಒಂದು ಸೆಂಕೆಂಡಿಗೆ ಒಂದು ಬಿಲಿಯನ್ ನಡೆಗಳು, ೧೬ ಮಿಲಿಯ ವರ್ಣಛಾಯೆಗಳು, ೩೨ ಮೂಲಭೂತ ಕ್ರಿಯೆಗಳು ಕಲಾವಿದರ ಅಭಿವ್ಯಕ್ತಿಗೆ ಸಕ್ರಿಯವಾಗಿ, ವಿನಮ್ರವಾಗಿ ನಡೆದುಕೊಳ್ಳುತ್ತವೆ.



ಎನ್. ಮರಿಶಾಮಾಚಾರ್

ದುಡಿಸಿಕೊಳ್ಳುವ ಸೃಜನಶೀಲ ಮನಸ್ಸಿನ ತೀರ್ಮಾನಗಳಿಗಾಗಿ ಕಾಯುತ್ತಿರುತ್ತವೆ. ಶೇಖರಣಾಂಗವಾದ (Byte)ಕಲಾವಿದರಿಗಿಂದು ಸುಪರಿಚಿತ. ಕಂಪ್ಯೂಟರ್‌ನಿಂದ ಥರ್ಮಲ್ ಪ್ರಿಂಟೆಡ್ ಕಲೆಯನ್ನು ಕಲಾ ಇತಿಹಾಸ ಕಂಡಿದೆ. ಆದರೂ ಲೆಕ್ಕವಿಲ್ಲದಷ್ಟು ಬಣ್ಣದ ಬಿಂದುಗಳ ಮೂಲಕ ಮೂಡುವ ಒಂದು ಕೃತಿಯ ಹಲವು ಪುನರಾಕಾರಗಳು, ಬಣ್ಣಗಳು, ಹಲವು ಬಾರಿ ಒಟ್ಟುಗೂಡುವ, ವ್ಯತ್ಯಯಗೊಳ್ಳುವ ವಿವಿಧ ದಿಕ್ಕಿನ ವಿಚಿತ್ರ ವಿಶಿಷ್ಟ ನಡೆಗಳು ಇಂದಿನ ಪಾಪ್‌ನಂತರದ ಕಲಾವಿದರಿಗೆ ವರವಾಗಿವೆ. ಹಿರಿದು - ಕಿರಿದುಗೊಳಿಸುವ, ವಿಕೃತ(Distort)ಗೊಳಿಸುವ ಮತ್ತು ಕೊಲಾಜ್‌ನಂಥ ಪರಿಣಾಮಗಳನ್ನೂ ತಂದುಕೊಳ್ಳುವ ಮಸಕು ಅಥವಾ ಪ್ರಕಾಶ ಪಡೆಯುವ ನಡೆಗಳಂತೂ ಕಲಾವಿದರಿಗೆ ಸಂತಸ ನೀಡಬಲ್ಲ ನಡೆಗಳು. Digited tablet ಮೇಲೆ ನೇರವಾಗಿ ರೇಖಿಸಿ ಕಂಪ್ಯೂಟರ್‌ನಿಂದ ಚಿತ್ರಗಳನ್ನು ಪಡೆಯಬಹುದಾಗಿದೆ. ಅಥವಾ ಮೂಲ ರೇಖಾಚಿತ್ರವನ್ನು ಅದರ ಮೇಲಿಟ್ಟು ತಿದ್ದಿದರೂ ಆಯಿತು. ಅಗತ್ಯ ವರ್ಣ ದ್ರವ್ಯಗಳ ವಿವರ ತುಂಬಿದ Diskette ಮೂಲದಿಂದ ಜೆಟ್ ಸ್ಪ್ರೇವ್ಯವಸ್ಥೆ ಸೂಸುಬಾಯಿ ಹೊಂದಿರುವ ಎಲೆಕ್ಟ್ರಾನಿಕ್ ತೋಳಿನ ಮೂಲಕ ಅತ್ಯುತ್ತಮ ಮಟ್ಟದ ಫ್ಲಾಕ್ಸ್(Flax) ಕ್ಯಾನ್‌ವಾಸ್‌ಗಳ ಮೇಲೆ (ಈ ದುಬಾರಿ ಕ್ಯಾನ್‌ವಾಸ್‌ಗೆ ಬದಲಾಗಿ ಸಾಮಾನ್ಯ ಪ್ಲಾಸ್ಟಿಕ್, ಬಟ್ಟೆ, ಲೋಹ, ಕಾಗದ, ವಿನ್ನೆಲ್

ಮೊದಲಾದವನ್ನು ಬಳಸಬಹುದು) ಜಲಸಂಪರ್ಕಿತ ಆಕ್ರಿಲಿಕ್ ಬಣ್ಣಗಳಿಂದ ವಿವಿಧ ವರ್ಣದ್ರವ್ಯಗಳ ಸ್ಪ್ರೇಮಾಡಿದ ಹಲವು ಛಾಯಾಂತರಗಳ ನಂತರ ಕೃತಿಗಳು ಪೂರ್ಣಗೊಳ್ಳುತ್ತವೆ. ೧೯೯೧ರಲ್ಲಿ ಭಾರತದಲ್ಲಿ ಮೊದಲ ಬಾರಿಗೆ ಮುಂಬಯಿಯಲ್ಲಿ ೧೯೯೨ರಲ್ಲಿ ಬೆಂಗಳೂರಿನ ಸಾಕ್ಷಿ ಆರ್ಟ್ ಗ್ಯಾಲರಿಯಲ್ಲಿ ಎಂ. ಎಫ್. ಹುಸೇನ್, ಸೊರ್ಝಾ, ಅಕ್ಬರ್ ಪದಮಸಿ, ಪ್ರಭಾಕರ್ ಬಾರ್ವೆ, ಲಕ್ಷ್ಮಣ್ ಶ್ರೇಷ್ಠ, ಮಂಜಿತ್ ಬಾವಾ, ನವ್‌ಜೋತ್, ಅಲ್ತಾಫ್, ಅತುಲ್ ದೊಡಿಯರವರುಗಳ ಕಂಪ್ಯೂಟರ್ ಕಲಾಕೃತಿಗಳು ಪ್ರದರ್ಶಿತಗೊಂಡವು ಈ ಕಲಾವಿದರಿಗೆ ಕಂಪ್ಯೂಟರ್ ತಾಂತ್ರಿಕ ನೆರವು. ಒದಗಿಸಿಕೊಟ್ಟವರು ಮುಂಬಯಿಯ ಅಭಯ್ ಮಂಗಳರಾವ್, ಸೋನಾಲ್ ಝುವೇರಿ ಮತ್ತು ಅಭಯ್ ಶರ್ಮಾ, ನಂತರ ಹಲವು ಕಲಾವಿದರು ಈ ಮಾಧ್ಯಮದಲ್ಲಿ ಅಭಿವ್ಯಕ್ತಿಸಿದ್ದಾರೆ. ಇತ್ತೀಚೆಗೆ ಕರ್ನಾಟಕದಲ್ಲೂ ಡಾ॥ ರವೀಶ್ ಕಾಸರವಳ್ಳಿ ಮತ್ತು ಎನ್. ಮರಿಶಾಮಾಚಾರ್ ಅವರು ಈ ಮಾಧ್ಯಮದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ.

**ಕೆ.ವಿ.ಸು.**

## ಕಂಬಗಳು

ವಾಸ್ತುಕಲೆಯ ಅತ್ಯಂತ ಪ್ರಧಾನವಾದ ಒಂದು ಅಂಗವೆಂದರೆ ಕಂಬಗಳು. ಸಂಸ್ಕೃತ ಭಾಷೆಯ 'ಸ್ತಭ್' ಧಾತುವಿನಿಂದ ನಿಷ್ಪನ್ನವಾಧ 'ಸ್ತಂಭ' ಪದಕ್ಕೆ ಹಿಡಿದು ನಿಲ್ಲಿಸು, ಆಧರಿಸು ಎಂಬರ್ಥವಿದೆ. ಸಂಸ್ಕೃತದ 'ಸ್ತಂಭ' ಪದದ ಕನ್ನಡ ರೂಪವೇ ಕಂಬ. ಯಾವುದೇ ಒಂದು ಕಟ್ಟಡಕ್ಕೆ ಸುಭದ್ರ ಆಧಾರವನ್ನೊದಗಿಸುವ ವಾಸ್ತುಕಲೆಯ ವಿಭಾಗವೇ ಕಂಬಗಳು. ಕಟ್ಟಡಗಳಲ್ಲಿ ಅಡಿಪಾಯ ಹಾಗೂ ಮೇಲ್ಛಾವಣಿಗಳ ನಡುವಣ ಸಂಪರ್ಕ ಮಾಧ್ಯಮವಾಗಿ ಸ್ತಂಭಗಳು ಇಡೀ ಕಟ್ಟಡಕ್ಕೆ ಭದ್ರತೆಯನ್ನೊದಗಿಸುತ್ತವೆ.

ಸ್ತಂಭಗಳನ್ನು ಪೀಠ(Pedestal), ಪಾದ(Base), ದಂಡ(Shaft) ಹಾಗೂ ಗ್ರೀವ(Neck)ಗಳೆಂಬ ಭಾಗಗಳಾಗಿ ವಿಭಜಿಸಲಾಗಿದೆ. ಸ್ತಂಭದ ಮೊದಲ ಭಾಗವೇ ಪೀಠ ಅಥವಾ ಓಮ. ಇದನ್ನು ಸಣ್ಣವೇದಿಕೆಯಂತೆ ರಚಿಸಬಹುದಾಗಿದೆ. ಪೀಠದ ಮೇಲಿನ ಭಾಗ ಪಾದ. ಇದು ಸಾಮಾನ್ಯವಾಗಿ ಚೌಕಾಕಾರದ ಪೆಟ್ಟಿಗೆಯ ರೀತಿಯಲ್ಲಿರುತ್ತದೆ. ಸಿಂಹ, ವ್ಯಾಳಿ ಮುಂತಾದವುಗಳ ಶಿಲ್ಪವನ್ನೂ ಈ ಭಾಗದಲ್ಲಿ ಬಿಡಿಸಿರುತ್ತಾರೆ. ಇದರ ಮೇಲಿನ ಭಾಗ ದಂಡ-ಸ್ತಂಭದ ಪ್ರಧಾನ ಭಾಗ. ಸ್ತಂಭದ ರೂಪವಿನ್ಯಾಸಗಳನ್ನು ಈ ಭಾಗದ ಆಧಾರದ ಮೇಲೆಯೇ ನಿರ್ಧರಿಸಲಾಗುತ್ತದೆ. ದಂಡವು ನಾಲ್ಕು ಮುಖಗಳನ್ನು ಹೊಂದಿದ್ದರೆ ಬ್ರಹ್ಮಕಾಂತವೆಂದೂ, ಎಂಟು ಮುಖಗಳನ್ನು ಹೊಂದಿದ್ದರೆ ವಿಷ್ಣುಕಾಂತವೆಂದೂ, ಹದಿನಾರು ಮುಖಗಳಿದ್ದರೆ ಅಥವಾ ವೃತ್ತಾಕಾರವಾಗಿದ್ದರೆ ರುದ್ರಕಾಂತವೆಂದೂ ಹಾಗೂ ಐದು ಮುಖಗಳಿದ್ದರೆ ಶಿವಕಾಂತವೆಂದೂ ಮತ್ತು ಆರು ಮುಖಗಳಿದ್ದರೆ ಸ್ಕಂಧಕಾಂತವೆಂದೂ ಕರೆಯಲಾಗಿದೆ. ದಂಡದ ಮೇಲಿನ ಭಾಗವಾದ ಗ್ರೀವದ ಮುಖ್ಯಭಾಗಗಳೆಂದರೆ ಕ್ರಮವಾಗಿ ಕಲಶ(ಘಟ),ಹಾರಿಕಾ, ಅಸ್ಯ, ತಾಟಕಾ, ಕಂಠ, ಕುಂಭ, ನಿಮ್ನಕ(ಮಂಡಿ) ಫಲಕ, ವೀರಕಂಠ ಮತ್ತು ಬೋದಿಗೆ. ನಿಮ್ನಕ, ವೀರಕಂಠಗಳು ಸಾಮಾನ್ಯವಾಗಿ ಚೌಕಾಕಾರವಾಗಿರುತ್ತವೆ. ಬೋದಿಗೆಗಳ ಬಗೆಗಳೆಂದರೆ ತರಂಗ ಬೋದಿಗೆ ಮತ್ತು ಪುಷ್ಪಬೋದಿಗೆ. ತರಂಗಬೋದಿಗೆಯನ್ನು ಅಲೆಅಲೆಯಾಗಿ ರಚಿಸಿ ಅಲಂಕರಣ ಮಾಡಿದರೆ ಪುಷ್ಪಬೋದಿಗೆಯನ್ನು ಎಲೆ ಹೂ ಬಳ್ಳಿ ಚಿತ್ರಗಳಿಂದ ಅಲಂಕರಣ ಮಾಡಿರುತ್ತಾರೆ. ಕಂಬಗಳಲ್ಲಿ ಕಂಡುಬರುವ

ಮುಖ್ಯ ಪ್ರಭೇದಗಳು-ಪದ್ಮಕಾಂತ, ಚಿತ್ರಸ್ಕಂಭ, ಚಿತ್ರಕಂಠ, ಕುಂಭಸ್ತಂಭ, ಕೋಷ್ಠಸ್ತಂಭ ಹಾಗೂ ಸಂಯೋಗಸ್ಥಂಭ. ಪದ್ಮಕಾಂತಸ್ತಂಭವು ಮೂಲದಲ್ಲಿ ಪದ್ಮಗಳಿಂದ ಕೂಡಿದ ಪೀಠ, ಅದರ ಮೇಲೆ ಪಾಲಿಕಾ (ಸೇತುವೆಯಂತಹ ರಚನೆ) ಸುತ್ತಲೂ ಎಲೆ ಹೂ ಬಳ್ಳಿಗಳಿಂದ ಕೂಡಿದ ಚಿತ್ರ ಪಟ್ಟಿಕೆಗಳು, ಮೂಲದಿಂದ ತುದಿಯವರೆಗೂ ಮೊಗ್ಗುಗಳಿಂದ ಕೂಡಿರುತ್ತದೆ. ಕೆಲವೆಡೆ ಹೂಬಳ್ಳಿಗಳಿಗೆ ಬದಲಾಗಿ ಚಿತ್ರಪಟ್ಟಗಳ ಮೇಲೆ ಹಂಸ, ಸಿಂಹಮುಖ, ಗಂಧರ್ವರು ಇತ್ಯಾದಿ ಬಿಡಿ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿರುತ್ತದೆ. ಇಂತಹುದೇ ಸ್ತಂಭವನ್ನು ಪೀಠವಿಲ್ಲದೆ ರಚಿಸಿದಾಗ ಅದಕ್ಕೆ ಚಿತ್ರಸ್ತಂಭವೆಂದು ಹೆಸರು. ಇದು ಪದ್ಮಕಾಂತ ಸ್ತಂಭದ ಒಂದು ಉಪಪ್ರಭೇದವೇ ಆಗಿದೆ. ಕಂಠದ ಭಾಗದಲ್ಲಿ ಅಲಂಕರಣಗಳಿದ್ದರೆ ಚಿತ್ರಕಂಠ ಹಾಗೂ ಕಲಶವನ್ನು ಕಂಬದಲ್ಲಿ ಅಳವಡಿಸಿದ್ದರೆ ಅದು ಕುಂಭಸ್ತಂಭವೆನಿಸುತ್ತದೆ. ಮೂಲಸ್ತಂಭದಲ್ಲಿ ಕೋಷ್ಠಗಳನ್ನು ರಚಿಸಿ ಅಲಂಕರಿಸಿದ ಸ್ತಂಭವೇ ಕೋಷ್ಠಸ್ತಂಭ. ಈ ವಿಧದ ಕಂಬದ ಮೇಲೆ ಕೋಷ್ಠ, ಅದರಲ್ಲಿ ನಾಸಿಯುಕ್ತ ಪಂಜರವಿರುವುದು. ಈ ಕೋಷ್ಠದ ಅಕ್ಕಪಕ್ಕಗಳಲ್ಲಿ ಸಣ್ಣ ಸ್ತಂಭ(ಕ್ಷುದ್ರಪಾದ)ಗಳಿದ್ದು ಅದನ್ನು ವಿಧವಿಧವಾಗಿ ಬಿಡಿಸಿರುತ್ತಾರೆ. ಈ ಕಂಬಗಳ ಮೇಲೆ ತೋರಣವನ್ನು ರಚಿಸಬಹುದಾಗಿದ್ದು ಬೋದಿಗೆಯನ್ನು ಹೊಂದಿರುವುದಿಲ್ಲ. ಸಂಯೋಗಸ್ತಂಭವೆಂದರೆ ಒಂದೇ ಪೀಠದ ಮೇಲೆ ಒಂದು ಪ್ರಧಾನ ಸ್ತಂಭವನ್ನೂ ಅದರೊಂದಿಗೆ ಸಣ್ಣ ಸಣ್ಣ ಸ್ತಂಭಗಳನ್ನೂ ಸಂಯೋಗಿಸಿರುತ್ತಾರೆ. ಒಟ್ಟಾರೆ ನೋಡಿದರೆ ಅದು ಒಂದು ಸ್ತಂಭಸಂಯೋಗ ಅಥವಾ ಸ್ತಂಭಸಮೂಹದಂತೆ ತೋರುತ್ತದೆ.

ಶ್ಯಾರ



## ಕದಂಬರ ಕಲೆ

ಕದಂಬರ ಕಾಲದ (ಸುಮಾರು ೪ರಿಂದ ೬ನೇ ಶತಮಾನದವರೆಗೆ) ಶಿಲ್ಪ, ವಾಸ್ತುಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿಲ್ಲ. ಆದರೆ ಇವರ ಶಾಸನಗಳಲ್ಲಿ ಇವರು ನಿರ್ಮಿಸಿದ ವಾಸ್ತು, ಶಿಲ್ಪಗಳ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ಪ್ರಾಯಶ ವಾಸ್ತುಗಳು ಇಟ್ಟಿಗೆ ಇಲ್ಲವೆ ಮರದ ಕೃತಿಗಳಾಗಿದ್ದು ಕಾಲನ ಆಘಾತದಲ್ಲಿ ನಾಶವಾಗಿರಬಹುದಾಗಿದೆ. ಇವರ ರಾಜಧಾನಿಯಾಗಿದ್ದ ಬನವಾಸಿಯಲ್ಲಿ ಇಟ್ಟಿಗೆ ಹಾಗೂ ಜಂಬಿಟ್ಟಿಗೆಯಲ್ಲಿ ರಚಿಸಿದ ಕೋಟೆ ಕಟ್ಟಡಗಳ ತಳಪಾಯಗಳು

ದೊರೆತಿವೆ. ಇದೇ ರೀತಿ ಗುಡ್ನಾಪುರ. ಹಲಸಿ, ಉಚ್ಚಂಗಿ ಇತ್ಯಾದಿ ಕಡೆಗಳಲ್ಲೂ ದೊರೆಯುವ ಸಾಧ್ಯತೆಯಿದೆ. ಶಿಕಾರಿಪುರ ತಾಲೂಕಿನ ಮಳವಳ್ಳಿಯ ಲೋಕನಾಥ, ತಾಳಗುಂದದ ಪ್ರಣವೇಶ್ವರ ಬಳ್ಳಿಗಾವೆಯ ಪಂಚಮುಖ ಲಿಂಗ ದೇವಾಲಯಗಳು ಈ ಕಾಲದ ರಚನೆಗಳೆಂದು ಹೇಳಬಹುದಾದರೂ ಮುಂದಿನ ಕಾಲದಲ್ಲಿ ಜೀರ್ಣೋದ್ಧಾರವಾಗಿರುವ ಸಾಧ್ಯತೆಯಿದೆ. ಪ್ರಣವೇಶ್ವರ ದೇವಾಲಯ ಸರಳವಾದ ಚೌಕಾಕಾರದ ಗರ್ಭಗೃಹ ಹಾಗೂ ವಿಶಾಲವಾದ ಹಜಾರ ಅಥವಾ ಅಂತರಾಳ ಮಾತ್ರ ಹೊಂದಿದೆ. ಉದ್ದನೆಯ ಕಂಬದಾಕಾರದ ಲಿಂಗ ಗರ್ಭಗುಡಿಯಲ್ಲಿದೆ. ಮುಂದಿನ ಬಯಲಲ್ಲಿರುವ ಅಷ್ಟಕೋನಾಕಾರದ ಯೂಪಸ್ತಂಭವನ್ನು ಹೋಲುವ ಕಂಬದ ಮೇಲಿನ ಶಾಸನ ಪ್ರಖ್ಯಾತವಾಗಿದೆ. ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ಮಯೂರ ಕದಂಬನ ಶಾಸನದ ಬಳಿಯಲ್ಲಿ ಹಲವಾರು ಪುರಾತನ ಅಂಡಾಕೃತಿಯ ಲಿಂಗಗಳಿದ್ದು ಅಲ್ಲಿ ಕದಂಬರ ದೇವಾಲಯ ಇದ್ದಿರಬಹುದು. ಬನವಾಸಿಯ ಮಧುಕೇಶ್ವರ, ಕಾರ್ತಿಕೇಯ; ಗುಡ್ನಾಪುರದ ರತಿ ಮನ್ಮಥ ಇತ್ಯಾದಿ ಶಿಲ್ಪಗಳು ಈ ಕಾಲದ್ದಾಗಿರಬಹುದು. ನಾಸಿಕ್ ಬಳಿಯ ನೋರ್ವಾ ಮತ್ತು ಆರವೇಲಾ ಗುಹಾಲಯಗಳು ಕದಂಬರದೆಂದು ವಿದ್ವಾಂಸರು ನಿರ್ಧರಿಸಿದ್ದಾರೆ.

ಜಿ. ಟಿ. ಜ.

## ಕನಕಗಿರಿ

ಹಂಪೆಯ ಸಮೀಪ ಆದರೆ ರಾಯಚೂರು ಜಿಲ್ಲೆಯ ಕನಕಗಿರಿ ಐತಿಹಾಸಿಕವಾಗಿ ಪ್ರಸಿದ್ಧ ಸ್ಥಳ. ಇಲ್ಲಿಯ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯ ವಿಶಾಲವಾಗಿದ್ದು ಎತ್ತರವಾದ ಹೊರಗೋಡೆಯ ಎರಡು ಬದಿಯ ಗೂಡುಗಳಲ್ಲಿ, ಒಳಾಂಗಣದ ವಿವಿಧ ದೇವಾಲಯ



ಮಂಟಪಗಳ ಮೇಲ್ಭಾಗದ ಗೂಡುಗಳಲ್ಲಿ ನೂರಾರು ಗಾರೆಯ ಶಿಲ್ಪಗಳಿವೆ. ಗರ್ಭಗುಡಿಯ ಮುಂದಿರುವ ಮಂಟಪದ ಮೇಲ್ಭಾವಣಿಯಲ್ಲಿ ಚಿತ್ರ ಕಲೆ ಇದ್ದ ಗುರುತು ಕಂಡು ಬರುತ್ತದೆ. ಇಂದು ಅಲ್ಲಿ ಮರ ಹತ್ತಿ ಆಡುತ್ತಿರುವ ಬಾಲಕನ ಚಿತ್ರವಷ್ಟೆ ಉಳಿದಿರುವುದು. ಪ್ರಾಯಶ ಅದು ಕೃಷ್ಣಗೆಳೆಯರೊಡನೆ ಆಡುತ್ತಿರುವ ಸನ್ನಿವೇಶದ್ದಿರಬಹುದು. ತೀರಾ ಹೊರಗಿನ ಪ್ರವೇಶದ್ವಾರದ ಒಳ ಮೇಲ್ಭಾವಣಿಯಲ್ಲಿ ಮೂರು ಅಂಕಣಗಳು ಇದ್ದು ಅವುಗಳ ಮಧ್ಯೆ ಆಲದೆಲೆಯ ಮೇಲಿನ ಬಾಲಕೃಷ್ಣ ಹಾಗೂ ಸುತ್ತಲೂ ಹಲವಾರು ವಿನ್ಯಾಸಗಳು ಡಿಸೈನ್‌ಗಳು ಇವೆ. ಒಂದು ಅಂಕಣದ ಅಂಚಿನಲ್ಲಿ ಪಟ್ಟಿಕೆಗಳಾಗಿ ವಿಂಗಡಿಸಿ ರತಿ ಮನ್ಮಥ; ಶೃಂಗಾರ ನಿರತ ದಂಪತಿಗಳು ಕೆಲವು ಪ್ರಾಣಿಗಳು ಇತ್ಯಾದಿ ಚಿತ್ರ ರಚಿಸಿದೆ. ದೇವಾಲಯ ವಿಜಯನಗರ ಕಾಲದಲ್ಲಿ ಎಂದರೆ ೧೬ನೇ ಶತಮಾನದಲ್ಲಿ ನಿರ್ಮಿತವಾದಂತೆ ಕಂಡು ಬರುತ್ತದೆಯಲ್ಲದೆ. ಇಲ್ಲಿಯ ಚಿತ್ರಗಳನ್ನೂ ಅದೇ ಕಾಲಕ್ಕೆ ಹೊಂದಿಸಬಹುದಾಗಿದೆ. ರೇಖೆಯ ಲಾಲಿತ್ಯ, ಬಣ್ಣಗಾರಿಕೆ, ಆಕಾರಗಳ ಮೋಹಕತನ ಇತ್ಯಾದಿಗಳೆಲ್ಲವೂ ಮೈಸೂರು ಶೈಲಿಗಿಂತ ಮುಂಚಿನವಾಗಿವೆ.

ಅಂನ

## ಕರ್ನಾಟಕದ ಆಧುನಿಕ ಶಿಲ್ಪಕಲೆ

ಪಶ್ಚಿಮದ ರಾಷ್ಟ್ರಗಳ ಕಲೆಯಂತೆ ನಮ್ಮ ರಾಜ್ಯದ ಆಧುನಿಕ ಶಿಲ್ಪಕಲೆ ಹಿಂದಿನ ಸಂಪ್ರದಾಯಕ್ಕೆ ಬದಲಿಯಾಗಿ ರೂಪುಗೊಂಡದ್ದಲ್ಲ; ಕುತೂಹಲಕಾರಿಯೂ ಅಲ್ಲ. ಹೊಸ ಅನುಭವಗಳ ಅಭಿವ್ಯಕ್ತಿಗಾಗಿ ಬ್ರಿಟಿಷರ ವಿಕ್ಟೋರಿಯನ್ ಪ್ರಭಾವದ ಅಕೆಡೆಮಿಕ್ ಶೈಲಿಯನ್ನು ಕಾಲಕಾಲಕ್ಕೆ ಹಲವು ಬದಲಾವಣೆಗಳ ಮೆರುಗು ನೀಡಿ, ನಮ್ಮ ಮೂಲನೆಲೆಯ ಸತ್ವಗಳನ್ನು ಸಂಯೋಜಿಸಿ ನಮಗೆ ಬೇಕಾದಂತೆ ಕಲ್ಪಿಸಿಕೊಂಡ ಶಿಲ್ಪಕಲೆ ನಮ್ಮದು. ಈ ನಡುವೆ ಕರಕುಶಲ ಕಲೆಯಲ್ಲಿ ಸಂಪ್ರದಾಯ ಶಿಲ್ಪಗಳೂ ಸೃಷ್ಟಿಗೊಳ್ಳುತ್ತ ಬಂದಿವೆ.

ಮುಂಬಯಿಯ ಗಣಪತಿರಾವ್ ಕಾಶೀನಾಥ್ ಮ್ಹಾತ್ರೆ ೧೯೧೫ರ ಕಾಲಕ್ಕೆ ದಿವಾನ್ ಶೇಷಾದ್ರಿ ಅಯ್ಯರ್‌ರವರ ಜ್ಞಾಪಕಾರ್ಥವಾಗಿ ಅವರ ಮೂರ್ತಿಶಿಲ್ಪ ರಚಿಸಲು ಕಲಾಭಿಮಾನಿ ಕೃಷ್ಣರಾಜ ಒಡೆಯರವರಿಂದ ಮೈಸೂರಿಗೆ ಆಹ್ವಾನಿಸಲ್ಪಟ್ಟರು. ನಂತರ ಚಾಮರಾಜೇಂದ್ರ ಒಡೆಯರ್ ಅವರ ಭಾವಶಿಲ್ಪವನ್ನು ರಚಿಸಿದರು. ಸುಮಾರು ಅದೇ ಕಾಲಕ್ಕೆ ಮೈಸೂರಿನಲ್ಲಿ ಜರ್ಮನಿಯ ಜಿಲಾದಿನ್ ಉಡ್‌ವಿಲ್ಲೆ, ಇಂಗ್ಲೆಂಡಿನ ಸ್ಟೆರ್ಲಿಂಗ್, ಇಟಲಿಯ ಶಿಲ್ಪಿ ಕೊಲ್ಯಾಸ್ ರಾಬರ್ಟ್‌ರವರುಗಳೂ ಅರಸರ ಆಶ್ರಯದಲ್ಲಿ ಇದ್ದರು.

ಕೆ. ವೆಂಕಟಪ್ಪ (೧೮೮೭-೧೯೬೨) ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ಚಿತ್ರಕಲೆ ಕಲಿತ ನಂತರ ಕಲ್ಕತ್ತಾ ಕಲಾಶಾಲೆಯಲ್ಲಿ ಕಲಿತು ೧೯೧೬ರಲ್ಲಿ ಹಿಂದಿರುಗಿದರು. ಕಲ್ಕತ್ತೆಯಲ್ಲಿ Modelling (ರೂಪಶಿಲ್ಪ)ನಲ್ಲಿ ಸಾಕಷ್ಟು ಸಮಯ ಕಳೆದಿದ್ದರು. ರವೀಂದ್ರನಾಥ ಠಾಕೂರರ ಭಾವಶಿಲ್ಪ ಅದರ ಫಲವಾಗಿ ಮೂಡಿಬಂದಿದೆ. ಹೋಟೆಲಿನ ಮಾಣಿಯೊಬ್ಬನ ರೂಪಶಿಲ್ಪವೂ ನಮ್ಮ ಸಂಪ್ರದಾಯಕ್ಕೆ ಹೊಸದೇ ಆಗಿತ್ತು. ೧೯೨೫ರ ಕಾಲಕ್ಕೆ ಮೈಸೂರು ಅರಸರ ಆಸ್ಥಾನ ಶಿಲ್ಪಿಯಾಗಿ ಬಸವಯ್ಯ (೧೯೦೦-೧೯೭೪) ನೇಮಕಗೊಂಡರು. ೧೯೨೫-೪೦ರ ನಡುವೆ ಹಲವು ವ್ಯಕ್ತಿಗಳ ರೂಪಶಿಲ್ಪಗಳು ಸೃಷ್ಟಿಯಾದವು. ಆರ್. ಎಸ್. ನಾಯಿಡು ಸ್ವಯಂಕಲಿಕೆಯ ಶಿಲ್ಪಿ-ಚಿತ್ರ ಕಲಾವಿದರು. ಪ್ಲಾಸ್ಟರ್ ಮಾಧ್ಯಮದ ತೀವ್ರ ವ್ಯಂಗ್ಯ ವಿಡಂಬನೆಗಳ ಉಬ್ಬುಶಿಲ್ಪಗಳು



ಅವರಿಂದ ಸೃಷ್ಟಿಯಾದವು. ಲೆನಿನ್, ಗಾರ್ಕಿ, ಮುಸಲೋನಿ, ಗಾಂಧಿ, ಕುವೆಂಪು, ಬೇಂದ್ರೆ ಮೊದಲಾದವರ ರೂಪಶಿಲ್ಪಗಳನ್ನೂ ರೂಪಿಸಿದರು. ಕೊಡಗಿನ ಪೊನ್ನಪ್ಪ ರಾಜಾರಾಮ್ (೧೯೨೭-೧೯೬೧) ಮರಗೆತ್ತನೆಯಲ್ಲಿ ಆಸಕ್ತಿ ವಹಿಸಿ ಹಲವು ಶಿಲ್ಪಗಳನ್ನು ಸೃಷ್ಟಿಸಿದರು. ೧೯೫೦ರಲ್ಲೇ ಬಾಂಬೆ ಆರ್ಟ್ ಸೊಸೈಟಿಯ ಬಹುಮಾನ ವಿಜೇತರು. ಆಧುನಿಕ ಶಿಲ್ಪರಚನೆಯ



ವೆಂಕಟಾಚಲಪತಿ



ಯು. ಭಾಸ್ಕರರಾವ್



ಎನ್. ಪುಷ್ಪಮಾಲ



ವಿ.ಎ. ದೇಶಪಾಂಡೆ

ತಂತ್ರಗಳನ್ನು ಪಶ್ಚಿಮದ ಸ್ಫೂರ್ತಿಯಲ್ಲಿ ದುಡಿಸಿಕೊಂಡ ಸೃಷ್ಟಿಗಳವರವು.(ಭಾರತದ ಆಧುನಿಕ ಶಿಲ್ಪಕಲೆಗೆ ಪ್ರಮುಖ ಕೊಡುಗೆಗಳನ್ನು ನೀಡಿರುವ ಶಂಖು ಚೌಧುರಿ, ಧನರಾಜ್ ಭಗತ್, ಸತೀಶ್ ಗುಜ್ರಾಲ್‌ರವರುಗಳು ರಾಜಾರಾಮ್‌ರವರ ಶಿಲ್ಪಗಳನ್ನು ಸಂಗ್ರಹಿಸಿದ್ದಾರೆ. ಕೆಲವು ಶಿಲ್ಪಗಳು ಬೆಂಗಳೂರಿನ ವೆಂಕಟಪ್ಪ ಗ್ಯಾಲರಿಯಲ್ಲಿವೆ.) ಕಲಾವಿಮರ್ಶಕ ವೆಂಕಟಾಚಲಂ ಬೆಂಗಳೂರಿನಲ್ಲಿದ್ದ ಸಂದರ್ಭದಲ್ಲಿ ಪ್ರಾದೇಶಿಕ ವಿನ್ಯಾಸ ಕೇಂದ್ರದಲ್ಲಿ ಕಲಾವಿದರಾಗಿದ್ದ ಶಂಕರ್ ಶಿಲೆಯ ಮಾಧ್ಯಮದಲ್ಲಿ ಪಶ್ಚಿಮದ ಅದರಲ್ಲೂ ಮೊಡಿಗ್ಲಿಯಾನಿ ಸ್ಫೂರ್ತಿಯ ನೀಳ ಮೊಗಗಳನ್ನು ಶಿಲ್ಪಿಸಿದ್ದಾರೆ. ಅದೇ ಕೇಂದ್ರದ ವಿ. ಗೋಪಾಲ್, ಅಪ್ಪುಕುಟ್ಟನ್ ಆಚಾರಿಯವರ ಆಧುನಿಕ ಸಂವೇದನೆಯ ಶಿಲ್ಪಗಳು ಹಲವರಿಗೆ ಸ್ಫೂರ್ತಿನೀಡಿದ್ದುಂಟು. We four ತಂಡದ ಚಿತ್ರಕಲಾ ಪ್ರದರ್ಶನವೂ ಆಧುನಿಕ ಗಾಳಿ ಬೀಸಲು ಸಾಕಷ್ಟು ಕಾರಣವಾಗಿದೆ. ನಂತರದ ಬೆಳವಣಿಗೆ ಚಿತ್ರಕಲೆಗೆ ಹೋಲಿಸಿದರೆ ಮೇಲ್ನೋಟಕ್ಕೆ ದೊಡ್ಡ ರೀತಿಯಲ್ಲಿ ಕಾಣುವುದಿಲ್ಲವಾದರೂ ಪುಷ್ಪಮಾಲಾರಂಥ ಯುವ ಕಲಾವಿದೆ ನವದೆಹಲಿಯ ಟ್ರೈ-ನಾಲೆಯಲ್ಲಿ ಪ್ರಶಸ್ತಿಗೆ ಪಾತ್ರವಾಗುವಂಥ ಟೆರಾಕೋಟಾ ಶಿಲ್ಪಸೃಷ್ಟಿಸುವಂಥ ಸಂದರ್ಭ ಉಂಟಾದದ್ದು ಗಮನಾರ್ಹ. ಈ ಹಂತಕ್ಕೆ ನಮ್ಮ ಆಧುನಿಕ ಶಿಲ್ಪಕಲೆ ತಲುಪಲು ನಮ್ಮ ಯುವಪೀಳಿಗೆಯ ಹಿಂಗದ ಅನ್ವೇಷಣಾದಾಹ ಕಾರಣ.

ಬರೋಡಾ ಕಲಾಶಾಲೆಯಲ್ಲಿ ಬಹು ಹಿಂದೆಯೇ ಕಲಿತ ಎನ್. ಎಚ್. ಕುಲಕರ್ಣಿ, ಜಾನಪದ- ಆಧುನಿಕತೆಗಳನ್ನು ಕಸಿಮಾಡಿದ ಬಾಲನ್ ನಂಬಿಯಾರ್, ವೆಂಕಟಾಚಲಪತಿ, ಎಲ್. ಪಿ. ಅಂಚನ್, ಆಧುನಿಕ ಸೆಳಕುಗಳನ್ನು ಹೊಂದಿಸಿಕೊಂಡ ಎ. ವಿ. ದೇಶಪಾಂಡೆ, ಬಾಸ್ಕರ್‌ರಾವ್, ಯೂಸೂಫ್ ಅರಕ್ಕಲ್, ಶ್ಯಾಮ್‌ಸುಂದರ್, ಬೌನಿ, ಜಾನ್ ದೇವರಾಜ್ ಪ್ರಭಾವಗಳ ನಡುವೆಯೂ ಗಮನಾರ್ಹ ಕೊಡುಗೆಗಳನ್ನು ನೀಡಿದ್ದಾರೆ. ಬೆಂಗಳೂರಿನ ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕ ಮ್ಯೂಸಿಯಂ ೧೯೮೨ರಲ್ಲಿ (Techno Art Camp)ವ್ಯವಸ್ಥೆ ಮಾಡಿತ್ತು. (ಶಿವಸಿಂಗ್, ಅಜಿತ್ ಚಕ್ರವರ್ತಿ, ರಾಘವ ಕನೇರಿಯಾ, ಕನಯಿ ಕುನ್ನಿರಾಮನ್, ವಿದ್ಯಾಶಂಕರ ಸ್ಥಪತಿ, ಎಸ್. ಜಿ. ವಾಸುದೇವ್, ಜಿ. ಎಸ್. ಶೆಣೈ ಭಾಸ್ಕರ್‌ರಾವ್, ಅಂಚನ್, ದೇಶಪಾಂಡೆಯವರುಗಳು ಭಾಗವಹಿಸಿದ್ದರು) ಆಗ ತಾಂತ್ರಿಕತೆಯ ನೆರವು ಪಡೆದ ವಿಶಿಷ್ಟ ಶಿಲ್ಪಗಳು ಸೃಷ್ಟಿಯಾದವು. ಈಚೆಗೆ ನಮ್ಮ ಯುವ ಪೀಳಿಗೆಯ ಶಿಲ್ಪಿಗಳು ಹೊರಗಿನ ಹೊಸ ಗಾಳಿಗೆ ತೆರೆದುಕೊಂಡು ವಿಶಿಷ್ಟವಾಗಿ ಸೃಷ್ಟಿಸುತ್ತಿದ್ದಾರೆ. ಕೆ. ಜಿ. ಅರುಣ್, ಉಮೇಶ್, ಎಂ. ಸಿ. ರಮೇಶ್, ವಿ. ಓಂಪ್ರಕಾಶ್ ಮೊದಲಾದವರು ಭರವಸೆಯನ್ನು ಹುಟ್ಟಿಸಿದ್ದಾರೆ. ೧೯೮೦ರ ದಶಕದಲ್ಲಿ ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಹೆನ್ರಿಮೂರ್ ಶಿಲ್ಪಗಳ ಪ್ರದರ್ಶನ ಮತ್ತು 'ಬ್ರಿಟಿಶ್ ಶಿಲ್ಪ ೪೦ ವರ್ಷ'ಗಳ ಪ್ರದರ್ಶನ ಗಮನಾರ್ಹ ಪರಿಣಾಮ ಬೀರಿವೆ. ಕರ್ನಾಟಕದಲ್ಲಿ ಮೊದಲಬಾರಿಗೆ ಗುಲ್ಬರ್ಗಾದಲ್ಲಿ ೧೯೯೨-೯೩ರಲ್ಲಿ ಎರಡು ಅಂತರ್ರಾಷ್ಟ್ರೀಯ ಶಿಲ್ಪಿಗಳ ಸಿಂಪೋಸಿಯಂಗಳು ನಡೆದವು. ಎರಡನೆಯದರಲ್ಲಿ ಚಿತ್ರಕಾರರೂ ಇದ್ದರು. ಸಮೂಹಶಿಲ್ಪ ರಾಜ್ಯ ಲಲಿತ ಕಲಾ ಅಕಾಡೆಮಿಯ ಆಶ್ರಯದಲ್ಲಿ ಬೆಂಗಳೂರಿನಲ್ಲಿ ಮೂಡಿಬಂದಿದೆ. ಇಂದಿನ ಹೊಸ ಸಂದರ್ಭದ ಶಿಲ್ಪಿಗಳು ಪ್ರಭಾವಗಳ ನಡುವೆಯೂ ವೈವಿಧ್ಯಮಯ ಮಾಧ್ಯಮಗಳಲ್ಲಿ construction, assemblage, installationsಗಳನ್ನೂ ಒಳಗೊಂಡಂತೆ ಸಮಕಾಲೀನವಾಗಿ ಸೃಷ್ಟಿಸುತ್ತಿದ್ದಾರೆ.

ಕೆವಿಸು.

## ಕರ್ನಾಟಕದ ಚಿತ್ರಕಲೆ

ಕರ್ನಾಟಕದ ಚಿತ್ರಕಲೆಯ ಇತಿಹಾಸದ ಪ್ರಾರಂಭ ಶಿಲಾಯುಗದಿಂದಲೇ ಎಂದು ತಿಳಿದು ಬರುತ್ತದೆ. ಕರ್ನಾಟಕದ ಚಿತ್ರಕಲೆ ಈಗ ಉಳಿದು ಬಂದಿರುವ ಬಗ್ಗೆ ಕರ್ನಾಟಕದ ಉತ್ತರ ಭಾಗದ ಹಲವು ಕಡೆ ನೋಡಲು ಸಿಗುವ ಗವಿ ಚಿತ್ರಗಳು ಬಹು ಪ್ರಾಚೀನವಾದವುಗಳು. ಈ ಬಗೆಯ ಚಿತ್ರಗಳು ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ, ರಾಯಚೂರು, ಆನೆಗೊಂದಿಗಳಲ್ಲಿ ಕಂಡು ಬಂದಿದ್ದು, ಚಿತ್ರಗಳೆಲ್ಲಾ ಗೀರು ಚಿತ್ರಗಳು, ಮಾನವನಲ್ಲದೆ ಪ್ರಾಣಿಗಳ ಆಕಾರಗಳನ್ನು ಕಾಣಬಹುದು. ಕ್ರಿ.ಪೂ. ಒಂದನೆಯ ಶತಮಾನದಿಂದ ಕ್ರಿ.ಶ. ಏಳನೆಯ ಶತಮಾನದವರೆಗೆ ಅಜಂತಾದಲ್ಲಿ ಭಿತ್ತಿಚಿತ್ರಗಳನ್ನು ಕಾಣಬಹುದು. ಇಲ್ಲಿನ ಗುಹೆಗಳಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಚಿತ್ರ ಮತ್ತು ಶಿಲ್ಪಗಳಿದ್ದು ಭಾವ, ಭಂಗಿ, ಮುದ್ರೆಗಳು ಕೇಶಾಲಂಕಾರ, ಉಡಿಗೆ ತೊಡಿಗೆ, ಹೂ, ಹಣ್ಣು, ಪಕ್ಷಿಗಳು ಮುಂತಾದವು ರಮ್ಯವಾಗಿ ಚಿತ್ರಿಸಲಾಗಿದೆ. ಚಾಲುಕ್ಯರ ರಾಜಧಾನಿ ಬಾದಾಮಿಯ ಗುಹೆಗಳಲ್ಲಿ ವೈಶಿಷ್ಟವನ್ನು ಕಾಣಬಹುದು. ಚಾಲುಕ್ಯರ ನಂತರ ರಾಷ್ಟ್ರಕೂಟರ ಕಾಲದಲ್ಲಿ ಎಲ್ಲೋರಾದ ಕೈಲಾಸ ದೇವಾಲಯ ಪ್ರಮುಖವಾದುದು.

ವಿಜಯನಗರದ ರಾಜರ ಕಾಲದಲ್ಲಿ ವರ್ಣಚಿತ್ರಕಲೆ ಅತ್ಯಂತ ಹಿರಿಮೆಯನ್ನು ಸಾಧಿಸಿತು. ಹಂಪೆಯ ವಿರೂಪಾಕ್ಷ ದೇವಾಲಯದ ಚಾವಣಿ ಹಾಗೂ ತೊಲೆಗಳ ಮೇಲೆ ವರ್ಣಚಿತ್ರಗಳನ್ನು ಕಾಣಬಹುದು. ಈ ಕಾಲಕ್ಕೆ ಸೇರಿದ ಚಿತ್ರಗಳು ಹಿಂದೂಪುರದ ಸಮೀಪದಲ್ಲಿರುವ ಲೇಪಾಕ್ಷಿಯಲ್ಲಿವೆ. ವಿಜಯನಗರ ಕಾಲದ ಚಿತ್ರ ಮತ್ತು ಶಿಲ್ಪ ಇಲ್ಲಿ ಉನ್ನತಿ ಮುಟ್ಟಿದೆ. ಇಲ್ಲಿನ ಚಿತ್ರಗಳಲ್ಲಿ ವ್ಯಕ್ತಿಗಳು ಪಾರ್ಶ್ವ ನೋಟದಲ್ಲಿದ್ದು, ಎರಡು ಕಣ್ಣುಗಳನ್ನು ಚಿತ್ರಿಸಿರುವುದು ಹಾಗೂ ಕಾಲುಗಳು ಮಗ್ಗುಲಿನಿಂದ ಕಾಣುವಂತೆ ಚಿತ್ರಿಸಲಾಗಿದೆ. ಬಿಜಾಪುರದಲ್ಲಿ ದಖ್ಖನೀ ಚಿತ್ರಕಲೆ ಬೆಳೆದು, ಬಿಜಾಪುರದ ಆದಿಲ್‌ಶಾಹಿ ಸುಲ್ತಾನರ ಕಾಲದಲ್ಲಿ ಚಿಕಣಿ ಚಿತ್ರಕಲೆಗೆ ಪ್ರೋತ್ಸಾಹ ದೊರೆಯಿತು. ವಿಜಯನಗರದ ಕಾಲದ ಅನಂತರ ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟವರು ಮೈಸೂರು ಅರಸರು. ವಿಜಯನಗರ ಶೈಲಿಯ ಚಿತ್ರಗಳಿಗಿಂತ ಸ್ವಲ್ಪ ಬದಲಾವಣೆಯ





ಎಂ.ವಿ. ಮಿಣಜಿಗಿ



ಎಸ್.ಎಂ. ಪಂ



ವೈ. ಸುಬ್ರಮಣ್ಯರಾಜು



ಕೆ ಕೆ ಹೆ

ಭಿತ್ತಿಚಿತ್ರಗಳನ್ನು ಸೀಬಿ, ಶ್ರವಣಬೆಳಗೊಳ, ಶ್ರೀರಂಗಪಟ್ಟಣ ಮೈಸೂರು, ಮುಡುಕುತೊರೆ ಮುಂತಾದ ಸ್ಥಳಗಳಲ್ಲಿ ಕಾಣಬಹುದು. ಉತ್ತರ ಕರ್ನಾಟಕದ ನಿಪ್ಪಾಣಿಯ ವಾಡೆಯಲ್ಲಿ ಅನೇಕ ಚಿತ್ರಗಳಿದ್ದು ಇಲ್ಲಿ ಬಹುಪಾಲು ಚಿತ್ರಗಳು ಕೃಷ್ಣನ ಜೀವನಕ್ಕೆ ಸಂಬಂಧಿಸಿವೆ. ನರಗುಂದದಲ್ಲೂ ಅನೇಕ ಭಿತ್ತಿಚಿತ್ರಗಳನ್ನು ಕಾಣಬಹುದು.

ಮೈಸೂರು ಅರಸರು ಚಿತ್ರಕಲೆಗೆ ಹೆಚ್ಚು ಪ್ರೋತ್ಸಾಹ ಹಾಗೂ ಪುರಸ್ಕಾರ ನೀಡಿದರು. ಅವರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಪ್ರಮುಖರು.ಚಾಮರಾಜ ನಗರದಲ್ಲಿ ೧೮೮೦ರಲ್ಲಿ ಕಟ್ಟಿಸಿದ ಚಾಮರಾಜೇಶ್ವರ ಗುಡಿ ಮತ್ತು ವೆಂಕಟರಮಣಸ್ವಾಮಿ ದೇವಾಲಯದಲ್ಲಿ ಅನೇಕ ಭಿತ್ತಿಚಿತ್ರಗಳಿವೆ. ಇವರ ಕಾಲದಲ್ಲೇ ಅಪೂರ್ವ ಕಲಾಕೃತಿಗಳ 'ಶ್ರೀ ತತ್ವನಿಧಿ' ರಚಿತವಾಗಿತ್ತು. ಇಲ್ಲಿಯ ಚಿತ್ರಗಳಲ್ಲಿ ವರ್ಣಗಳ ಸಮ್ಮಿಳನ, ದಪ್ಪ ವರ್ಣಗಳ ಬಳಕೆ, ರೇಖಾ ವಿನ್ಯಾಸ ಮೆಚ್ಚುವಂತಹವು. ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ಜಗನ್ಮೋಹನ ಅರಮನೆಯನ್ನು ಕಟ್ಟಿಸಿದರು ಮತ್ತು ಇಲ್ಲಿ ಕೆಲವು ಭಿತ್ತಿಚಿತ್ರಗಳಿವೆ. ಚಾಮರಾಜ ಒಡೆಯರ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲೂ ಪ್ರಾಚೀನ ಸಾಂಪ್ರದಾಯಕ ವರ್ಣಚಿತ್ರಕಲೆಗೆ ಸಾಕಷ್ಟು ಪ್ರೋತ್ಸಾಹ ದೊರೆಯಿತು. ಈ ಅರಸರ ಕಾಲದಲ್ಲಿ ಬೆಳೆದ ಮೈಸೂರು ದೇಶೀಯ ಶೈಲಿ ಅತ್ಯಂತ ಪ್ರಸಿದ್ಧವಾಗಿದೆ. ಈ ಸಂಪ್ರದಾಯದಲ್ಲಿ ವಿಶೇಷ ಸುವರ್ಣ ಲೇಪನ ಹಾಗೂ ದೇಶೀಯ ಮೂಲ ವರ್ಣಗಳನ್ನು ಉಪಯೋಗಿಸುತ್ತಿದ್ದರು.

ಭಾರತ ಪಾಶ್ಚಿಮಾತ್ಯರ ಆಳ್ವಿಕೆಗೆ ಒಳಪಟ್ಟಾಗ, ಅವರ ಕಲಾ ಶಿಕ್ಷಣ ಪದ್ಧತಿ ನಮ್ಮಲ್ಲೂ ಬಳಕೆಯಲ್ಲಿತ್ತು ಮತ್ತು ಮುಂಬಯಿಯ ಜೆ.ಜೆ. ಕಲಾಶಾಲೆಯಲ್ಲಿ ಕಲಿತು ಬಂದವರಲ್ಲಿ ಪಾಶ್ಚಾತ್ಯ ಚಿತ್ರಕಲೆಯ ಪ್ರಭಾವ ಕರ್ನಾಟಕದಲ್ಲೂ ಕಾಣಿಸಿಕೊಂಡಿತು. ನಮ್ಮಲ್ಲೂ ನವೀನತೆಯನ್ನು ಕೆ. ವೆಂಕಟಪ್ಪನವರ ಚಿತ್ರಗಳಲ್ಲಿ ಹಾಗೂ ಕೆ.ಕೆ. ಹೆಬ್ಬಾರರು ಸ್ವತಂತ್ರ ದಾರಿಯಲ್ಲಿ ಚಿತ್ರಗಳನ್ನು ರಚಿಸಿ, ಭಾರತದ ಪ್ರಮುಖ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹದಿಂದ ಚಿತ್ರಕಲೆ ಮತ್ತಷ್ಟು ಬೆಳೆಯಿತು. ಇವರ ಕಾಲದಲ್ಲಿ ರಾಜಾ ರವಿವರ್ಮನು ಮೈಸೂರು ಅರಮನೆಯ ಆಶ್ರಯದಲ್ಲಿ ಕೆಲವು ತೈಲಚಿತ್ರಗಳನ್ನು ರಚಿಸಿದ್ದಾನೆ. ಅರಮನೆಯ ಕಲ್ಯಾಣ ಮಂಟಪದಲ್ಲಿ ರಾಜರ ದಸರಾ ಮೆರವಣಿಗೆಯ ಬೃಹದಾಕಾರದ ತೈಲವರ್ಣ ಚಿತ್ರಗಳನ್ನು ಪಾಶ್ಚಾತ್ಯ ಶೈಲಿಯಲ್ಲಿ ನಂಜುಂಡಸ್ವಾಮಿ, ವೈ. ನಾಗರಾಜು, ಸುಬ್ರಹ್ಮಣ್ಯರಾಜು, ಎಸ್.ಆರ್. ಐಯಂಗಾರ್ ಮತ್ತು ಶಂಕರರಾಜು ಮುಂತಾದ ಕಲಾವಿದರು ರಚಿಸಿದ್ದಾರೆ. ಎಂ. ವೀರಪ್ಪ, ಎಸ್. ಆರ್. ಸ್ವಾಮಿ, ರುಮಾಲೆ ಚನ್ನಬಸವಯ್ಯ, ಎಚ್.ಎಸ್. ಇನಾಮತಿ, ಟಂಕಸಾಲೆ, ಎನ್. ಹನುಮಯ್ಯ, ಕೇಶವಯ್ಯ, ಮುಂತಾದವರು ಭಾವಚಿತ್ರ, ಪ್ರಕೃತಿಚಿತ್ರ, ಸಂಯೋಜನಾ ಚಿತ್ರಗಳನ್ನು ರಚಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ದಂಡಾವತಿ ಮಠ, ಎಂ.ವಿ. ಮಿಣಜಗಿ, ಎಂ.ಎ. ಚೆಟ್ಟಿ, ಎಸ್.ಎಂ. ಪಂಡಿತ್, ಡಿ. ಜಿ. ಬಡಿಗೇರ್, ಅಮೀನ ಸಾಹೇಬ ಕಮಡೋಳಿ ಡಿ. ವಿ. ಹಾಲಭಾವಿ ಪ್ರಸಿದ್ಧರಾಗಿದ್ದಾರೆ.

ಕರ್ನಾಟಕದ ಕಲೆಯ ಬೆಳವಣಿಗೆಯಲ್ಲಿ ಸರ್ಕಾರ ಹಿಂದಿನಿಂದಲೂ ಪ್ರೋತ್ಸಾಹ ನೀಡುತ್ತಿದ್ದು ೧೯೬೪ರಲ್ಲಿ ಲಲಿತಕಲಾ ಅಕಾಡೆಮಿಯನ್ನು ಸ್ಥಾಪಿಸಿದೆ. ಅಲ್ಲದೆ ರಾಜ್ಯದ ವಿವಿಧ ಭಾಗಗಳಲ್ಲಿ ಕಲಾಶಾಲೆಗಳು ಪ್ರಾರಂಭವಾಗಿದ್ದು, ಕಲಾ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ.

ಪಿ. ಆರ್. ತಿ.

## ಕರ್ನಾಟಕದ ಜನಪದ ಚಿತ್ರಕಲೆ

ಜಾನಪದ ಜನಪದರ ಜೀವನ ವಿಧಾನ ಬದುಕಿನ ರೀತಿ ನೀತಿಗಳನ್ನು ಪ್ರತಿಬಿಂಬಿಸುವ ಜೀವಂತ ಸಂಸ್ಕೃತಿ. ಜನಾಂಗದ ಬದುಕಿನೊಂದಿಗೆ ಬೆಳೆದು ಬಂದಿರುವ ಪರಂಪರಾನುಗತ ಜನಪದ ಕಲೆಗಳು. ಆಯಾ ಸಂಸ್ಕೃತಿಯ ಮೂಲ ಸಂವೇದನೆಗಳೆನಿಸಿವೆ. ಕರ್ನಾಟಕ ಜಾನಪದದ ಒಂದು ವಿಶಿಷ್ಟವಾದ ಮುಖ ಜನಪದ ಚಿತ್ರಕಲೆ.

ಕರ್ನಾಟಕದಲ್ಲಿ ಶಿಷ್ಟ ಚಿತ್ರಕಲೆಯೇ ಉಪೇಕ್ಷೆಗೆ ಗುರಿಯಾಗಿರುವಾಗ ಜನಪದ ಚಿತ್ರಕಲೆ ಇನ್ನೂ ಉಪೇಕ್ಷೆಗೆ ಪಕ್ಕಾಗಿದೆ. ಜನಪದ ಚಿತ್ರಕಲೆ ನೂರಾರು ಸಂಪ್ರದಾಯ, ನಂಬಿಕೆ ಐತಿಹ್ಯ ಆಚಾರ ವಿಚಾರ ಮೌಲ್ಯಗಳಿಗೆ ಬದ್ಧವಾಗಿ ಈ ಕಲೆ ಬೆಳೆದು ಬಂದಿದೆ. ಈ ದೃಷ್ಟಿಯಿಂದ ಮನುಷ್ಯನ ಕ್ರಿಯಾಶೀಲ ಮನಸ್ಸು ಬದುಕನ್ನೂ ಸುಂದರವಾಗಿರಿಸಲು, ಜಡದಿಂದ ಚೈತನ್ಯಕ್ಕೆ ಸಾಗುವಂತೆ ಮಾಡಲು ಪಟ್ಟ ಪರಿಶ್ರಮವೇ ಈ ಕಲೆಗಳ ಹುಟ್ಟಿಗೆ ಕಾರಣವಾಗಿದೆಯನ್ನಬೇಕು. ಇಂತಹ ಕಲೆಗಳ ಬೆಳವಣಿಗೆ ವಿಕಾಸಗಳು ಆಯಾ ಸಂಸ್ಕೃತಿಯ ವೈಭವವನ್ನು ಸೂಚಿಸುತ್ತವೆ.

ಶಿಷ್ಟಾಚಾರಗಳ ಚೌಕಟ್ಟಿನಲ್ಲಿ ನಿಸರ್ಗದೂರ ಬದುಕನ್ನು ನಡೆಸಿಕೊಂಡು ಬಂದ ನಗರ ಜನತೆಯ ಕಲೆ 'ಶಿಷ್ಟ ಪದ ಕಲೆ' ಎನಿಸಿದರೆ, ನಿಸರ್ಗ ಸಹಜವಾದ ಬದುಕನ್ನು ನಡೆಸಿಕೊಂಡು ಬಂದ ಗ್ರಾಮೀಣ ಜನತೆಯ ಕಲೆ ಜನಪದ ಚಿತ್ರಕಲೆಯಾಗಿದೆ. ಶಿಷ್ಟಪದ ಚಿತ್ರಕಲೆಯಲ್ಲಿ ಗುರುತಿಸಲ್ಪಟ್ಟ ಸುಪ್ರಸಿದ್ಧ ಶಾಸ್ತ್ರಶುದ್ಧ ಚಿತ್ರಗಾರಿಕೆ, ಸಾಂಪ್ರದಾಯಿಕ ಕಲಿಕೆ ಇತ್ಯಾದಿಗಳಿದ್ದರೆ, ಜನಪದ ಚಿತ್ರಕಲೆಯಲ್ಲಿ ಎಲೆಯ ಮರೆಯ ಕಾಯಿಯಂತೆ ಬದುಕಿನ ಅಂತರಂಗ ಅವಿತುಕೊಂಡಿರುವುದನ್ನು ಗುರುತಿಸುತ್ತೇವೆ.

ಜನಪದ ಚಿತ್ರಕಲೆಯೆಂದರೆ ಕೇವಲ ಬಣ್ಣವಲ್ಲ, ರೇಖೆಯಲ್ಲ, ಸುಣ್ಣ, ಕಾವಿಗಳ ಬೊಟ್ಟುಗಳಲ್ಲ, ಧಾರ್ಮಿಕ ಸಂಪ್ರದಾಯಗಳು, ಪ್ರಕೃತಿಯ ಶಕ್ತಿಮೂಲಗಳು, ಮನುಷ್ಯನ ಸುಪ್ತಶಕ್ತಿಗಳು ಅಡಕಗೊಂಡಿರುವ, ಸೌಂದರ್ಯ ತುಂಬಿರುವ, ವೃತ್ತಿಮೂಲವಾಗಿರುವ ದೈನಂದಿನ ಬದುಕೇ ಆಗಿರುವ ಕಲೆ ಈ ಜನಪದ ಚಿತ್ರಕಲೆ. ಈ ಅರ್ಥದಲ್ಲಿ ಜನಪದ ಚಿತ್ರಕಲೆಯೆಂದರೆ ಜನಪದ ಜೀವನದ ಅಧ್ಯಯನವೇ ಆಗಿದೆ.



ಬದುಕಿನ ವಿಧಿಕ್ರಿಯೆಗಳೆಲ್ಲ ಬಣ್ಣದಲ್ಲಿ ಹುಟ್ಟಿ, ವಿವಿಧ ಚಟುವಟಿಕೆಗಳೆಲ್ಲ ಬಣ್ಣದಲ್ಲಿ ತೊಡಗಿ, ನೋಡುವ ಕಣ್ಣಿಗೆ ಹಬ್ಬವನ್ನುಂಟು ಮಾಡುವ, ಭಯವನ್ನುಂಟು ಮಾಡುವ ಸರ್ವಭಾವನೆಗಳ ಅಧ್ಯಯನವು ಈ ಜನಪದ ಚಿತ್ರಕಲೆಯಲ್ಲಿದೆ.

ಜನಪದ ಚಿತ್ರಕಲೆ ಸೌಂದರ್ಯ ಮೂಲ ಅಭಿವ್ಯಕ್ತಿಯ ಸಾಧನವಾಗಿ ನೆಲೆ, ಗೋಡೆ, ಗೃಹಲಂಕರಣಗಳಲ್ಲಿ, ರಂಗೋಲಿ, ಬೆಳದಿಂಗಳು ಬರೆಯುವುದು, ಹಾಲಕ್ಕಿಗಳ ಹಲಿ, ಜಗಲಿ,

ಗದ್ದಿಗೆ, ತುಳಸಿಯಕಟ್ಟೆ ಮುಂತಾದವುಗಳಲ್ಲಿ ಬಿಡಿಸುವ ವಿವಿಧ ರೀತಿಯ ಚಿತ್ರಗಾರಿಕೆ, ಚರ್ಮದ ಮೇಲೆ ಬಿಡಿಸುವ ಹಚ್ಚೆ, ಮದರಂಗಿ, ದಾರದ ಸಾಧನವಾದ ಹೊಲಿಗೆ, ಹೆಣಿಗೆ, ನೆಯ್ಗೆ, ತೊಗಲುಗೊಂಬೆ, ಸೂತ್ರದಗೊಂಬೆ, ಕೀಲುಗೊಂಬೆ, ಯಕ್ಷಗಾನ, ದೊಡ್ಡಾಟ ನೃತ್ಯಗಳಲ್ಲಿ ಬಳಸುವ ಕಲಾವಿನ್ಯಾಸ, ವೇಷಭೂಷಣ, ಮುಖವರ್ಣಿಕೆ; ಗಂಜೀಫಾ ಆಟ, ಕೈಲಾಸಪಟ, ಹುಲಿಕಟ್ಟು, ಚೌಕಾಕಾರ ನೂರಾರು ಆಟಗಳಲ್ಲಿ ಬರುವ ರೇಖಾವಿನ್ಯಾಸಗಳನ್ನು ಕಾಣಬಹುದು.

ಧಾರ್ಮಿಕ ಹಿನ್ನೆಲೆಯಲ್ಲಿ ಬರುವ ಕುಣಿತ ಹಾಡುಗಳಲ್ಲಿ ಹಬ್ಬ ಹರಿದಿನ ದೇವಸ್ಥಾನ, ಉತ್ಸವ, ಜಾತ್ರೆ, ಮದುವೆ, ಸಂದರ್ಭದ ಚಿತ್ರಗಳು ತಾಂತ್ರಿಕ ಹಿನ್ನೆಲೆಯಲ್ಲಿ ಬರುವ ಮಂತ್ರ ಮಾಟ, ಯಜ್ಞ, ಬಾನಾಮತಿ, ದಿಬ್ಬಂಧನ, ಭೂತ ಬಿಡಿಸುವ ಮಂಡಲದಂತಹ ವಿನ್ಯಾಸಗಳು ಈ ಕಲೆಯಲ್ಲಿ ಬರುತ್ತವೆ.

ವೃತ್ತಿಯಲ್ಲಿ ಬಳಕೆಯಾಗುವ ಜನಪದ ಚಿತ್ರಕಲೆಗಳು ಕೃಷಿಯ ಹಾಗೂ ಕೃಷಿಯೇತರ ವಸ್ತುಗಳಲ್ಲಿ ಕಂಡುಬರುತ್ತವೆ. ಈ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿರುವ ಅನೇಕ ವೃತ್ತಿಕಾರರ ವಿವಿಧ ರೀತಿಯ ಅಧ್ಯಯನಗಳೆಲ್ಲ ಈ ಜನಪದ ಚಿತ್ರಕಲೆಯಲ್ಲಿ ಮುಖ್ಯವಾಗಿ ಸಮಾವೇಶವಾಗುತ್ತವೆ.

ದುಡಿಮೆ, ಬಿಡುವು ಆಚರಣೆಗಳಂತಹ ಸಂದರ್ಭಗಳಲ್ಲಿ ಕವಲೊಡೆಯುವ ಈ ಜನಪದ ಚಿತ್ರಕಲೆ ಶಿಷ್ಟಪದ ಚಿತ್ರಕಲೆಯ ಹುಟ್ಟಿಗೆ ಕಾರಣವಾಗಿದೆ.

**ಎಸ್. ಸಿ. ಪಾ**

## ಕರ್ನಾಟಕದಲ್ಲಿ ಇಸ್ಲಾಂ ವಾಸ್ತು ಶೈಲಿ

ಕರ್ನಾಟಕದ ಉತ್ತರ ಭಾಗದಲ್ಲಿ ಬಹಮನೀ ರಾಜ್ಯ ಸ್ಥಾಪನೆಯಾದ ನಂತರ ವಾಸ್ತು ರೀತಿಯಲ್ಲಿ ಬದಲಾವಣೆಯುಂಟಾಯಿತು. ಈ ಭಾಗದಲ್ಲಿ ಹಿಂದೂ ಧಾರ್ಮಿಕ ಶೈಲಿಯು ನಿಂತುಹೋಗಿ ಇಸ್ಲಾಂ ಧರ್ಮದಿಂದ ಪ್ರಚೋದಿತವಾದ ಹಿಂದೂ-ಮುಸ್ಲಿಂ ಶೈಲಿಯು ವ್ಯಾಪಕವಾಗಿ ಹರಡಿತು. ಈ ಪ್ರಾಂತ್ಯವನ್ನು ಕ್ರಮಿಸಿಕೊಂಡ ಹೊಸದರಲ್ಲಿ ಹಿಂದು ದೇವಾಲಯಗಳನ್ನು ಮಸೀದಿಗಳನ್ನಾಗಿ ಮಾರ್ಪಡಿಸಿರುವುದು ಕಂಡು ಬಂದಿದೆ.

ಹಿಂದೂ-ಮುಸ್ಲಿಂ ಶೈಲಿಯನ್ನಳವಡಿಸಿ ಕಟ್ಟಡಗಳನ್ನು ಕಟ್ಟಲಾರಂಭಿಸಿದಾಗ ಆರಂಭದಲ್ಲಿ ತುಗಲಕ್ ವಾಸ್ತುಶೈಲಿಯನ್ನು ಅಳವಡಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಮೊದಲು ಕಟ್ಟಿರುವ ಇವರ ಗೋರಿಕಟ್ಟಡಗಳಲ್ಲಿ ಇದು ಸ್ಪಷ್ಟವಾಗಿ ಕಂಡು ಬಂದಿದೆ. ಎತ್ತರವಾದ ಜಗಲಿಯ ಮೇಲೆ ಚೌಕಾಕಾರದ ಕಟ್ಟಡವಿದ್ದು ದಪ್ಪಗೋಡೆಗಳು ಬುಡದಲ್ಲಿ ಅಗಲವಾಗಿದ್ದು ಓರೆಯಾಗಿ ಮೆರೆಯುತ್ತವೆ ಅಗಲವಾದ ಗುಮ್ಮಟಗಳಿರುತ್ತವೆ. ಈ ಶೈಲಿಯು ಹೆಚ್ಚು ಕಾಲ ಉಳಿದು ಬರಲಿಲ್ಲ.

ಬಹಮನಿ ಅರಸರು ಉತ್ತರ ಭಾರತದ ಶಿಲ್ಪಿಗಳಿಗಿಂತ ಪರ್ಶಿಯಾದೇಶದ ಶಿಲ್ಪಿಗಳನ್ನು ಕರೆಸಿದುದರಿಂದಾಗಿ ಪರ್ಶಿಯನ್ ಶೈಲಿಯ ಪ್ರಭಾವ ಬೆಳೆದುಬಂದು ಮುಂದೆ ಸ್ಥಳೀಯ



ಗೋಲಗುಂಬಜ್

ಹಿಂದೂ ಶೈಲಿಯು ಕ್ರಮೇಣ ಹೆಚ್ಚು ಹೆಚ್ಚು ವ್ಯಾಪಕವಾಗಿ ಮಿಲನವಾಗಿ ನೂತನ ಬಹಮನಿ ಶೈಲಿಯೊಂದು ಬೆಳೆದುಬಂದಿತು. ಗುಲ್ಬರ್ಗದ ಕೋಟೆಯೊಳಗಿನ ಮಸೀದಿಯನ್ನು ಇರಾನಿನಿಂದ ಬಂದ ರಫಿ ಎಂಬ ಶಿಲ್ಪಿಯು ನಿರ್ಮಿಸುವುದನ್ನು ಕಾಣಬಹುದಾಗಿದೆ. ವಿಶಾಲವಾದ ಈ ಕಟ್ಟಡವು ಪೂರ್ಣವಾಗಿ ಗುಮ್ಮಟಗಳಿಂದ ಕೂಡಿದ್ಧ ಚಾವಣಿಯಿಂದ ಅಚ್ಛಾದಿತವಾಗಿದ್ದು ಸ್ಪೈನಿನ ಕಾರ್ಡೋಣನದ ಪ್ರಸಿದ್ಧ ಮಸೀದಿಯ ಮಾದರಿಯಲ್ಲಿದೆ.

ಬಹಮನಿ ಅರಸರ ಭವ್ಯವಾದ ಕಟ್ಟಡಗಳನ್ನು ಬೀದರ್‌ನಲ್ಲಿ ನೋಡಬಹುದು. ಇಲ್ಲಿನ ಇವರ ಕಟ್ಟಡಗಳಲ್ಲಿ ಸ್ಥೂಲವಾದ ರಚನೆ ವಿವಿಧ ರೀತಿಯ ಎತ್ತರವಾದ ಕಮಾನುಗಳು, ಗೋಲದ ಮುಕ್ಕಾಲು ಭಾಗವನ್ನಿಟ್ಟಂತಿರುವ ಉನ್ನತವಾದ ಗುಮ್ಮಟಗಳು, ಗೋಡೆಗಳಿಗೆ ಬಗೆಬಗೆಯ ಬಣ್ಣದ ವಿವಿಧ ಆಕಾರದ ಮನೋಹರವಾದ ರೀತಿಯ ಸೂಡುಚಿತ್ರ ಬಿಲ್ಲೆಗಳ ಜೋಡಣೆ ಮತ್ತು ಹೂಬಳ್ಳಿ, ಎಳೆಗಳನ್ನೊಳಗೊಂಡ ಹಿಂದೂ ರೀತಿಯ ಶಿಲ್ಪಾಲಂಕರಣ ಇರುತ್ತವೆ. ಅಲ್ಲಾಉದ್ದೀನ್, ಹಜರ ಅಲಿಉಲ್ಲಾರ ಗೋರಿಗಳು, ಮಹಮದ್ ಗವಾನನ ಮದರಸ, ಬಹಮನಿ ಸುಲ್ತಾನರ ವಾಸ್ತುಕಲೆಯ ಸುಂದರ ಉದಾಹರಣೆಗಳು. ಬೀದರ್ ಕೋಟೆಯೊಳಗೆ ಇರುವ ರಂಗೀನ್ ಮಹಲ್‌ನ ಇಡೀ ಕಟ್ಟಡದ ಒಳಗೋಡೆಗಳ ಮೇಲೆ ವರ್ಣದಲ್ಲಿ ರಚಿಸಿದ ಡಿಸೈನ್‌ಗಳಿವೆ.

ಮಹಮ್ಮದ್ ಗವಾನನ ಮದರಸಾ ಪರ್ಶಿಯಾ ದೇಶದ ಕಟ್ಟಡಗಳನ್ನು ಅನುಸರಿಸಿ

ಕಟ್ಟಿದ ಅಪರೂಪದ ಕಟ್ಟಡವಾಗಿದೆ. ಸುಲ್ತಾನರ ನಂತರ ಬಂದ ಬರೀದ ಶಾಹೀ ಅರಸರು ಕಟ್ಟಿಸಿದ ಕಟ್ಟಡಗಳಲ್ಲಿ ಹಲವು ಬದಲಾವಣೆಗಳನ್ನು ಗಮನಿಸಬಹುದಾಗಿದೆ. ಇವರ ಕಟ್ಟಡಗಳಲ್ಲಿ ದಡೂತಿ ಭಾವನೆ ಕಂಡುಬರುವುದಿಲ್ಲ. ಬಹಮನೀ ಸುಲ್ತಾನರ ಕಟ್ಟಡಗಳಲ್ಲಿರುವ ವಿಸ್ತಾರವಾಗಲಿ, ಭವ್ಯತೆಯಾಗಲಿ ಇಲ್ಲ. ಇವುಗಳಲ್ಲಿ ಹಿಂದೂ ಶೈಲಿಯ ಅನುಕರಣೆ ಹೆಚ್ಚಾಗಿ ಕಂಡುಬರುತ್ತದೆ. ಅಲಂಕರಣ ಹೆಚ್ಚಾಗಿದ್ದು ಭದ್ರತೆಯ ಅಭಾವವಿದೆಯನ್ನಬಹುದು. ಸೂಕ್ಷ್ಮವಾಗಿ ಕೆತ್ತಿರುವ ಮರದ ಕಂಬಗಳು ಸುಂದರವಾಗಿವೆ. ಬಣ್ಣದ ಬಿಲ್ಲೆಗಳಿಂದ ಮಾಡಿದ ಅಲಂಕಾರ ಮುತ್ತಿನ ಚಿಪ್ಪಿನ ಕೆಲಸ ತುಂಬಾ ನವುರಾಗಿದೆ. ಈ ಲಕ್ಷಣಗಳನ್ನು ರಂಗೀನ ಮಹಲ್ ಅರಮನೆ ಮತ್ತು ಅಲಿಖರೀದಿಯ ನಾಲ್ಕು ಕಡೆಯೂ ತೆರೆದ ಕಮಾನುಗಳಿಂದ ಕೂಡಿದ ಮಂಟಪದಂತಿರುವ ಗವಿಯಲ್ಲಿಯೂ ಕಾಣಬಹುದು.

ಇದೇ ಕಾಲದಲ್ಲಿ ಶಹಾಪುರದಿಂದ ಆಳುತ್ತಿದ್ದ ಆದಿಲ್‌ಶಾಹೀ ಅರಸರು ಅನೇಕ ಮಹತ್ತರವಾದ ಕಟ್ಟಡಗಳನ್ನು ಕಟ್ಟಿಸಿದರು. ಅವುಗಳಲ್ಲಿ ಅರಮನೆಗಳು ಮಸೀದಿಗಳು, ಗೋರಿಗಳು, ಕೋಟೆಗಳು, ಬುರುಜುಗಳು ಸೇರಿವೆ. ಇವುಗಳಲ್ಲೆಲ್ಲ ಅತ್ಯುತ್ತಮವಾದ ಅಲಂಕರಣಗಳಿಂದ ಕೂಡಿದ ಇಬ್ರಾಹಿಂ ರೋಜಾ ತನ್ನ ಸೌಂದರ್ಯಕ್ಕೆ ಹೆಸರಾಗಿದೆ. ಅತಿದೊಡ್ಡ ಹಜಾರ, ಉನ್ನತ ವಿಸ್ತಾರವಾದ ಗುಮ್ಮಟ, ಪಿಸುಗುಟ್ಟಿದರೆ ಕೇಳುವ ಆಶ್ಚರ್ಯಕರವಾದ ಗ್ಯಾಲರಿ, ಒಳಕ್ಕೆ ಸಾಲೆಗಳಿಂದ ಕೂಡಿದ ಗೋಳಗುಮ್ಮಟ ಪ್ರಪಂಚದಲ್ಲಿಯೇ ಒಂದು ಅದ್ಭುತವಾದ ರಚನೆಯಾಗಿದೆ.

**ಜಿ.ಟಿ.ಜ.**

## ಕರ್ನಾಟಕದಲ್ಲಿ ಸಮಕಾಲೀನ ಕಲೆ

ಕರ್ನಾಟಕದಲ್ಲಿ ಸ್ವಾತಂತ್ರ್ಯದ ನಂತರ ಯಾವುದೇ ಆಧುನಿಕ ಕಲಾ ಚಳುವಳಿಯಾಗಲೀ ಕಲೆಯಲ್ಲಿ ಪ್ರಯೋಗಗಳಾಗಲೀ ಆಗಲಿಲ್ಲ. ಪಾಶ್ಚಾತ್ಯ ಮತ್ತು ಭಾರತದ ಇತರೆ ಪ್ರದೇಶಗಲ್ಲಿ ನಡೆದ ಕಲಾ ಪ್ರಯೋಗಗಳು, ಚಳುವಳಿಗಳು ನಡೆಯದೇ ನಮ್ಮ ಕಲಾವಿದರು ಅವುಗಳ



ಚಂದ್ರನಾಥ ಆಚಾರ್ಯ

ಹೆಸರುಗಳನ್ನು ಮಾತ್ರ ಕೇಳುತ್ತಿದ್ದಾರೆ. ನಮ್ಮಲ್ಲಿ ಅಕಾಡೆಮಿಕ ಶೈಲಿ ಹಾಗೂ ಸಾಂಪ್ರದಾಯಿಕ ಧಾರ್ಮಿಕ ಪ್ರಭಾವದ ಕಲೆಗೆ ಹೆಚ್ಚು ಮನ್ನಣೆ ದೊರೆಯಿತೆ, ಹೊರತು ಆಧುನಿಕ ಕಲೆಯ ಬಗ್ಗೆ ಚಿಂತನೆ ನಡೆಯಲಿಲ್ಲ. ೫೦ರ ದಶಕದ ಕೊನೆಯ ಭಾಗದಲ್ಲಿ ರಾಜ್ಯದ ಕಲಾ ಚಟುವಟಿಕೆ ಪ್ರಾರಂಭವಾಗಿ ಕಲಾ ವಿಮರ್ಶಕರಾದ ಬಿ. ವೆಂಕಟಾಚಲಂ ಅವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ರಾಷ್ಟ್ರೀಯ ಕಲಾಪ್ರದರ್ಶನದಿಂದ ಆಯ್ದ ಕಲಾಕೃತಿಗಳ ಪ್ರದರ್ಶನವನ್ನು ಬೆಂಗಳೂರಿನಲ್ಲಿ ಏರ್ಪಡಿಸಿದ್ದರು. ಪ್ರಾರಂಭದಲ್ಲಿ ಸ್ವಲ್ಪ ನಿರಾಶೆ ಆದರೂ ಕೊನೆಯಲ್ಲಿ ಜನರಿಂದ ಹೆಚ್ಚು ಪ್ರತಿಕ್ರಿಯೆ ದೊರೆಯಿತು. ಆದ್ದರಿಂದ ೧೯೬೧-೬೨ರಲ್ಲಿ ರಾಜ್ಯದಲ್ಲಿ ಲಲಿತಕಲಾ ಅಕಾಡೆಮಿ ಪ್ರಾರಂಭವಾಯಿತು.

ಕರ್ನಾಟಕದಲ್ಲಿ ಸಮಕಾಲೀನ ಕಲಾ ಚಳುವಳಿ ನಿಜವಾದ ಅರ್ಥದಲ್ಲಿ ಪ್ರಾರಂಭವಾದುದು ೬೦ರ ದಶಕದ ಮಧ್ಯ ಭಾಗದಲ್ಲಿ. ನಾವು ನಾಲ್ವರು ಕಲಾ ತಂಡದ ಶ್ರೀ ಟಿ. ಕೆ. ಪಾಟೀಲ, ಎಸ್. ಎಸ್. ಮನೋಲಿ, ಆರ್. ಎಂ. ಹಡಪದ್, ಜಿ. ವೈ. ಹುಬ್ಳೀಕರ್ ಅವರಿಂದ ಪ್ರಾರಂಭವಾಯಿತು. ೧೯೬೪ರಲ್ಲಿ ಈ ತಂಡ ಏರ್ಪಡಿಸಿದ ಕಲಾ ಪ್ರದರ್ಶನ ಸಾಕಷ್ಟು ಪ್ರಶಂಸೆ ದೊರೆಯಿತು. ಸಮಕಾಲೀನ ಕಲಾ ರಾಜ್ಯದ ಇತರ ಭಾಗಗಳಲ್ಲೂ ಪ್ರಾರಂಭವಾಯಿತು. ಜಿ. ಎಸ್. ಶೆಣೈ, ಯು. ರಮೇಶ್‌ರಾವ್, ಯು. ಭಾಸ್ಕರರಾವ್, ಆರ್ಯ, ಪುಂಚಿತ್ತಾಯ ಮುಂತಾದವರಿಂದ 'ಪ್ರೊಗ್ರೇಸ್ಸಿವ್ ಪೈಂಟರ್ಸ್'ಸಂಸ್ಥೆ ಉಡುಪಿಯಲ್ಲಿ ಪ್ರಾರಂಭವಾಗಿ ಅನೇಕ ಕಲಾಪ್ರದರ್ಶನಗಳನ್ನು ಏರ್ಪಡಿಸಿತು. ಇದೇ ಸಂದರ್ಭದಲ್ಲಿ ವೈಯಕ್ತಿಕವಾಗಿ ಎಸ್. ಬಿ.ವಾಸುದೇವ್ ಅಪ್ಪುಕುಟ್ಟನ್ ಆಚಾರ್, ಖಂಡೇರಾವ್, ಬಾಲನ್ ನಂಬಿಯಾರ್ ವಿ.ಜಿ. ಸಿಂಧೂರ ಎಂ. ಬಿ. ಪಾಟೀಲ್, ಎ. ಬಿ. ಹಿರೇಗೌಡರ್, ಕಾಳಿದಾಸ ಪತ್ತಾರ್, ಸೂಗೂರ್ ಮುಂತಾದವರು ಕ್ರಿಯಾಶೀಲರಾಗಿದ್ದರು.

ಅನಂತರ ಹೊಸ ಭರವಸೆ ಮೂಡಿಸುವ ಹಲವು ತಂಡಗಳು ಪ್ರಾರಂಭವಾದವು. 'ವಿಸೆವೆನ್' 'ಪ್ರೋಗ್ರೆಸ್ಸೀವ್ ಪೈಂಟರ್ಸ್' ತಂಡಗಳು ಒಂದಾಗಿ 'ಮೈಸೂರು ಆರ್ಟ್ ಕೌನ್ಸಿಲ್' ಎಂಬ ಸಂಸ್ಥೆ ಪ್ರಾರಂಭವಾಯಿತು. ರಾಜ್ಯದ ಆಧುನಿಕ ಕಲೆಯ ಪ್ರಮುಖ ಕಲಾವಿದರಿದ್ದ ಈ ಸಂಸ್ಥೆ ರಾಜ್ಯದಲ್ಲಿ ಮತ್ತು ದೇಶದ ಇತರ ನಗರಗಳಲ್ಲಿ ಕಲಾ ಪ್ರದರ್ಶನಗಳನ್ನು ಸಂಘಟಿಸಿತು. ಉಡುಪಿಯಲ್ಲಿ 'ಸೌತ್ ಕೆನರಾ ಆರ್ಟ್ ಕೌನ್ಸಿಲ್' ಎಂಬ ಸಂಸ್ಥೆ ಪ್ರಾರಂಭವಾಯಿತು. ೧೯೭೭ರಲ್ಲಿ ಬೆಂಗಳೂರಿನಲ್ಲಿ ಎನ್. ಮರಿಶಾಮಾಚಾರ್, ರಾಮದಾಸ್, ಶ್ಯಾಮಸುಂದರ್, ಶೀಲಾಗೌಡ ಮುಂತಾದವರು ಸೇರಿ 'ಸಂಯೋಜಿತ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ನಂತರ ಈ ಸಂಸ್ಥೆಗೆ ಚಂದ್ರನಾಥ್, ಜಿ.ಎಂ.ಎಸ್. ಮಣಿ, ಎನ್. ಪುಷ್ಪಮಾಲಾ, ಬಿ. ವಿ. ಸುರೇಶ್, ಜಯರಾಮ್, ನರಸಿಂಹನ್, ವಲ್ಲೀಶ್, ವೇಣುಗೋಪಾಲ್, ಜಯಕುಮಾರ್, ಮುಂತಾದ ಕಲಾವಿದರು ಸೇರಿಕೊಂಡು ಹಲವು ಕಲಾಪ್ರದರ್ಶನಗಳನ್ನು ಮತ್ತು ಕಲಾ ಚಟುವಟಿಕೆಗಳನ್ನು ನಡೆಸಿದರು. ಅಲ್ಲದೆ ಈ ಸಂಸ್ಥೆ ಬಹುಪಾಲು ಕಲಾವಿದರು ಬರೋಡದ ಶಾಂತಿನಿಕೇತನದಲ್ಲಿ ಪ್ರೌಢ ಶಿಕ್ಷಣ ಪಡೆದು ಬಂದು ರಾಜ್ಯದಲ್ಲಿ ಹೊಸ ಅಲೆಗೆ ಕಾರಣಕರ್ತರಾದರು. ೧೯೮೭ರಲ್ಲಿ ಸಿ. ಚಂದ್ರಶೇಖರ ಮತ್ತಿತರರು 'ರಿದಂ' ಎಂಬ ಕಲಾ ಸಂಸ್ಥೆಯನ್ನು ಸ್ಥಾಪಿಸಿದರು. ೧೯೭೮ರಲ್ಲಿ ಇ. ಕೆ. ಜನಾರ್ಧನ್, ಎಸ್. ಧನಲಕ್ಷ್ಮಿ ಯೂಸೂಫ್ ಅರ್‍ಕಲ್, ಕೃಷ್ಣಪ್ಪ, ಶಂಕರಪಾಟೀಲ್ ಮುಂತಾದವರು ಕರ್ನಾಟಕ ಪೇಂಟಿಂಗ್ಸ್ ಎಂಬ ಸಂಸ್ಥೆ ಪ್ರಾರಂಭಿಸಿ ರಾಜ್ಯದಲ್ಲಿ ಮತ್ತು ಹೊರ ರಾಜ್ಯದಲ್ಲಿ ಹಲವು ಕಲಾ ಪ್ರದರ್ಶನವನ್ನು ಸಂಘಟಿಸಿದರು.

ಕರ್ನಾಟಕದ ಸಮಕಾಲೀನ ಕಲೆಯಲ್ಲಿ ಕಲಾಶಾಲೆಗಳ ಪಾತ್ರವು ಮುಖ್ಯವಾದುದು. ಗುಲ್ಬರ್ಗಾದಲ್ಲಿ ಜಿ. ಎಸ್. ಖಂಡೇರಾವ್ ಅವರು ದಿ. ಐಡಿಯಲ್ ಫೈನ್ ಆರ್ಟ್ ಇನ್ಸ್‌ಟ್ಯೂಟ್ ಎಂಬ ಸಂಸ್ಥೆಯನ್ನು ೧೯೬೪ರಲ್ಲಿ ಪ್ರಾರಂಭಿಸಿ ನಂತರ ವಿ. ಜಿ. ಅಂದಾನಿ ಅವರಿಗೆ ಒಪ್ಪಿಸಿದರು. ಬೆಂಗಳೂರಿನ ಕಲಾ ಮಂದಿರ ಮತ್ತು ಚಿತ್ರಕಲಾ ಪರಿಷತ್ ಹಾಗೂ ಕೆನ್ ಕಲಾಶಾಲೆ ಅನೇಕ ಕಲಾ ಚಟುವಟಿಕೆಗಳನ್ನು ಹಮ್ಮಿಕೊಂಡಿತು. ೧೯೭೨ರಲ್ಲಿ ಗುಲ್ಬರ್ಗಾದಲ್ಲಿ ಚತುರ್ಥಿ ಕಲಾ ತಂಡ ಪ್ರಾರಂಭವಾಗಿ ರಚನಾತ್ಮಕ ಕಲಾ ಚಟುವಟಿಕೆಗಳನ್ನು ಪ್ರಾರಂಭಿಸಿತು. ವಿ.ಜಿ. ಅಂದಾನಿ, ಬಸವರಾಜ ಉಪ್ಪಿನ, ಎಂ.ಬಿ. ಲೋಹರ್ ಮುಂತಾದವರು. ಈ ತಂಡದ ಕಲಾವಿದರು. ಕರ್ನಾಟಕ ಸಮಕಾಲೀನ ಕಲೆಯಲ್ಲಿ ೧೯೭೭ರ ವರ್ಷ ಅತ್ಯಂತ ಮುಖ್ಯವಾದುದು. ಅಂತರರಾಷ್ಟ್ರೀಯ ಮಟ್ಟದ ಕಲಾವಿದರಾದ ಕೆ.ಕೆ. ಹೆಬ್ಬಾರ್ ಅವರು ಅಕಾಡೆಮಿಯ ಅಧ್ಯಕ್ಷರಾಗಿ ಅಕಾಡೆಮಿಯ ಕಲಾ ಚಟುವಟಿಕೆಗಳಿಗೆ ಹೊಸ ರೂಪ ಕೊಟ್ಟಿದ್ದು, ರಾಜ್ಯದ ಕಲಾವಿದರು ರಾಷ್ಟ್ರ ಮಟ್ಟದಲ್ಲಿ ಹೆಸರು ಪಡೆಯಲು ಸಾಧ್ಯವಾಯಿತು.

೧೯೮೭ರಲ್ಲಿ ಸಂಘಟಿಸಿದ 'ಕರ್ನಾಟಕ ಕಲಾಮೇಳ' ಜನ ಸಾಮಾನ್ಯರಲ್ಲಿ ಹೆಚ್ಚಿನ ಅರಿವು ಮೂಡಿಸುವುದರಲ್ಲಿ ಯಶಸ್ವಿಯಾಯಿತು. ೧೯೮೩ ಇಲ್ಲಿ ಶ್ರೀ ಚಂದ್ರಶೇಖರ ಅವರ ಪ್ರಾರಂಭದಿಂದ 'ಕರ್ನಾಟಕ ಕಲಾ ಯಾತ್ರೆ'ಯನ್ನು ನಡೆಸಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಕಲಾ ಪ್ರದರ್ಶನವನ್ನು ವ್ಯವಸ್ಥೆಗೊಳಿಸಿದರು. ಕೇಂದ್ರ ಲಲಿತಕಲಾ ಅಕಾಡೆಮಿಯ ರಾಷ್ಟ್ರೀಯ ಕಲಾ ಪ್ರದರ್ಶನದಲ್ಲಿ ರಾಜ್ಯ ಕಲಾವಿದರು ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಅಲ್ಲದೇ ಕಲಾವಿದರು ಅಂತರರಾಷ್ಟ್ರೀಯ ಕಲಾಪ್ರದರ್ಶನ, ಹಾಗೂ ರಾಷ್ಟ್ರದ ವಿವಿಧ ಭಾಗಗಳಲ್ಲಿ ನಡೆಯುವ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿ ಬಹುಮಾನವನ್ನು ಪಡೆದಿದ್ದಾರೆ. ಲಂಡನ್ನಿನ ರಾಯಲ್ ಕಾಲೇಜಿನಲ್ಲಿ ಕಲೆಯ ಅಧ್ಯಯನ ಮಾಡಿ ಬಂದಿದ್ದಾರೆ. ನಮ್ಮ ಕಲಾವಿದರು ರಾಷ್ಟ್ರದ ಕಲಾ ಭೂಪಟದಲ್ಲಿ ತಮ್ಮ ಸೃಜನಶಾಲ ಕಲಾಕೃತಿಗಳ ಮೂಲಕ ಮನ್ನಣೆ ಪಡೆದಿದ್ದಾರೆ.

ಮರಿ

## ಕನ್ಸೂಲರ್ ಡಿಪ್ಟೆಕ್-(Consular Diptych)

ಪುಸ್ತಕದಂತೆ ತೆರೆದುಕೊಳ್ಳುವ, ಮರದು ಹಚ್ಚಿದ ಹಸ್ತಿದಂತದ ಫಲಕಗಳಿಗೆ ಡಿಪ್ಟೆಕ್ ಎನ್ನುತ್ತಾರೆ. ಕ್ರಿ.ಶ. ೩೮೮-೫೪೧ರ ಅವಧಿಯಲ್ಲಿ ರೋಮನ್ ಕಚೇರಿಯ ರಾಯಭಾರಿಯ ನೇಮಕಾತಿಯ ಸಂಕೇತವಾಗಿ ಇದನ್ನು ಬಳಸುತ್ತಿದ್ದರು. ಇದರ ಹೊರಮೈಯು ರಾಯಭಾರಿಯ ಭಾವಚಿತ್ರವನ್ನೊಳಗೊಂಡಿರುತ್ತಿತ್ತು. ಒಳಮೈಯು ಪೊಳ್ಳಾಗಿ, ಮೇಣದ ಲೇಪವನ್ನು ಹೊಂದಿರುತ್ತಿತ್ತು ಮತ್ತು ಇದರ ಮೇಲೆ ಅವನ ನೇಮಕಾತಿಯ ಕರಾರುಗಳನ್ನು ಬರೆಯಲಾಗುತ್ತಿತ್ತು. ಈ ಡಿಪ್ಟೆಕ್‌ಗಳು ಪ್ರಾಚೀನ ಕಲೆಯ ಮಹತ್ವದ ಮತ್ತು ಉತ್ಕೃಷ್ಟತೆಯ ಉದಾಹರಣೆಗಳಾಗಿವೆ.

ಆ.ಜ.

## ಕಮತಗಿ

ಬಿಜಾಪುರ ಜಿಲ್ಲೆಯ, ಕೇಂದ್ರದಿಂದ ೨೫ ಕಿಮಿ ದೂರದಲ್ಲಿರುವ ಕಮತಗಿ ಆದಿಲ್ ಷಾಹಿಗಳ ಬೇಸಿಗೆಯ ಕ್ರೀಡಾಸ್ಥಾನವಾಗಿತ್ತೆಂದು ತಿಳಿದು ಬರುತ್ತದೆ. ಇಲ್ಲಿಯ ಕೊಳ ಹಾಗೂ ಮಂಟಪಗಳು ೧೬ನೇ ಶತಮಾನದಲ್ಲಿ ರಚಿತವಾಗಿದ್ದು ಮುಚ್ಚಿದ ಮಂಟಪದ ಒಳಭಾಗದಲ್ಲಿ ವಿಶಾಲವಾದ ಮೂರು ಅಂಕಣಗಳಿದ್ದು ಅವುಗಳಲ್ಲಿ ಚಿತ್ರಕಲೆ ಇದ್ದ ಗುರುತುಗಳಿವೆ. ಇಂದು ಕಿಟಕಿಯ ಕಮಾನಿನ ಒಳಗೆ ಸನ್ಯಾಸಿಯ ಮುಂದೆ ಅರಸನೊಬ್ಬ ಕುಳಿತಿರುವುದು, ಹಾಗೂ ಅರೆ ವೃತ್ತಾಕಾರದ ಬಾಗಿಲು ವಾಡದ ಒಳ ಭಾಗದಲ್ಲಿ ಹಲವಾರು ಪಕ್ಷಿಗಳು ಹಾಗೂ ಚೆಂಡಾಟವಾಡುತ್ತಿರುವ ಕುದುರೆ ಸವಾರರ ಚಿತ್ರಗಳು ಅಸ್ಪಷ್ಟವಾಗಿ ಉಳಿದಿದೆ. ಇವಲ್ಲದೆ ಆನೆ, ಕುದುರೆ ಸವಾರರು, ನೃತ್ಯಗಾತಿಯರು, ಗಿಟಾರ್‌ನಂತಹ ವಾದ್ಯ ನುಡಿಸುತ್ತಿರುವಾತ ಇತ್ಯಾದಿಗಳನ್ನೂ ಗುರುತಿಸಬಹುದು. ಇಂದಿಗೆ ಚಿತ್ರಗಳು ಬೂದು ಬಣ್ಣಕ್ಕೆ ತಿರುಗಿದ್ದು ಹಿನ್ನೆಲೆಯ ನೀಲಿ ಮತ್ತು ಹಸಿರು ಬಣ್ಣಗಳು ಕಡಪು ಬಣ್ಣಕ್ಕೆ ತಿರುಗಿವೆ. ಇಡೀ ಚಿತ್ರ ಶೈಲಿಯಲ್ಲಿ ಅಂದಿನ ಯಾವುದೇ ಭಾರತೀಯ ಚಿತ್ರಗಳನ್ನು ಹೋಲುವುದಿಲ್ಲ. ಬದಲಿಗೆ ಯುರೋಪಿನ ವಿಕ್ಟೋರಿಯನ್ ಆರಂಭಿಕ ಶೈಲಿಯನ್ನು ಹೋಲುವುದರಿಂದ ಇವುಗಳಲ್ಲಿ ವಿದೇಶೀ ಕಲಾವಿದರ ಪ್ರಭಾವ ಕಾಣಬಹುದು.

ಅಂಜ

## ಕರಕುಶಲ ಕಲೆ

ಕ್ರಿ. ಶ. ೧೮ ಮತ್ತು ೧೯ನೇ ಶತಮಾನದಲ್ಲಿ, ಹಲವಾರು ದೇಶಗಳಲ್ಲಿ ಕಲೆಯನ್ನು ಕುರಿತು ಯಾವುದೇ ಚಟುವಟಿಕೆಗಳು ಪೂರ್ಣ ಪ್ರಮಾಣದಲ್ಲಿ ನಡೆದಿಲ್ಲವೆನ್ನಬಹುದು. ಆದರೆ ೧೯ನೇ ಶತಮಾನದ ಅಂತ್ಯದಲ್ಲಿ, ಸಾಮಾಜಿಕ ನೆಲೆಯಲ್ಲಿ ಕಲಾತ್ಮಕ ಜಾಗೃತಿಯೊಂದು ಬೆಳೆಯತೊಡಗಿತು. ಇದಕ್ಕೆ ಕಾರಣ, ಪುಗಿನ್ ಮತ್ತು ರಸ್ಕಿನ್ ಹುಟ್ಟುಹಾಕಿದ "ಮಧ್ಯಕಾಲೀನ ಗಿಲ್ಡ್"ನ ಪ್ರಭಾವ. ಇವರಿಬ್ಬರಿಗೂ ಸಿಕ್ಕ ಪ್ರೇರಣೆಗಳು ವ್ಹಿಲಿಯಂ ಮೋರಿಸ್ ಎಂಬುವನ ಯೋಜನೆಗಳಿಂದ. ಈ ಯೋಜನೆಗಳಿಂದಲೇ ಹಲವಾರು ಸಂಘ-ಸಂಸ್ಥೆಗಳು ರೂಪುಗೊಂಡವು. ಕಲೆ, ಕುಶಲಕಲೆಯ ಕುರಿತು ಚಳುವಳಿಗಳು ಪ್ರಾರಂಭವಾದವು. ೧೮೮೦ರ ವೇಳೆಗಾಗಲೇ ಕರಕುಶಲ ವಸ್ತುಗಳ ಪ್ರದರ್ಶನಗಳು ಲಂಡನ್ ಮತ್ತು ಬ್ರುಸ್ಸೆಲ್ಸ್‌ಗಳಲ್ಲಿ ಪ್ರಾರಂಭವಾದವು. ಈ ಪ್ರದರ್ಶನಗಳಲ್ಲಿ ಸೂಕ್ಷ್ಮ ಕೆತ್ತನೆಯ ಕುಸುರಿ ಕೆಲಸಗಳು, ಸಮಕಾಲೀನತೆಗೆ ತಕ್ಕ ರೂಪ ಪಡೆದ ಕುರ್ಚಿ, ಮೇಜು, ಕಪಾಟು ಇತ್ಯಾದಿಗಳಲ್ಲದೇ, ಗೋಡೆ ಅಲಂಕಾರಕ್ಕಾಗಿ ತಯಾರಿಸಿದ ಡಿಸೈನ್ಸ್‌ಗಳಿರುವ ಪೇಪರ್ಸ್, ಸುಂದರ ಚಿತ್ರಕೃತಿಗಳಾದ ಲೋಹವಸ್ತುಗಳು, ಹ್ಯಾಂಡ್‌ಮೇಡ್ ಪೇಪರ್ಸ್ ಇತ್ಯಾದಿಗಳು ಪ್ರದರ್ಶಿಸಲ್ಪಟ್ಟವು. "ಮೋರಿಸ್ ಕೆಮ್‌ಸ್ಕಾಟ್" (Morries Kelmscott) ಮುದ್ರಣಾಲಯದವರು ಹ್ಯಾಂಡ್ ಮೇಡ್ ಹಾಳೆಗಳ ಪುಸ್ತಕವನ್ನೂ ಹೊರತಂದರು.

ಈ ವೇಳೆಗಾಗಲೇ ಹಾಲ್‌ಮಾರ್ಕ್ ಎಂಬುವನು ದೇಶದಲ್ಲಿಯೇ ಅತಿ ದೊಡ್ಡ ಕುಶಲಕರ್ಮಿ ಎನ್ನಿಸಿಕೊಂಡ. ಆದರೆ ಕರನಿರ್ಮಿತ ಕುಶಲವಸ್ತು, ಕಲಾಕೃತಿಗಳ ಬೆಲೆ ಹೆಚ್ಚಾಗಿರುತ್ತಿದ್ದುದರಿಂದ ಕಲೆಯನ್ನೇ ಕುರಿತು ಸಾಮೂಹಿಕವಾಗಿ ಚಳುವಳಿ, ಸಂಘಟನೆಗಳನ್ನು



ಮಾಡಲು ಕಷ್ಟವಾಯಿತು. ಮೋರಿಸ್‌ನ ಯೋಜನೆ ಮುಂದುವರೆಯದಾದವು. ಕೆಲವು ಸಂಘಟನೆಗಳು, ತಮ್ಮದ್ದೇ ಆದ ಶೈಲಿಗಳನ್ನು ಕಂಡುಕೊಂಡವು, "ನೋವಿಯಾ ಕಲೆ" (Nouveau Art) ಎಂಬುದನ್ನು ರೂಢಿಸಿಕೊಂಡರು. ಈ ಕಲೆಯನ್ನು ಗುರುತಿಸುವುದಾದರೆ ಮೋರಿಸ್‌ನ ಚಿಂಟ್ಜ್, ಎಚ್. ಮ್ಯಾಕ್, ಮರ್ಡೋಂನ ಟೆಕ್ಸಟೈಲ್ ಡಿಸೈನ್, ಇ. ಗ್ರಾಸ್ಲೆಟ್‌ನ ಟೆಪಸ್ಟ್ರಿ, "ಸ್ಪ್ರಿಂಗ್"ಎಂಬ ಸ್ಟೈನ್‌ಗ್ಲಾಸ್ ವಿಂಡೊವನ್ನು ನೋಡಬಹುದು. ಆದರೆ ಭಾರತದಲ್ಲಿ ಕಲಾ ಚಟುವಟಿಕೆಗಳನ್ನು ಕುರಿತು, ಸಾಮೂಹಿಕ ಸಂಘಟನೆ, ಉಳಿವು ಬೆಳವಣಿಗೆಯನ್ನು ಯೋಚಿಸಿ ಪ್ರಾರಂಭವಾದ ಯಾವುದೇ ಆಕರಗಳಿಲ್ಲ. ದೇಶಿಯ ಗುಣ, ವೈಶಿಷ್ಟ್ಯತೆಯನ್ನು ಹೊಂದಿದ್ದ ಭಾರತೀಯ ಪ್ರಾದೇಶಿಕ ಹಾಗೂ ಗ್ರಾಮೀಣ ಕಲೆಗಳು-ಕುಶಲ ಕರ್ಮಿಗಳು ಸ್ವಾತಂತ್ರ್ಯಾ ನಂತರದ ಅನೇಕ ವರ್ಷಗಳಲ್ಲಿಯೂ ಬೆಳೆಯದೇ ಹೋದದ್ದು ವಿಪರ್ಯಾಸ. ಆದರೆ ಇತ್ತೀಚೆಗೆ ಗ್ರಾಮೀಣ ಕಲೆಗಳನ್ನು ಗುರುತಿಸಿ, ಕುಶಲಕರ್ಮಿಗಳಿಗೆ, ಕುಶಲಕಲಾಪ್ರಕಾರಗಳಿಗೆ ಸಾಕಷ್ಟು ಪ್ರೋತ್ಸಾಹ ಮತ್ತು ಪ್ರಚಾರಗಳಾಗುತ್ತಿವೆ. ಪ್ರಾದೇಶಿಕ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಕರಕುಶಲ ಮೇಳಗಳು, ಪ್ರದರ್ಶನಗಳು ನಡೆಯುತ್ತಿವೆ. ನುರಿತ ಕುಶಲಕರ್ಮಿಗಳು ದೇಶ-ವಿದೇಶಿಗರ ಗಮನ ಸೆಳೆಯುತ್ತಿದ್ದಾರೆ. ಕ್ರಿ. ಪೂ. ೩೦೦೦ದಲ್ಲಿನ ಈಜಿಪ್ಟ್‌ನಲ್ಲಿ ಕಾಣುವ ಕುಶಲಕಲೆಗಳಂತೆ, ಕ್ರಿ. ಪೂ. ೧೫೦೦ಕ್ಕೂ ಮೊದಲೇ ಭಾರತ, ಚೈನಾ ಮತ್ತು ಅರೇಬಿಯಾಗಳಲ್ಲಿದ್ದಂತೆ, ಇಂದು ಕೂಡ ವಿವಿಧ ಮಾಧ್ಯಮಗಳಲ್ಲಿ ಕರಕುಶಲ ಕಲೆಯನ್ನು ಕಾಣುತ್ತೇವೆ. ಶ್ರೀಗಂಧ, ದಂತದ ಕೆತ್ತನೆ ಲೋಹಶಿಲ್ಪಗಳು ಬನಾರಸ್, ಪೂಣಾ, ಸುರತ್ಕಲ್, ಬೆಂಗಳೂರು ಮತ್ತು ಮೈಸೂರುಗಳ ಕಲಾಬತ್ತಿನ ರೇಷ್ಮೆ ಸೀರೆಗಳು,

ನೆಯ್ಗೆಯ ಬಟ್ಟೆಗಳು, ಉಡುಪುಗಳೂ ಪ್ರಸಿದ್ಧವಾಗಿವೆ. ಈ ಪ್ರಸಿದ್ಧಿ ಮತ್ತು ಗ್ರಾಮೀಣ ಕಲೆಗಳ ಬೆಳವಣಿಗೆಗೆ ಪೂರಕವಾಗುವಂತೆ ಭಾರತೀಯ ಕಲೆ ಮತ್ತು ಕರಕುಶಲ ಕಲಾ ನಿಗಮವನ್ನು ಸ್ಥಾಪಿಸಿದ ಕೀರ್ತಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರಿಗೆ ಸಲ್ಲುತ್ತದೆ.

**ಆರ್. ಎ. ಶಾ.**

## ಕಲಂಕಾರಿ

ಕಲಂಕಾರಿ ಸಂಪ್ರದಾಯದ ಚಿತ್ರಕಲೆಯು ಅತಿ ಪ್ರಾಚೀನವಾದುದು ಮತ್ತು ಕುಂಚದ ತಂತ್ರದಿಂದ ದೇವರುಗಳು, ಧಾರ್ಮಿಕ ಪುರಾಣಗಳ ಆಖ್ಯಾಯಿಕೆಗಳನ್ನು ಚಿತ್ರಿಸಿದ್ದಾರೆ. 'ಕಲಂ' ಪದಪರ್ಶಿಯನ್‌ನಿಂದ ಬಂದಿದೆ. ಹಿಂದೂ ಮತ್ತು ಮುಸ್ಲಿಂ ಯಾರೇ ಆಗಲೀ ಕಲಂಕಾರಿ ಚಿತ್ರಗಳನ್ನು ರಚಿಸುತ್ತಿದ್ದರು. ೧೬೮೬ರಲ್ಲಿ ಕಲಂಕಾರಿ ಕಲಾವಿದರು ಇಂಗ್ಲೀಷರ ಗಮನಕ್ಕೆ ಬಂದರು. ಕಲಂಕಾರಿ ಚಿತ್ರಗಳಾಗಿದ್ದು ಗೋಡೆ, ತೂಗು ಚಿತ್ರಗಳು ಬದಲಾಗದೆ ಉಳಿದಿವೆ. ೧೯ನೇ ಶತಮಾನದಿಂದಲೂಪಾಲಕೊಟ್ಟು ಮತ್ತು ಪುಲಿಕಾಟ್‌ನೊಂದಿಗೆ ಕಾಳಹಸ್ತಿಯ ಸ್ಥಳಗಳು ಕಲಂಕಾರಿಯ ಪ್ರಮುಖ ಕೇಂದ್ರಗಳಾಗಿವೆ. ಕಲಂಕಾರಿ ಚಿತ್ರಗಳಲ್ಲಿ ರೇಖೆಗಳಿಗೆ ಹೆಚ್ಚು ಪ್ರಾಧಾನ್ಯ.

ಚಿತ್ರ ಬರೆಯುವ ಬಟ್ಟೆಯನ್ನು 'ಮೈಲಾಂಬರಂ' ಎಂಬ ದ್ರವದಲ್ಲಿ ಮತ್ತೆ ಮತ್ತೆ ನೆನೆಹಾಕಿ ಒಣಗಿಸಿಕೊಳ್ಳುತ್ತಾರೆ. ತಾಟಿಬೆಲ್ಲ, ಕಬ್ಬಿಣದ ಚೂರು ಮತ್ತು ನೀರಿನ ಮಿಶ್ರಣದಿಂದ ಕಪ್ಪು; ಮಂಜಿಷ್ಠ ಮರದ ತೊಗಟೆ, ವಚಿಜಲಗ, ತಾಮ್ರಗಳಿಂದ ಕಂಪು, ಕರಕಹೂವಿನಿಂದ ಹಳದಿ. ಹಾಗೂ ದೇಶೀಯ ನೀಲಿ ಇತ್ಯಾದಿ ಬಣ್ಣಗಳಿಂದ ಚಿತ್ರರಚಿಸುತ್ತಾರೆ. ಪ್ರತಿಬಾರಿಯೂ ಒಂದೊಂದೇ ಬಣ್ಣ ಹಾಕುತ್ತಾ ಒಣಗಿಸುತ್ತಾ ಹೋಗುವ ಈ ಕ್ರಿಯೆಗೆ ಹೆಚ್ಚಿನ ನೀರಿನ ಅವಶ್ಯಕತೆಯಿದೆ.

**ಮರಿ**

## ಕಲಘಟಗಿ

ಧಾರವಾಡ ಜಿಲ್ಲೆಯ ಕಲಘಟಗಿಯ ಕೀರ್ತಿ ಕಲಾತ್ಮಕವಾದ ತೊಟ್ಟಿಲುಗಳಿಂದ ಕಡಲಾಚೆಗೂ ಹರಡಿದೆ. ಮರದಿಂದ ಸುಂದರವಾಗಿ ಕೆತ್ತಿ ತಯಾರಿಸಿ ಅರಗಿನ ಬಣ್ಣಗಳಿಂದ ಅಲಂಕರಿಸಿದ ಇಲ್ಲಿನ ಮರದ ತೊಟ್ಟಿಲುಗಳು, ತೂಗುಮಂಚಗಳು, ವಿಗ್ರಹಗಳು, ಗಂಗೆ ಗೌರಿ ಮಂಟಪಗಳೂ, ಲತ್ತಿ ಗುಣಿ, ಬಾರಕೋಲುಗುಣಿ ಕುಡುಗೋಲು ಮುಂತಾದವುಗಳು ದೇಶದಾದ್ಯಂತ ಕಲಾವಸ್ತುಗಳ ಮಳಿಗೆಗಳಲ್ಲಿ ಮಾರಲ್ಪಡುತ್ತಿವೆ.

ಕಲಘಟಗಿಯ ಸಾಹುಕಾರ ಮನೆತನದ ಜನಪದ ಕಲಾವಿದರ ಅಪೂರ್ವ ಕುಸುರಿ ಕೆತ್ತನೆ ಹಾಗೂ ವಿಶಿಷ್ಟವಾಗಿ ಅಲಂಕರಿಸುವ ಚಿತ್ರಗಾರಿಕೆ ನಾಡಿನ ಬೇರಾವ ಕಡೆಯೂ ರೂಪುಗೊಳ್ಳುತ್ತಿಲ್ಲ, ಹೀಗಾಗಿಯೇ ಕಲಘಟಗಿಯ ತೊಟ್ಟಿಲುಗಳಿಗೆ ಒಂದು ವಿಶಿಷ್ಟ ಸ್ಥಾನ ಲಭಿಸಿದೆ.

ಇವರು ದೇವಿಕೊಪ್ಪ, ಮುಂಡಗೋಡ, ಕಿರವತ್ತಿ, ಕಲಕೇರಿ, ಮುಂತಾದ ಕಡೆಗೆ ಇರುವ ಸರಕಾರಿ ಡಿಪೋದಿಂದ ಸಾಗವಾನಿ ಕಟ್ಟಿಗೆಯನ್ನು ಖರೀದಿಸುತ್ತಾರೆ. ಮತ್ತು ತಮಗೆ ಬೇಕಾದ ವಿನ್ಯಾಸಕ್ಕಾಗಿ ಕಟ್ಟಿಗೆಯನ್ನು ಸಿದ್ಧಗೊಳಿಸಿಕೊಳ್ಳುವ ಕ್ರಮ ಒಂದಾದರೆ, ಅದಕ್ಕೆ ಶೇಡಿಮಣ್ಣನ್ನು ಕುಟ್ಟಿ ಪುಡಿ ಮಾಡಿ ಸೋಸಿ, ಮುಡಿಕಟ್ಟುತ್ತಾರೆ. ನೆನೆಹಾಕಿದ ಹುಣಸೆಯ ಬೀಜವನ್ನು ರುಬ್ಬಿ, ಕುದಿಸಿ ಇದಕ್ಕೆ ಸೇಡಿಮಣ್ಣನೊಂದಿಗೆ ಕೂಡಿಸಿದ ಮಿಶ್ರಣವನ್ನು ತೊಟ್ಟಿಲು ಕಟ್ಟಿಗೆಗೆ ಹಚ್ಚಿ ಬಿಸಿಲಲ್ಲಿ ಒಣಗಿಸುತ್ತಾರೆ. ನಂತರ ಅರಗಿನ ರಾಳದ ಬಣ್ಣ ಲೇಪಿಸುತ್ತಾರೆ. ಅರಗು ರಾಳಕ್ಕೆ ವಿವಿಧ ರೀತಿಯ ವನಸ್ಪತಿಗಳನ್ನು ಸೇರಿಸಿ ಬಣ್ಣಗಳನ್ನು ತಯಾರಿಸುತ್ತಾರೆ. ತೊಟ್ಟಿಲಿನ ದುಂಡು ಕಟ್ಟಿಗೆಗಳಿಗೆ ಈ ಅರಗಿನ ಬಣ್ಣಗಳಿಂದ ಬಣ್ಣ ಕೊಡುತ್ತಾರೆ.

ಗಂಡಸರು ಚಿತ್ರಗಳನ್ನು ಬಿಡಿಸಿದರೆ ಹೆಂಗಸರು ಆ ಚಿತ್ರಗಳಲ್ಲಿ ಬಣ್ಣ ತುಂಬುತ್ತಾರೆ. ಕುಸುರಿ ಕೆಲಸವನ್ನು ಗಂಡಸರು ಮಾತ್ರ ಮಾಡುತ್ತಾರೆ. ಹೀಗೆ ಕುಟುಂಬವೇ ಈ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತದೆ. ತೊಟ್ಟಿಲುಗಳಲ್ಲಿ ಎರಡು ಪ್ರಕಾರಗಳಿವೆ. ಒಂದು ನಿಲ್ಲುವ ತೊಟ್ಟಿಲು ಇನ್ನೊಂದು ಕಟ್ಟಿ ತೂಗುವ ತೊಟ್ಟಿಲು. ತೊಟ್ಟಿಲುಗಳನ್ನು ಇಪ್ಪತ್ತು, ಇಪ್ಪತ್ನಾಲ್ಕು ಎಕ್ಕೆಗಳೆಂದು ಅಳೆದು ಅವುಗಳ ಗಾತ್ರ ಹೇಳಲಾಗುತ್ತದೆ.

ತೊಟ್ಟಿಲುಗಳಿಗೆ ಮೊಳೆ ಹೊಡೆಯದೇ ಹಾಗೆಯೇ ಜೋಡಿಸುವುದು ಇಲ್ಲಿಯ ವೈಶಿಷ್ಟ್ಯ ತೊಟ್ಟಿಲಿನ ಮೇಲೆ ರಾಮಾಯಣ, ಮಹಾಭಾರತದ ದೃಶ್ಯಾವಳಿ, ಗ್ರಾಮದೇವತೆಗಳು, ಲಕ್ಷ್ಮೀ ಸರಸ್ವತಿ, ನಂದಿ, ಮಕ್ಕಾಮಸೀದಿ, ಏಸುಕ್ರಿಸ್ತ ಹೀಗೆ ವಿವಿಧ ಧರ್ಮದವರು ಹೇಳುವ ಚಿತ್ರಗಳನ್ನು ಚಿತ್ರಿಸುತ್ತಾರೆ. ಅಲ್ಲದೆ ಸುಂದರವಾದ ಸುಳಿವುಗಳು ವಿವಿಧ ವರ್ಣಗಳ ಸಮುಚ್ಚಯಗಳಿಂದ ತುಂಬಾ ಕಲಾತ್ಮಕವಾಗಿ ಗಮನ ಸೆಳೆಯುತ್ತವೆ.

ಪುಟ್ಟ ಮಗುವಿನ ಕಣ್ಣುಗಳಲ್ಲಿ ಕನಸುಗಳನ್ನು ಚಿಗುರಿಸುತ್ತಿರುವ ಕಲಘಟಗಿಯ ಬಣ್ಣದ ಚಿತ್ರಗಾರಿಕೆಯ ತೊಟ್ಟಿಲುಗಳು ಅಪ್ಪಟ ಜನಪದ ಮೂಲದಿಂದ ಕೂಡಿದವುಗಳಾಗಿವೆ. ಗಂಡು ಮಗುವಾಗಿದ್ದರೆ, ತೊಟ್ಟಿಲಿನೊಂದಿಗೆ ಬಣ್ಣದ ಉಳಕನ್ನು, ಹೆಣ್ಣು ಮಗುವಾಗಿದ್ದರೆ ಸಣ್ಣ ಒನಕೆಯನ್ನು ತೊಟ್ಟಿಲಲ್ಲಿ ಹಾಕಿ ಕೊಡುವ ಸಂಪ್ರದಾಯವಿದೆ. ಬಣ್ಣ ಮಾಸದೆ ನೂರು ವರ್ಷಗಳವರೆಗೆ ಬಾಳಬಲ್ಲ ಈ ತೊಟ್ಟಿಲಿನ ಬೆಲೆ ಆರುನೂರರಿಂದ ಮೂರುಸಾವಿರ ರೂಪಾಯಿಗಳವರೆಗೂ ಇದೆ.

**ಎಸ್. ಪಿ. ಪಾ.**

## ಕಲ್ಪನಾ ಚಿತ್ರಲೇಖನ

ಸ್ವತಃ ಕಣ್ಣಿನಿಂದ ಹಿಂದೆಯಾಗಲೀ ಈಗಾಗಲೀ ನೋಡದೇ ಇದ್ದವಸ್ತು ಪಶು-ಪಕ್ಷಿ ಮಾನವರು, ದೇವ-ದೇವತೆಗಳು ಮುಂತಾದವುಗಳನ್ನಾಗಲಿ, ಸನ್ನಿವೇಶಗಳನ್ನಾಗಲೀ ಕೇವಲ ಕಲ್ಪನೆ ಮಾಡಿಕೊಂಡು ಚಿತ್ರಿಸುವ ಚಿತ್ರಗಳು ಕಲ್ಪನಾ ಚಿತ್ರಗಳೆನಿಸುತ್ತವೆ. ಐತಿಹಾಸಿಕ, ಪೌರಾಣಿಕ ಸನ್ನಿವೇಶಗಳನ್ನಾಗಲೀ, ಘಟನೆಗಳನ್ನಾಗಲೀ ನಾವು ಕಣ್ಣಿನಿಂದ ಕಂಡವರಲ್ಲ; ಅವುಗಳಿಗೆ ಸಂಬಂಧಿಸಿದ ವ್ಯಕ್ತಿಗಳನ್ನಾಗಲೀ ವಸ್ತುಗಳನ್ನಾಗಲೀ ನಾವು ನೋಡಿಲ್ಲ. ಇಂಥ ಚಿತ್ರಗಳನ್ನು ಚಿತ್ರಿಸುವಾಗ ಅವುಗಳಿಗೆ ಸಂಬಂಧಿಸಿದ ಕಾಲಮಾನ ಆಚಾರ-ವಿಚಾರ,

ವೇಷ-ಭೂಷಣಗಳು, ವ್ಯಕ್ತಿಗಳು ಹೀಗಿದ್ದಿರಬೇಕು ಎಂದು ಕಲ್ಪಿಸಿಕೊಳ್ಳಬೇಕಾಗುತ್ತದೆ; ಕಲ್ಪನೆಯಂತೆ-ಚಿತ್ರ ಸಿದ್ಧವಾಗುತ್ತದೆ. ಇಲ್ಲಿ ಕಲ್ಪನೆ ಪ್ರಧಾನವಾಗಿ ಸ್ಮರಣ ಗೌಣವಾಗುತ್ತದೆ.

**ವಿ.ಟ.ಶಾ.**

## ಕಲ್ಯಾಣದ ಚಾಳುಕ್ಯರ ಕಲೆ

ಕಲ್ಯಾಣದ ಚಾಲುಕ್ಯರ ವಾಸ್ತುಶಿಲ್ಪವು ಬಾದಾಮಿಯ ಚಾಲುಕ್ಯರ ವಾಸ್ತುಶಿಲ್ಪ ಸಂಪ್ರದಾಯದಿಂದಲೇ ಆರಂಭವಾದರೂ ಕೊನೆಯಲ್ಲಿ ತನ್ನದೆ ಆದ ಅಂಶಗಳಿಂದ ಕೂಡಿದ ಒಂದು ಹೊಸ ರೂಪವನ್ನು ಪಡೆಯಿತೆನ್ನಬಹುದಾಗಿದೆ. ಕಗ್ಗಲ್ಲು ಬಳಕೆಯಲ್ಲಿ ಮುಂದುವರಿದರೂ ಕೂಡ ನುಣುಪಾದ, ಮೆದುವಾದ, ಸುಂದರವಾದ ಶಿಲ್ಪಗಳನ್ನು ತಯಾರು ಮಾಡಲು ಅನುಕೂಲವಾಗುವ ಕರಿಯ ಕಲ್ಲಿನ ಬಳಕೆಯ ಆರಂಭವಾಯಿತು. ಕಲ್ಲಿನಲ್ಲಿ ಗುಹೆಗಳನ್ನು ಕೊರೆಯುವ ಸಂಪ್ರದಾಯವನ್ನು ಇವರು ಮುಂದುವರಿಸಲಿಲ್ಲ. ಇವರ ಕಾಲದ ದೇವಾಲಯಗಳಲ್ಲಿ ಶಿಲ್ಪ ಮತ್ತು ಅಲಂಕಾರಗಳಿಗೆ ವಿಶೇಷ ಮಹತ್ವವನ್ನು ಕೊಡುವ ಪದ್ಧತಿಯು ಬೆಳೆದು ಬಂದಿತು. ಕಂಬಗಳನ್ನು ಚರಕಿಯಂತ್ರದ ಮೇಲೆ ತಿರುಗಿಸುವುದರಿಂದ ಅವುಗಳನ್ನು ಗುಂಡಾಗಿಯೂ ಮತ್ತು ನುಣುಪಾಗಿಯೂ ಮಾಡುವಲ್ಲಿ ಯಶಸ್ವಿಯಾದರು.

ಚಾಳುಕ್ಯ ವಾಸ್ತು ಶೈಲಿಯಲ್ಲಿ ಸಮಕೋನದಉಪಯೋಗ ವಿಶೇಷವಾಗಿ ಕಂಡುಬರುತ್ತದೆ. ಈ ಕಾಲದ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳ ಮತ್ತು ಅದರ ಮುಂದೆ ಅನೇಕ ಕಂಬಗಳಿಂದ ಕೂಡಿದ ಭಿತ್ತಿರಹಿತ ತೆರೆದ ಮಂಟಪ ಇರುತ್ತದೆ. ಈ ಮಂಟಪದ ಹೊರ ಅಂಚಿನಲ್ಲಿ ಸುತ್ತಲೂ ಕಕ್ಷಾಸನಗಳು ಇರುತ್ತವೆ. ಇವರ ದೇವಾಲಯಗಳಲ್ಲಿ ಒಂದಕ್ಕಿಂತ ಹೆಚ್ಚು ದ್ವಾರಗಳಿರುವುದು. ಪಕ್ಕಗಳಿಂದಲೇ ಮುಖ್ಯ ದ್ವಾರಗಳಿರುವುದು ವಿರಳವೇನಲ್ಲ. ಹೆಚ್ಚಿನ ದೇವಾಲಯಗಳು ಪೂರ್ವಾಭಿಮುಖವಾಗಿವೆ. ದೇವಾಲಯದ ಗೋಡೆಯಲ್ಲಿ ಜಾಲಾಂಧ್ರಗಳು ವಿಶೇಷವಾಗಿಯೂ ಕಲಾತ್ಮಕವಾಗಿಯೂ ಇರುತ್ತವೆ. ಇದರಿಂದ ಗರ್ಭಗುಡಿಗೆ ಸಾಕಷ್ಟು ಗಾಳಿ ಮತ್ತು ಬೆಳಕು ಬರುವಂತೆ ಮಾಡಲಾಗಿದೆ. ದ್ವಾರಬಂಧಗಳು ಅಲಂಕಾರಿಕವಾಗಿರುತ್ತವೆ. ಸೂಕ್ಷ್ಮ ಕೆತ್ತನೆಯ ಕೆಲಸಗಳಿಂದ ಕೂಡಿದ ಈ ಬಾಗಿಲುವಾಡಗಳು ನೋಡಲು ಬಲು ಸುಂದರವಾಗಿರುತ್ತವೆ.

ಕಲ್ಯಾಣಿಯ ಚಾಳುಕ್ಯರ ದೇವಾಲಯಗಳಲ್ಲಿ ಗರ್ಭಗ್ರಹ, ಸುಕನಾಸಿ, ಹಲವು ಕಂಬಗಳುಳ್ಳ ತೆರೆದ ಮಂಟಪಗಳಿರುವುದು ಸಾಮಾನ್ಯ. ಶಿವದೇವಾಲಯಗಳಲ್ಲಿ ಮುಂದೆ ಬೇರೆಯಾಗಿ ಒಂದು ನಂದಿ ಮಂಟಪವಿರುತ್ತದೆ. ಸುಕನಾಸಿ ಅಥವಾ ಅರ್ಧಮಂಟಪಕ್ಕೆ ಗೋಡೆ, ಬಾಗಿಲುಗಳಲ್ಲದೆ ಎರಡು ತೆಳುಗಂಬಗಳ ಮೇಲೆ ಸುಂದರವಾಗಿ ಕಂಡರಿಸಿದ ಮಕರ ತೋರಣಗಳಿರುತ್ತವೆ.

ಸಿರಿವಾಳ, ಮುದೆನೂರು, ಕೆಂಬಾವಿ ಮೊದಲಾದ ಕಡೆಯಲ್ಲಿ ಮಧ್ಯದಲ್ಲಿ ಚತುರಸ್ತವಾದ ಗರ್ಭಗುಡಿ, ಅದರ ನಾಲ್ಕು ಕಡೆಗೂ ಅರ್ಧ ಮಂಟಪ, ಮಹಾ ಮಂಟಪ ಮತ್ತು ಗರ್ಭಗೃಹಗಳಿದ್ದು ನಾಲ್ಕು ಬೇರೆ ಬೇರೆ ದೇವಾಲಯಗಳು ಮಧ್ಯದ ದೇವಾಲಯಕ್ಕೆ ಕೂಡಿಕೊಂಡಂತಿರುವ ವಿಶಿಷ್ಟ ವಿನ್ಯಾಸವುಳ್ಳ ದೇವಾಲಯಗಳುಂಟು.

ಡಂಬಳದ ದೊಡ್ಡ ಬಸಪ್ಪ ದೇವಾಲಯ ನಕ್ಷತ್ರಾಕಾರದ ವಿನ್ಯಾಸದಲ್ಲಿದೆ. ಹಳೇಬೀಡಿನ ದೇವಾಲಯವನ್ನು ಬಿಟ್ಟರೆ ಕರ್ನಾಟಕದಲ್ಲಿಯೇ ಇದು ಅತ್ಯಂತ ಸುಂದರ ದೇವಾಲಯ ಎಂದು ಕಸಿನ್ಸ್ ಅಭಿಪ್ರಾಯ ಪಟ್ಟಿದ್ದಾರೆ. ಬಿದರ, ಗುಲ್ಬರ್ಗಾ, ಬಿಜಾಪುರ, ಧಾರವಾಡ, ಬೆಳಗಾಂವಿ, ಬಳ್ಳಾರಿ, ರಾಯಚೂರು ಜಿಲ್ಲೆ ಮೊದಲಾದ ಕಡೆಗಳಲ್ಲಿ ಇವರ ಕಾಲದ ದೇವಾಲಯಗಳ ಅವಶೇಷಗಳು ಕಂಡುಬರುತ್ತವೆ.

ಕಲ್ಯಾಣಿಯ ಚಾಳುಕ್ಯರ ಕಾಲದ ದೇವಾಲಯಗಳಲ್ಲಿ ಪ್ರಮುಖ ವಾಸ್ತುಗಳಲ್ಲಿ ಕುಕ್ಕನೂರಿನ ಕಲ್ಲೇಶ್ವರ ಮತ್ತು ನವಲಿಂಗ, ಲಕ್ಕುಂಡಿಯ ಕಾಶಿ ವಿಶ್ವೇಶ್ವರ ಮತ್ತು ಜೈನದೇವಾಲಯ, ಇಟಗಿಯ-ಮಹಾದೇವ ದೇವಾಲಯ ಚೌಡದಾನಪುರದ-ಮುಕ್ತೇಶ್ವರ ದೇವಾಲಯ, ಕುರುವತ್ತಿಯ-ಮಲ್ಲಿಕಾರ್ಜುನ ಗದಗಿನ- ತ್ರಿಕೂಟೇಶ್ವರ ಮತ್ತು ಸರಸ್ವತಿ, ಡಂಬಳದ-ಬಸಪ್ಪ ದೇವಾಲಯು ಮತ್ತು ಜಲಸಂಗ್ವಿಯ ದೇವಾಲಯಗಳಲ್ಲದೆ ಬಳ್ಳಿಗಾವೆಯ ಸತ್ತಿ, ಸವದಿ, ಲಕ್ಷ್ಮೇಶ್ವರ, ಸೂಡಿ, ನರೇಗಲ್ಲು, ಬೆಳಗಾವಿ, ಹೂಲಿ ಇತ್ಯಾದಿ ಅನೇಕ ಸ್ಥಳಗಳಲ್ಲಿಯ ದೇವಾಲಯಗಳನ್ನು ಹೆಸರಿಸಬಹುದು.

ಜಿ. ಟಿ. ಜ.

## ಕಲೆ

ಕಲೆ ಮಾನವನ ಕ್ರಿಯಾಶಕ್ತಿಯ ಕುಶಲ ಅಭಿವ್ಯಕ್ತಿ. ಅಭಿವ್ಯಕ್ತಿಯು ಹಲವಾರು ರೀತಿಯಲ್ಲಿ ವ್ಯಕ್ತವಾಗಿದ್ದು, ಆಗಾಗ ಬದಲಾವಣೆ ಆಗುತ್ತಾ ಬಂದಿದೆ. ಮಾನವನಿಗೆ, ತನ್ನ ಸುತ್ತಮುತ್ತಲಿನ ಪರಿಸರದಿಂದ ಕಲಾಪ್ರಜ್ಞೆ ಹೊರಹೊಮ್ಮಲು ಕಾರಣಗಳಾಗುತ್ತವೆ. ತನ್ನ ಪರಿಸರದಲ್ಲಿ ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಉಂಟುಮಾಡುತ್ತವೆಯೋ ಅವನ್ನು ಚಿತ್ರಿಸುತ್ತಾನೆ. ಪ್ರಕೃತಿಯನ್ನು ಅದು ಪ್ರಚೋದಿಸಿದ ಭಾವನೆಗಳನ್ನು ಕಲೆಯ ಮೂಲಕ ಸೃಷ್ಟಿಸುತ್ತಾನೆ. ಮಾನವನು ವಿಕಾಸಗೊಂಡಂತೆ, ಕಲೆ ಬದಲಾಗುತ್ತಾ ಬಂದಿದೆ ಕಲೆ ಮಾನವನ ಜೀವನದ ಅಂಗವಾಗಿದ್ದು, ಕಲಾಸೃಷ್ಟಿ ಒಂದಲ್ಲ ಒಂದು ರೂಪದಲ್ಲಿ ನಡೆಯುತ್ತಿದೆ.

ಮರಿ

## ಕಲೆಗಳು - ೬೪

ಸಾಮಾನ್ಯವಾಗಿ ಕಲೆಯನ್ನು ಕುರಿತು ಹೇಳುವಾಗ ಶಾಸ್ತ್ರಗ್ರಂಥಗಳಲ್ಲಿ ೬೪ ಕಲೆಗಳನ್ನು ಪಟ್ಟಿ ಮಾಡಿದೆಯಾದರೂ 'ಲಲಿತ ವಿಸ್ತರ'ದಲ್ಲಿ ೮೬, 'ಸಮಯ ಸೂತ್ರ'ದಲ್ಲಿ ೮೭, 'ಕಲ್ಪಾಂತರ ವಾಚ್ಯಾನಿ'ಯಲ್ಲಿ ೭೨ ಕಲೆಗಳನ್ನು ಪಟ್ಟಿಮಾಡಿದೆ, 'ಕಾಮಸೂತ್ರ'ದಲ್ಲಿ ೬೪ ಕಲೆಗಳ ಮೂರು ಪಟ್ಟಿಗಳು ದೊರೆಯುತ್ತವೆ. ಇದೇ ಕಾಮಸೂತ್ರಕ್ಕೆ ವ್ಯಾಖ್ಯಾನ ಬರೆದ ಯಶೋಧರನು ೫೧೨ ಕಲೆಗಳನ್ನು ಕುರಿತು ಹೇಳುತ್ತಾನೆ. ಈ ಪಟ್ಟಿಗಳೂ ಸಹ ಏಕಮುಖವಾಗಿಲ್ಲ, ಕಲೆಗಳಲ್ಲಿ ವಿದ್ಯೆ (ಅಭ್ಯಾಸದಿಂದ ಬರುವಂತಹವು) ಲಲಿತಕಲೆ (ಪ್ರತಿಭಾ ಕೌಶಲ)ಗಳಲ್ಲದೆ ವಿಜ್ಞಾನದ ವಿಷಯಗಳನ್ನು ಸೇರಿಸಲಾಗಿರುತ್ತದೆ. ಇವುಗಳಲ್ಲಿ ಚಿತ್ರ ಮತ್ತು ಶಿಲ್ಪಕ್ಕೆ ಸಂಬಂಧಿಸಿದಂತೆ ಕೆಲವು ಪದಗಳು ಸೇರಿವೆ. ಅವೆಂದರೆ ಆಲೇಖ್ಯ ಅಥವಾ ಚಿತ್ರವಿಧಿ:

ವಿಶೇಷತ ಛೇದ್ಯ (ದೇಹದ ಮೇಲೆ ಚಿತ್ರಾಲಂಕಾರ); ದಾರು ಕ್ರಿಯಾ ಅಥವಾ 'ತಕ್ಷಣ' (ಮರದ ಕೆಲಸ) ಪುಸ್ತಕರ್ಮ(ಗಾರೆಯ ವಿಗ್ರಹಗಳ ತಯಾರಿಕೆ), ಕರ್ಣ ಪತ್ರಭಂಗ (ತಾಳೆ ಓಲೆಯಲ್ಲಿ ಆಕೃತಿಗಳ ಕತ್ತರಿಸಿ ತೆಗೆಯುವಿಕೆ) ತುಂಡಲ ಬಲಿ (ರಂಗೋಲಿ) ವಾಸ್ತುವಿದ್ಯೆ ಇತ್ಯಾದಿಗಳನ್ನು ಉದಾಹರಿಸಬಹುದು. ಇವಲ್ಲದೆ ಕೆಲವು ಪಟ್ಟಿಗಳಲ್ಲಿ ಸೂತ್ರದ ಗೊಂಬೆಯಾಟ, ಬಿದಿರಿನ ಬುಟ್ಟಿಗಳನ್ನು ಹಣೆಯುವುದು ಮುಂತಾದ ಪ್ರಸ್ತಾಪಗಳಿವೆ. 'ಮಣಿಭೂಮಿಕಾಕರ್ಮ' ಎಂಬ ಒಂದು ಕಲೆಯನ್ನು ಉದಾಹರಿಸಿದ್ದು ಅದಕ್ಕೆ ಮಣಿಗಳಿಂದ ಗೊಂಬೆಗಳನ್ನು ರಚಿಸುವಿಕೆ ಎಂದು ಕೆಲವರು ವ್ಯಾಖ್ಯಾನಿಸಿದ್ದಾರೆ. ಅಂತೆಯೆ 'ಚಿತ್ರಾಶ್ವಯೋಗ' ಎಂಬುದಕ್ಕೆ ಚಿತ್ರಕಲೆ ಎಂದು ಕೆಲವರ ಅಭಿಪ್ರಾಯ.

ಕಾಮಸೂತ್ರದಲ್ಲಿಯ ಒಂದು ಪಟ್ಟಿಯಂತೆ ೬೪ ಕಲೆಗಳು ಈ ರೀತಿಯಿದೆ:

೧) ಸಂಗೀತ, ೨) ವಾದ್ಯಗಳು, ೩) ನೃತ್ಯ, ೪) ಚಿತ್ರಕಲೆ, ೫) ವಿಶೇಷಕ ಛೇದ್ಯ (ಮಹಿಳೆಯರ ಅಲಂಕಾರ), ೭) ಪುಷ್ಪಾಸ್ತರಣ (ಹೂಗಳಿಂದ ಅಲಂಕರಿಸುವುದು), ೮) ದಶನವಸನಾಂಗರಾಗ (ಬಟ್ಟೆಗಳನ್ನು ಬಣ್ಣಗಳಿಂದ ಅಲಂಕರಿಸುವುದು), ೯) ಮಣಿಭೂಮಿಕಾಕರ್ಮ (ಮಣಿಗಳಿಂದ ಗೊಂಬೆಗಳನ್ನು ಅಲಂಕರಿಸುವುದು), ೧೦) ಶಯನ ರಚನೆ (ಋತುಮಾನಕ್ಕೆ ತಕ್ಕಂತೆ ಹಾಸಿಗೆಯನ್ನು ಸಿದ್ದಪಡಿಸುವಿಕೆ), ೧೧) ಉದಕವಾದ್ಯ (ಜಲತರಂಗ), ೧೨) ಉದಕಾಘಾತ (ನೀರು ಚಿಮ್ಮಿಸುವಿಕೆ), ೧೩) ಚಿತ್ತಾಶ್ವಯೋಗ ಅಥವಾ ಚಿತ್ರಯೋಗ (ಔಷಧಿಗಳಿಂದ. ಕಾಮವೃದ್ಧಿ?) ೧೪) ಮಾಲ್ಯಗ್ರಥನ ವಿಕಲ್ಪ (ಹೂಮಾಲೆಯನ್ನು ಪೋಣಿಸುವುದು), ೧೫) ಶೇಖರಕಾಪೀಡ ಯೋಜನ( ಹೂವನ್ನು ದಾರದಿಂದ ಕಟ್ಟುವುದು), ೧೬) ನೇಪಥ್ಯ ಪ್ರಯೋಗ (ವೇಷ-ಭೂಷಣ), ೧೭) ಕರ್ಣ ಪತ್ರಭಂಗ (ತಾಳೆಯೋಲೆ ಕತ್ತರಿಸುವಿಕೆ), ೧೮) ಗಂಧಯುಕ್ತಿ (ಪರಿಮಳ ದ್ರವ್ಯ ತಯಾರಿಕೆ), ೧೯) ಭೂಷಣ ಯೋಜನೆ (ಆಭರಣ ತೊಡುವಿಕೆ), ೨೦) ಇಂದ್ರಜಾಲ, ೨೧) ಕೌಚುಮಾರ ಯೋಗ (ಔಷಧಿ, ಮಂತ್ರ ತಂತ್ರಗಳಿಂದ ತಾರುಣ್ಯ ಪಡೆಯುವಿಕೆ), ೨೨) ಹಸ್ತಲಾಘವ (ಕೈಚಳಕ) ೨೩) ವಿಚಿತ್ರ ಶಾಕಯೂಷಭಕ್ಷ ವಿಕಾರ ಕ್ರಿಯಾ (ಪಾಕಶಾಸ್ತ್ರ), ೨೪) ಪಾನಕ ರಸರಾಗನವ ಯೋಜನಾ (ಅಗ್ನಿಯ ನೆರವಿಲ್ಲದೆ ಮಾಡುವ ತಿನಿಸುಗಳು) ೨೫) ಸೂಚೀವಾನ ಕರ್ಮ (ಹೊಲಿಯುವಿಕೆ), ೨೬) ಸೂತ್ರಕ್ರೀಡಾ (ಸೂತ್ರದ ಗೊಂಬೆಯಾಟ), ೨೭) ವೀಣಾಡಮರುಕ ವಾದ್ಯಾನಿ ೨೮) ಪ್ರಹೇಲಿಕಾ (ಒಗಟುಗಳು ಹೇಳುವಿಕೆ), ೨೯) ಪ್ರತಿಮಾಲ (ಅಂತ್ಯಾಕ್ಷರಿ), ೩೦) ದುರ್ವಾಚಕ ಯೋಗ (ಕ್ಲಿಷ್ಟ ಪದ ಪ್ರಯೋಗ), ೩೧) ಪುಸ್ತಕ ವಾಚನ, ೩೨) ನಾಟಕಾಖ್ಯಾಯಿಕಾ ದರ್ಶನ (ಹರಿಕಥೆ) ೩೩) ಕಾವ್ಯ ನಮಸ್ಯಾಪೂರ್ಣ, ೩೪) ಪಟ್ಟಿಕಾವೇತ್ರ ಬಾಣ ವಿಕಲ್ಪ (ಬಿದಿರಿನಿಂದ ಹೆಣೆಯುವಿಕೆ), ೩೫) ತಕ್ಷಕರ್ಮ (ನೂಲು ತೆಗೆಯುವಿಕೆ), ೩೬) ತಕ್ಷಣ (ಬಡಗಿಯ ಕೆಲಸ) ೩೭). ವಾಸ್ತುವಿದ್ಯೆ, ೩೮) ರೂಪ್ಯರತ್ನ ಪರೀಕ್ಷೆ (ನಾಣ್ಯ ಪರೀಕ್ಷೆ), ೩೯) ಧಾತುವಾದ (ಭೂಗರ್ಭ ಶಾಸ್ತ್ರ), ೪೦) ಮಣಿರಾಗಕರ (ವಜ್ರಕ್ಕೆ ಸಂಬಂಧಿಸಿದ), ೪೧) ವೃಕ್ಷಾಯುರ್ವೇದ (ವೃಕ್ಷಗಳಿಗೆ ಸಂಬಂಧಿಸಿದ) ೪೨) ಮೇಷಕುಕ್ಕುಟ ಲಾವಿಕ ವಿಧಿ (ಟಗರು ಹಾಗೂ ಕೋಳಿ ಕಾಳಗ) ೪೩) ಶುಕಸಾರಿಕಾ ಪ್ರಲಾಪನ(ಗಿಳಿಗೆ ಮಾತು ಕಲಿಸುವಿಕೆ), ೪೪) ಉತ್ಸಾದನ ಸಂವಾಹನ ಕೇಶ ಮರ್ದನೇಚ ಕೌಶಲಮ್ (ಕೇಶ ಹಾಗೂ ಮೈಗೆ ಎಣ್ಣೆ ಹಚ್ಚಿಕೊಳ್ಳುವಿಕೆ), ೪೫) ಅಕ್ಷರ ಮುಷ್ಟಿಕಾಕಥನ(?) ೪೬) ಮ್ಲೇಚ್ಛಿತಕ ವಿಕಲ್ಪ (ಸಾಂಕೇತಿಕ ಭಾಷೆ), ೪೭) ದೇಶಭಾಷಾವಿಜ್ಞಾನ (ದೇಶೀಯ ಭಾಷೆಯಲ್ಲಿ ಪರಿಣತಿ), ೪೮) ಪುಷ್ಪಶಕಟಿಕಾ

(ಹೂವಿನಿಂದ ಮಾಡಿದ ಆಟಿಕೆಯ ಗಾಡಿ), ೪೯) ನಿಮಿತ್ತ ಜ್ಞಾನ (ಶಕುನ ಅರ್ಥೈಸುವಿಕೆ), ೫೦) ಯಂತ್ರ ಮಾತೃಕಾ (ಯಂತ್ರ ರಚನಾ ಜ್ಞಾನ), ೫೧) ಧಾರಣ ಮಾತೃಕಾ(ಜ್ಞಾಪಕಶಕ್ತಿ, ಅವಧಾನ), ೫೨) ಸಂಪಾಠ್ಯ (ಸಂವಾದ ಕಲೆ), ೫೩) ಮಾನಸೀ ಕಾವ್ಯ ಕ್ರಿಯಾ (ಆಶುಕವಿತೆಯ ರಚನೆ), ೫೪) ಅಭಿಧಾನ ಕೋಶ (ಶಬ್ದಗಳ ಉತ್ಪತ್ತಿ), ೫೫) ಛಂದೋ ವಿಜ್ಞಾನ (ಕಾವ್ಯ ರಚನೆ), ೫೬) ಕ್ರಿಯಾ ವಿಕಲ್ಪ (ಸೃಜನಶೀಲತೆ?), ೫೭) ಛಲಿತಕ ಯೋಗ (ಗುಪ್ತವೇಶ ಧರಿಸುವಿಕೆ), ೫೮) ವಸ್ತ್ರಗೋಪನ (ವಸ್ತ್ರಗಳನ್ನು ಕಾಪಾಡಿಕೊಳ್ಳುವುದು), ೫೯) ದ್ಯೂತವಿಶೇಷ (ಜೂಜು), ೬೦) ಆದರ್ಶಕ್ರೀಡಾ (ಪಗಡೆಯಾಟ), ೬೧) ಬಾಲಕ್ರೀಡನಕ (ಮಕ್ಕಳ ಆಟಕ್ಕೆ ಸಂಬಂಧಿಸಿದ) ೬೨) ವೈನಯಿಕ (ವಿನಯ ತೋರುವಿಕೆ), ೬೩) ವೈಜಯಿಕ (ವಿಜಯ ಸಾಧಿಸುವಿಕೆ), ೬೪) ವ್ಯಾಯಾಮಿಕ (ಆರೋಗ್ಯ ಕಾಪಾಡಿಕೊಳ್ಳುವಿಕೆ).

ಇವಲ್ಲದೆ ವಾತ್ಸ್ಯಾಯನ ಕಾಮಶಾಸ್ತ್ರಕ್ಕೆ ಸಂಬಂಧಿಸಿದಂತೆ ೬೪ ಕಲೆಗಳನ್ನು ಬೇರೆಯಾಗಿಯೇ ಹೇಳಿದ್ದಾನೆ.

ಅಲನ

## ಕಲೆಯ ಅವನತಿ (Degenerate Art)

ಅವನತ ಕಲೆ, ಕುಲಗೆಟ್ಟ ಕಲೆ: ಆಧುನಿಕ ಕಲೆಗೆ ಸಂಬಂಧಿಸಿದಂತೆ ಕಲೆಯಿಂದ ದೂರವಾದ ಎಂಬ ಅರ್ಥದ Degeneracy ಎಂಬುದು ಜರ್ಮನಿಯ Erratartung ಪದಕ್ಕೆ ಹತ್ತಿರವಾಗಿದೆ. ೧೮೯೩ರಲ್ಲಿ ಈ ಪದ ಬಳಕೆಗೆ ಬಂದಿತು. ೧೯೩೩ರ ನಂತರ ಆಧುನಿಕ ಕಲೆಯ ವಿರುದ್ಧದ ನಾಝಿ(Nazism) ಚಳವಳಿಯ ಮುಖ್ಯ ಘೋಷಣೆಯೂ ಆಗಿತ್ತು. ಸರ್ವಾಧಿಕಾರಿ ಆಡಳಿತಗಳಲ್ಲಿ ಸೃಜನಶೀಲ ಕಲೆಗೆ ಒದಗಿದ ತೊಂದರೆಗಳಲ್ಲಿ ಜರ್ಮನಿಯ ಈ ಚಳವಳಿ ಒಂದು. ೧೯೩೭ರಲ್ಲಿ ಜರ್ಮನಿಯ ಮ್ಯೂಸಿಯಂಗಳಲ್ಲಿನ ಆಧುನಿಕ ಕಲೆಯನ್ನು ವ್ಯವಸ್ಥಿತವಾಗಿ ನಾಶಪಡಿಸಲಾಯಿತು. (ಸುಮಾರು ಇದೇ ಕಾಲಕ್ಕೆ ಸೋವಿಯತ್ ಒಕ್ಕೂಟದಲ್ಲೂ ಈ ಕೆಲಸವಾಯಿತು) Cubism, Fauvism, Expressionism, Dada, Constructivism ಮತ್ತು Surrealism, Impressionism ಚಳವಳಿಗಳನ್ನು ಖಂಡಿಸಲಾಯಿತು. ಈ ಶೈಲಿಯ ಕಲಾವಿದರು ಸೃಷ್ಟಿಶೀಲರಾಗುವುದು ಮತ್ತು ಪ್ರದರ್ಶಿಸುವುದನ್ನು ನಿಷೇಧಿಸಲಾಯಿತು. ಜಾಝ್ ಸಂಗೀತಗಾರರೂ ಈ ಚಳವಳಿಯ ಕೋಪಕ್ಕೆ ಗುರಿಯಾದರು. Bauhausನ ಪ್ರಮುಖ ಕಲಾಶಿಕ್ಷಕರೆಲ್ಲಾ ಜರ್ಮನಿಯನ್ನು ತೊರೆಯಬೇಕಾಯಿತು. ಕಲಾ ಆಕರ ಗ್ರಂಥಗಳು ಚಳವಳಿಗಾರರ ಬೆಂಕಿಗೆ ಆಹುತಿಯಾದವು. ಕಲಾಶಾಲೆ ಮುಚ್ಚಿತು. ೧೯೩೭ರಲ್ಲಿ ಆಧುನಿಕ ಕಲೆಯ ಅವನತಿ ಮತ್ತು ಪಾತಿತ್ಯವನ್ನು ಪ್ರದರ್ಶಿಸಲು ಕಲಾ ಪ್ರದರ್ಶನವೊಂದನ್ನು ಮ್ಯೂನಿಚ್‌ನಲ್ಲಿ ವ್ಯವಸ್ಥೆ ಮಾಡಲಾಯಿತು. ಕ್ಯಾಂಡಿನಿಸ್ಕಿ, ಡಿಕ್ಸ್ ಮತ್ತು ನೋಲ್ಡೆ ಮೊದಲಾದವರ ಕೃತಿಗಳು ಈ ಪ್ರದರ್ಶನದಲ್ಲಿದ್ದವು. ಇವರ ಕೃತಿಗಳನ್ನೇ ಅಲ್ಲದೆ ಪ್ರದರ್ಶನದಲ್ಲಿದ್ದ ಬೆಕ್‌ಮ್ಯಾನ್, ಷಗಾಲ್, ಕ್ಲೇ, ಕೊಕೋಸ್ಕಾ, ಮಾರ್ಕ್ ಮೊದಲಾದವರ ಕೃತಿಗಳನ್ನು ಮೇಲೆತ್ತಿ ಹಿಡಿದು ಸಾರ್ವಜನಿಕವಾಗಿ ನಿಂದಿಸಲಾಯಿತು. ಆ ಸಂದರ್ಭದಲ್ಲಿ ಜರ್ಮನಿಯಲ್ಲಿ ಹೊಸ ಕ್ಲಾಸಿಕಲ್ ಶೈಲಿಯನ್ನು ಒಪ್ಪಿಸಲಾಗಿತ್ತು.

ಕೆ.ವಿ.ಸು.

## ಕಾಂಗ್ರಾ

ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಕಲಾವಿದರಿಗೆ ದಿಲ್ಲಿಯಲ್ಲಿ ಮೊಗಲರ ಆಶ್ರಯ ತಪ್ಪಿತು. ಕಲಾವಿದರು ದೂರ ವಲಸೆ ಹೋದರು. ಪರ್ವತ ಪ್ರದೇಶಕ್ಕೆ ಬಂದು ಹೊಸತೊಂದು ಪದ್ಧತಿಯನ್ನು ಬೆಳೆಯಿಸಿದರು. ಆ ಪ್ರದೇಶಗಳಲ್ಲಿ ಕಾಂಗ್ರಾವು ಮುಂದಾಳಾಗಿದ್ದ ಕಾರಣ ಅದಕ್ಕೆ 'ಕಾಂಗ್ರಾ ಶೈಲಿ' ಎಂದು ಹೆಸರಾಯಿತು. ಇದಕ್ಕೆ 'ಪಹಾಡಿ ಚಿತ್ರಕಲೆ' ಎಂದರೆ 'ಗುಡ್ಡಗಾಡುಗಳಿಗೆ ಸಂಬಂಧಪಟ್ಟ ಕಲೆ' ಎಂದೂ ಹೇಳುತ್ತಾರೆ. ೧೯ನೆಯ ಶತಮಾನದಲ್ಲಿ ಈ ಶೈಲಿಯು ಉಚ್ಛ್ರಾಯ ಸ್ಥಿತಿಗೇರಿ ಅನಂತರ ಇಳಿಯಿತು.



ಕಾಂಗ್ರಾ ಶೈಲಿಯೂ ಅಜಂತಾದಂತೆ ರೇಖಾಪ್ರಮುಖವಾದುದು. ಅದು ರೇಖಾ ಲಾಲಿತ್ಯ, ಅಲಂಕಾರ ವೈಖರಿ, ಸೂಕ್ಷ್ಮವಿವರ, ಬಣ್ಣಗಳ ಹೊಳಪು ಇವುಗಳಿಗಾಗಿ ಖ್ಯಾತಿ ಹೊಂದಿದೆ. ಅಲ್ಪ ಸ್ವಲ್ಪ ಛಾಯಾ ಪ್ರಕಾರಗಳನ್ನೂ ತೋರಿಸಿದ್ದರು. ಗಿಡದ ನಾರುಗಳಿಂದ ಅಥವಾ ಅಳಿಲು, ಮುಂಗುಸಿ ಮೊದಲಾದ ಪ್ರಾಣಿಗಳ ಕೂದಲುಗಳಿಂದ ಕುಂಚವನ್ನು ತಯಾರಿಸಿಕೊಳ್ಳುತ್ತಿದ್ದರು. ರಾಜಾ ಸಂಸಾರ ಚಂದನು ಇತರ ರಾಜ್ಯಗಳ ಮೇಲೆ ವಿಜಯಗಳನ್ನು ಪಡೆದು ಚಿತ್ರಕಲೆಗೆ ಪ್ರೋತ್ಸಾಹ ನೀಡುತ್ತಿದ್ದನು. ಕೃಷ್ಣನ ಗೋಪಾಲನೆ, ರಾಸಕ್ರೀಡೆ, ಭಾಗವತ ಪುರಾಣಗಳ ವಿಷಯಗಳನ್ನಲ್ಲದೆ ಆರು ಋತುಗಳ, ಹನ್ನೆರಡು ಮಾಸಗಳ, ಅಷ್ಟನಾಯಿಕೆಯರ ಚಿತ್ರಗಳನ್ನೂ ಮನೋಜ್ಞವಾಗಿ ಮಾಡಿಸಿದನು. ಆಳರಸರ ಆಣತಿಯಂತೆ ಕಲಾವಿದರು ಪ್ರಭುವರ್ಗದವರ ಭಾವಚಿತ್ರಗಳನ್ನು ರಚಿಸಿದರು.

ಹಿಂದೆ ಈ ಕಾಂಗ್ರಾಕಣಿವೆ ಪ್ರದೇಶವು ದೇಶದ ಇತರ ನಗರಗಳಿಂದ ಪ್ರತ್ಯೇಕವಾಗಿತ್ತು. ಅಲ್ಲಿಗೆ ರಸ್ತೆ, ವಾಹನಗಳಿಂದ ಹೊರ ಜಗತ್ತಿನೊಡನೆ ಸಂಪರ್ಕ ಆರಂಭವಾದ ನಂತರ ಕಾಂಗ್ರಾ ಕಲೆಯು ಬೆಳಕಿಗೆ ಬಂದಿತು. ೧೮೧೦ರ ನಂತರ ಕಾಂಗ್ರಾ ಕಣಿವೆಯು ರಣಜಿತ ಸಿಂಗನ ಆಳ್ವಿಕೆಗೊಳಪಟ್ಟಿತು. ಆ ಕಾಲದ ಚಿತ್ರಗಳ ಮೇಲೆ ಸಿಖ್ ಪ್ರಭಾವವು ಬಿದ್ದುದಾಗಿ ಕಂಡು ಬರುತ್ತದೆ.

೧೯೦೫ ಏಪ್ರಿಲ್ ೪ರ ಮುಂಜಾನೆ ಭೂಕಂಪ ಸಂಭವಿಸಿ ಕಾಂಗ್ರಾ ಪಟ್ಟಣವು ನಾಶವಾಯಿತು. ಕಾಂಗ್ರಾ ಕಲಮ್ ಅಲ್ಲಿಗೆ ಮುಗಿಯಿತು.

**ಬಿ. ಕೆ. ಬಾ**

## ಕಾಗದ ಚಿತ್ರಗಳು

ಗ್ರಂಥ ರಚನೆಗಾಗಿ ತಾಳೆಗರಿಗಳ ಬಳಕೆಯನ್ನು ಕಡಿಮೆಯಾಗುವಂತೆ ಮಾಡಿದ ಸಾಮಗ್ರಿ ಕಾಗದ. ಭಾರತದಲ್ಲಿ ಕಾಗದಗಳ ತಯಾರಿಕೆ. ಕ್ರಿ.ಪೂ. ೪ನೇಯ ಶತಮಾನದಷ್ಟು ಪ್ರಾಚೀನ ಎಂಬುದು ತಿಳಿಯುತ್ತದೆ. ಆದರೆ ಮಹಮ್ಮದಿಯರ ಕಾಲದಲ್ಲಿಯೇ ಕಾಗದಗಳ ಬಳಕೆ ಹೆಚ್ಚಾಯಿತೆಂದು ಹೇಳಬಹುದು. ಪ್ರಾರಂಭದಲ್ಲಿ ತಾಳೆಗರಿ ಗ್ರಂಥಗಳ ಮಾದರಿಯಲ್ಲಿಯೇ ಕಾಗದಗಳನ್ನು ಕತ್ತರಿಸಿಕೊಂಡು ಗ್ರಂಥರಚನೆ ಮಾಡಿದ್ದಾರೆ. ಕಾಲಾಂತರದಲ್ಲಿ ಕಾಗದಗಳನ್ನು ದೊಡ್ಡ ಅಳತೆಗೆ ಕತ್ತರಿಸಿಕೊಂಡು ಬರೆದು ಚಿತ್ರಿಸಿದ ಉದಾಹರಣೆಗಳಿವೆ. ಹಸ್ತಪ್ರತಿ ಬರಹಗಾರರಿಗೆ ಚಿತ್ರಗಾರರಿಗೆ ಕಾಗದಗಳ ಬಳಕೆಯು ವಿಶೇಷ ಸ್ವಾತಂತ್ರ್ಯವನ್ನು ಒದಗಿಸಿದೆ. ಕುಂಚ, ಲೆಕ್ಕಣಿಕೆ ಹಾಗೂ ವರ್ಣಗಳ ಸಹಾಯದಿಂದ ಅತ್ಯಂತ ಸೂಕ್ಷ್ಮ ಹಾಗೂ ಆಕರ್ಷಕವಾದ ನಕ್ಷಾ ಚಿತ್ರ, ಸಾಂದರ್ಭಿಕ ಚಿತ್ರ, ಚಾರಿತ್ರಿಕ ಚಿತ್ರಗಳನ್ನು ಕಾಗದಗಳ ಮೇಲೆ ರಚಿಸಿರುವುದು ಸಾಮಾನ್ಯ. ಈ ಹಸ್ತಪ್ರತಿಗಳ ಆವರಣ ಫಲಕಗಳ ಮೇಲೆ ಬರೆದ ತೈಲ ವರ್ಣದ ಚಿತ್ರಗಳನ್ನು ಕಾಣಬಹುದು. ಹಸ್ತಪ್ರತಿಗಳ ಚಿತ್ರರಚನೆಗಳಲ್ಲಿ ಶಿಷ್ಟ ಹಾಗೂ ಜಾನಪದ ಎರಡೂ ಕಲಾ ಪರಂಪರೆಗಳನ್ನು ಗುರುತಿಸಿಕೊಳ್ಳಬಹುದಾಗಿದೆ.



ಶ್ರೀತತ್ವನಿಧಿ

ಹಸ್ತಪ್ರತಿಗಳು ಸಾಮಾನ್ಯವಾಗಿ ಕಾವ್ಯ-ಶಾಸ್ತ್ರ ವಿಷಯಗಳನ್ನು ಒಳಗೊಂಡಿರುತ್ತವೆ. ಸಾಂದರ್ಭಿಕ ಚಿತ್ರರಚನೆಗಳು ಕಾವ್ಯದ ಪ್ರಮುಖ ಸಂದರ್ಭಗಳನ್ನೊ ಅಥವಾ ಒಂದೊಂದು ಅಶ್ವಾಸದ ಸಂದರ್ಭವನ್ನೊ ದೃಶ್ಯ ಚಿತ್ರರೂಪಕ್ಕೆ ಅಳವಡಿಸುವುದಾಗುತ್ತದೆ. ಇವು ಹಸ್ತಪ್ರತಿಕಾರನ ಕಲಾ ಕೌಶಲವನ್ನು ಹಾಗೆಯೇ ಹಸ್ತಪ್ರತಿ-ಯಜಮಾನನ ಕಲಾಭಿರುಚಿಯನ್ನು ಪ್ರತಿನಿಧಿಸುತ್ತವೆ.

ಮೈಸೂರಿನ ಅರಸರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ (೧೭೮೦-೧೮೬೫) ಕಾಲದಲ್ಲಿ ಪುಸ್ತಕಗಳಲ್ಲಿ ಚಿತ್ರಗಳ ರಚನೆ ಅಧಿಕವಾಯಿತು. ಅವರೇ ರಚಿಸಿದ 'ಶ್ರೀ ತತ್ವನಿಧಿ' 'ಸ್ವರ ಚೂಡಾಮಣಿ', 'ದೇವತಾನಾಮ ಕುಸುಮ ಮಂಜರಿ' ಮುಂತಾದ ಹಸ್ತ ಲಿಖಿತ ಗ್ರಂಥಗಳಲ್ಲಿ ಬಹು ಪಾಲು ಚಿತ್ರಗಳಿವೆ. ಮುಮ್ಮಡಿಯವರು ತಮ್ಮ ಚಿತ್ರ ಕಲಾವಿದರಿಂದ ಮೈಸೂರು ಅರಸೊತ್ತಿಗೆಯ ವಂಶಾವಳಿ ವೃಕ್ಷಗಳನ್ನು ಬರೆಯಿಸಿದರು. ಶ್ರೀತತ್ವನಿಧಿ, ಸ್ವರ ಚೂಡಾಮಣಿ ಗ್ರಂಥಗಳ ಚಿತ್ರಗಳಲ್ಲಿ ಪರ್ಶಿಯನ್, ಮೊಗಲ್, ರಾಜಸ್ಥಾನ ದಕ್ಷಿಣೆ ಶೈಲಿಗಳಿಂದ ಪ್ರಭಾವಿತರಾಗಿದ್ದರೂ, ಯಾವುದೇ ಶೈಲಿಗೆ ಮಾರು ಹೋಗದೆ, ತಮ್ಮ ತನವನ್ನು ಉಳಿಸಿಕೊಂಡಿವೆ. ಮೈಸೂರಿನಲ್ಲಿ ಅಂದು ಸಿದ್ಧವಾದ ಚಿತ್ರಗಳಿಗೆ ತಮ್ಮದ್ದೇ ಆದ ವಿಶಿಷ್ಟ ಲಕ್ಷಣಗಳಿವೆ. ಈ ಚಿತ್ರಗಳಲ್ಲಿ ಸ್ಪಷ್ಟವಾದ ರೇಖೆಗಳು ಬಣ್ಣಗಳ ಬಳಕೆ ಅಲಂಕರಣ, ಸಹಜತೆ ಮುಂತಾದವುಗಳನ್ನು ಕಾಣಬಹುದು. ಮತ್ತು ಕಾವಿಕೆಂಪು, ಬಿಳಿ, ನೀಲಿ, ಹಳದಿ, ಕಪ್ಪು ಬಣ್ಣಗಳು ಮುಖ್ಯವಾಗಿದ್ದು ಅಲಂಕರಣಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ. ಮಮ್ಮಡಿಯರು ಎರಡು ರಾಗಮಾಲಾ ಚಿತ್ರಮಾಲೆಗಳನ್ನು ಬರೆಯಿಸಿದರು. ಒಂದು 'ಸ್ವರ ಚೂಡಾಮಣಿ'ಗೆ ಮತ್ತೊಂದು 'ಶ್ರೀತತ್ವನಿಧಿ' ಪುಸ್ತಕಗಳು ಎರಡರಲ್ಲೂ ಚಿತ್ರ ಸಂದರ್ಭಗಳು ಹೆಚ್ಚು ಕಡಿಮೆ ಸಮಾನವೆಂದೇ ಹೇಳಬಹುದು. 'ಸ್ವರ ಚೂಡಾಮಣಿ'ಯಲ್ಲಿನ ಚಿತ್ರಗಳು ಹೆಚ್ಚು ಕಲಾತ್ಮಕತೆ ಚಿತ್ರಗಳ ಸ್ಥಳಾವಕಾಶ ಹೆಚ್ಚಾಗಿದೆ ಮತ್ತು ಸ್ಥಳದಲ್ಲಿ ಅಂಕಣಗಳ ವಿಂಗಡಣೆ ಹಾಗೂ ಅಲಂಕಾರಯುಕ್ತವಾಗಿದೆ. ರೇಖೆಗಳಲ್ಲಿ ಸೂಕ್ಷ್ಮತೆ ಹಿತಮಿತವಾದ ಬಣ್ಣಗಳಿವೆ. 'ಶ್ರೀ ತತ್ವನಿಧಿ'ಯಲ್ಲಿ ವ್ಯಕ್ತಿ ಅಥವಾ ಇತರೆ ವಿವರಗಳಲ್ಲಿ ಜಡತೆ ಹೆಚ್ಚು ವಿವರಗಳಲ್ಲಿ ಹೊಂದಾಣಿಕೆ ಕಡಿಮೆ ಮತ್ತು ನಿರೂಪಣೆ ಸ್ಥೂಲವಾಗಿದ್ದು ನಿರೂಪಣೆಯಲ್ಲಿ ನೈಜತೆ ಮುಖ್ಯವಾಗಿಲ್ಲ.

ಬಿ. ಕೆ. ಒ. / ಮರಿ

## ಕಾಗದ ಜಿಗಿ (Paper Mache)

ರುಬ್ಬಿದ ಮೆದು ಕಾಗದದ ಜೊತೆ ಅಂಟು ಅಥವಾ ಹಿಟ್ಟಿನ ಸರಿ (ಲೇಹ್ಯ) ಸೇರಿಸಿ ತಯಾರು ಮಾಡಿದ ಇದಕ್ಕೆ ಕಾಗದ ಜಿಗಿ ಅಥವಾ ಪೇಪಿಯರ್ ಮೆಶ್ ಎನ್ನುತ್ತಾರೆ. ಸಣ್ಣ ಹಾಗೂ ಅಲಂಕಾರಿಕ ಕಲಾವಸ್ತುಗಳನ್ನು ತಯಾರಿಸಲು ಇದನ್ನು ಬಳಸುತ್ತಾರೆ. ಈ ವಸ್ತುಗಳೊಳಗಿನ ಪೊಳ್ಳು ತುಂಬಲು ಮತ್ತು ಗಾತ್ರ ಹೆಚ್ಚಿಸಲು ಸುಣ್ಣದ ಪುಡಿ ಅಥವಾ ಮಳಲನ್ನು ಉಪಯೋಗಿಸುತ್ತಾರೆ. ಬೇಕಾದ ಆಕಾರದ ನಮೂನೆಗಳನ್ನು ತಯಾರಿಸಲು ಈ ಜಿಗಿ ಮಿದುವಸ್ತುವನ್ನು ಪಡಿಯಚ್ಚಿಗೆ ಹಾಕಿ ನಂತರ ಭಟ್ಟಿಯಲ್ಲಿ ಸುಡುತ್ತಾರೆ. 'ಪೇಪಿಯರ್ ಮೆಶ್' ಒಣಗಿದ ಮೇಲೆ ಹೆಚ್ಚು ಗಟ್ಟಿ ಮತ್ತು ಬಿರುಸಾಗುತ್ತದೆ. ಇದನ್ನು ಬಣ್ಣ ಹಾಗೂ ವಾರ್ನಿಷ್‌ದಿಂದ ಮೆರುಗುಗೊಳಿಸಬಹುದು.

ಅ.ಜಾ.

## ಕಾನ್ಸೆಪ್ಚ್ಯುಯಲ್ ಆರ್ಟ್ (Conceptual Art)

ಕಾನ್ಸೆಪ್ಟ್ ಎಂಬ ಪದವನ್ನು ಲಲಿತಕಲೆಗಳಲ್ಲಿ ಇತ್ತೀಚೆಗೆ ಸಾಕಷ್ಟು ಬಳಸುತ್ತಿದ್ದೇವೆ. ಅರಿವು, ವಿಚಾರ ಅಥವಾ ಅಭಿಪ್ರಾಯ ಮತ್ತು ಪ್ರಮಾಣೀಕೃತವಾದ ಸತ್ಯ ಸಂಗತಿ ಅಥವಾ ವಿಚಾರಗಳಿಗೆ ಹತ್ತಿರವಾಗುವುದು ಈ ಕಾನ್ಸೆಪ್ಟ್‌ನ ಹಿಂದಿನ ಅರ್ಥ. ಕಲಾಕೃತಿಯೊಂದರ ವಿಚಾರ ಕುರಿತು ಅನೇಕ ಕಲಾವಿದರು ವಾದವಿವಾದಗಳಲ್ಲಿ 'ಕಾನ್ಸೆಪ್ಟ್' ಎಂಬುದರ ಮೇಲೆಯೇ ಚರ್ಚಿಸಿದ್ದಾರೆ. ಅದು ಏನೇ ಇದ್ದರೂ ಮುಕ್ತಾಯಗೊಂಡ ಕಲಾಕೃತಿಯೊಂದರಲ್ಲಿ "ಕಾನ್ಸೆಪ್ಟ್" ಇರಲೇಬೇಕೆಂಬುದು ಕೆಲವರ ವಾದ. ಪಾಶ್ಚಾತ್ಯ ಕಲಾವಿದರು ತಮ್ಮ ಕಲಾಕೃತಿಯಲ್ಲಿ ಆಕೃತಿ ರಚನೆಗೆ ಪೂರಕವಾದ ತಮ್ಮ ಪಂಥಗಳಿಗೆ, ವಿಚಾರಗಳಿಗೆ ನೇರವಾದ ವಸ್ತುಗಳನ್ನು ಉಪಯೋಗಿಸಿ, ಹೊಸ ಮಾಧ್ಯಮದ ಸೃಷ್ಟಿಗೆ ಕಾರಣವಾದರು. ಮುದ್ರಿತವಾದ ಹಳೆಯ ಕಾಗದ, ಚಿತ್ರ, ಪ್ರಮುಖ ಬರಹ, ರೇಖಾಚಿತ್ರ, ತಾಂತ್ರಿಕ ನಕ್ಷೆ, ನಕ್ಷೆಗಳು ಇತ್ಯಾದಿಗಳನ್ನು ಬಳಸಿದ ರೀತಿ ಹೊಸತಾಗಿದ್ದರೂ ಬಹಳಷ್ಟು ಕಾಲ ಗುರುತಿಸಲಾರದೇ ಹೋದ ಈ ಕಲಾತ್ಮಕ ವಿಧಾನ, ಅಭಿಪ್ರಾಯ, ವಿಚಾರಗಳ ಬೆಳವಣಿಗೆಯ ಮೂಲಕ್ಕೆ ಹೋಗುತ್ತಿದ್ದುದು, ಕಲಾವಿದನೊಬ್ಬನ ಕೃತಿಯಲ್ಲಿನ ವ್ಯಕ್ತಗೊಂಡ ವಿಚಾರ, ತತ್ವ, ಜ್ಞಾನ, ಕಲಾತ್ಮಕ ಅರಿವಿನೊಂದಿಗೆ ಹೊಸ ಜ್ಞಾನ ಮೂಡಿಸುವಂತುಹುದೇ ಆಗಿತ್ತು. ಹಾಗಾಗಿ ಸೃಜನಶೀಲತೆಯ ನಿರ್ಮಾಣ, ಪ್ರದರ್ಶಕ ವಿಚಾರ, ಸಾಮಾಜಿಕ ನಡೆನುಡಿಗಳೆಲ್ಲವನ್ನೂ ಬೇರೆ ಬೇರೆಯಾಗಿ ನೋಡಬೇಕಾಯಿತು.

೧೯೬೦ರ ಅವಧಿಯಲ್ಲಿ ಲೇವಿಟ್, ಜೋಸೆಫ್ ಕುಸುತ್, ಬ್ರೂಸ್ ನಮನ್



ಪಂಥಗಳನ್ನು ಕಟ್ಟಿದರೂ, ಪ್ರಮುಖವಾಗಿ ದುಡಿದ ಮಾರ್ಸೆಲ್ ಡ್ಯುಕ್ಯಾಂಪ್, ಸರ್‍ರಿಯಲಿಸಂನ್ನೆ ಮೈಗೂಡಿಸಿಕೊಂಡಿದ್ದ ರೆನ್ ಮಾಗ್ರಿಟ್ ೧೯೬೫-೭೫ರಲ್ಲಿ, ಒಬ್ಬರಿಗೊಬ್ಬರು, ಕಾನ್ಸೆಪ್ಚ್ಯುಯಲ್ ಆರ್ಟ್‌ನ ಮೂಲ ತತ್ವಗಳನ್ನೇ ಮರೆತು ಉತ್ಕಟವಾದಂಥ ಹೊಸ ಸಂಸ್ಕೃತಿಯ ಗುಂಪನ್ನೆ ಕಟ್ಟಿದರು. ಈ ಕಾರಣದಿಂದ "ಕಲೆ ಮತ್ತು ಕಲಾಭಾಷೆಗಳ" ವಿಚಾರವಾಗಿ ಬ್ರಿಟನ್‌ನಲ್ಲಿ ಹೊಸ ವೈಚಾರಿಕ ಕಲಾವಿದರ ಗುಂಪು ಪ್ರಧಾನತೆಯನ್ನೂ ಪಡೆಯಿತು.

ಈ ಕಲಾಶೈಲಿಯ ಕಲಾವಿದರು ರಾಬಟ್ ಮೋರೀಸ್ ಸ್ಮಿತ್‌ಸನ್, ರಿಚರ್ಡ್‌ಲಾಂಗ್ ಮತ್ತು ಹೆಮಿಂಗ್ ಫೆಲ್ಬನ್. ಇವರಿಗೆ ಹತ್ತಿರವಾಗಿರುವ ಭಾರತೀಯ ಕಲಾವಿದರು ವಿವಾನ್ ಸುಂದರಂ, ಸತೀಶ್ ಗುಜ್ರಾಲ್, ಕೆ. ಜಿ. ಸುಬ್ರಹ್ಮಣ್ಯಂ ಮುಂತಾದವರು.

**ಆರ್. ಎ. ಶಾ.**

## ಕಾಪ್ಟೀಕ್ ಕಲೆ(Coptic Art)

ಇದು ವಿಶೇಷವಾಗಿ ೩ರಿಂದ ೮ನೆಯ ಶತಮಾನದವರೆಗಿನ ಈಜಿಪ್ತ ದೇಶದ ಕ್ರಿಶ್ಚಿಯನ್ ಕಲೆಯಾಗಿದೆ. ಗ್ರೀಕ್ ಭಾಷೆಯಲ್ಲಿನ ಈಜಿಪ್ತ ಪದವು ಅಪಭ್ರಂಶಗೊಳಿಸಲ್ಪಟ್ಟು 'ಕಾಪ್ಟೀಕ್' ಎಂದಾಗಿದೆ. ಕ್ರಿ.ಶ. ೫೦೦ರಲ್ಲಿ ಕಾಪ್ಟೀಕ್ ಧರ್ಮ ಹಾಗೂ ಕಲೆಗಳು ಮಠಗಳಲ್ಲಿ ಸ್ಥಿರಗೊಂಡವು. ಕ್ರಿ.ಶ. ೬೪೦ರಲ್ಲಿ ಅರಬರು ಈಜಿಪ್ತನ್ನು ಗೆದ್ದನಂತರ ಇಸ್ಲಾಂ ಧರ್ಮವು ಆ ದೇಶದ ಧರ್ಮವಾಯಿತು ಮತ್ತು ಕಾಪ್ಟೀಕ್ ಕಲೆಯು ಕ್ರಿಶ್ಚಿಯನ್ ಸಮಾಜಕ್ಕೆ ಮಾತ್ರ ಸೀಮಿತವಾಯಿತು.

ಕಾಪ್ಟೀಕ್ ಕಲೆಯು ಒಂದು ಪ್ರಾದೇಶಿಕ ಶೈಲಿ. ರೋಮನ್ ಹಾಗೂ ಬೈಝಂಟೈನಾ ಕಲೆಗಳು ಮತ್ತು ಈಜಿಪ್ತಿನ ಫೆರೋನಿಕ್ ಪರಂಪರೆಯು ಇದರ ಮೂಲಗಳು. ಇದು ಅಲೆಗ್ಝಾಂಡ್ರಿಯಾದ ಜಾಗತಿಕ ಸಂಸ್ಕೃತಿಗಿಂತ ಭಿನ್ನವಾದುದು. ಈ ಶೈಲಿಯ ವಾಸ್ತುಶಿಲ್ಪ ಸರಳವಾದುದು. ಚಿತ್ರಕಲೆಯು ಸಮತಲ ಹಾಗೂ ವೈವಿಧ್ಯಪೂರ್ಣ ವರ್ಣಕೆ ಮತ್ತು ಸತ್ವಪೂರ್ಣ ಬಣ್ಣದ ರೇಖೆಗಳಿಂದ ಕೂಡಿದುದು. ಕಾಪ್ಟೀಕ್ ಕಲೆಯ ಪ್ರಭಾವವು ಐರ್‌ಲ್ಯಾಂಡ್, ಇಟಲಿ ಮತ್ತು ಜರ್ಮನಿ ದೇಶಗಳ ಮೇಲೆ ಆದುದನ್ನು ಕಾಣಬಹುದು.

**ಅ.ಪಾ.**

## ಕಾವಿಕಲೆ

ಕರ್ನಾಟಕದ ಉತ್ತರ ಕರಾವಳಿಯಲ್ಲಿ ಕಂಡುಬರುವ ಒಂದು ವಿಶಿಷ್ಟವಾದ ಕಲೆ ಇದು. ಸ್ಥಳೀಯವಾಗಿ ದೊರೆಯುವ 'ಹುರಮುಂಜಿ' ಕಾವಿಮಣ್ಣು ಹಾಗೂ ನಯವಾದ ಬಿಳಿಯ ಸುಣ್ಣದೊಂದಿಗೆ ಮಿಶ್ರ ಮಾಡಿ ಗೋಡೆಗೆ ಹಚ್ಚಿಕೊಳ್ಳುತ್ತಾರೆ. ಇನ್ನು ಆರುವ ಮೊದಲೇ ಚೂಪಾದ ಕಂಟಿ(ಟಂಕ) ಬಳಸಿ ರೇಖಾ ಚಿತ್ರದಂತೆ ಮಿಶ್ರಣ ಹಚ್ಚಿದ ಭಾಗದಲ್ಲಿ ಚಿತ್ರ ರಚಿಸುತ್ತಾರೆ. ಕೆಂಪು ಮಿಶ್ರಣ ರೇಖೆಯಷ್ಟು ಬಾಯಿ ತೆರೆದು ಒಳಗಿನ ಬಿಳಿಯ ಗೋಡೆ ಕಾಣಿಸಿಕೊಳ್ಳುತ್ತದೆ. ಆಕಾರಗಳ ಹೊರಗೆ ಇನ್ನೂ ಬೇಡದ ಭಾಗಗಳಿದ್ದರೆ ಇಡಿಯಾಗಿ ತೆಗೆದು



ಬಿಡಬಹುದು. ಚಿತ್ರರಚನೆಯಲ್ಲಿ ಒಮ್ಮೆ ತಪ್ಪಾದರೂ ಮತ್ತೆ ಮಿಶ್ರಣ ಹಚ್ಚಿ ಸರಿಪಡಿಸಬಹುದು. ಒಣಗಿದ ಮೇಲೆ ಬಿಳಿಯ ಗೋಡೆಯ ಮೇಲೆ ಕೆಂಗಾವಿ ಬಣ್ಣದ ರೇಖಾ ಪ್ರಧಾನವಾದ ಆಕೃತಿಗಳು ಚಿತ್ತಾಕರ್ಷಕವಾಗಿ ಕಾಣುತ್ತದೆ.

ಮೂಲತಃ ಈ ಕಲೆ ಗೋವಾದ ಕೊಂಕಣಿ ಮತಸ್ತರ ದೇವಾಲಯಗಳಲ್ಲಿ ಆರಂಭವಾದಂತೆ ಕಂಡು ಬರುತ್ತದೆ. ಅಲ್ಲಿಂದ ಕಾರಣಾಂತರ ೧೩-೧೪ನೇ ಶತಮಾನದಲ್ಲಿ ಕರ್ನಾಟಕಕ್ಕೆ ಬಂದ ಕೊಂಕಣಿ ಮತಸ್ತರು ಕಾವಿ ಕಲೆಯನ್ನೂ ಜೊತೆಯಲ್ಲಿ ತಂದರು. ಇಂದಿಗೂ ಉತ್ತರ ಕರ್ನಾಟಕದಲ್ಲಿ ಕಾವಿಕಲೆ ಅಳಿದುಳಿದಿರುವುದು ಕೊಂಕಣಿಗರ ಮನೆ, ಮಠ ದೇವಾಲಯಗಳಲ್ಲಿ ಮಾತ್ರ. ಕರಾವಳಿಯಲ್ಲಿ ಅಧಿಕ ಮಳೆಯಾಗುತ್ತಿದ್ದು ಚಿತ್ರರಚನೆ ಮತ್ತೆ ಮತ್ತೆ ಆಗುತ್ತಿದ್ದರಬಹುದು. ಆದರೂ ೧೭-೧೮ನೇ ಶತಮಾನದಲ್ಲಿ ರಚಿತವಾದ ಕುಮಟದ ಮೂಳಸ ನಾರಾಯಣಿ ದೇವಾಲಯದಲ್ಲಿರುವ ಚಿತ್ರಗಳು ಇಂದಿಗೂ ಉಳಿದು ಬಂದಿದೆ (ಈಚೆಗೆ ಮತ್ತೆ ಮೂಲ

ಚಿತ್ರಗಳ ಮೇಲೆ ಬಣ್ಣ ಹಚ್ಚಿದ್ದಾರೆ) ಇದಲ್ಲದೆ ಹೊನ್ನಾವರದ ರಾಮಚಂದ್ರ ಮಠ, ಅಂಕೋಲದ ಮಹಾಮಾಯ ದೇವಾಲಯ, ಶಿರಸಿಯ ಮಾರಿಕಾಂಬ ಮುಂತಾದ ಹಿರಿಯ ಹಾಗೂ ಈ ತಾಲೂಕುಗಳ ಅನೇಕ ಕಿರಿಯ ದೇವಾಲಯಗಳಲ್ಲಿ ಕಾವಿಕಲೆಯನ್ನು ಕಾಣಬಹುದು.

ಚಿತ್ರಗಳಲ್ಲಿ ರಾಮಾಯಣ, ಭಾರತದ ದೃಶ್ಯಗಳಲ್ಲದೆ, ಸುಂದರ ಸ್ತ್ರೀಯರು, ಸಿಪಾಯಿಗಳು, ಯಕ್ಷ, ಗಂಧರ್ವ ಕಿನ್ನರರು, ಯತಿಗಳು ಇತ್ಯಾದಿ ಮಾನವಾಕಾರಗಳನ್ನು ಪಶು-ಪಕ್ಷಿಗಳನ್ನು ಗಿಡ ಮರಗಳನ್ನೂ ನೋಡಬಹುದು. ಆದರೆ ವೈವಿಧ್ಯತೆ ಇರುವುದು ಡಿಸೈನ್‌ಗಳಲ್ಲಿ. ಕೈವಾರ ಇಂಚು ಪಟ್ಟಿಗಳ ನೆರವಿನಿಂದ ನೂರಾರು ಬಗೆಯ ಡಿಸೈನ್‌ಗಳನ್ನು ವೃತ್ತಗಳನ್ನು ರಚಿಸಿರುವುದು ಕಲಾವಿದರ ಪ್ರತಿಭೆಗೆ ದ್ಯೋತಕವಾಗಿದೆ.

ಇಂದು ಈ ಶೈಲಿಯಲ್ಲಿ ರಚಿಸಿರುವ ಕಲಾವಿದರೂ ಇಲ್ಲವಾಗಿದೆಯಲ್ಲದೆ ಹಳೆಯ ಚಿತ್ರಣಗಳೆಲ್ಲ ಭರದಿಂದ ನಾಶವಾಗುತ್ತಿದೆ.

ಆಲಸ

## ಕಾಲ ವಿಪರ್ಯಾಸ ಚಿತ್ರ (Anachronism)

ಹಿಂದೆ ಆಗಿಹೋದ, ಈಗ ಇರುವ ಹಾಗೂ ಮುಂದೆ ಬರುವವರನ್ನು ಒಂದೇ ಎಡೆಯಲ್ಲಿ ತರಲು ಸಾಧ್ಯವಿರುವುದು ಚಿತ್ರಕಲೆಯಲ್ಲಿ ಮಾತ್ರ ಸಾಧ್ಯ. ಈ ಬಗೆಯ ಕಾಲಾತೀತ ಚಿತ್ರಗಳನ್ನು 'ಭಿತ್ತಿಚಿತ್ರ ನ್ಯಾಯ' ಎಂದು ಕರೆದಿದ್ದು, ಇವುಗಳನ್ನು ಬಾಣ, ಹರ್ಷ, ದಂಡಿ ಮುಂತಾದವರು ತಮ್ಮ ಕಾವ್ಯ ಸಂದರ್ಭದಲ್ಲಿ ಬಳಸಿಕೊಂಡಿದ್ದಾರೆ. ಚಂದ್ರಪ್ರಭ ಪುರಾಣದ ಚಿತ್ರಕಲೆಯ ಪ್ರಸಂಗದಲ್ಲಿ ಕಲಾವಿದ 'ಭೂತ, ಭವ, ಭಾವಿ ಶಲಾಕಾ ಪುರುಷ ಚರಿತಂಗಳಂ ದಿವ್ಯ ಜ್ಞಾನಿಗಳಿಂ ತಿಳಿದು' ಚಿತ್ರ ರಚಿಸಿದನೆಂಬ ಉಲ್ಲೇಖವಿದೆ. 'ಅಕ್ಬರ್ ನಾಮ'ದ ಆಸ್ಥಾನ ದೃಶ್ಯವೊಂದರಲ್ಲಿ ಚಿತ್ರ ರಚಿಸಿದ ಕಾಲಕ್ಕೆ ತೀರಿಕೊಂಡವರನ್ನೂ ಕಲಾವಿದ ಚಿತ್ರಿಸಿ ಶಾಶ್ವತಗೊಳಿಸಿದ್ದಾನೆ ಎಂಬ ಹೇಳಿಕೆಯಿದೆ. ಅಂತೆಯೇ ನಾಲ್ವಡಿ ಕೃಷ್ಣರಾಜ ಒಡೆಯರ ಇಚ್ಛೆಯಂತೆ ಅವರೂ ಸೇರಿದಂತೆ ಯುವರಾಜ ಕಂಠೀರವ ನರಸಿಂಹರಾಜರು, ರಾಜಕುಮಾರ ಜಯಚಾಮರಾಜೇಂದ್ರ ಒಡೆಯರು ಹಾಗೂ ಹಿನ್ನೆಲೆಯಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಇರುವಂತೆ ನಾಲ್ಕು ತಲೆಮಾರಿನವರನ್ನು ಒಂದೇ ಕಡೆ ತಂದು ಕಲಾವಿದ ವೈ. ನಾಗರಾಜು ಅವರು ೧೯೨೭ರಲ್ಲಿ ರಚಿಸಿಕೊಟ್ಟ ಚಿತ್ರವೊಂದನ್ನು ಮೈಸೂರು ಅರಮನೆಯಲ್ಲಿ ಕಾಣಬಹುದು.

ಆಲಸ

## ಕಾಳಿಘಾಟ್ ಚಿತ್ರಗಳು

ಭಾರತದ ಕಲೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಕಾಳಿಘಾಟ್ ಚಿತ್ರಗಳು ಪಡೆದಿವೆ. ಕಲ್ಕತ್ತಾದ ಬಳಿಯಿರುವ ನದಿಯ ದಂಡೆಯ ಹತ್ತಿರ ಕಾಳಿಘಾಟ್ ಎಂಬ ಸ್ಥಳವಿದ್ದು ಇದು ಪ್ರವಾಸಿಗರ ಯಾತ್ರಾಸ್ಥಳವಾಗಿದೆ. ಇಲ್ಲಿನ ದೇವಾಲಯಕ್ಕೆ ದೇವರ ದರ್ಶನಕ್ಕೆ ಬರುವ



ಯಾತ್ರಿಕರಿಗೆ ಹಿಂದೆ, ಇಲ್ಲಿನ "ಪಟುವಾ" ಎಂಬ ಪಂಗಡದ ಕಲಾವಿದರು ಚಿತ್ರಗಳನ್ನು ರಚಿಸಿ ಯಾತ್ರಿಕರಿಗೆ ಅತಿ ಕಡಿಮೆ ಬೆಲೆಗೆ ಮಾರುತ್ತಿದ್ದರು. ಇಲ್ಲಿನ ಕಲಾವಿದರ ಚಿತ್ರಗಳ ವಸ್ತುಗಳು ಶಿವ, ದುರ್ಗಿ, ಕೃಷ್ಣ, ಬಲರಾಮ, ಹನುಮಾನ್, ಹಾಗೂ ಮಹಾಭಾರತಕ್ಕೆ ಸಂಬಂಧಿಸಿದವು. ಪ್ರಕೃತಿಯನ್ನು ಪ್ರತಿನಿಧಿಸುವ ದೇವದೇವತೆಗಳು ಮತ್ತು ಪುರಾಣ, ಸಾಮಾಜಿಕ ಚಿತ್ರ, ತಮ್ಮ ಪರಿಸರದ ಸನ್ನಿವೇಶಗಳನ್ನು ಅಥವಾ ಸಮಾಜದಲ್ಲಿ ನಡೆಯುವ ಸಾಮಾನ್ಯ ಘಟನೆಗಳನ್ನು ಚಿತ್ರಿಸುತ್ತಿದ್ದರು. ಅವರು ಚಿತ್ರಿಸಿರುವ ಚಿತ್ರಗಳು ಅಸಾಧಾರಣವಾದ ಪರಿಣಾಮಕಾರಿಯಾದ ರೇಖೆಗಳಿಂದ ಕೂಡಿವೆ. ಹಾಗೂ ವರ್ಣ ಸಂಯೋಜನೆ, ರೇಖೆಗಳಲ್ಲಿ ವೈಶಿಷ್ಟ್ಯ, ವಿಸ್ಮಯಗೊಳಿಸುವ ಕುಂಚದ ನೈಪುಣ್ಯವನ್ನು ಕಾಣಬಹುದು.

ಈ ಕಲಾವಿದರು ಪಟಗಳಲ್ಲಿ ಚಿತ್ರರಚಿಸಿ, ಜನರಿಗೆ ಕಥೆಯ ರೂಪದಲ್ಲಿ ತಿಳಿಸಲು ಇವುಗಳನ್ನು ಸುರುಳಿಯಾಗಿ ಸುತ್ತುವಂತೆ ಬಟ್ಟೆಯ ಮೇಲೆ ರಚಿಸಿದ್ದಾರೆ. ಇವರು ಕುಂಚದಿಂದ ರಚಿಸಿದ ರೇಖಾಚಿತ್ರಗಳು ತೀವ್ರವಾಗಿ ನವೀನತೆಯಿಂದ ಹಾಗೂ ಸಹಜತೆಯಿಂದ ಕೂಡಿವೆ. ಎದ್ದು ಕಾಣುವ ಮತ್ತು ವೀರ್ಯವತ್ತಾದ ಕುಂಚದ ರೇಖೆಗಳು, ವರ್ಣಗಳನ್ನು ಉಪಯೋಗಿಸುವುದರಲ್ಲಿ ವ್ಯತ್ಯಾಸ, ಅಲ್ಲದೆ ವಿವರಣಾತ್ಮಕವಾದ ಅಲಂಕರಣವನ್ನು ಲಯಬದ್ಧವಾಗಿ ಚಿತ್ರಿಸಿ, ಛಾಯೆಯನ್ನು ಉಪಯೋಗಿಸಿರುವುದನ್ನು ಕಾಣಬಹುದು. ಭಾರತ ಬ್ರಿಟಿಷರ ಅಧಿಪತ್ಯದಲ್ಲಿದ್ದುದರಿಂದ ಅವರ ಪ್ರಭಾವ ಕ್ರಮೇಣ ಈ ಕಲಾವಿದರ ಮೇಲಾಯಿತು. 'ಕಾಳಿಘಾಟ್ ಶೈಲಿ' ಆಧುನಿಕ ಕಲೆಯ ಮೇಲೆ ಹೆಚ್ಚು ಪ್ರಭಾವ ಬೀರಿದ್ದು, ಆಧುನಿಕ ಕಲಾವಿದರು ಇವುಗಳಲ್ಲಿರುವ ಮೌಲ್ಯವನ್ನು ಗಮನಿಸಿ, ತಮ್ಮ ಚಿತ್ರಗಳಲ್ಲಿ ಬಳಸಿಕೊಂಡರು.

**ಮರಿ**

## ಕ್ಯಾನ್‌ವಾಸ್

ಕ್ಯಾನ್‌ವಾಸ್ ಎಂದರೆ ಚಿತ್ರಪಟ ಎಂದರ್ಥ. ತೈಲಚಿತ್ರ ರಚಿಸಲು ಕ್ಯಾನ್‌ವಾಸನ್ನು ಉಪಯೋಗಿಸುತ್ತಾರೆ. ಕಲಾಕೃತಿಗಳನ್ನು ರಚಿಸಲು ವಿವಿಧ ಅಳತೆಗಳಲ್ಲಿ ಸಿದ್ಧವಾಗಿರುವ ಕ್ಯಾನ್‌ವಾಸ್‌ಗಳು ಸಿಗುತ್ತವೆ. ಇವುಗಳ ಮೇಲ್ಮೈ ಒರಟು ಮತ್ತು ಮೃದುವಾಗಿಯೂ ಇರುತ್ತದೆ. ಇನ್ನೂ ವಿದ್ಯಾರ್ಥಿ ದೆಸೆಯಲ್ಲಿರುವವರು ತಮ್ಮ ಕ್ಯಾನ್‌ವಾಸ್‌ನ್ನು ತಾವೇ ತಯಾರಿಸಿಕೊಳ್ಳಬಹುದು. ಮರದ ಚೌಕಟ್ಟಿಗೆ ಬಟ್ಟೆಯನ್ನು ಬಿಗಿದು, ಕಾಯಿಸಿದ ಮರವಜ್ರವನ್ನು ತೆಳುವಾಗಿಹಚ್ಚಿ, ಅದು ಒಣಗಿದ ಮೇಲೆ ಚಾಕ್‌ಪೌಡರ್ ಹಾಗೂ ಡಬ್ಬಲ್ ಬಾಯಲ್ಡ್ ಲಿನ್‌ಸಿಡ್ ಆಯಿಲ್‌ಗಳ ಮಿಶ್ರಣವನ್ನು ೨-೩ ಬಾರಿ ಹಚ್ಚಿ ಚೆನ್ನಾಗಿ ಒಣಗಿಸಿ ಬಳಸಬಹುದು.

'ಸಮರಾಂಗಣ ಸೂತ್ರಧಾರ'ದಲ್ಲಿ ರೇಶ್ಮೆ ಬಟ್ಟೆಯ ಮೇಲೆ, ನಿಂಬೆ ಬೀಜ ಸೀಮೆ ಅಕ್ಕಿಯನ್ನು ಅರೆದು ಬೇಯಿಸಿದ ಕಲ್ಕವನ್ನುಹಚ್ಚಿ ಅದರ ಮೇಲೆ ತೀರಾ ಪುಡಿಯಾದ ಆದರೆ ಗಟ್ಟಿಯಾದ ಮರಳನ್ನು (ಕಟಿಶರ್ಕರ) ಲೇಪಿಸುವುದರಿಂದ ಚಿತ್ರ ರಚನೆಗೆ ಹೇಳಿಸಿದಂತ ಪಟವಾಗುತ್ತದೆ ಎಂದು ಹೇಳಿದೆ.

**ಮರಿ**

## ಕ್ಯಾನ್ ವಾಸ್ ಸ್ಟ್ರೆಚರ್

ಮರದ ಪಟ್ಟಿಗಳನ್ನು ವಿವಿಧ ಅಳತೆಗಳಿಗೆ ಸರಿಹೊಂದುವಂತೆ ರಚಿಸಿರುವುದು ಸಾಮಾನ್ಯವಾಗಿ ಪಟ್ಟಿಗಳನ್ನು ತಯಾರಿಸಲು ಜಾಕಾಯಿ ಮರವನ್ನು ಉಪಯೋಗಿಸುತ್ತಾರೆ. ಈ ಪಟ್ಟಿಗಳಿಂದ ರಚಿಸಲ್ಪಟ್ಟ ಫ್ರೇಂಮಿನ ಮೇಲೆ ಕ್ಯಾನವಾಸ್ ಬಟ್ಟೆ ಬಿಗಿಯಾಗಿ ಬಂಧಿಸಲ್ಪಟ್ಟಿರುತ್ತದೆ. ಮೊಳೆ



ಹೊಡೆದು ಇಲ್ಲವೆ ಸ್ಟ್ಯಾಪ್ಲರ್ ರೀತಿಯ ಉಪಕರಣದಿಂದ ಬಂಧಿಸಲು ಸಾಧ್ಯ. ಮರದ ಚೌಕಟ್ಟಿಗೆ ದಾರದಿಂದ ಬಂದಿಸುವ ಪದ್ಧತಿ ಟಿಬೆಟ್‌ನಲ್ಲಿ ಇಂದಿಗೂ ಇದೆ.

**ಮರಿ**

## ಕ್ಯಾರಿಕೇಚರ (Caricature)

ವ್ಯಕ್ತಿಗಳ ಗುಣದೋಷಗಳನ್ನು ಉತ್ಪ್ರೇಕ್ಷಿಸಿ ಅಸಂಗತವಾಗಿ ಚಿತ್ರಿಸುವ ಭಾವಚಿತ್ರಗಳನ್ನು ವಿಡಂಬನ ಚಿತ್ರಗಳೆಂದು ಕರೆಯಲಾಗುತ್ತದೆ. ಕ್ಯಾರಿಕೇರ್(Caricare) ಎಂಬ ಇಟಾಲಿಯನ್ ಶಬ್ದದಿಂದ 'ಕ್ಯಾರಿಕೇಚರ್' ಶಬ್ದದ ವ್ಯುತ್ಪತ್ತಿಯಾಗಿರುತ್ತದೆ. ಪ್ರಪ್ರಥಮವಾಗಿ ಲಿಯೋನಾರ್ಡೋ ಡಾ ವಿನ್ಸಿಯು ಅನೇಕ ವಿಡಂಬನಾತ್ಮಕ ರೇಖಾಚಿತ್ರಗಳನ್ನು ಚಿತ್ರಿಸಿರುವನಾದರೂ ಕ್ಯಾರೆಸ್ಸಿ (Carrecci) ಎಂಬುವವನ ಗೆಳೆಯರ ಬಳಗವೇ ೧೬ನೆಯ ಶತಮಾನದಲ್ಲಿ "ಕ್ಯಾರಿಕೇಚರ" ಎಂಬ ಪದಕ್ಕೆ ಒಂದು ನಿರ್ದಿಷ್ಟ ರೂಪವನ್ನೂ ಶೈಲಿಯನ್ನೂ ಸ್ಥಿರಗೊಳಿಸಿತು. ಬೊಲೋನೀಜ(Boilonese) ಕಲಾಶಾಲೆಯ ಗೆರ್ಸಿನೋ ಮತ್ತು ಡೊಮೆನಿಚಿನೋ ಅವರು ಅತ್ಯಂತ ಜಾಣ್ಮೆಯುಳ್ಳ ವಿಡಂಬನ ಚಿತ್ರಕಾರರೆಂದು ಪರಿಗಣಿಸಲ್ಪಟ್ಟಿದ್ದಾರಲ್ಲದೇ ಹೋಗಾರ್ಥ್, ಕ್ರುಯಿಕ್ಶಾಂಕ್ ಬೀರ್‌ಬೋಹ್ಮ್ ಮತ್ತು ಡಾಮಿಯರ್‌ರಂಥ ವಿಶ್ವ ವಿಖ್ಯಾತ ಕಲಾವಿದರೂ ಸಹ ವಿಡಂಬನ ಚಿತ್ರಗಳನ್ನು ಚಿತ್ರಿಸುವದರಲ್ಲಿ ಉನ್ನತ ಸ್ಥಾನಗಳಿಸಿದವರಾಗಿದ್ದಾರೆ.

ಮ್ಯ. ಹೊ.

## ಕ್ಯಾರೋಲಿಂಜಿಯನ್ ಕಲೆ (Carolingian Art)

ಕ್ರಿ.ಶ. ೭೬೮-೮೧೪ರಲ್ಲಿ ಆಳಿದ ಪ್ರಥಮ ರೋಮನ್ ಸಾಮ್ರಾಟ ಚಾರ್ಲ್‌ಮೇನ್ ದೊರೆಯ ಆಳಿಕೆಯ ಕಾಲದಲ್ಲಿ ಅವನ ಸಾಮ್ರಾಜ್ಯದಲ್ಲಿ ಬೆಳೆದ ಕಲೆಯನ್ನು ಕ್ಯಾರೋಲಿಂಜಿಯನ್ ಕಲೆ ಎಂದು ಕರೆಯಲಾಗುತ್ತದೆ. ೯ನೆಯ ಶತಮಾನದ ಕೊನೆಕೊನೆಗೂ ಇದೇ ಶೈಲಿಯ ಕಲೆಯ ಬೆಳವಣಿಗೆಯಾಯಿತು. ಸಮಕಾಲೀನ ಬೈಝಂಟಾಯಿನ್ ಕಲೆಯ ಪ್ರಭಾವವು ಈ ಶೈಲಿಯ ಮೇಲಾಗಿದ್ದರೂ ತನ್ನದೇ ಆದ ಪ್ರಭಾವದಲ್ಲಿ ಕ್ಯಾರೋಲಿಂಜಿಯನ್ ಕಲೆಯು ಬೆಳಗಿತಲ್ಲದೇ ತನ್ನದೇ ಆದ ಪರಂಪರೆಯನ್ನೂ ರೂಢಿಸಿಕೊಂಡಿತ್ತು. ಸ್ವತಃ ಚಾರ್ಲ್‌ಮೇನ್ ದೊರೆಯು ಈ ಕಲೆಯ ಪ್ರವರ್ತಕನಾಗಿದ್ದು ೪ನೇ ಶತಮಾನದ ಪೂರ್ವಕ್ರಿಶ್ಚಿಯನ್ ಕಲೆಯ ಆಕೃತಿಗಳನ್ನು ಸೂಕ್ಷ್ಮವಾಗಿ ಪ್ರತಿನಿರ್ಮಿಸಲಾಗಿದೆ. ಕ್ಯಾರೋಲಿಂಜಿಯನ್ ಕಲೆಯು ಪ್ರಾಮುಖ್ಯವಾಗಿ ಹಸ್ತಪ್ರತಿಗಳ ಅಲಂಕರಣ, ಹಸ್ತಿದಂತದ ಕೆತ್ತನೆ ಮತ್ತು ಲೋಹ ಕಲಾಕೃತಿಗಳಿಗೆ ಸೀಮಿತವಾದುದಾಗಿದೆ. ಪೂರ್ವಕ್ರಿಶ್ಚಿಯನ್ ಕಲೆಯ ತಳಹದಿಯ ಮೇಲೆಯೇ ನಿರ್ಮಿಸಲಾದ ಯೂಟ್ರೆಕ್ಟ್ ಸಾಲ್ಟರ್ (Utrecht psalter) ಎಂಬ ಅಲಂಕೃತ ಹಸ್ತಪ್ರತಿಯು ಅತ್ಯುತ್ತಮ ಉದಾಹರಣೆಯಾಗಿದೆ.

ಮ್ಯ. ಹೊ.

## ಕ್ಯಾರೊಸ್ಕ್ಯೂರೋ (Chiroscuro)

"ಕ್ಯಾರೊಸ್ಕ್ಯೂರೋ" ಎಂಬುದು ಇಟಲಿಯ ಪದ "ಕತ್ತಲು ಬೆಳಕು"-ಕ್ಯಾರೋಸ್ಕ್ಯೂರೋ ಪದದ ಅರ್ಥ. ವರ್ಣಚಿತ್ರಗಳಲ್ಲಿ ಕತ್ತಲು ಬೆಳಕುಗಳನ್ನು ರೂಪಿಸುವುದೇ ಕ್ಯಾರೋಸ್ಕ್ಯೂರೋ. ಈ ತಂತ್ರವು ಇಟಲಿಯ ಕಲಾವಿದರಿಂದಲೇ ಬೆಳಕಿಗೆ ಬಂದುದಾಗಿದೆ. ವಿಶ್ವ ವಿಖ್ಯಾತ ಭಾವಚಿತ್ರ (Portrait) ಕಲಾವಿದ ರೆಂಬ್ರಾಂಡ್ಟ್‌ನ ಕಲಾಕೃತಿಗಳಲ್ಲಿ ನೆರಳು ಬೆಳಕಿನ ಸ್ವಚ್ಛಂದ

ಆಟವನ್ನು ಗಮನಿಸಬಹುದು. "ಶೃಂಗಾರ ನಿರತೆ. ಸಸ್ಕಿಯಾ", "ಡಾಕ್ಟರ್, ವಲ್ಪ್‌ನ ದೇಹ ರಚನಾ ಶಾಸ್ತ್ರ(Anatomy)ದ ಪಾಠ" ಮೊದಲಾದ ರೆಂಬ್ರಾಂಡ್ಟ್‌ನ ಕಲಾಕೃತಿಗಳೂ ಟರ್ನರನ "ಮುತ್ತಿನೋಲೆ ಧರಿಸಿದ ಹುಡುಗಿ" ಮತ್ತು ಅವನ ಅನೇಕ ನಿಸರ್ಗ ಚಿತ್ರಗಳೂ(Land-scapes) ಕ್ಯಾರೋಸ್ಕೂರೋ ತಂತ್ರದ ಅತ್ಯುತ್ತಮ ಉದಾಹರಣೆಗಳಾಗಿವೆ.

ಯುರೋಪಿನ ಪುನರುಜ್ಜೀವನ ಕಾಲದ ಬ್ಯಾರೋಕ್ ಶೈಲಿಯ ಕಲಾವಿದರ ಕಲಾಕೃತಿಗಳಲ್ಲಿಯೂ ಕ್ಯಾರೋಸ್ಕೂರೋ ತಂತ್ರದ ಬಳಕೆಯಾಗಿದೆಯಲ್ಲದೇ ಕಾರ್ನ್‌ವಾಲಿಯೋ, ಲಿಯೋನಾರ್ಡೋ ಡಾ ವಿಂಚಿ, ಮೈಕೆಲ್ಯಾಂಜಲೋ, ರಾಫೆಲ್ ಮೊದಲಾದ ಕಲಾವಿದರು ತಮ್ಮ ಚಿತ್ರಗಳಲ್ಲಿ ನೆರಳು, ಬೆಳಕುಗಳನ್ನು ತೋರಿಸಲು ಕಂದು, ಬೂದು ಮತ್ತು ಕಪ್ಪು ವರ್ಣಗಳನ್ನು ಬಳಸಿರುವುದನ್ನು ಕಾಣಬಹುದು.

ಅ. ಟ. ಅ.

## ಕ್ಯಾಲಿಗ್ರಫಿ (Calligraphy)

ಕಲಾತ್ಮಕ ಕೈ ಬರಹವು ಲಿಖಿತ ವಿಷಯ(ವಸ್ತು)ದಷ್ಟೇ ಮಹತ್ವದ್ದಾಗಿರುತ್ತದೆ. ಅಂದರೆ ಅಕ್ಷರ ವಿನ್ಯಾಸವೂ ಬರಹದ ವಸ್ತುವನ್ನು ಗ್ರಹಿಸಲು ಗ್ರಾಸವಾಗುತ್ತದೆ. ಅಕ್ಷರ ವಿನ್ಯಾಸದಲ್ಲಿ ವಿವಿಧ ಶೈಲಿಗಳು ರೂಢಿಯಲ್ಲಿದ್ದು ಅವುಗಳಿಗಾಗಿ ಬೇರೆ ಬೇರೆ ಬಗೆಯ ಕುಂಚ, ಲೆಕ್ಕಣಿಕೆಗಳನ್ನು ಬಳಸಲಾಗುತ್ತದೆ. ಈ ಕೈ ಬರಹದ ಕಲೆಯು ಚೀನ, ಜಪಾನ್ ದೇಶಗಳ ಸಾಂಪ್ರದಾಯಿಕ ಕಲೆಗಳಲ್ಲಿ ಒಂದಾಗಿದೆ. ಅಲ್ಲದೇ ಇತರ ದೇಶಗಳಲ್ಲಿ ಸುಂದರ ಕೈ ಬರಹಗಳ ನಿದರ್ಶನಗಳು ಇತಿಹಾಸ ಕಾಲದಿಂದಲೂ ದೊರೆಯುತ್ತವೆ. ಅಲಂಕಾರಿಕ ಹಸ್ತಪ್ರತಿಗಳು, ಶಾಸನ ಮೊದಲಾದ ಐತಿಹಾಸಿಕ ದಾಖಲೆಗಳಲ್ಲಿ ಲಿಪಿ ಅಥವಾ ಕೈ ಬರಹಕ್ಕೆ, ಲಿಪಿಯ ಅಲಂಕಾರಕ್ಕೆ ಹೆಚ್ಚು ಗಮನ ಕೊಟ್ಟಿರುವುದು ಕಂಡುಬರುತ್ತದೆ. ಕ್ಲೀ ಮತ್ತು ಮಿರೋರಂಥ ಆಧುನಿಕ ವಿಶ್ವವಿಖ್ಯಾತ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಕೈ ಬರಹ ಅಥವಾ ಅಕ್ಷರ ವಿನ್ಯಾಸಗಳನ್ನೂ ಸಮಾವೇಶಗೊಳಿಸುತ್ತಿದ್ದರು.

ಮ್ಯ. ಹೊ.

## ಕ್ಲಾಸಿಕಲ್ ಕಲೆ

'ಕ್ಲಾಸಿಕ್' ಎಂಬ ಶಬ್ದವು ಪಾಶ್ಚಿಮಾತ್ಯರಲ್ಲಿ ಹಲವಾರು ರೀತಿಯಲ್ಲಿ ವಿವರಿಸಲ್ಪಟ್ಟಿದೆ. ಈ ಶಬ್ದವನ್ನು ಗ್ರೀಕ್, ಮತ್ತು ರೋಮನಲ್ಲಿ ಸಂಕುಚಿತ ಮತ್ತು ವಿಶಾಲವಾದ ಅರ್ಥದಲ್ಲಿ ಬಳಸಲಾಗಿದೆ. ಗ್ರೀಕ್‌ನಲ್ಲಿ ಕ್ರಿ.ಶ. ಪೂ ೪೬೦ರಿಂದ ೪೩೦ ರ ಅವಧಿಯಲ್ಲಿ ಕ್ಲಾಸಿಕ ಶಬ್ದವು ಕಲಾತ್ಮಕತೆಯೊಂದಿಗೆ ಇತಿಹಾಸದ ಅಭಿವೃತ್ತಿಯನ್ನು ಪ್ರತಿನಿಧಿಸುವಂತೆ ಇತ್ತು. 'ಕ್ಲಾಸಿಕ್' ಎಂಬ ಆಂಗ್ಲಭಾಷೆಯ ಈ ಶಬ್ದವು ಲ್ಯಾಟಿನ್ ಭಾಷೆಯ ಕ್ಲಾಸಿಕಸ್(Classicus) ಮತ್ತು ಕ್ಲಾಸಿಸ್ (Clasis) ಶಬ್ದಗಳಿಂದ ಬೆಳವಣಿಗೆಯಾಗಿರುವುದಾಗಿ ತಿಳಿದುಬರುತ್ತದೆ. 'ಕ್ಲಾಸಿಕಸ್' ಶಬ್ದವು ರೋಮಿನಲ್ಲಿ ಅಲ್ಲಿಯ ನಾಗರಿಕರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಯ ಹಿನ್ನಲೆಯಲ್ಲಿ ವಿಶಾಲವಾದ ಅರ್ಥದಲ್ಲಿ ಬಳಕೆಯಾಗಿದೆ.

ಮಧ್ಯಕಾಲೀನ ಮತ್ತು ಪುನರುಜ್ಜೀವನ ಕಾಲದಲ್ಲಿ ಕ್ಲಾಸಿಕ್ ಪದವು ಮತ್ತೆ ಬೇರೆ ರೀತಿಯಲ್ಲಿ ಅರ್ಥವ್ಯಾಪ್ತಿಯನ್ನು ಹೊಂದಿ ಬೆಳವಣಿಗೆಯಾಗಿದೆ. ಕಲಾ ಇತಿಹಾಸ, ಸೌಂದರ್ಯಶಾಸ್ತ್ರದ ತತ್ವಗಳ ಇತಿಹಾಸಕ್ಕಾಗಿ ಈ ಪದವು ಬಳಕೆಯಾಗಿದೆ. ಹೆಲೋನೆಸ್ಟಿಕ್ ಯುಗದಲ್ಲಿ ಕ್ಲಾಸಿಕ್‌ಗೆ ಬದಲಾಗಿ ಕ್ಯಾನನ್(Canon) ಎಂಬ ಶಬ್ದವು ಬಳಕೆಯಾಗಿದೆ. ಒಂದು ಕಾಲದ ಸಂಪ್ರದಾಯದ ಕಲಾಬೆಳವಣಿಗೆಯನ್ನು ಕ್ಲಾಸಿಕಲ್ ಕಲೆ ಪ್ರತಿನಿಧಿಸುತ್ತದೆ. ಕನ್ನಡದಲ್ಲಿ ಕ್ಲಾಸಿಕಲ್ ಕಲೆ ಎಂದರೆ 'ಮಾರ್ಗ' ಹಿರಿಮೆಯನ್ನು ಪಡೆದ, ಮಾದರಿ ಗುಣಲಕ್ಷಣಗಳನ್ನು ಪಡೆದ ಕಲಾಸಂಪ್ರದಾಯ ಎಂದು ಕರೆಯಲಾಗುತ್ತಿದೆ. ಮಾರ್ಗಕ್ಕೆ ಪಥ ಎಂಬುದು ವಾಚ್ಯಾರ್ಥ! ಲಕ್ಷಣ ಯುಕ್ತವಾದ ರಚನೆ ಎಂಬುದು ವಿಶೇಷಾರ್ಥ ಕಲೆಯ ಸಂದರ್ಭದಲ್ಲಿ ಈ ಪದಗಳು ವಿಶೇಷಾರ್ಥವನ್ನೇ ಪ್ರತಿನಿಧಿಸುತ್ತವೆ.

'ಮಾರ್ಗ' ಪದದೊಂದಿಗೆ ಬರುವ ಇನ್ನೊಂದು ಪದ 'ದೇಶಿ'. ಈ ದೇಶೀಮಾರ್ಗ ಯಾವುದೇ ದೇಶ, ಕಾಲ, ಪರಿಸರಗಳಿಗೆ ತಕ್ಕಂತೆ ಆಕಾರ ಪಡೆಯುತ್ತಿದ್ದು ಇವು ಆಯಾ ಕಾಲದ ಅನಿವಾರ್ಯ ವಿರೋಧ ಪೂರಕ ಶಬ್ದಗಳಾಗಿವೆ. ಬದುಕಿನ ಎಲ್ಲ ಕ್ಷೇತ್ರಗಳನ್ನು ಆವರಿಸಿ ಮುನ್ನುಗ್ಗುವ ಇವು ಕಲಾವಲಯದಲ್ಲಿಯೂ ತೂರಿ ಬರುವುದು ಸಹಜವಾಗಿದೆ. ಕ್ಲಾಸಿಕಲ್ ಕಲೆ ದೇಶೀಯ ಮತ್ತು ವಿದೇಶಿಯರಲ್ಲಿ ತನ್ನ ರೂಪದ ವಿಶೇಷ ಗುಣಲಕ್ಷಣಗಳನ್ನು ಪಡೆದುಕೊಂಡು ಪೋಷಣೆ ಹೊಂದಿ ಬರುವಂತಹ ಕಲಾಸಂಪ್ರದಾಯವೆನ್ನಬಹುದು.

ಎಸ್. ಸಿ. ಪಾ.

## ಕ್ಲಾಸಿಸಂ, ನವ (Neo Classicism)

ಕ್ರಿ. ಶ. ೧೭೫೦ರಲ್ಲಿ ಫ್ರೆಂಚ್ ಮತ್ತು ಇಂಗ್ಲಿಷ್ ಕಲಾವಿದರು ರೋಮನಗರವನ್ನು ಸಂದರ್ಶಿಸಿ, ಕಲೆಯನ್ನು ಆಂದೋಲನದ ರೀತಿಯಲ್ಲಿ ಪ್ರಚಾರಗೊಳಿಸಿದರು. ಕ್ರಿ.ಶ. ೧೭೮೦ರಲ್ಲಿ ಇದು ಯುರೋಪ ಮತ್ತು ಅಮೆರಿಕೆಯಲ್ಲಿ ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿತ್ತು. ಆದರೆ ಕ್ರಿ.ಶ. ೧೮೩೦ರ ವೇಳೆಗೆ ತನ್ನೆಲ್ಲ ಪಾವಿತ್ರ್ಯತೆ ಕಳೆದುಕೊಂಡು ಬೇರೆ ಕಲಾ ಪ್ರವೃತ್ತಿಗಳಿಗೆ ದಾರಿ ಮಾಡಿಕೊಟ್ಟಿತು. ಇದು ಒಂದರ್ಥದಲ್ಲಿ ಪರಿವರ್ತನವಾದಿ ದೃಷ್ಟಿಯಾಗಿದ್ದು ಬಾರೂಕ್ ಮತ್ತು ರೊಕೊಕೊ ಕಲೆಯ ಕೆಲ ಸಂಗತಿಗಳಿಗೆ ಪ್ರತಿಕ್ರಿಯೆಯ, ಭಾಗಶಃ ಪ್ರಾಚೀನತೆಯ ಬಗೆಗಿನ ನವನವೋದಯ ಭಾವನೆಗಳ ಅಭಿವ್ಯಕ್ತಿಯಾಗಿದೆ. ಶಿಲ್ಪಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಇದು ಪ್ರಮುಖ ಆಂದೋಲನ ಎನಿಸಿದೆ. ಜಾಕ್ಸಲೂಯಿಸ್ ಡೇವಿಡ್ ಹಾಗೂ ರೆನೋಲ್ಡ್ ಇವರು ನಿಯೋಕ್ಲಾಸಿಜಂನ ಪ್ರಮುಖ ಕಲಾವಿದರೆನಿಸಿದ್ದಾರೆ. ಲಂಡನ್ ನಗರದ ಎಲ್ಗಿನ್ ಮಾರ್ಬಲ್ಸ್ (ಗ್ರೀಕ್ ಕಲೆ)ಯಿಂದ ಸ್ಫೂರ್ತಿ ಪಡೆದು ಗ್ರೀಕ್ ಮೂಲದ ರೋಮನ್‌ಮಾರ್ಬಲ್‌ಗಳ ಒರಟು ಶೈಲಿಯನ್ನು ಮೂರ್ತಿಕಲೆಯಲ್ಲಿ ಅಭಿವೃದ್ಧಿಪಡಿಸಿದರು.

ಫ್ರಾನ್ಸ್‌ನ ನಿಯೋಕ್ಲಾಸಿಕಲ್ ಶೈಲಿಯ ಚಿತ್ರಕಲೆಯನ್ನು ವ್ಯಕ್ತಿಗತ ಶೈಲಿಯಿಂದ ಬೇರ್ಪಡಿಸುವುದು ಕಷ್ಟವೆನಿಸಬಹುದು. ಡೇವಿಡ್ ರಚಿಸಿದ 'ವ್ರೋತ್ ಆಫ್ ದಿ ಹೋರಾಟ' (೧೭೮೪, ಪ್ಯಾರಿಸ್, ಲೂವ್ರೆ) ಕೃತಿಯು ನಿಯೋಕ್ಲಾಸಿಕಲ್ ಶೈಲಿಯ ಮೇರುಕೃತಿ ಎನಿಸಿದೆ.

ಚಿತ್ರಕಲೆ ಹಾಗೂ ಶಿಲ್ಪಕಲೆ ಎರಡರಲ್ಲೂ ಶೈಲಿಯಷ್ಟೇ ವಿಷಯವೂ ಮಹತ್ವದ್ದೆನಿಸಿದೆ.

ಕಲಾಕಾರರು ಇತಿಹಾಸ ಚಿತ್ರಣಕ್ಕೆ ಹೆಚ್ಚು ಒತ್ತು ನೀಡಿದರು. ನಿಯೋ ಕ್ಲಾಸಿಕಲ್ ಪಂಥೀಯ ಎಂಬ ಪದವನ್ನು ಪ್ರಾಚೀನತೆಯ ಉದ್ದೇಶವರಿತ ಅನುಕರಣೆ ಮಾಡಲೆತ್ನಿಸಿದ ಈ ಹಿಂದಿನ ಕಲಾವಿದರಿಗೂ ಅನ್ವಯಿಸಬಹುದು. ನಿಯೋಕ್ಲಾಸಿಕಲ್ ಪ್ರವೃತ್ತಿಯನ್ನು ಅಭಿವ್ಯಕ್ತಿಸಿದ ೧೯೨೦ರಷ್ಟು ಈಚಿನ ಕಲಾವಿದರನ್ನು ಕೂಡ ಇದೆ ಪದದಿಂದ ಗುರುತಿಸಲಾಗಿದೆ. ಮೊಸಲಿನಿಯ ಅವಧಿಯಲ್ಲಿ ನಿರ್ಮಿಸಲಾದ ವಾಸ್ತುಶಿಲ್ಪ ಹಾಗೂ ಎರಿಕ್‌ಗಿಲ್‌ನ ಶಿಲ್ಪಗಳು ತಮ್ಮ ಸತ್ವಪೂರ್ಣ, ಸರಳತೆ, ಪರಿಶುದ್ಧತೆಯಿಂದ ನಿಯೋಕ್ಲಾಸಿಕಲ್‌ನ ನಿದರ್ಶನಗಳೆನಿಸಿವೆ. ಪ್ರಥಮ ಮಹಾಯುದ್ಧದ ನಂತರ ಓಕಾಸ್ಲೋನಲ್ಲಿ ಈ ಶೈಲಿಯನ್ನು ಕಾಣಬಹುದಾಗಿದೆ.

ಎಸ್. ಎಂ. ಮಿ.

## ಕಿನ್ನಾಳಕಲೆ

ರಾಯಚೂರು ಜಿಲ್ಲೆಯ ಕೊಪ್ಪಳ ತಾಲೂಕಿನ ಕಿನ್ನಾಳ ಗ್ರಾಮ ಈಗ ಸುಮಾರು ೨೫ ಜನ ಕುಶಲಕರ್ಮಿಗಳ ಪ್ರಯತ್ನದಿಂದ ದೇಶದ ಜನರನ್ನು ಆಕರ್ಷಿಸಿದೆ. ಇಲ್ಲಿ ವಿಜಯನಗರ ಅರಸರ ಕಾಲದಿಂದಲೂ ಕಲಾವಿದರು ತಮ್ಮ ಸೃಜನಶೀಲ ಪ್ರತಿಭೆಯನ್ನು ಪ್ರಕಟಗೊಳಿಸುತ್ತ ಬಂದಿದ್ದಾರೆ.

ದೇವರ ಪಲ್ಲಕ್ಕಿ, ಮಂಟಪ, ಬೊಂಬೆಗಳ ಕೆತ್ತನೆಗೆಲಸ, ಪೀಠೋಪಕರಣಗಳು, ಷೋಕೇಸ್, ಒಡವೆ ಪೆಟ್ಟಿಗೆ, ಮತ್ತು ಕಿನ್ನಾಳದ 'ಆಟಿಕೆಗಳು' ತುಂಬ ಪ್ರಸಿದ್ಧವಾಗಿವೆ. ಮೊದಲು ಗ್ರಾಮ ದೇವತೆಗಳಿಗೆ ಬಣ್ಣದ ಲೇಪನ ಮಾಡುತ್ತಿದ್ದ ಈ ಕಲಾವಿದರು ಕಾಲಕ್ಕೆ ತಕ್ಕಂತೆ ತಮ್ಮ ಕಲಾಕೃತಿಗಳಲ್ಲಿ ವೈವಿಧ್ಯತೆಯನ್ನು ತಂದುಕೊಂಡಿದ್ದಾರೆ.

ಕಟ್ಟಿಗೆಯ ತುಂಡು, ಚಹಾಪೆಟ್ಟಿಗೆ, ತಟ್ಟಿನಗುಂಜು, ಮಣ್ಣು, ಕಟ್ಟಿಗೆಯ ಪಾಟಿ, ಹುಣಸೆಯ ಸರಿ ಮುಂತಾದ ವಸ್ತುಗಳನ್ನು ಬಳಸಿ ಕಲಾಕೃತಿಗಳನ್ನು ನಿರ್ಮಿಸುತ್ತಾರೆ. ಈ ಕಲಾಕೃತಿಗಳಿಗೆ ಬಳಸುವ ಬಣ್ಣಗಳು ಎರಡು ರೀತಿಯಲ್ಲಿವೆ. ಒಂದು ಬಾಳಪ್ಪನ ಬಣ್ಣ ಇನ್ನೊಂದು ಲಜಾವರ ಬಣ್ಣ.

ಬಾಳಪ್ಪನಬಣ್ಣ: ಇದು ಬಳಪದ ಬಣ್ಣವಾಗಿದ್ದು ಜನಪದರ ಬಾಯಲ್ಲಿ ಬಾಳಪ್ಪನ ಬಣ್ಣವಾಗಿದೆ. ಬಳಪದ ಕಲ್ಲನ್ನು ತಂದು ನೀರಿನಲ್ಲಿ ನೆನೆಯಿಟ್ಟು ಅರೆದು ಇಲ್ಲವೆ ತೇಯ್ದು ಅಂಟು ಹಾಕಿ ಸೋಸುತ್ತಾರೆ. ಹೀಗೆ ಸೋಸಿದ ದ್ರಾವಣವನ್ನು ಆಟಿಕೆ ವಸ್ತುಗಳಿಗೆ ಲೇಪಿಸುತ್ತಾರೆ.

ಲಜಾವರಬಣ್ಣ: ಇದನ್ನು ಬಣ್ಣಗಳ ರಾಜನೆಂದು ಕರೆಯುತ್ತಾರೆ. ಕಿನ್ನಾಳ ಕಲಾವಿದರು ಈ ಬಣ್ಣಕ್ಕೆ ವಿಶೇಷ ಮಹತ್ವವನ್ನು ಕೊಟ್ಟಿದ್ದಾರೆ. ಕುಟ್ಟಿದ ತವರಕ್ಕೆ ಮೀನಸರಿ ಹಾಕಿ ಹದಬರುವಂತೆ ಮಾಡುತ್ತಾರೆ. ಆಮೇಲೆ ನೀರಿನಲ್ಲಿ ಕೆಲವು ಸಮಯ ನೆನೆಯಿಟ್ಟು ನಂತರ ಈ ದ್ರಾವಣವನ್ನು ಸೇರಿಸುತ್ತಾರೆ. ಹೀಗೆ ಸಿದ್ಧವಾದುದೆ ಲಜಾವರ ಬಣ್ಣ. ಕಿನ್ನಾಳದ ಕಲಾವಿದರು ಗೊಂಬೆಗಳನ್ನು ಮಣ್ಣಿನಲ್ಲಿ ಮತ್ತು ಕಟ್ಟಿಗೆ ಹಾಗೂ ಮಣ್ಣುಗಳೆರಡನ್ನು ಬಳಸಿ ಗೊಂಬೆಗಳನ್ನು ತಯಾರಿಸುತ್ತಾರೆ. ಕಿನ್ನಾಳದ ಈ ಜನಪದ ಚಿತ್ರಕಾರರು ಹಿಂದೆ ದೇವಾಲಯಗಳಲ್ಲಿ



ಭಿತ್ತಿಚಿತ್ರಗಳನ್ನು ನಿರ್ಮಿಸುತ್ತಿದ್ದುದಾಗಿ ತಿಳಿಯುತ್ತದೆ. ತೊಟ್ಟಿಲು, ಆನೆ ಕುದುರೆಯಂತಹ ಮಕ್ಕಳ ಆಟಿಗೆಯ ವಸ್ತುಗಳನ್ನು ಮಾಡುವಲ್ಲಿ ಇವರು ಅತ್ಯಂತ ಪ್ರವೀಣರೆನಿಸಿದ್ದಾರೆ.

ಎಸ್.ಸಿ. ಪಾ.

## ಕಿಶನ್‌ಗಡ

ಸುಮಾರು ೧೮ನೆಯ ಶತಮಾನದ ಮಧ್ಯದಲ್ಲಿ ಕಿಶನ್‌ಗಡ್ ಎಂಬ ಚಿಕ್ಕ ರಾಜ್ಯದಲ್ಲಿ ಮೂಡಿದ ಪ್ರಣಯ ಹಾಗೂ ನವೋಲ್ಲಾಸದಿಂದ ಕೂಡಿದ ಚಿತ್ರಕಲೆಯ ಶೈಲಿಯು, ರಾಜಸ್ಥಾನಿ ಚಿತ್ರಕಲೆಯಲ್ಲಿ ಅಪ್ರತಿಮ ಸ್ಥಾನವನ್ನು ಗಳಿಸಿಕೊಂಡಿತು. ರಾಧಾ-ಕೃಷ್ಣರ ಕಥಾವಸ್ತುವಿನಲ್ಲಿರುವ ಮೃದುತ್ವ ಹಾಗೂ ಅದರ ಭಾವನೆಯನ್ನು ಕಾಂಗ್ರ ಚಿತ್ರಕಲೆಗೆ ಮಾತ್ರ ಹೋಲಿಸಬಹುದು. ಮಾನ್‌ಸಿಂಗನ (೧೬೫೮-೧೭೦೬) ಆಳ್ವಿಕೆಯ ಕಾಲಕ್ಕೂ ಮುಂಚಿನಿಂದಲೂ ಅನೇಕ ಕಲಾವಿದರು ಕಿಶನ್‌ಗಡದಲ್ಲಿ ಕೆಲಸ ಮಾಡುತ್ತಿದ್ದರು. ಚಿತ್ರಗಳನ್ನು ಮೊನಚಾಗಿಸುವ ಪ್ರವೃತ್ತಿ, ಹಸಿರು ಬಣ್ಣವನ್ನು ಹೇರಳವಾಗಿ ಉಪಯೋಗಿಸುವುದು ಮತ್ತು ಸುತ್ತಮುತ್ತಲಿನ ಭೂದೃಶ್ಯಗಳು, ಕಿಶನ್‌ಗಡದ ಶಾಲೆಯ ಪ್ರಧಾನಗುಣಗಳಾಗಿದ್ದವು ಕಿಶನ್‌ಗಡದ ರಾಜರು ಹಾಗೂ ಶ್ರೀಮಂತ ವರ್ಗದವರಿಗೆ ಚೈತನ್ಯತುಂಬಿದ ಕುದುರೆಗಳ ಬಗ್ಗೆ ತುಂಬಾ ಒಲವು ಇದ್ದಿತು. ಶಕ್ತಿಶಾಲಿಯಾದ ಬಿಳಿ ಕುದುರೆಯನ್ನು ಓಡಿಸುತ್ತಿರುವುದು ಹಾಗೂ ಅದರ ಕಾಲುಗಳಿಗೆ ಕೆಂಪು ಬಣ್ಣವನ್ನು ಬಳಿದಿರುವುದನ್ನು, ಹಿನ್ನೆಲೆಯಲ್ಲಿ ಚಿತ್ರಿಸಿದ ಸರೋವರ ಹಾಗೂ ಹಸಿರು ಬೆಟ್ಟವನ್ನು ಕಿಶನ್‌ಗಡದ ಚಿತ್ರಗಳಲ್ಲಿ ನೋಡಬಹುದು. ರಾಧಾ-ಕೃಷ್ಣರನ್ನು ಅನೇಕ ರೀತಿಯಲ್ಲಿ ಹಾಗೂ ವಿವಿಧ ಸನ್ನಿವೇಶಗಳಲ್ಲಿ ಚಿತ್ರಿಸಿರುವುದನ್ನು ಕಿಶನ್‌ಗಡದ ಚಿತ್ರಕಲೆಯ ಹಿರಿಮೆ. ರಾಧೆಯು ಈ ಭಾವಚಿತ್ರಗಳಲ್ಲಿ ಕೋಲುಮುಖಿ ಬಾಗಿರುವ ಹುಬ್ಬುಗಳು, ಕಮಲದಂತಹ ಕಣ್ಣುಗಳು, ಮೊನಚಾದ ಮೂಗು ತೆಳು ಹಾಗೂ ಸೂಕ್ಷ್ಮವಾದ ತುಟಿಗಳು ಹಾಗೂ ಮೊನಚಾದ ಗಲ್ಲವನ್ನು ಹೊಂದಿದ್ದಾಳೆ. ಇನ್ನೊಂದು ಚಿತ್ರದಲ್ಲಿ ಕೃಷ್ಣನನ್ನು ರಾಜನನ್ನಾಗಿ ನಿರೂಪಿಸಲಾಗಿದೆ ಹಾಗೂ ರಾಧೆಯ ಎದುರು ನಿಲ್ಲಿಸಲಾಗಿದೆ. ಅವನ ಸುತ್ತಲೂ ಅನೇಕ ಅಲಂಕಾರಗೊಂಡ ಸಖಿಯರು



ಇರುತ್ತಾರೆ. ಅವರ ತಲೆಗಳು ಭಕ್ತಿಭಾವವನ್ನು ಸೂಚಿಸುತ್ತಿರುವಂತೆ ಮೂಡಿಸಲಾಗಿದೆ. ಹಿಂಭಾಗದ ದೃಶ್ಯದಲ್ಲಿ ಸರೋವರವಿದ್ದು, ಅದರಲ್ಲಿ ನೀರು ಹಕ್ಕಿಗಳು ಕುಳಿತಿರುತ್ತವೆ. ಇದರಲ್ಲಿ ಬರುವ ಕೆಂಪು ದೋಣಿಯು ಕೂಡ ಕಿಶನ್‌ಗಡದ ಚಿತ್ರಕಲೆಯ ವಿಶೇಷ ಗುಣವಾಗಿದೆ.

ಕಿಶನ್‌ಗಡದ ಆಡಳಿತಗಾರರು ಕೃಷ್ಣನ ಪರಮ ಭಕ್ತರಾಗಿದ್ದರು. ಪುಷ್ಟಿಮಾರ್ಗ. (ಇಂದ್ರಿಯ ಭೋಗದ ಮಾರ್ಗ) ಪಂಥಕ್ಕೆ ಸೇರಿದ ಪುರೋಹಿತರು ಕೃಷ್ಣನ ವಿಗ್ರಹಕ್ಕೆ ಸುಂದರವಾದ ಪದ್ಧತಿಯಲ್ಲಿ ವಿವಿಧ ರೀತಿಯಲ್ಲಿ ಪೂಜೆ ಮಾಡುತ್ತಿದ್ದರು. ಆ ಪೂಜೆಯಲ್ಲಿ ಹೂಗಳು ಮತ್ತು ಸುವಾಸನಾ ದ್ರವ್ಯವು ಪಾತ್ರ ವಹಿಸಿತ್ತು. ಪುಷ್ಟಿಮಾರ್ಗದ ಉನ್ನತ ಪೂಜಾರಿಗಳು ಸೌಂದರ್ಯೋಪಾಸನೆಯ ಮತವನ್ನು ಸ್ಥಾಪಿಸಿದರು. ಹಾಗೂ ಈ ಮತದ ಅನುಯಾಯಿಗಳು ರಾಜರು ಶ್ರೀಮಂತವರ್ಗದವರು ಮತ್ತು ಶ್ರೀಮಂತ ವ್ಯಾಪಾರಿಗಳಾಗಿದ್ದರು. ರಾಧಾ-ಕೃಷ್ಣರ ಆಧ್ಯಾತ್ಮಿಕ ಪ್ರೀತಿಯನ್ನು ನಾಟಕ ರೂಪದಲ್ಲಿ ರಜಪೂತರ ಅನೇಕ ರಾಜ್ಯಗಳ ಅರಮನೆಗಳು ಮತ್ತು ಶ್ರೀಮಂತರ ಮಹಲುಗಳಲ್ಲಿ ಅಭಿನಯಿಸಲಾಯಿತು. ಕಿಶನ್‌ಗಡದಲ್ಲಿ ಈ ಪಂಥದ ಜನಪ್ರಿಯತೆಯು ೧೯ನೇ ಶತಮಾನದ ಅಂತ್ಯದವರೆಗೂ ಮುಂದುವರೆಯಿತು. ಈ ಭಾವನೆಗಳೇ ಚಿತ್ರಕಲೆಯಲ್ಲಿಯೂ ಪಡಿಮೂಡಿತು.

ಸುಮ

## ಕ್ರಿಯಾತ್ಮಕ ಚಿತ್ರಕಲೆ (Action Painting)

೧೯೫೨ರಲ್ಲಿ ವಿಮರ್ಶಕ ಹೊರಾಲ್ಡ್ ರೋಸನ್‌ಬರ್ಗನು ಜಾಕ್‌ಸನ್ ಪೊಲಾಕ್ ಹಾಗೂ ವಿಲ್ಲೆಮ್ ಡಿ ಕೂನಿಂಗ್‌ರಂತಹವರ ಅಮೂರ್ತ ಅಭಿವ್ಯಕ್ತಿವಾದಿ ಕೃತಿಗಳನ್ನು ವಿಮರ್ಶಿಸುವಾಗ ಬಳಸಿದ ಪದಗಳು ತಕ್ಕುದಾದವುಗಳಲ್ಲವೆಂದೂ, ಅದು ಅಮೂರ್ತವೂ ಅಲ್ಲದ, ಅಭಿವ್ಯಕ್ತಿವಾದಿಯೂ ಆಗಿರದ ಒಂದು ಬೇರೆಯೇ ಶೈಲಿಯೆಂದು ಸ್ವತಃ ತಾನೇ ಕಂಡುಕೊಂಡನು.

ಮೇಲೆ ಹೇಳಿದ ಕಲಾವಿದರು ಜ್ಯಾಮಿತೀಯವಲ್ಲದ (ಪ್ರಮಾಣಬದ್ಧವಲ್ಲದ) ಅಮೂರ್ತ ಶೈಲಿಯ ಕೃತಿಗಳನ್ನು ರಚಿಸುತ್ತಿದ್ದರೆಂದೂ, ಅವುಗಳ ರಚನೆಯಲ್ಲಿ ಪೂರ್ಣಗೊಂಡ ಚಿತ್ರಕ್ಕಿಂತಲೂ ಚಿತ್ರಕಾರನು ದೈಹಿಕವಾಗಿ ವಹಿಸಿದ ಶ್ರಮದ ರೀತಿಯೇ ಪ್ರಾಮುಖ್ಯವಾಗಿತ್ತೆಂಬುದು ವಿಮರ್ಶಕ ರೋಸನ್‌ಬರ್ಗನ ತರ್ಕವಾಗಿತ್ತು.



ಜಾಕ್ಸನ್ ಪೊಲಾಕ್

ಚಿತ್ರರಚನೆಯ ಏಕೈಕ ಉದ್ದೇಶವೆಂದರೆ ರಚನಾತ್ಮಕ ಕ್ಷಣಗಳನ್ನು ದಾಖಲಿಸುವುದು. ಫ್ರೆಂಚ್‌ನ ಅಸ್ತಿತ್ವ ಸಾಧಿಸುವ ಜಿಜ್ಞಾಸು- ಜಾನ್‌ಪಾಲ್ ಸಾರ್ತೆಯ ಹೇಳಿಕೆಯಾದ- 'ಇರುವುದು ಅಂದರೆ ಮಾಡುವುದು'(being is doing)ವನ್ನು ಮಾರ್ದನಿಸುವ ಧೋರಣೆ ಕ್ರಿಯಾತ್ಮಕ ಕಲೆಗೆ ಒಂದು ಪ್ರಸಿದ್ಧವಾದ ಉದಾಹರಣೆಯೆಂದರೆ, ಜಾಕ್‌ಸನ್ ಪೊಲಾಕನ ವಿಧಾನ. ಕ್ಯಾನವಾಸನ್ನು ನೆಲದಮೇಲೆ ಹರಡಿ, ಸುತ್ತಲಿನಿಂದ ಸುಳಿಸುಳಿಯಾಗಿ ಒಂದೇ ಸಮನೆ ಬಣ್ಣವನ್ನು ಸಿಡಿಸುವುದು. ಮೇಲ್ನೋಟಕ್ಕೆ ಸಿಕ್ಕಾಪಟ್ಟೆಯಾಗಿ ಬಣ್ಣವನ್ನು ಹರಿಯಗೊಡುವಂತೆ ಕಾಣುವ ಪೊಲಾಕ್‌ನ ಈ ಕ್ರಮದ ಹಿಂದಿರುವ ಹಿಡಿತ ಮತ್ತು ಸದುದ್ದೇಶವನ್ನು ಅರಿಯುವಲ್ಲಿ ರೋಸನ್‌ಬರ್ಗನು ಸೋತಿರಲೂಬಹುದು. 'ನಾನು ಚಿತ್ರರಚನೆಗೆ ತೊಡಗುವಾಗ, ನಾನು ಏನು ಮಾಡಲು ಹೊರಟಿದ್ದೇನೆಂಬುದರ ಸಾಮಾನ್ಯಜ್ಞಾನ ನನಗಿದ್ದೇ ಇರುತ್ತದೆ. ಬಣ್ಣಗಳ ಹರಿವು ನನ್ನ ಹಿಡಿತದಲ್ಲಿರುತ್ತದೆ. ಅಲ್ಲಿ ಅಚಾತುರ್ಯಕ್ಕೆ ಸ್ಥಾನವೇ ಇಲ್ಲ' ಎಂದು ಧೃಡವಾಗಿ ಹೇಳುತ್ತಾನೆ, ಪೊಲಾಕ್.

ಮ.ಹೆ.

## ಕ್ರಿಶ್ಚಿಯನ್ ಕಲೆ (ಪ್ರಾಥಮಿಕ ಹಂತ)

ರೋಮನ್ ಕಲೆಯ ನಂತರದಲ್ಲಿ ರೂಪುಗೊಂಡ ಈ ಪ್ರಾಚೀನ ಪೂರ್ವ ಕ್ರಿಶ್ಚಿಯನ್ ಕಲೆಯೂ ಕ್ರಿ.ಶ. ೨೦೦ ಮತ್ತು ೭೦೦ರ ಕಾಲಾವಧಿಯಲ್ಲಿ ಬೆಳವಣಿಗೆಯಾಗಿರುವುದು ತಿಳಿದುಬರುತ್ತದೆ. ಪುರಾತನ ಗ್ರೀಕ್ ಸಂಸ್ಕೃತಿಯೂ ರೋಮನ್ ಸಂಸ್ಕೃತಿಗೆ ದಾರಿಮಾಡಿಕೊಟ್ಟಿದೆ. ರೋಮನ್ ಸಂಸ್ಕೃತಿಯ ಮುಂದುವರಿದ ರೂಪವಾಗಿ ಕ್ರಿಶ್ಚಿಯನ್ ಸಂಸ್ಕೃತಿಯೂ ಬೆಳವಣಿಗೆಯಾಗಿದೆ. ಕ್ರಿಶ್ಚಿಯನ್ ಕಲೆ ಒಂದು ರೀತಿಯಲ್ಲಿ ರೋಮ್ ಗ್ರೀಕ್, ಸಂಸ್ಕೃತಿಗಳ ಸಮ್ಮಿಶ್ರಣದ ಫಲ. ಇದು ಮುಂದೆ ತನ್ನದೇ ಆದ ಕೆಲವು ವೈಶಿಷ್ಟ್ಯತೆಗಳನ್ನು ಉಳಿಸಿಕೊಂಡು ಬೆಳೆಯಿತು.

ಕ್ರಿಸ್ತನ ಮರಣದ ನಂತರ ರೋಮ್‌ನಲ್ಲಿ ಕ್ರಾಂತಿ, ಮತೀಯ ಘರ್ಷಣೆ, ರಾಜಕೀಯ ಒಳಜಗಳಗಳು ಎದ್ದವು. ಇಲ್ಲಿ ಕ್ರಿಸ್ತನನ್ನು ಪೂಜಿಸುವ ಅನುಯಾಯಿಗಳ ಗುಂಪು ಒಂದು. ಅಧಿಕಾರಕ್ಕಾಗಿ ಬಡಿದಾಡುವ ಮನೋಧೋರಣೆಯ ಇನ್ನೊಂದು ಗುಂಪು. ಇವೆರಡು ಗುಂಪುಗಳ ಜಗಳದಲ್ಲಿ ಕ್ರಿಸ್ತನ ಅನುಯಾಯಿಗಳು ಜಯಶಾಲಿಯಾಗಿ ಅಧಿಕಾರಕ್ಕೆ ಬಂದರು. ಈ ಸಂದರ್ಭದಲ್ಲಿ ಕ್ರಿಶ್ಚಿಯನ್ ಕಲೆ ಸಹಜವಾಗಿ ಬೆಳೆಯಲು ಸಾಧ್ಯವಾಯಿತು. ಚರ್ಚುಗಳ ವಿನ್ಯಾಸ ಕ್ರಿಶ್ಚಿಯನ್ ಕಲೆಯ ಒಂದು ಪ್ರಮುಖ ಕೊಡುಗೆಯಾಗಿದೆ. ಕ್ರೈಸ್ತ ವಾಸ್ತುಶೈಲಿಯನ್ನು ಗ್ರೀಕ್, ರೋಮನ್ ವಾಸ್ತುಶೈಲಿಯ ಸಮ್ಮಿಶ್ರಣದ ಹಂತವೆಂದು ಕರೆಯಲಾಗುತ್ತಿದೆ. ಇವರು ಗೋರಿಗಳ ನಿರ್ಮಾಣದಲ್ಲಿ ತಮ್ಮದೇ ಆದ ವಾಸ್ತು ವಿನ್ಯಾಸದ ನಾವೀನ್ಯತೆಯನ್ನು ಉಳಿಸಿಕೊಂಡು ಬಂದರು. ನೆಲದಲ್ಲಿ ಮನುಷ್ಯರು ಓಡಾಡುವ ರೀತಿಯಲ್ಲಿ ಸ್ಥಳವನ್ನು ನಿರ್ಮಾಣಮಾಡಿ ಹೆಣವನ್ನು ಹೂಳುವ ಸುರಂಗ ಸಮಾಧಿಯ ಗೋಡೆಗಳನ್ನು ತಯಾರಿಸಿ ಶವವನ್ನು ಗೋಡೆಯ ಮಗ್ಗುಲುಗಳಲ್ಲಿ ಕಿಂಡಿಯನ್ನು ಕೊರೆದು ಇರಿಸುವ ವಾಸ್ತುವಿನ್ಯಾಸದ ಮಾದರಿಗಳು ರಚನೆಯಾದವು. ಇವುಗಳಿಗೆ ಕೆಟಾಕೋಮ್ಸ್‌ಗಳೆಂದು(Catacomes) ಎಂದು ಕರೆಯುತ್ತಾರೆ.

ನಾಲ್ಕನೆಯ ಶತಮಾನದಲ್ಲಿ ರೋಮ್‌ನ ಸಮೀಪ 'ಎಫನ್‌ಪೋಲಿಯೋ' ಎಂಬಲ್ಲಿ ಕ್ಯಾಲಿಕ್ಸಟಸ್ ಎಂಬಲ್ಲಿ ಈ ರೀತಿಯ ಕುರುಹುಗಳಿವೆ. ಪ್ರಾಚೀನ ಕ್ರಿಶ್ಚಿಯನ್ ಕಲಾವಿದರು ಶವದ ಪೆಟ್ಟಿಗೆ ಮತ್ತು ಕೇಟಾಕೋಮ್ಸ್‌ಗಳ ಗೋಡೆಗಳಲ್ಲಿ ಭಿತ್ತಿಚಿತ್ರ ರಚನೆಮಾಡಿದ್ದಾರೆ. ತೈಲವರ್ಣದ ಬಳಕೆಯಾಗಿರುವುದು ಇಲ್ಲಿ ಕಂಡುಬಂದಿದೆ. ವೈವಿಧ್ಯಪೂರ್ಣವಾದ ಮನುಷ್ಯರ, ಪ್ರಾಣಿಪಕ್ಷಿಗಳ ದೈನಂದಿನ ಬದುಕಿನ ಅನೇಕ ದೃಶ್ಯಗಳು ರಚನೆಯಾಗಿವೆ. ಅಲ್ಲದೆ-ಧಾರ್ಮಿಕ ಹಿನ್ನೆಲೆಯ ಸಂಕೇತ ಪ್ರಧಾನವಾದ ಚಿತ್ರಲಿಪಿಗಳು ಇಲ್ಲಿ ಕಂಡುಬರುತ್ತವೆ.

ಅರ್ಲಿ ಕ್ರಿಶ್ಚಿಯನ್ ಕಲೆಯಲ್ಲಿ ಮೋಸಾಯಿಕ್ ಕಲೆಯೂ ವಿಪುಲವಾಗಿ ಬೆಳೆದುಬಂದಿದೆ. (ಬಣ್ಣಬಣ್ಣದ ಚೂರುಗಳು ಹಾಗೂ ಗಾಜಿನ ತುಂಡುಗಳ ಜೋಡಣೆಯಿಂದ ವಿನ್ಯಾಸಗೊಳಿಸಿದ ಕಲಾಕೃತಿಗಳಿಗೆ ಮೋಸಾಯಿಕ್ಸ್ ಕಲೆ ಎನ್ನಲಾಗುತ್ತದೆ.) ಈ ಕಾಲದ ಚಿತ್ರ, ಶಿಲ್ಪಗಳಲ್ಲಿ ಸಾಮಾನ್ಯವಾಗಿ ಕ್ರಿಸ್ತನ ಜೀವನದ ಪವಾಡ ಕಥೆಗಳು, ವಿವಿಧ ಸನ್ನಿವೇಶಗಳು, ಮುಖ್ಯವಾಗಿ ಕಂಡುಬರುತ್ತವೆ. ಕ್ರಿಸ್ತನ ಮಾನವೀಯತೆಯನ್ನು ಸಾರುವ ಭಾವನಾ ಪ್ರಧಾನ ಶಿಲ್ಪಗಳು ಹೇರಳವಾಗಿವೆ. ಪಾತ್ರೆಗಳ ಮೇಲೆಯೂ ಇವರು ಕಲಾತ್ಮಕವಾಗಿ ಚಿತ್ರ ರೇಖಾ ವಿನ್ಯಾಸಗಳನ್ನು ಚಿತ್ರಿಸಿದ್ದಾರೆ. ಮಾನವ ಗಾತ್ರದ ಪ್ರಮಾಣಬದ್ಧ ಹಾಗೂ ಭಾವಬದ್ಧವಾದ ಕಲಾಕೃತಿಗಳಿಗೆ ಅರ್ಲಿ ಕ್ರಿಶ್ಚಿಯನ್ ಕಲೆ ಪ್ರಸಿದ್ಧಿಯನ್ನು ಪಡೆದಿದೆ.

**ಎಸ್.ಸಿ.ಪಾ.**

## ಕುಡ್ಯ

ಕುಡ್ಯವೆಂದರೆ ಗೋಡೆ ಅಥವ ಭಿತ್ತಿ. ಗರ್ಭ ವಿನ್ಯಾಸದ ಗೋಡೆಗಳನ್ನು ಈಶಾನ್ಯ ದಿಕ್ಕಿನಿಂದ ಪ್ರಾರಂಭಿಸಬೇಕೆಂದು ಹೇಳಿದೆ. ಗರ್ಭಾಲಯಗಳ ಮೇಲಿನ ವಿಮಾನ ರಚನೆ ಕೂಡ ಈಶಾನ್ಯ ದಿಕ್ಕಿನಿಂದ ಪ್ರದಕ್ಷಣೆ ಕ್ರಮದಲ್ಲಿ ಸಾಗಬೇಕು. ಸೇತುವೆಗಳು ಮತ್ತು ಕಂದಕಗಳನ್ನು ಕಟ್ಟುವಾಗ ಯಾವ ದಿಕ್ಕಿನಿಂದಲಾದರೂ ಆರಂಭಿಸಬಹುದು. ನಿರ್ಮಾಣಭೇದ ಅವಲಂಬಿಸಿ ಗೋಡೆಗಳನ್ನು ಕೆಲವು ತರಗತಿಗಳಾಗಿ ವಿಭಜಿಸುತ್ತಾರೆ.

೧. ಸ್ತಂಭಗಳಿಲ್ಲದೆ ಪೂರ್ಣವಾಗಿ ಎತ್ತರದವರೆಗೆ ಒಂದೇ ವಿಧದಲ್ಲಿ ಕಟ್ಟಿದ ಗೋಡೆಗಳನ್ನು 'ಜನ್ಮಾಂತ'ಗಳೆಂದು ಕರೆಯುತ್ತಾರೆ.

೨. ಸ್ತಂಭಗಳನ್ನಿಟ್ಟು ಕಟ್ಟಿದ ಎತ್ತರವಾದ ಗೋಡೆಗಳನ್ನು 'ವಿಪ್ರಾಂತ'ಗಳೆನ್ನುತ್ತಾರೆ.

೩. ಸ್ತಂಭಗಳನ್ನು ನಿಲ್ಲಿಸಿ ಕಲ್ಲನ್ನು ಹಾಸಿದ ತರುವಾಯ ಪೂರ್ಣವಾಗಿ ಕಟ್ಟಿದ ಗೋಡೆಗಳನ್ನು 'ಕುಮುದಾಂತ'ಗಳೆಂದು ಕರೆಯುತ್ತಾರೆ.

**ದೇಕೊರೆ**

## ಕ್ಯೂಬಿಸಂ

ಚಿತ್ರಕಲೆಯಲ್ಲಿ ಹುಟ್ಟಿದ ಒಂದು ಹೊಸ ಪಂಥವಾಗಿದ್ದು, ೧೯೦೫ರ ವೇಳೆಯಲ್ಲಿ ಪ್ಯಾರಿಸ್ಸಿನಲ್ಲಿ ಪ್ರಾರಂಭವಾಯಿತು. ನಿಸರ್ಗದಲ್ಲಿ ಇರುವ ಯಾವ ವಸ್ತುವೇ ಆಗಲಿ ಅದರ ಮೂಲ ಆಕಾರ ಜ್ಯಾಮಿತಿಯ ರೀತಿಯದು. ಅದರಂತೆ ವಸ್ತು ನಿರೂಪಣೆ ಕೇವಲ, ಬಾಹ್ಯ ಆಕಾರದ ಪ್ರತಿಬಿಂಬವಾಗುವುದಿಲ್ಲ. ವಸ್ತುವನ್ನು ಚದರಗಳಾಗಿ ವಿಭಜಿಸಿ ರೂಪಿತವಾಗಿರುವುದು. ಜೊತೆಗೆ ವಸ್ತುವಿನ ವಿವಿಧ ಭಾಗ ಕಾಣುವ ಕಾಣದ ಅಂಶಗಳನ್ನು ಈ ಘನಾಕೃತಿಗಳ ರೀತಿಯಲ್ಲಿ ರೂಪಿಸಲಾಗುವುದು. ಇದನ್ನು ಘನಾಕೃತಿ ಶೈಲಿಯ ಕೃತಿಗಳೆನ್ನುತ್ತಾರೆ. ಆಗಷ್ಟೇ ಕ್ಯಾಮರ ಬಂದಿದ್ದು ಚಿತ್ರಕಲೆ ತನ್ನತನವನ್ನು ಉಳಿಸಿಕೊಳ್ಳಲು ಕಷ್ಟಪಡುತ್ತಿತ್ತು. ಈ ವೇಳೆಗೆ ಸೆಜಾನ್‌ನ ಚಿತ್ರಗಳಲ್ಲಿ ಸರಳ, ಸಮಾನಾಂತರ, ಲಂಬ, ಕೋಣ ರೇಖೆಗಳೇ ಪ್ರಧಾನವಾಗಿ ಕಂಡುಬರುತ್ತಿದ್ದವು. ಹೊಸದನ್ನು ಹುಡುಕುತ್ತಿದ್ದ ಕಲಾವಿದರಿಗೆ ಈ ಕ್ಯೂಬಿಸಂ ಪದ್ಧತಿ ಆಕರ್ಷಿಸಿತು.

೧೯೦೮ರಲ್ಲಿ ಪಿಕಾಸೋಗೆ ಅಪೋಲೋನೇರ್ ಬ್ರಾಕ್‌ನನ್ನು ಪರಿಚಯ ಮಾಡಿಸುವ ವೇಳೆಗೆ, ಬ್ರಾಕ್ ಪ್ಯಾರಿಸಿನಲ್ಲಿ ಏಕವ್ಯಕ್ತಿ ಪ್ರದರ್ಶನ ಮಾಡಿದ್ದ. ಇವರಿಬ್ಬರೂ ಕೂಡಿ ರಚಿಸುತ್ತಿದ್ದ ಕಾಲದಲ್ಲಿ ಪ್ಯಾರಿಸಿನಲ್ಲೇ ಹದಿನೈದಕ್ಕೂ ಹೆಚ್ಚು ಕಲಾವಿದರು ಈ ಶೈಲಿಯಲ್ಲಿ ರಚಿಸತೊಡಗಿದ್ದರು. ೧೯೦೮ರಲ್ಲಿ ಸೆಜಾನ್ ಆಫ್ರಿಕಾದ ಬೊಂಬೆಯೊಂದನ್ನು ತಂದ. ಅದು ಕಲಾವಿದರ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಈ ಶತಮಾನದ ಮಧ್ಯಭಾಗದಲ್ಲಿಯೂ ಪಿಕಾಸೋ ಕ್ಯೂಬಿಸಂ ಶೈಲಿಯ ಚಿತ್ರ ರಚಿಸುತ್ತಿದ್ದ. ಹ್ವಾನ್‌ಗ್ರೀಸ್ ಮತ್ತು ಫರ್ನಾಂಡ್ ಲಾಷಾ ಈ ಶೈಲಿಗೆ ಸಾಕಷ್ಟು ಕಾಣಿಕೆ ನೀಡಿದರು. ರಾಬರ್ಟ್ ಡಿಲಾನಿ ಫಾಕ್‌ವಿಯೇ ಗ್ಲೀಚ್



ಪಿಕಾಸೋ

ಫಾನ್‌ಮೇಸಿಂಗ್, ಆಂಡ್ರೇ ಡೇರಿಯನ್, ಮಾರ್ಷಲ್, ಡ್ಯೂಷಾ, ಪಿಯಟ್ ಮಾಂಡ್ರಿಯನ್ ಮುಂತಾದವರು, ಯುದ್ಧಕ್ಕೆ ಮೊದಲೇ ಈ ಶೈಲಿಯಲ್ಲಿ ರಚಿಸತೊಡಗಿದ್ದರು. ಈ ಅವಧಿಯಲ್ಲಿ ಯುರೋಪಿನ ಪ್ರತಿಷ್ಠಿತ ಕಲಾವಿದರೆಲ್ಲರೂ ಕ್ಯೂಬಿಸಂ ಶೈಲಿಯಲ್ಲಿ ಕೆಲವಾದರೂ ಚಿತ್ರಕಲೆಯನ್ನು ರಚಿಸಿದ್ದಾರೆ.

ಕ್ಯೂಬಿಸಂ ಶೈಲಿಯ ಕೃತಿಗಳಲ್ಲಿ ಒಮ್ಮೆಗೆ ಬಣ್ಣದಲ್ಲಿಯೂ ಹಿಂಜರಿಕೆ ಕಂಡು ಬಂದಿತು. ಕುಂದು ಹಾಗೂ ವಿರಳವಾಗಿ ಮಣ್ಣು ಹಸಿರು ಬಣ್ಣಗಳನ್ನು ಬಳಸಿದರು. ಕಪ್ಪು ಬಿಳುಪು ಛಾಯಾಚಿತ್ರದ ಪ್ರಭಾವ ಇಲ್ಲಿ ಗೋಚರಿಸುತ್ತದೆ. ಬಿಳಿಯೊಂದಿಗೆ ಕಪ್ಪು ಬಣ್ಣವನ್ನು ವಿವಿಧ ಸ್ತರಗಳಲ್ಲಿ ಬೆರೆಸಿ ರಚಿಸಿದರು. ವಿಭಜನಾತ್ಮಕ ಕ್ಯೂಬಿಸಂನಲ್ಲಿ ಆಕೃತಿಗಳು, ವಸ್ತುಗಳು, ಅವುಗಳ ಹಿನ್ನೆಲೆ ಮುಂತಾದವು ಜ್ಯಾಮಿತಿಯ ರೂಪವನ್ನು ತಳೆದು ಅರೆಯುಬ್ಬು ಚಿತ್ರಗಳಂತೆ ಎದ್ದು ಕಾಣುತ್ತದೆ. ೧೯೧೩ರ ವೇಳೆಗೆ ಸಿಂಥಟಿಕ್ ಕ್ಯೂಬಿಸಂ ಕಾಣಿಸಿಕೊಂಡಿತು. ಬ್ರಾಕ್ ಇದರ ಆದ್ಯ ಪ್ರವರ್ತಕನಾದರೂ ಪಿಕಾಸೋವಿಗೆ ಅದು ಪ್ರಿಯವಾಯಿತು. ೧೯೪೨ರ ವೇಳೆಗೆ ಪಿಕಾಸೋ ದೊಡ್ಡ ದೊಡ್ಡ 'ಸ್ಟಿಲ್ ಲೈಫ್' ಚಿತ್ರಗಳನ್ನು ರಚಿಸಿದ. ಗಿಟಾರ್, ಬಾಟಲಿ, ಸಂಗೀತಸ್ವರ, ಸಂಕೇತದ ಹಾಳೆಗಳು ಟೇಬಲ್ ಮೇಲೆ ಎಲ್ಲವನ್ನೂ ಒಂದೇ ರೇಖೆಯಲ್ಲಿ ಶಿಸ್ತಿನಿಂದ ಇರಿಸಿದಂತೆ ಬಣ್ಣ ಬಣ್ಣವಾಗಿ ರಚಿಸಿದ. ೧೯೨೨ರಲ್ಲಿ ಕ್ಯೂಬಿಸಂ ಚಿತ್ರಗಳಲ್ಲಿಯ ಆಕೃತಿಯ ಅಂಚು ತೀರಾ ಚೂಪಾಯಿತೆಂದು ಎಣಿಸಿ ಅವುಗಳನ್ನು ಚಂದ್ರಾಕೃತಿಯಂತೆ ಮುಕ್ಕು ಮಾಡತೊಡದಗಿದರು. ೨೦ನೇ ಶತಮಾನದ ಮಧ್ಯದ ವೇಳೆಗೆ ಇವುಗಳಿಗೆ ಕರ್ವಿಲಿನಿಯರ್ ಕ್ಯೂಬಿಸಂ ಎಂದರು.

ಇದಲ್ಲದೆ ರೊಕೋಕೋ ಹಾಗೂ ಅಭಿವ್ಯಕ್ತಿವಾದದ ಶೈಲಿಯವರು ತಮ್ಮ ತಮ್ಮ ಶೈಲಿಯಲ್ಲಿ ಕ್ಯೂಬಿಸಂ ಆಕೃತಿಗಳನ್ನು ರಚಿಸಿ ಅದೇ ಹೆಸರುಗಳನ್ನು ಇರಿಸಿಕೊಂಡರು. ಅಮೂರ್ತವನ್ನು ಪ್ರತಿರೋಧಿಸಿ ಪ್ಯಾರಿಸಿನ ಗೋಲ್ಡನ್ ಸೆಕ್ಷನ್ ಹಾಗೂ ಅಮೆರಿಕಾದ ಕಲಾವಿದರು, ರೇಖಾಗಣಿತ ಮತ್ತು ಶುದ್ಧವಾದ ಆಕೃತಿಗಳನ್ನು ಕ್ಯೂಬಿಸಂ ಶೈಲಿಯಲ್ಲಿ ರಚಿಸಿ ತಾವು ಭಿನ್ನರೆಂದು ಹೇಳಿಕೊಂಡರು. ಬೆಡಗಿನ ಮಾಯಾಲೋಕದ ಕಲಾಕೃತಿಗಳು ಕ್ಯೂಬಿಸಂ ಶೈಲಿಯಲ್ಲಿಯೂ ಕಾಣಿಸಿಕೊಂಡು ಆರ್ಫಿಕ್ ಕ್ಯೂಬಿಸಂ ಎಂದೂ ಕರೆಸಿಕೊಂಡವು. ಕೊಲಾಜ್ ಶೈಲಿ ಹುಟ್ಟಿದ್ದೇ ಕ್ಯೂಬಿಸಂ ಪಂಥದವರಿಂದ. ಮೊದಲಿಗೆ ಸಿಂಥಟಿಕ್ ಕ್ಯೂಬಿಸಂ ಎಂದೆ ಕರೆದರು. ನಂತರ ಒಂದೆಡೆ ವ್ಯವಸ್ಥಿತವಾಗಿ ಸಂಗ್ರಹಿಸಿ ಅಂಟಿಸು(ಮಾಂಟೇಜ್)ಎಂಬ ಅರ್ಥ ಬಳಕೆಗೆ ಬಂದಿತು.

೧೯೧೧ರಲ್ಲಿ ಬೊಚ್ಚಮೋನಿ ಕ್ಯೂಬಿಸಂ ಶೈಲಿಯ ಶಿಲ್ಪಗಳನ್ನು ರಚಿಸಿದ್ದು, ಶಿಲ್ಪಗಳಿಗೆ ನಿಶ್ಚಿತ ಸ್ವರೂಪ ತಂದು ಕೊಡಲು ಪ್ರಯತ್ನಿಸಿದಟಾಟ್ಲಿನ್‌ನೊಂದಿಗೆ ಕಾಸಿಮಿರ್ ಮಾಲೆವಿಚ್ ಉತ್ಸಾಹದಿಂದ ಪಾಲುಗೊಂಡು ರೇಖಾಗಣಿತದ ತಳಹದಿಯ ಮೇಲೆ ಶಿಲ್ಪಗಳನ್ನು ನಿರ್ಮಿಸತೊಡಗಿದ. ಭಾರತದಲ್ಲಿ ಕ್ಯೂಬಿಸಂ ಪ್ರಭಾವ ಅಷ್ಟಾಗಿ ಬೀರಿಲ್ಲವಾದರೂ, ಗಗೇಂದ್ರನಾಥ ಟಾಗೂರರ ಕೃತಿಗಳಲ್ಲಿ ಮಾತ್ರ ಕಾಣಬಹುದಾಗಿದೆ.

**ಮರಿ**

## ಕೊಡಗು

ಮಡಿಕೇರಿಯ ಕಕ್ಕಬ್ಬೆಯ ಬಳಿ ನಾಲ್ಕು ನಾಡು ಅರಮನೆಯಿದೆ. ಇದನ್ನು ವೀರರಾಜೇಂದ್ರನು ೧೮೪೧ರಲ್ಲಿ ಕಟ್ಟಿಸಿದನು. ವಿಶಾಲವಾದ ಹಜಾರದ ಮೂರು ಬದಿಯಲ್ಲಿಯ ಗೋಡೆಗಳಲ್ಲಿ ಹಾಗೂ ಮಹಡಿಯ ಕೋಣೆಗಳಲ್ಲಿ ಚಿತ್ರಗಳು ಇದ್ದುದಾಗಿ ದಾಖಲೆಗಳು ಇವೆಯಾದರೂ ಇಂದು ಹಜಾರದ ಒಂದು ಬದಿಯ ಗೋಡೆಯಲ್ಲಿ ಅಲ್ಪಪ್ರಮಾಣದಲ್ಲಿ ಭಿತ್ತಿಚಿತ್ರ ಉಳಿದಿದೆ. ರಾಜನೊಬ್ಬ ಮೆರವಣಿಗೆಯಲ್ಲಿರುವುದು ಪರಿವಾರದವರು ಛತ್ರಿ, ಚಾಮರ ಇತ್ಯಾದಿ ಹಿಡಿದು ಹೊರಟಿರುವುದು ಇತ್ಯಾದಿಗಳನ್ನು ಗುರುತಿಸಬಹುದು.

ಕೊಡಗಿನ ಕೇಂದ್ರ ಸ್ಥಾನ ಮಡಿಕೇರಿಯ ಕೋಟೆಯೊಳಗೆ ಇರುವ ಅರಮನೆ ಇಂದು ಜಿಲ್ಲಾ ಹಾಗೂ ಇನ್ನಿತರ ಕಛೇರಿಗಳನ್ನು ಹೊಂದಿದೆ. ಅದರ ಕೆಲವು ಕೋಣೆಗಳಲ್ಲಿ ಹಾಗೂ ಸಭಾಭವನದ ಭಿತ್ತಿಯಲ್ಲಿ ಹಲವಾರು ರಾಜಲಾಂಛನಗಳು ಚಿತ್ರಿತವಾಗಿವೆ. ಇವು ಸುರಕ್ಷಿತವಾಗಿದ್ದು ಅವುಗಳ ಸಂಕೀರ್ಣ ರಚನೆಯೇ ಒಂದು ಸಂಯೋಜಿತ ಚಿತ್ರದಂತೆ ಕಾಣುತ್ತವೆ. ಬಳಿಯಲ್ಲಿರುವ ಹಳೆಯ ಚರ್ಚ್ ಇಂದು ವಸ್ತು ಪ್ರದರ್ಶನಾಲಯವಾಗಿದ್ದು ಅದರಲ್ಲಿ ದೊಡ್ಡ ಆಕಾರದ ಪಾರದರ್ಶಕ ಗಾಜಿನ ಚಿತ್ರವಿದೆ. ಕಲೆಗೆ ಕಲಾವಿದರಿಗೆ ಕೊಡಗಿನ ಅರಸರು ಪ್ರೋತ್ಸಾಹ ನೀಡಿದ್ದು ಅವರ ಇತಿಹಾಸದಿಂದ ತಿಳಿದು ಬರುತ್ತದೆ. ಇಲ್ಲಿಯ ಭಿತ್ತಿಚಿತ್ರಗಳು ಕರ್ನಾಟಕದ ಉಳಿದ ಶೈಲಿಗಿಂತ ಸ್ವಲ್ಪ ಭಿನ್ನವಾಗಿರುವುದು ಇವುಗಳನ್ನು ವಿದೇಶಿ ಕಲಾವಿದರು ಬರೆದಿರಬಹುದಾದ ಸಾಧ್ಯತೆಯಿದೆ.

**ಅಲಸ**

## ಕೊಲಂಬಿಯನ್ ಕಲೆ, ಪೂರ್ವ (Pre-columbian Art)

ಯುರೋಪು ಅಮೆರಿಕ ಉಪಖಂಡವನ್ನು ಕಂಡುಕೊಳ್ಳುವ ಮುನ್ನಿನ ದಕ್ಷಿಣ ಮತ್ತು ಕೇಂದ್ರ ಅಮೆರಿಕಗಳ ಇತಿಹಾಸಕ್ಕೆ ಪ್ರಿ-ಕೊಲಂಬಿಯನ್ ಎನ್ನಲಾಗಿದೆ. ಆ ಸಂದರ್ಭದಲ್ಲಿ ಶಿಲ್ಪ, ಚಿತ್ರ, ವಾಸ್ತುಶಿಲ್ಪ, ಕುಂಭಕಲೆ, ಲೋಹದ ಶಿಲ್ಪ ಸೃಷ್ಟಿ, ನೆಯ್ಗೆ ಇತ್ಯಾದಿಗಳು ಸೃಷ್ಟಿಯಾದವು. ೧೬ನೆಯ ಶತಮಾನದ ಆರಂಭದ ಸ್ಪೇನ್ ಆಕ್ರಮಣ ಇವರನ್ನು ಸಂಪೂರ್ಣವಾಗಿ ನಾಶಗೊಳಿಸಿತು. ೧೯ನೆಯ ಶತಮಾನದಲ್ಲಷ್ಟೇ ಈ ಕಲೆಯ ಪ್ರಾಚೀನತೆಯ ಶೋಧನಕಾರ್ಯ ಆರಂಭಗೊಂಡಿತು. ಈ ಕಲೆಯು ಹಲವು ಘಟ್ಟಗಳಲ್ಲಿ ಬೆಳೆದುಬಂದಿದೆ. ದಕ್ಷಿಣ ಅಮೆರಿಕದಲ್ಲಿ ಕ್ರಿಸ್ತಪೂರ್ವ ೧೨೦೦ ರಿಂದ ೪೦೦ರ ನಡುವೆ Cupisnque ಮತ್ತು Chavin ಸಂಸ್ಕೃತಿಗಳು ಸೇರಾಮಿಕ್, ಲೋಹ, ಎಲುಬು ಮತ್ತು ನೆಯ್ಗೆಗಳ ಕೌಶಲಯುತ ವಸ್ತುಗಳನ್ನು ಕೊಡುಗೆಯಾಗಿ ನೀಡಿವೆ. ಇವುಗಳ ವಿನ್ಯಾಸಗಳು ದಕ್ಷಿಣ ಅಮೆರಿಕದ ಮುಂದಿನ ಸಂಸ್ಕೃತಿಗಳಿಗೆ ವಿಶಿಷ್ಟ ಉದಾಹರಣೆಗಳಾಗಿ ಉಳಿದವು. ನಂತರದ Paracas ಸಂಸ್ಕೃತಿ (ಕ್ರಿಸ್ತಪೂರ್ವ ೪೦೦ರಿಂದ ಕ್ರಿ.ಶ. ೧೦೦) ಆಕರ್ಷಕ ಕುಂಭಕಲೆಗೆ ಹೆಸರಾಗಿದೆ. ನಂತರದ Nazca- ಕಲೆ (ಕ್ರಿ.ಶ. ೨೦೦ರಿಂದ ೭೦೦) ಸುಂದರ ರೂಪ, ವಿನ್ಯಾಸಗಳ ಕುಂಭ ಕಲೆಯ ಜೊತೆಗೆ ಮರುಭೂಮಿಯ ಮೈದಾನವನ್ನು ಕೆರೆದು ಬೃಹದಾಕಾರದ ಜ್ಯಾಮಿತಿ ಮತ್ತು ಮಾನವರೂಪಗಳನ್ನು ಸೃಷ್ಟಿಸಿತು. ಪ್ರಿ-ಕೊಲಂಬಿಯನ್ ಕಲೆಯ ಅಂತಿಮ ಮೂರು ಶತಮಾನಗಳು Inca (ಕ್ರಿ.ಶ. ೧೨೦೦ರಿಂದ ೧೫೩೦) ನಾಗರಿಕತೆಯಿಂದ ತುಂಬಿಕೊಂಡಿದೆ. ಅವರ ಮುಖ್ಯ ಸಾಧನೆಗಳನ್ನು ರಾಜಕೀಯ ರಂಗದಲ್ಲಿ ಗುರುತಿಸಬಹುದಾದರೂ ವಾಸ್ತುಶಿಲ್ಪದಲ್ಲೂ ಗಣನೀಯ ಸಾಧನೆಗಳನ್ನು ಪ್ರದರ್ಶಿಸಿದ್ದಾರೆ. ಅಕ್ಕಸಾಲಿಗರು ವೈವಿಧ್ಯಮಯ ಆಭರಣಗಳನ್ನು ಚಿನ್ನ ಮತ್ತು ಬೆಳ್ಳಿಗಳಲ್ಲಿ ರೂಪಿಸಿದ್ದಾರೆ. ಆ ಸಂದರ್ಭದ ಕುಶಲಿಗಳು ಬೃಹತ್ ಹೂಜಿಗಳನ್ನು ಅತ್ಯುತ್ತಮವಾಗಿ ಸೃಷ್ಟಿಸುತ್ತಿದ್ದರು.



ಪ್ರಿ-ಕೊಲಂಬಿಯನ್ ಕಾಲದಲ್ಲಿ ಮಧ್ಯ ಅಮೆರಿಕದ (ಕ್ರಿ.ಪೂ. ೧೨೦೦ರಿಂದ ೪೦೦) ನಾಗರಿಕತೆಯ ಅವಧಿಯಲ್ಲಿ ಮೂರು ಮೀಟರ್ ಎತ್ತರದ ಕಂದುಬಣ್ಣದ ಅಗ್ನಿಶಿಲೆಯ ತಲೆಗಳ ಶಿಲ್ಪಗಳನ್ನು ಒಳಗೊಂಡಂತೆ ಉತ್ತಮ ಶಿಲ್ಪಗಳ ಸೃಷ್ಟಿಯಾಗಿದೆ. ಅವರ ನಂತರದ ಹಲವು ಜನಾಂಗಗಳು (ಕ್ರಿ.ಪೂ. ೩೦೦-ಕ್ರಿ.ಶ. ೩೦೦) ಮೆಕ್ಸಿಕೋದಾದ್ಯಂತ ಬಲಿಪೀಠದ ಮೇಲೆ ಉಬ್ಬುಶಿಲ್ಪಗಳನ್ನು ಸೃಷ್ಟಿಸಿದ್ದಾರೆ. Izapan ಶೈಲಿಯ ಕಲೆ ಒಲಮೆಕ್ ಮತ್ತು ಮಾಯಾ ಕಲೆಗಳ ಮಧ್ಯೆ ಸುಳಿಯುವ ಹಂತವನ್ನು ಪ್ರದರ್ಶಿಸುತ್ತದೆ. ಮಾಯಾಕಲೆ (ಕ್ರಿ.ಶ. ೩೦೦-೧೦೦೦) ಒಲಿಮಿಕ್ ಮತ್ತು ಇಝಾಪಾನ್ ಕಲಾ ಶೈಲಿಗಳಿಂದ ಪ್ರಭಾವಿಸಲ್ಪಟ್ಟ ಶಿಲ್ಪ ಚಿತ್ರಗಳು ಸೃಷ್ಟಿಯಾದವು. ಮಾಯಾ ನಾಗರಿಕತೆಯ ಎತ್ತರದ ಪಿರಮಿಡ್ಡುಗಳ ಮೇಲೆ ಶಿಲಾದೇಗುಲಗಳನ್ನು ನಿರ್ಮಿಸಿದ್ದು ವಾಸ್ತುಶಿಲ್ಪ ಸಾಮರ್ಥ್ಯ ಗಮನಾರ್ಹ. ಅವುಗಳಲ್ಲಿ ಮುಖ್ಯವಾದದ್ದು ಮಧ್ಯ ಮೆಕ್ಸಿಕೋದ ಟಿಯೊಟಿಹು ಆಕನ್ ಪಿರಮಿಡ್ ದೇವಾಲಯ. ಅವರ ಸಮಕಾಲೀನರಾದ Toltecs (ಕ್ರಿ.ಶ. ೯೦೦-೧೨೦೦) ಬಹಳ ಗಡಸು ಮನಸ್ಥಿತಿಯವರು. ವಾಸ್ತುಶಿಲ್ಪ ಸದೃಶ ಶಿಲ್ಪಗಳಿಗೆ ಕಾರಣರಾದರು. Mixtecs (ಕ್ರಿ.ಶ. ೭೦೦ರಿಂದ ೧೪೫೦) ಜನರು ಶ್ರೇಷ್ಠ ಆಭರಣಗಳು ಮತ್ತು ಶಿಲ್ಪಗಳನ್ನು ಕ್ರಮವಾಗಿ ಲೋಹ ಮತ್ತು ಶಿಲೆಗಳಲ್ಲಿ ಸೃಷ್ಟಿದರು. ಅತ್ಯುತ್ತಮ ಕುಶಲತೆಯಿಂದ ಮುಂದಿನ Aztecs (ಕ್ರಿ.ಶ. ೧೩೦೦ರಿಂದ ೧೫೫೦) ಜನರಿಗೆ ಉತ್ತಮ ಮಾದರಿಯಾದರು. ಒಟ್ಟಾರೆ Inca ಮತ್ತು Aztecs ನಾಗರಿಕತೆಗಳಿಗಿಂತಲೂ ಮಾಯಾ ನಾಗರಿಕತೆಯ ಕಲೆ ತನ್ನ ವೈವಿಧ್ಯಮಯ ಕೊಡುಗೆಗಳಿಂದ ಆಕರ್ಷಕವಾಗಿದೆ. ಪಾಂಪೆಯ ಭಿತ್ತಿಚಿತ್ರಗಳು ತಮ್ಮ ಅತ್ಯುತ್ತಮ ನಿರ್ವಹಣಾ ತಾಂತ್ರಿಕ ಪಾರಮ್ಯದಿಂದ ಇಂದು ಕಲಾವಿದರ, ಕಲಾ ಇತಿಹಾಸಕಾರರ, ವಿಮರ್ಶಕರ ಕುತೂಹಲಕ್ಕೆ ಕಾರಣವಾಗಿದೆ. ವಸೋವಿಯಸ್ ಭೂ ಕುಸಿತದಲ್ಲಿ ಪಾಂಪೆ ಮತ್ತು ಹೆರ್‌ಕುಲೇನಿಯಮ್ ಹೂತು ಹೋಗಿ ಹೇಳ ಹೆಸರಿಲ್ಲದಂತಾಗಿ ನಂತರದ ಭೂ ಅಗೆತಗಳಲ್ಲಿ ಅವು ಕಾಣಸಿಕೊಂಡವು.

ಕೆ.ವಿ.ಸು.

## ಕೊಲಾಜ್ (Collage)

"ಕೊಲಾಜ್" ತಂತ್ರವು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಬಳಕೆಗೆ ಬಂದಿತು. ಕೋಲಾಜ ಎಂಬುದು ಫ್ರೆಂಚ್‌ಪದ. "ಅಂಟಿಸು" "ಜೋಡಿಸು" ಎಂಬುದು ಕೋಲಾಜ ಪದದ ಅರ್ಥ.

ಬಣ್ಣ ಬಣ್ಣದ ಬಟ್ಟೆಯ ತುಂಡುಗಳು, ವೃತ್ತ ಪತ್ರಿಕೆಯ ತುಂಡುಗಳು, ಸಿನಿಮಾ ಟಿಕೇಟುಗಳು, ತಗಡಿನ ತುಂಡುಗಳು, ಮರದ ತೊಗಟೆಗಳು ಮುಂತಾಗಿ ಯಾವುದೇ ಹಾಳಾದ (Waste) ವಸ್ತುಗಳನ್ನು ಕಾಗದದ ಮೇಲೆ ಗೋಂದಿನಿಂದ ಅಂಟಿಸಿ ಸ್ವತಂತ್ರವಾದ ಕಲಾಕೃತಿಗಳನ್ನು ರಚಿಸುವ ಜಾಣ್ಮೆಯೇ ಕೋಲಾಜ್ ಎಂದು ಗುರುತಿಸಲ್ಪಟ್ಟಿದೆ. ಮೋನೆ(Monet), ಸಿಝಾನೆ, ಮಾತಿಸೆ ಮುಂತಾದ ಕಲಾವಿದರು ಇಂಥ ಅನೇಕ ಕಲಾಕೃತಿಗಳನ್ನು ರಚಿಸಿದ್ದು ಅವಶ್ಯವಿದ್ದಲ್ಲಿ ಬಣ್ಣವನ್ನೂ ರೇಖೆಗಳನ್ನು ಬಳಸಿರುವದು ಕಂಡು ಬರುತ್ತದೆ. ಕ್ಯೂಬಿಸಂ ಶೈಲಿಯಲ್ಲಿ ಒಂದು ನಿಶ್ಚಿತ ರೂಪ ಪಡೆಯಿತು. ವಿಶ್ವವಿಖ್ಯಾತ ಪಿಕಾಸೋನ "ಗೆರ್ನಿಕಾ" ಮತ್ತು "ಮೂವರು ಸಂಗೀತಕಾರರು" ಎಂಬ ಕಲಾಕೃತಿಗಳಲ್ಲಿ ಕೋಲಾಜ್ ತಂತ್ರವನ್ನು ಕಾಣಬಹುದು. ಜಾರ್ಜ್


ಪಾಲ್ ಈಲಾನ್‌ಸ್ಕಿ

ಬಾರ್ಕ್ ಎಂಬ ಕಲಾವಿದನು ಕಸದಲ್ಲಿ ಎಸೆದ ಗಾಜಿನ ತುಣುಕುಗಳು, ಭಿತ್ತಿಚಿತ್ರ(Posters)ಗಳ ತುಣುಕುಗಳು, ಕಂಬಳಿ, ಲೋಹಗಳ ತುಂಡು ಮುಂತಾದವುಗಳನ್ನು ತನಗೆ ಇಷ್ಟ ಬಂದ ರೀತಿಯಲ್ಲಿ ಕತ್ತರಿಸಿ ಕೊಂಡು, ಕಾಗದಗಳ ಮೇಲೆ ಜೋಡಿಸಿ ಅಂಟಿಸಿ, ಅಗತ್ಯ ಕಂಡಲ್ಲಿ ಬಣ್ಣವನ್ನು ಲೇಪಿಸಿ ಸುಂದರವಾದ ಕೋಲಾಜ್ ಕೃತಿಗಳನ್ನು ರಚಿಸಿರುವದನ್ನು ಕಾಣಬಹುದು.

ಕರ್ನಾಟಕದಲ್ಲಿ ವಿ. ಬಾಲು ಅವರು ಕೋಲಾಜ್ ಶೈಲಿಯಲ್ಲಿ ಅನೇಕ ಕೃತಿಗಳನ್ನು ರಚಿಸಿ ಖ್ಯಾತರಾಗಿದ್ದಾರೆ. ತಮ್ಮ ಕೆಲವು ಕೃತಿಗಳಲ್ಲಿ ಪ್ರತಿಯೊಂದಕ್ಕೂ ೧೫ರಿಂದ ೨೦ ಸಾವಿರ ಕಾಗದದ ತುಂಡುಗಳನ್ನು ಅಂಟಿಸಿ ರಚಿಸಿರುವುದುಂಟು. ಈಚೆಗೆ ಕಲಾವಿದರು ಮರದ ಕೃತಿಗಳು ಲೋಹ ಇತ್ಯಾದಿಗಳನ್ನು ಕೋಲಾಜ್‌ನಂತೆ ರೂಪಿಸಿ 'ಶಿಲ್ಪ'ದ ಮಾದರಿಯಲ್ಲಿ ರಚಿಸುತ್ತಾರೆ.

## ಕೊಳ್ಳೆಗಾಲ

ಮೈಸೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಕೊಳ್ಳೇಗಾಲದ ಪರಿವಾರದವರ ಚಾವಡಿ ಅಥವ ರಾಮಮಂದಿರದಲ್ಲಿ ಭಿತ್ತಿಚಿತ್ರಗಳನ್ನು ಕಾಣಬಹುದು. ಕಳೆದ ಶತಮಾನದ ಮಧ್ಯ ಭಾಗದಲ್ಲಿ ಇವನ್ನು ಬರೆಯಿಸಿದಂತೆ ಕಂಡುಬರುತ್ತದೆ. ವಿಶಾಲವಾದ ಅಂಕಣದಲ್ಲಿ ಯುದ್ಧದ ಚಿತ್ರಣವಿದೆ. ಇದರಲ್ಲಿ ವಿದೇಶೀ ಪೋಷಾಕು ಧರಿಸಿದ, ಬಂದೂಕುಧಾರಿಗಳಾದ ಸಿಪಾಯಿಗಳೊಂದಿಗೆ ದೇಶೀಯ ರಾಜನೊಬ್ಬ ಯುದ್ಧ ಮಾಡುತ್ತಿರುವಂತೆ ಚಿತ್ರಿಸಿದ್ದು ಇದನ್ನು ಟಿಪ್ಪು ಮತ್ತು ಬ್ರಿಟಿಷರು ಮಧ್ಯೆ ನಡೆದ ಯುದ್ಧವೆಂದು ಹೇಳಲಾಗುತ್ತದೆ. ಆದರೆ ದೇಶೀಯ ಅರಸನ ಉಡುಗೆ ತೊಡುಗೆಗಳು ಟಿಪ್ಪುವನ್ನು ಹೋಲುವುದಿಲ್ಲ. ಇನ್ನೊಂದು ವಿಶಾಲ ಅಂಕಣದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಮೆರವಣಿಗೆಯ ಚಿತ್ರಣವಿದೆ. ಕುದುರೆ ಸವಾರರು ಪದಾತಿಗಳು ಶಿಸ್ತಿನಿಂದ ಮೆರವಣಿಗೆಯಲ್ಲಿ ಬರುತ್ತಿದ್ದಾರೆ. ವಾದ್ಯಗಾರರು, ನೃತ್ಯಗಾರರು ರಾಜ ಪ್ರಮುಖರೂ ಇದ್ದಾರೆ. ರಾಜರು ಆನೆ, ಕುದುರೆಗಳ ಮೇಲೆ ಕುಳಿತು ಮೆರವಣಿಗೆಯಲ್ಲಿ ಬರುತ್ತಿದ್ದಾರೆ.

ಉಳಿದಂತೆ ರಾಮ ರಾವಣರ ಯುದ್ಧ, ಕರ್ಣಾರ್ಜುನರ ಕಾಳಗ ಪಾರ್ವತೀ ಕಲ್ಯಾಣ, ಸಪ್ತಋಷಿಗಳು, ಅಷ್ಟದಿಕ್ಪಾಲಕರು, ದಶಾವತಾರಗಳು ಗೋಪಾಲಕೃಷ್ಣ, ಲಕ್ಷ್ಮಿ, ಕಾಳಿಂಗ ಕೃಷ್ಣ,ರಾಮ ಪಟ್ಟಾಭಿಷೇಕ ಗೋಪಿಕಾ ವಸ್ತ್ರಾಪಹರಣ, ಸಮುದ್ರ ಮಂಥನ ಕಾಲದಲ್ಲಿ ಬಂದಂತಹ ಕಾಮಧೇನು, ಕಲ್ಪವೃಕ್ಷ ಇತ್ಯಾದಿಗಳು ಇತ್ಯಾದಿಗಳನ್ನು ಚಿತ್ರಿಸಲಾಗಿದೆ. ಚಿತ್ರ ಪಟ್ಟಿಕೆಯ ಮೇಲೆ ಕೆಳಗೆ ಹಂಸ ಹಾಗೂ ಹೂ ಬಳ್ಳಿಗಳ ವಿನ್ಯಾಸ ಚಿತ್ರಿಸಿದೆ. ಇಡಿ ಚಿತ್ರ ಕೆಲಮಟ್ಟಿಗೆ ಉಳಿದುಕೊಂಡಿದೆಯಾದರೂ ಅಲ್ಲಲ್ಲಿ ಮೊಳೆ ಹೊಡೆದು ವಿರೂಪಗೊಳಿಸಿದೆ. ಕಾವಿ ಮತ್ತು ಹಳದಿ ಬಣ್ಣಗಳು ಅಧಿಕವಾಗಿದ್ದು ಚಿತ್ರ ಮಾಸಿದಂತೆ ಕಂಡು ಬರುತ್ತದೆ. ಇಡೀ ಚಿತ್ರ ಬಂಧವು ಮೈಸೂರು ಶೈಲಿಯಲ್ಲಿದ್ದರೂ ಅಷ್ಟೇನೂ ಉತ್ತಮನಲ್ಲದ ಕಲಾವಿದ ರಚಿಸಿರಬಹುದಾಗಿದ್ದು ಜನಪದ ಶೈಲಿಯಲ್ಲಿರುವ ದೇಹರಚನಾ ಶಾಸ್ತ್ರಕ್ಕೆ (ಅನಾಟಮಿ) ಹೆಚ್ಚಿನ ಪ್ರಾಮುಖ್ಯತೆ ನೀಡಿಲ್ಲ.

**ಅಲನ**

## ಕೋಟಾ

ಈಶಾನ್ಯ ರಾಜಸ್ಥಾನವು ಕೆಂಪು ಬೆಟ್ಟಗಳ ಮತ್ತು ಸರೋವರಗಳ ಬಂಜರು ಭೂಮಿಯಾಗಿದ್ದು, ಉದಯಪುರ ಕೋಟಾ ಹಾಗೂ ಬುಂದಿ ರಾಜ್ಯಗಳನ್ನು ಹೊಂದಿದೆ. ಇವುಗಳಲ್ಲಿ ಉದಯಪುರ ಅಥವಾ ಮೇವಾರ್ ಅತ್ಯಂತ ಪ್ರಾಚೀನದ್ದಾಗಿದೆ. ಕೋಟಾ ರಾಜ್ಯವು ಬುಂದಿಯ ಉಪಭಾಗವಾಗಿತ್ತು. ಕೋಟಾ ಚಿತ್ರಗಳು ಬೇಟೆಯಾಡುವ ದೃಶ್ಯಗಳನ್ನು ನಿರೂಪಿಸುವಲ್ಲಿ ತನ್ನ ಶ್ರೇಷ್ಠತೆಯನ್ನು ಹೊಂದಿದೆ. ೧೮ನೇ ಶತಮಾನದಲ್ಲಿ ಸಿಂಹಗಳು ಹಾಗೂ ಹುಲಿಗಳು ಜೊತೆಯಲ್ಲಿ ಕಾಣುತ್ತಿದ್ದವು ಎಂಬುದನ್ನು ಈ ಚಿತ್ರಗಳು ನಿರೂಪಿಸುತ್ತವೆ. ಕೋಟಾ ರಾಜ್ಯವು ತನ್ನ ಸುಂದರವಾದ ಕಾಡುಗಳಿಗೆ ಪ್ರಸಿದ್ಧವಾಗಿದ್ದು ಈಗಲೂ ಸಹ ಹುಲಿಗಳು ಸಂಚಾರ ಮಾಡುವ ಸ್ಥಳವಾಗಿದೆ.

**ಸುಮ**

## ಕೋನಾರ್ಕ್

ಒರಿಸ್ಸಾ ರಾಜ್ಯದ ಪುರಿ ಜಿಲ್ಲೆಯ ಕೇಂದ್ರದಿಂದ ಈಶಾನ್ಯಕ್ಕೆ ೨೦ ಮೈಲಿ ದೂರದಲ್ಲಿ ಸಮುದ್ರ ತೀರದಲ್ಲಿದೆ. ಇಲ್ಲಿರುವ ಸೂರ್ಯ ದೇವಾಲಯ ಒಂದು ಅದ್ಭುತ ಕಲಾಕೃತಿ. ವಿಶ್ವದ ಅನೇಕ ಕಲಾವಿಮರ್ಶಕರ ಹೊಗಳಿಕೆಗೆ ಪಾತ್ರವಾಗಿರುವ ಈ ದೇವಾಲಯವನ್ನು ಗಂಗವಂಶದ ೧ನೆಯ ನರಸಿಂಹ ಸು ೧೨೩೮-೧೨೬೪ರ ಕಾಲದಲ್ಲಿ ಕಟ್ಟಿಸಿದ. ವಿಷ್ಣು ಮಹಾರಾಣ ಎಂಬ ಶಿಲ್ಪಿ ಈ ದೇವಾಲಯದ ಸ್ವರೂಪವನ್ನು ಮನಸ್ಸಿನಲ್ಲಿ ಚಿತ್ರಿಸಿಕೊಂಡು ಕಟ್ಟಿದನೆಂದು ಒಂದು ದಂತಕಥೆಯಿದೆ. ಇದರದು ಕಳಿಂಗ ರೇಖಾ ನಗರ ಪ್ರಸಾದ ಶೈಲಿ. ೨೪ ಚಕ್ರಗಳಿಂದ ಕೂಡಿದ ಭವ್ಯ ರಥವನ್ನು ಏಳು ಮಹಾ ಬಲಶಾಲಿ ಕುದುರೆಗಳು ಎಳೆಯುತ್ತಿರುವ ಹಾಗೆ ಪೂರ್ವಾಭಿಮುಖವಾಗಿ ಈ ದೇವಾಲಯವನ್ನು ರಚಿಸಲಾಗಿದೆ. ಚುಕ್ಕೆ ಚುಕ್ಕೆಯ ವಿವಿಧ ಬಣ್ಣಗಳ ಛಾಯೆಗಳುಳ್ಳ ಬಿಳಿ ಮರಳುಕಲ್ಲು ಮತ್ತು ಕಪ್ಪು ಹಸುರಿನ ಕ್ಲೋರೈಟ್ ಶಿಷ್ಟ ಕಲ್ಲಿನಲ್ಲಿ



ದೇವಾಲಯವನ್ನು ಕಟ್ಟಲಾಗಿದೆ. ಸೇವಕರು ಮತ್ತು ಉಷಾ ಪ್ರತ್ಯುಷರೊಡನೆ ಮಂದಹಾಸದಿಂದ ಕಂಗೊಳಿಸುವ ಸಮಭಂಗದಲ್ಲಿರುವ ದಿವ್ಯ ಸೂರ್ಯನ ಮೂರ್ತಿ ಇದರಲ್ಲಿ ಪ್ರತಿಷ್ಠಿತವಾಗಿದೆ.

ಈ ದೇವಾಲಯ ಮುಖ್ಯವಾಗಿ ೧೯.೭೦ಮೀ.ಚದರ ಮತ್ತು ಸುಮಾರು ೬೧/೩ ಮೀ ಎತ್ತರದ ವಿಮಾನದಿಂದಲೂ ಆದಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿರುವ ೨೮.೨೦ ಮೀ. ಚದರ ಮತ್ತು ೩೮ ಮೀ. ಎತ್ತರದ ಜಗಮೋಹನದಿಂದಲೂ ಕೂಡಿದೆ. ಮುಂದೆ ಪ್ರತ್ಯೇಕವಾಗಿ ನಟಮಂದಿರವಿದೆ. ಇವೆರಡರ ಮಧ್ಯೆ ಅರುಣ ಸ್ತಂಭವೂ ಸುತ್ತಲೂ ೨೫೭ ಮೀ. X ೧೬.೨ .ಮೀ ಪ್ರದೇಶವನ್ನೊಳಗೊಂಡ ಪೌಳಿಗೋಡೆಯೂ ಇದೆ. ಆದರೆ ವಿಮಾನದ ಮೇಲ್ಭಾಗವೂ ನಟಮಂದಿರದ ಮೇಲ್ಛಾವಣಿಯೂ ಬಿದ್ದು ಹೋಗಿದೆ. ಈ ದೇವಸ್ಥಾನ ಪೂರ್ಣಸ್ಥಿತಿಯಲ್ಲಿದ್ದಾಗ ಹೇಗಿದ್ದಿರಬಹುದೆಂಬುದನ್ನು ಇದರ ಭಗ್ನಾವಶೇಷಗಳ ಆಧಾರದ ಮೇಲೆ ಪರ್ಸಿ ಬ್ರೌನ್ ಊಹಿಸಿಕೊಂಡು ಚಿತ್ರಿಸಿದ್ದಾರೆ.

ದೇವಸ್ಥಾನದ ಹೆಚ್ಚು ಕಡಿಮೆ ಎಲ್ಲ ಭಾಗಗಳಲ್ಲಿಯೂ ಬಗೆಬಗೆಯ ರೇಖಾ ಚಿತ್ರಗಳಿವೆ. ವಿವಿಧ ಭಾವಭಂಗಿಗಳಲ್ಲಿರುವ, ನಾನಾ ಕಾರ್ಯಮಗ್ನರಾಗಿರುವ ಜನರು ಅರಮನೆಯ, ಜನಸಾಮಾನ್ಯರ ನಿತ್ಯ ಜೀವನದ ದೃಶ್ಯಗಳು, ನಾಟ್ಯಗಾರರು, ಸಂಗೀತಗಾರರು, ನಾಗ-ನಾಗಿನಿಯರು, ದೇವತೆಯರು; ಆನೆ, ಕುದುರೆ, ಸಿಂಹ, ಜಿರಾಫೆ ಮೊದಲಾದ ಪ್ರಾಣಿಗಳು; ಬೇಟೆ, ಆನೆ ಹಿಡಿಯುವುದು, ವರ್ತಕರ ಬಿಡಾರ, ಅವರು ಅಡಿಗೆ ಮಾಡಿಕೊಳ್ಳುತ್ತಿರುವುದು ತಾಯಿ-ಮಗು ಪಲ್ಲಕ್ಕಿಯಲ್ಲಿ ಹೋಗುತ್ತಿರುವುದು, ಹಗ್ಗ ಎಳೆಯುವ ಆಟ- ಹೀಗೆ . ಅನೇಕ ದೃಶ್ಯಗಳಿವೆ. ಮಿತಾಲಂಕೃತ ಮಾನವರ ಮುಖ್ಯವಾಗಿ ಸ್ತ್ರೀಯರ, ಹಾವಭಾವಗಳು, ಅಂಗಸೌಷ್ಠವ- ಇವನ್ನೆಲ್ಲ ಎತ್ತಿ ತೋರಿಸುವ ಅತಿಸೂಕ್ಷ್ಮ ಕುಸುರಿ ಕೆತ್ತನೆಗಳಲ್ಲಿ ಕಾಣಬಹುದು.

ಜೆ.ಟಿ.ಐ.

## ಕೌದಿಯ ಕಲೆ

ಹೊಲಿಗೆಯಿಂದ ನಿರ್ಮಾಣವಾಗುವ ಹಾಸಿಗೆ. ಹೊದಿಕೆಯಂತಹ ಅಗತ್ಯ ವಸ್ತುವಿನಲ್ಲಿ ಈ ಕಲೆ ಮೂಡಿಬಂದಿದೆ. ಪ್ರಯೋಜನ ಮೂಲದ ಹಿನ್ನೆಲೆಯಲ್ಲಿ ಅವಿರ್ಭವಿಸಿದ ಇದು ಮುಂದೆ ಸೌಂದರ್ಯವನ್ನು ಮೈಗೂಡಿಸಿಕೊಂಡು ಬೆಳೆದುಬಂದಿದೆ.

ಶಬ್ದಕೊಶದಲ್ಲಿ ಕೌದಿ ಪದಕ್ಕೆ ಕಾತೆ, ಹಳೆಯ ಅರಿವೆಯ ಹೊಸ ಹೊದಿಕೆ, ತುಂಡುಬಟ್ಟೆಗಳನ್ನು ಕೂಡಿಸಿ ಹೊಲಿದ ಹಚ್ಚಡವೆಂದು ಅರ್ಥಗಳಿವೆ. ಕರ್ನಾಟಕದಲ್ಲಿ 'ಕೌದಿ' ಪದಕ್ಕೆ ಕವುಂದಿ, ಕವುದಿ, ಕವಿದಿ, ಕೌಂದಿ, ಕಂತೆ, ಎಂದು ಹೆಸರುಗಳಿವೆ. ತಮಿಳಿನಲ್ಲಿ ಕವನ್ನಿ, ಕವನ್ನಿಗ್ಗೆ, ಮಲೆಯಾಳಂನಲ್ಲಿ ಕವಿಯನ್, ಮರಾಠಿಯಲ್ಲಿ ಕಂಥಾ, ಎಂಬೆಲ್ಲಾ ಹೆಸರುಗಳಿವೆ. ಭಾರತದುದ್ದಕ್ಕೂ ಕಾಣಬರುವಂತಹ ವಸ್ತು ಕೌದಿಯಾಗಿದೆ.

ಕೌದಿಯನ್ನು ಹೆಣ್ಣುಮಕ್ಕಳಿಗೆ ತವರು ಬಣ್ಣದ ಕುರುಹಾಗಿ ಉಡುಗೊರೆಯನ್ನು ಕೊಡುವ ಸಾಂಪ್ರದಾಯವು ಇದೆ. ಕ್ರಿ.ಶ.ಸು. ೨ನೆಯ ಶತಮಾನದ ಆಯುರ್ವೇದ ಶಾಸ್ತ್ರಕೃತಿಯಾದ ಚರಕಸಂಹಿತಾದಲ್ಲಿ ಕೌದಿಯ ಪ್ರಾಚೀನ ಉಲ್ಲೇಖ ಲಭ್ಯವಾಗಿದೆ.

ಕೌದಿಯಲ್ಲಿ ಹಲವಾರು ವಿಧಗಳಿವೆ. ಮುಖ್ಯವಾಗಿ ದೊಡ್ಡವರ ಕೌದಿ ಮತ್ತು ಚಿಕ್ಕವರ ಕೌದಿಗಳು ಪ್ರಖ್ಯಾತವಾಗಿವೆ. ಈ ಕೌದಿಗಳಲ್ಲಿ ಹೊರಮೈ ಮತ್ತು ಒಳಮೈಗಳಿದ್ದು, ಒಳಮೈಯಲ್ಲಿ ಕೌದಿಯ ಸೌಂದರ್ಯವನ್ನು ವಿಶೇಷವಾಗಿ ಕಾಣಬಹುದಾಗಿದೆ.

ಕೌದಿಯಲ್ಲಿ ರಾಮಾಯಣ, ಮಹಾಭಾರತ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ನೈಸರ್ಗಿಕ, ಅಲಂಕಾರಿಕ, ಮುಂತಾದ ರೀತಿಯ ಚಿತ್ರಗಳನ್ನೂ ಕಾಣಬಹುದು. ಕೌದಿಯ ಚಿತ್ರಗಳು ಆಕಾರ ಪಡೆಯುವದು, ಎರಡು ರೀತಿಯಿಂದ ಒಂದು ದಾರದ ರೇಖಾ ವಿನ್ಯಾಸಗಳಿಂದಾದ ಚಿತ್ರಗಳು, ಇನ್ನೊಂದು ವಿವಿಧ ಆಕಾರದ ಬಣ್ಣದ ಅರಿವೆಯ ತುಕಡಿಗಳ ಸಂಯೋಜನಾ ಚಿತ್ರಗಳು. ಸುಳುಹು, ಪಶು, ಪಕ್ಷಿ, ಹೂ, ಎಲೆ, ಸೂರ್ಯ, ಚಂದ್ರ ನಕ್ಷತ್ರದಂತಹ ಹಲವಾರು ವಿನ್ಯಾಸಗಳು ದಾರದಿಂದ ರೇಖೆಯ ರೂಪ ಪಡೆದರೆ, ಕೌದಿಯ ಸರ್ವಸಮಗ್ರ ಸೌಂದರ್ಯವಿರುವುದು ಬಣ್ಣದ ವಿನ್ಯಾಸದ ಚಿತ್ರಗಳಲ್ಲಿ, ಬಣ್ಣದ ಅರಿವೆಯ ತುಕಡಿಗಳಲ್ಲಿ ಚೌಕಾಕೃತಿ, ತ್ರಿಕೋನಾಕೃತಿ, ಆಯತಾಕೃತಿ, ಭೂಮಿತಿಯ ಆಕೃತಿಯ ಚಿತ್ರಗಳು ಹೆಚ್ಚಾಗಿ ಕಾಣಸುತ್ತವೆ. ಹೊಲಿಗೆ ಮುಗಿದ ಮೇಲೆ ಈ ಬಣ್ಣದ ಪಟ್ಟಿಗಳು ಕೌದಿಯ ಮೇಲೆ ಬಣ್ಣ ಮಾಡಿದಂತೆ ಕಾಣಸುತ್ತವೆ. ಇಲ್ಲಿ ಜನಪದ ಕಲಾವಿದೆಯರ ಸೌಂದರ್ಯ ಪ್ರಜ್ಞೆಯನ್ನು ವಿಶೇಷವಾಗಿ ಕಾಣಬಹುದು. ಕೌದಿಯ ಚಿತ್ರನಿರ್ಮಾಣಕಾರರು ಹೆಚ್ಚಾಗಿ ಸ್ತ್ರೀಯರೇ ಇರುವುದು ವೈಶಿಷ್ಟ್ಯ. ಮುಸ್ಲಿಂ ಜನಾಂಗದವರ ಕೌದಿಗಳಲ್ಲಿ ಅರ್ಧಚಂದ್ರಾಕೃತಿ, ನಕ್ಷತ್ರ, ಹಿಂದೂಗಳ ಕೌದಿಗಳಲ್ಲಿ ಪಾಂಡವರ ಪಗಡೆಯಾಟ, ಕೊಳಬಾಯಿ, ಸೀತೆಯ ಸೆರಗು, ಈಶ್ವರ, ಹಣುಮಂತ ಮುಂತಾದ ದೇವರ ಚಿತ್ರಗಳು, ಕ್ರೈಸ್ತರ ಮನೆಯ ಕೌದಿಗಳಲ್ಲಿ ಶಿಲುಬೆಯಾಕೃತಿಗಳು ಹೀಗೆ ವಿವಿಧ ಧರ್ಮದ ಜನರ ಧಾರ್ಮಿಕ ಹಿನ್ನೆಲೆಯ ಚಿತ್ರಗಳು ವಿಶೇಷವಾಗಿ ಕಂಡುಬರುತ್ತವೆ.

ಇಂದಿನ ಆಧುನಿಕ ಕೋಲಾಜ್ ಮತ್ತು ಬಾಟಿಕ್ ಕಲೆಗೆ ಈ ಪ್ರಾಚೀನ ಜನಪದ ಕೌದಿ ಚಿತ್ರಕಲೆಯೇ ಮೂಲವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು.

ಎಸ್. ಸಿ. ಪಾ.

## ಖಜುರಾಹೋ

ಮಧ್ಯಪ್ರದೇಶದಲ್ಲಿರುವ ಖಜುರಾಹೋ ರಜಪೂತ ಚಾಂದೇಲರ ರಾಜಧಾನಿಯಾಗಿದ್ದು ಕ್ರಿ.ಶ.೯೦೦ರಿಂದ ೧೧೦೦ರ ವರೆಗೆ ಇಲ್ಲಿ ನಿರ್ಮಿಸಿದ ದೇವಾಲಯಗಳಿಂದಾಗಿ ಪ್ರಸಿದ್ಧವಾಗಿದೆ. ಈಗ ೨೨ ದೇವಾಲಯಗಳು ಉಳಿದಿದ್ದು ಇವುಗಳಲ್ಲಿ ಕಂದಾರಿಯ ಮಹದೇವ, ಲಕ್ಷ್ಮಣ, ಜಗದಂಬೆ, ಮಾತಂಗೇಶ್ವರ, ದೂಲದೇವ, ಚತುರ್ಭುಜದೇವ, ವಿಶ್ವನಾಥ, ಯೋಗಿನಿ ಇತ್ಯಾದಿ ದೇವಾಲಯಗಳು, ಕೆಲವು ಜೈನ ಮಂದಿರಗಳು ಪ್ರೇಕ್ಷಣೀಯವಾಗಿವೆ. ಈ ದೇವಾಲಯಗಳ ಸಮೂಹ ಹಲವಾರು ದೃಷ್ಟಿಗಳಿಂದ ವೈಶಿಷ್ಟ್ಯಪೂರ್ಣವಾಗಿವೆ. ಮುಖಮಂಟಪ, ಅರ್ಧಮಂಟಪ, ಅಂತರಾಳ, ಸುಕನಾಶಿ, ಗರ್ಭಗೃಹ ಇತ್ಯಾದಿ ಹಲವಾರು ಅಂಕಣಗಳಿಂದ ಕೂಡಿ ಗಾತ್ರದಲ್ಲಿ ಉದ್ದವಾಗಿದ್ದು ಇಡೀ ದೇವಾಲಯ ಎತ್ತರವಾದ ಜಗತಿಯ ಮೇಲಿರುವುದರಿಂದ ಪ್ರತಿಯೊಂದು ದೇವಾಲಯಗಳೂ ಬೃಹದಾಕಾರವಾಗಿ ಬೆಳೆದು ನಿಂತಂತೆ ಕಾಣುತ್ತವೆ. ಮುಖಮಂಟಪದಿಂದ ಏರುತ್ತ ಹೋಗುವ ಶಿಖರಗಳು ಗರ್ಭಗುಡಿಯ ಮೇಲೆ ಉತ್ತುಂಗಕ್ಕೇರಿ ಮುಗಿಲು ಮುಟ್ಟುವಂತೆ ಕಾಣುತ್ತವೆ. ವೀಕ್ಷಕ ತನ್ನ ಅಹಂಕಾರಗಳನ್ನೆಲ್ಲ ಕಳೆದುಕೊಂಡಂತೆ ದೇವಾಲಯದ ಮುಂದೆ ಕುಬ್ಜನಾಗುತ್ತಾನೆ. ಜೊತೆಗೆ ಅಧಿಷ್ಠಾನದಿಂದ ಗೋಪುರದವರೆಗೆ ಮೇಲೇರುತ್ತ ಹೋಗುವ ರೇಖೆಗಳು ದೇವಾಲಯದ ಔನತ್ಯವನ್ನು ಹೆಚ್ಚಿಸುತ್ತದೆ.

ಖಜುರಾಹೋ ಹೆಚ್ಚು ಚರ್ಚಿತವಾಗಿರುವುದು ಅಲ್ಲಿರುವ ಮಿಥುನ ಶಿಲ್ಪಗಳಿಂದ. ಇವು ಪ್ರತಿದೇವಾಲಯಗಳಲ್ಲೂ ಕೆಲವೇ ಇರಬಹುದಾದರೂ ಒಟ್ಟು ದೇವಾಲಯಗಳಿಂದಾಗಿ ಸಂಖ್ಯೆಯಲ್ಲಿ ಅಧಿಕವಾಗಿರುವಂತೆ ಪ್ರಚಾರ ನೀಡಲಾಗುತ್ತಿದೆ. ಈ ಶಿಲ್ಪಗಳ ಉದ್ದೇಶ ಇನ್ನೂ



ಸ್ಪಷ್ಟವಾಗಿಲ್ಲ ಕೌಳ ಇತ್ಯಾದಿ ತಾಂತ್ರಿಕ ಪಂಥಗಳ ಮಾಂತ್ರಿಕ ಆಚರಣೆಯ ಕುರುಹು ಎಂದು ಬಹುಜನರ ಅಭಿಪ್ರಾಯ. ಮಿಥುನ ಶಿಲ್ಪಗಳಿಗಿಂತ ಅಧಿಕ ಸಂಖ್ಯೆಯಲ್ಲಿರುವ ಇತರ ಶಿಲ್ಪಗಳಲ್ಲಿ ಸುಂದರ ಸ್ತ್ರೀಯರ ವಿವಿಧ ಹಾವಾಭಾವಗಳ ಶಿಲ್ಪಗಳೂ ಸಹ ಶೃಂಗಾರ ಪರವಾಗಿಯೇ ಇವೆ. ಉಳಿದಂತೆ ದೇವ ದೇವಿಯರ ಶಿಲ್ಪಗಳಿಗೂ ಕೊರತೆಯಿಲ್ಲ. ಇದೇನೇ ಇದ್ದರೂ ದೇಹಲಕ್ಷಣ ಶಾಸ್ತ್ರದಲ್ಲಿ (ಅನಾಟಮಿ) ಶಿಲ್ಪಿಯ ಚತುರತೆ ಗೋಚರವಾಗುತ್ತದೆ. ನಿರ್ಜೀವ ಶಿಲ್ಪಗಳೂ ಸಹ ಉಸಿರಾಡುತ್ತಿರುವಂತೆ ಭಾಸವಾಗುತ್ತವೆ. ಸಪೂರಾದ ನೀಳಕಾಯದ ನಿರಾಭರಣ ತುಂಬು ಮೈಕಟ್ಟಿನ ಸುಂದರಿಯರು ರಸಿಕರ ಹೃದಯ ಸೂರೆಗೊಳ್ಳುವಂತಿದ್ದು ದೇವಾಲಯದ ಹೊರಗೆ ಐಹಿಕ ಹಾಗೂ ಒಳಗೆ ದೈವತ್ವಗಳ ಸಂಗಮವೆನಿಸಿದಂತಿವೆ ಇಲ್ಲಿಯ ದೇವಾಲಯಗಳು.

ಜಿ. ಟಿ. ಜ.

## ಗಂಗರ ವಾಸ್ತುಶೈಲಿ

ಕರ್ನಾಟಕದ ಆಗ್ನೇಯ ಭಾಗದಲ್ಲಿ ಕದಂಬರ ಸಮಕಾಲೀನರಾಗಿ ತಲಕಾಡಿನ ಗಂಗರು ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದರು. ಸುಮಾರು ೧೧ನೆಯ ಶತಮಾನದವರೆಗೂ ಇದ್ದ ಇವರು ವಾಸ್ತುಕಲೆಯು ಹಲವು ಬಗೆಯಲ್ಲಿ ಬೆಳೆಯಲು ಕಾರಣರಾಗಿದ್ದಾರೆ.

ಹೊಸ ಶೈಲಿಯನ್ನು ಗಂಗರು ಆರಂಭಿಸಿದ್ದೂ ತಮ್ಮ ಸುತ್ತಮುತ್ತಲಿದ್ದ ಅಭಿವೃದ್ಧಿ ಹೊಂದಿದ ಮಾದರಿಗಳನ್ನು ಉತ್ತಮವಾಗಿ ಬಳಸಿಕೊಂಡು ಅವುಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಅಳವಡಿಸಿದ್ದಾರೆ. ಆದರೂ ಇವರ ಮೇಲೆ ಚಾಳುಕ್ಯರಿಗಿಂತ ಪಲ್ಲವರ ಪ್ರಭಾವ ಹೆಚ್ಚು ಉಂಟಾಗಿರುವುದನ್ನು ಕಾಣಬಹುದಾಗಿದೆ.

ಗಂಗರ ಆರಂಭದ ಕಟ್ಟಡಗಳು ಇಟ್ಟಿಗೆ, ಗಾರೆ, ಮರಳಿನಿಂದ ನಿರ್ಮಿತವಾದವು. ಈ ರೀತಿಯ ದೇವಾಲಯಗಳು ಮತ್ತು ಬಸದಿಗಳು ಮಾಧವ, ಅವನೀತ, ದುರ್ವಿನೀತ ಮೊದಲಾದ ಗಂಗರಾಜರ ಕಾಲದಲ್ಲಿ ಇದ್ದವು. ಇಲ್ಲಿಯೇ ಹುಟ್ಟಿದ ಕಲೆಯ ದೃಷ್ಟಿಯಿಂದ ಗಣನೆಗೆ ಬಾರದ ಕೆಲವು ಕಟ್ಟಡಗಳು ಬೃಹತ್ ಶಿಲಾಯುಗದ ಸಮಾಧಿಗಳಂತೆ ಚಪ್ಪಡಿಗಳನ್ನು ಗೋಡೆಗೆ ನಿಲ್ಲಿಸಿ ಅಂಥದೇ ಚಪ್ಪಡಿಗಳನ್ನು ಚಾವಣಿಗೂ ಹೊದಿಸಲಾಗಿದೆ. ಉದಾ. ತೋಟಗೆರೆಯ ಅರ್ಜುನರಾಯನ ಗುಡಿ, ಸಂಪಿಗೆಪುರದ ಈಶ್ವರ ದೇವಾಲಯಗಳು ಈ ಗುಂಪಿಗೆ ಸೇರುತ್ತವೆ.

ಹೊರಗೋಡೆಯನ್ನು ಇಟ್ಟಿಗೆಯಿಂದ ಕಟ್ಟಿದ. ಒಳಗೆ ಕಲ್ಲಿನ ಕಂಬ ಚಾವಣಿಗಳನ್ನು ಉಳ್ಳ ಗಂಗರ ಹಲವಾರು ದೇವಾಲಯಗಳಿವೆ. ತೀರಾಸಾಮಾನ್ಯವಾಗಿ ಕಾಣುವ ಈ ದೇವಾಲಯಗಳ ಒಳಗೆ ಅದ್ಭುತವಾದ ಶಿಲ್ಪಸಂಪತ್ತನ್ನು ಹೊಂದಿರುತ್ತದೆ. ನೊಣವಿನಕೆರೆ, ಹಳೇಆಲೂರು, ಅರಳಗುಪ್ಪೆ ಮೊದಲಾದ ಕಡೆಗಳಲ್ಲಿ ಇಂಥ ದೇವಾಲಯಗಳನ್ನು ಕಾಣಬಹುದಾಗಿದೆ.

ಗಂಗರಕಾಲದ ದೇವಾಲಯ ಮತ್ತು ಬಸದಿಗಳೂ ಪಲ್ಲವರ ದ್ರಾವಿಡ ಶೈಲಿಯಿಂದ ಪ್ರಭಾವಿತಗೊಂಡಿರುವುದನ್ನು ಕಾಣಬಹುದಾಗಿದೆ. ಇವರ ಕಾಲದ ವಾಸ್ತು ಶೈಲಿಯನ್ನು ಈ ಕೆಳಗಿನ ರೀತಿಯಲ್ಲಿ ವಿವರಿಸಬಹುದಾಗಿದೆ.

ಈ ಕಟ್ಟಡಗಳು ಸಾಮಾನ್ಯ ಪ್ರಮಾಣದವು. ಇವುಗಳ ಎತ್ತರ ನೆಲದಿಂದ ಚಾವಣಿಯವರೆಗೆ ಸುಮಾರು ಏಳು ಅಡಿಗಳಷ್ಟಿರುತ್ತವೆ. ಚೌಕ ಅಥವಾ ದೀರ್ಘ ಚತುರಸ್ರಾಕಾರದಲ್ಲಿರುತ್ತವೆ. ಈ ದೇವಾಲಯಗಳಲ್ಲಿ ಸಣ್ಣ ಪ್ರಮಾಣದ ಗರ್ಭಗುಡಿ, ತೆರೆದ ಸುಕನಾಶಿ ಮತ್ತು ನವರಂಗಗಳಿರುತ್ತವೆ. ನವರಂಗದ ಕಂಬಗಳು ಚಿಕ್ಕದಾಗಿದ್ದು, ತಳ ಚೌಕಾಕಾರವಾಗಿದ್ದು ಕಾಂಡ ತೆಳುವಾಗಿ ಗುಂಡಾಗಿರುತ್ತವೆ. ಕೀರ್ತಿಮುಖಗಳ ಸಾಲುಗಳಿರುತ್ತವೆ. ಅವುಗಳ ಕಟವಾಯಿಗಳಿಂದ ಹೊರಟಂತಿರುವ ಮಣಿಹಾರಗಳು,ಹಾರಗಳೊಳಗೆ ಹಲವು ನರ್ತನ ಭಂಗಿಯಲ್ಲಿರುವ ಸಣ್ಣ ಸಣ್ಣ ಮೂರ್ತಿಗಳು ಚಿಕ್ಕದಾಗಿದ್ದರೂ ಸ್ಪಷ್ಟವಾಗಿ ಕಂಡರಿಸಲ್ಪಟ್ಟಿರುತ್ತವೆ. ಕೆಲವು ಕಡೆ ಎಂದರೆ ನರಸಮಂಗಲದ ರಾಮೇಶ್ವರ ದೇವಾಲಯದಲ್ಲಿರುವಂತೆ ದಪ್ಪನಾದ ಕಂಬಗಳಿದ್ದು ಗಂಟೆಯಾಕೃತಿಯನ್ನು ಪಡೆದಿವೆ. ಪಲ್ಲವ ರೀತಿಯ ಸಿಂಹ ಸ್ತಂಭಗಳನ್ನು ಗಂಗವಾರ ಮತ್ತು ಕಿತ್ತೂರುಗಳಲ್ಲಿ ನೋಡಬಹುದು.

ನವರಂಗದ ಚಾವಣಿಯ ಮಧ್ಯದ ಅಂಕಣವು ದೊಡ್ಡದಾಗಿದ್ದು ಅದರಲ್ಲಿ ಮಾತ್ರ ಅಷ್ಟದಿಕ್ಪಾಲಕರ ನಡುವೆ ಶಿವ ಅಥವಾ ಜಿನಮೂರ್ತಿಗಳನ್ನು ಕಾಣುತ್ತೇವೆ. ಇಲ್ಲದಿದ್ದರೆ ದೊಡ್ಡದಾದ ಕಮಲ ಪುಷ್ಪವನ್ನು ಬಿಡಿಸಿರುತ್ತಾರೆ. ಮಧ್ಯದ ಅಂಕಣದ ಸುತ್ತಲೂ ಅಂಚಿನ ಕಡೆ ಕಿರುದಾಗಿದ್ದು ಹೊರಚಾಚುವಾಗ ಅಗಲವಾಗುತ್ತ ಹೋಗುವಂತೆ ಜೋಡಿಸಿರುವ ಹಾಸುಗಲ್ಲುಗಳು ಅಂಕಣದ ಸುತ್ತಲೂ ಇರುತ್ತವೆ. ಹೊರ ಗೋಡೆಗಳ ಮೇಲೆ ದೂರದೂರದಲ್ಲಿ ಅರೆಗಂಬಗಳಿರುತ್ತವೆ. ಗೋಡೆಗಳ ಮಧ್ಯದ ಅಂಕಣದಲ್ಲಿ ಆಳವಿಲ್ಲದ ಗೂಡುಗಳು ಸರಳ ರೀತಿಯಲ್ಲಿರುತ್ತವೆ. ಕೆಲವು ದೇವಾಲಯಗಳಲ್ಲಿ ಲೋವೆಯ ಕೆಳಗೆ ಹಂಸ, ಯಾಳಿ ಅಥವಾ ನೀರ್ಗುದುರೆಗಳ ಸಾಲು, ಕೀರ್ತಿಮುಖಗಳು ಲಾಳದಾಕೃತಿಯ ಕಮಾನುಗಳು, ಕೈಪಿಡಿಗೋಡೆಯಲ್ಲಿ ಪಂಜರ, ಗಜ ಪುಷ್ಪಾಕೃತಿ ಮೊದಲಾದವುಗಳಿದ್ದು ಅವುಗಳ ಮುಂಭಾಗದಲ್ಲಿ ಮೂರ್ತಿಶಿಲ್ಪಗಳನ್ನು ಬಿಡಿಸಿರಬಹುದು. ಗರ್ಭಗೃಹಗಳ ಮೇಲೆ ಒಂದು ಅಂತಸ್ತಿನ ಗೋಪುರವಿರಬಹುದು. ಅಥವಾ ಮೂರು ಅಂತಸ್ತುಗಳಿರಬಹುದು. ತುದಿಯಲ್ಲಿ ಗ್ರೀವ, ಮತ್ತು ಅಮಲಕವಿರುತ್ತದೆ. ಶ್ರವಣಬೆಳಗೊಳದ ಚಂದ್ರಗುಪ್ತ ಬಸದಿ, ವರುಣದ ಮಹಾಲಿಂಗೇಶ್ವರ, ಬನ್ನೂರಿನ ಹನುಮಂತೇಶ್ವರ ಮೊದಲಾದವು ಸರಳವಾದ ಶಿಲ್ಪ ಬಾಹುಳ್ಯವಿಲ್ಲದ ದೇವಾಲಯಗಳು.

ನಂದಿಯ ಭೋಗನಂದೀಶ್ವರ, ಬೇಗೂರಿನ ನಾಗೇಶ್ವರ, ಕಂಬದಹಳ್ಳಿಯ ಆಧಿನಾಥ ಬಸದಿ, ಶ್ರವಣಬೆಳಗೊಳದ ಚಾವುಂಡರಾಯ ಬಸದಿ ಇವು ಪ್ರಬುದ್ಧ ಕಟ್ಟಡಗಳು.

ಹೆ. ಟಿ. ಜ.

## ಗಂಗೈಕೊಂಡ ಚೋಳಪುರಂ

ಒಂದು ಕಾಲಕ್ಕೆ ಚೋಳರ ರಾಜಧಾನಿಯಾಗಿದ್ದ ಇದು ಈಗ ಒಂದು ಗ್ರಾಮ. ಕುಂಭಕೋಣದಿಂದ ಸುಮಾರು ೨೨ ಮೈಲಿ ದೂರದಲ್ಲಿದೆ. ರಾಜೇಂದ್ರ ಚೋಳ ಸಾಮ್ರಾಟ, ಈ ಊರನ್ನು ಕಟ್ಟಿದನು. ಪರಮೇಶನ ಮೇಲಣ ಭಕ್ತಿಯಿಂದ ಹಾಗೂ ತನ್ನ ದಿಗ್ವಿಜಯಗಳ ಕುರುಹಾಗಿ, ಗಂಗೈಕೊಂಡ ಚೋಳಪುರದ ದೇವಾಲಯವನ್ನು ನಿರ್ಮಿಸಿದ. ಪವಿತ್ರ ಗಂಗಾ ತೀರ್ಥವನ್ನು ಇಲ್ಲಿ ನಿರ್ಮಿಸಿದ್ದ ಪುಷ್ಕರಣಿಗೆ ಸುರುವಿದ. ತಂಜಾವೂರಿನ ಬೃಹದೇಶ್ವರ ದೇವಾಲಯಕ್ಕೂ ಒಂದು ಕೈ ಮಿಗಿಲಾದ ಶಿಲ್ಪ, ಈ ದೇವಾಲಯದಲ್ಲಿದೆ.

ದೇವಾಲಯ ಪ್ರವೇಶಿಸುವಂತೆ, ಉದ್ದವಾದ ಅಚ್ಛಾದಿತ ಮಂಟಪ, ನೇರ ಕಂಬಸಾಲು ಪ್ರಮುಖ ಮಂದಿರಕ್ಕೆ ಹಾದಿ. ನಾಟ್ಯಗಣಪತಿ, ನಂದೀಶ್ವರನ ಮಗ್ಗುಲಲ್ಲಿರುವ ಅರ್ಧನಾರೀಶ್ವರ, ಹರಿಹರ-ನಟರಾಜ, ಮೂರ್ತಿಶಿಲ್ಪಗಳು, ನಟರಾಜನ ನಾಟ್ಯಕ್ಕೆ ವಿಷ್ಣು ಭೇರಿಯನ್ನು ಬಾರಿಸುತ್ತಿದ್ದಾನೆ. ಗಣೇಶ, ಕಾಳಿಕಾದೇವಿಯರು ಅವರವರ ವಾಹನವೇರಿ ಆಗಮಿಸುತ್ತಿದ್ದಾರೆ. ದೇವಿಯು, ಆಕೆಯ ಹಸ್ತವನ್ನು ನಂದೀಶನ ಮೇಲಿರಿಸಿ, ನಟರಾಜನನ್ನು ವೀಕ್ಷಿಸುತ್ತಿದ್ದಾರೆ. ಇನ್ನೂ ಅಪರೂಪದ ಮೂರ್ತಿಶಿಲ್ಪ ಮಂದಿರದ ನಾಲ್ಕು ದಿಸೆಯಲ್ಲಿವೆ. ಚೌಡಿಕೇಶ್ವರನ ದೇವಾಲಯ, ಮಹಿಷಮರ್ದಿನಿ, ಅನಂತ, ಸಿಂಹಪುಷ್ಕರಿಣಿ, ನವಗ್ರಹಗಳಿವೆ ಸೂರ್ಯ ಫಲಕ ಇಲ್ಲಿ ಕಮಲದಾಕಾರದಲ್ಲಿ ಸಂಕೇತಗೊಂಡಿರುವುದು ಗಮನಾರ್ಹ. ನವಗ್ರಹ ತತ್ವದಂತೆ ಉತ್ತರ ದಕ್ಷಿಣ ಘಟಕಗಳನ್ನು ಸೇರಿಸುವಂತೆ ಸೂಚಿತವಾಗುತ್ತದೆ. ರಾಜೇಂದ್ರ ಚೋಳನ ಸರ್ವಸಮದರ್ಶಿತ್ವದ ಪ್ರಜ್ಞೆ ಅಭಿರುಚಿಗೆ ಗಂಗೈಕೊಂಡ ಚೋಳಪುರಂ ಶಿಲ್ಪ ನಿದರ್ಶನವಾಗಿದೆ.

**ಹೆಚ್. ಜ**

## ಗಂಜೀಫ

ಗಂಜೀಫ ಎಂಬುದು ಇಂದಿನ ಇಸ್ಪೀಟ್ ಆಟವನ್ನು ಹೋಲುವಂತಹ ಒಂದು ಆಟ. ಸುಮಾರು ಮೂರರಿಂದ ಮೂರುವರೆ ಅಂಗುಲ ವ್ಯಾಸವುಳ್ಳ ಗುಂಡನೆಯ ರಟ್ಟಿನ ಒಂದು ಬದಿಯಲ್ಲಿ ಸಾಂಕೇತಿಕವಾಗಿ ಚಿತ್ರರಚನೆಯಾಗಿರುತ್ತದೆ. ಕಾಗದ. ತೆಳುವಾದ ಮರ, ಚರ್ಮ, ದಂತ, ಮೀನಿನ ಪೊರೆ ಇತ್ಯಾದಿಗಳ ಮೇಲೂ ಚಿತ್ರರಚಿಸಿ ಗಂಜೀಫದಂತೆ ಬಳಕೆಯಾಗುತ್ತಿತ್ತು. ಗಂಜೀಫ ಎನ್ನುವ ಪದ ಪರ್ಶಿಯದ ಪದ 'ಗಂಜ್' (ಐಶ್ವರ್ಯ-ಖಜಾನೆ) ಎಂಬ ಪದದಿಂದ ಬಂದಿದೆ. ಮುಘಲ್ ಅರಸರಿಂದ ೧೪ನೇ ಶತಮಾನದಲ್ಲಿ ಭಾರತದಲ್ಲಿ ಗಂಜೀಫ ಹೆಚ್ಚು ಬಳಕೆಗೆ ಬಂದಿತು. ಬಾಬರ್ ಗೆಳೆಯರಿಗೆ ಪಾರಿತೋಷಕವಾಗಿ ಗಂಜೀಫ ಕಳಿಸುತ್ತಿದ್ದನೆಂದೂ ಆತನ ಮಗಳು ಕೆಲವು ಹೊಸ ಆಟಗಳನ್ನು ಕಂಡುಹಿಡಿದಿದ್ದು, ೨೪೦ ಎಲೆಗಳನ್ನು ಇರಿಸಿ ೨೦ ಜನರೊಂದಿಗೆ ಆಡುತ್ತಿದ್ದಳೆಂದೂ ತಿಳಿದು ಬರುತ್ತದೆ. ಆಟದ ವಿಧಾನ ಅನುಸರಿಸಿ ೯೬ರಿಂದ ३೬೦ ಎಲೆಗಳವರೆಗೆ ಬೇರೆಬೇರೆ ಎಲೆಗಳುಳ್ಳ ಆಟಗಳಿವೆ.



ರಘುಪತಿ ಭಟ್

ಅವುಗಳಲ್ಲಿ ೧೨೦ ಎಲೆಗಳುಳ್ಳ ದಶಾವತಾರದ ಆಟ ಭಾರತಾದ್ಯಂತ ಪ್ರಸಿದ್ಧವಿದ್ದು ಅಲ್ಲಲ್ಲಿ ಬಳಕೆಯಲ್ಲೂ ಇದೆ. ಒಂದೊಂದು ಅವತಾರಕ್ಕೂ ಹನ್ನೊಂದು ಎಲೆಗಳು ಹಾಗೂ ವಜೀರ (ಮಂತ್ರಿ)ಯ ಹತ್ತು ಎಲೆಗಳು ಸೇರಿದ ಈ ಆಟದ ಕಟ್ಟಿನಲ್ಲಿ ರಾಮನಿಗೆ ಬಿಲ್ಲು ಬಾಣ, ವಾಮನನಿಗೆ ಕಮಂಡಲ ಇತ್ಯಾದಿಗಳಿಂದ ಸಂಕೇತಗೊಳಿಸಿದೆ. ಕೆಲವೊಮ್ಮೆ ಪೂರ್ಣ ಆಕೃತಿಗಳನ್ನು ರಚಿಸುವುದುಂಟು. ಪೌರಾಣಿಕ, ಸಾಮಾಜಿಕ ದೃಶ್ಯಗಳು, ರಾಜರ ರಾಜಪರಿವಾರದವರ ಭಾವಚಿತ್ರ, ಹೂಹಣ್ಣು ಪಶುಪಕ್ಷಿಗಳ ಚಿತ್ರವೂ ರಚಿತವಾಗುತ್ತವೆ. ಅಂಚುಗಳನ್ನು ಕಲಾತ್ಮಕವಾಗಿ ವಿನ್ಯಾಸಗೊಳಿಸಲಾಗುತ್ತದೆ. ಕಿರು ಅಳತೆಯ ಚಿಕಣಿ ಚಿತ್ರಗಳಂತೆ ಇರುವ ಗಂಜೀಫಗಳನ್ನು ಸಂಗ್ರಹಿಸುವುದು. ಪ್ರದರ್ಶಿಸುವುದು ಈಚೆಗೆ ಅಧಿಕವಾಗಿದೆ. ಸ್ವತಃ ಗಂಜೀಫ ಕಲಾವಿದರಾಗಿ ತಮ್ಮದೇ ಶೈಲಿಯನ್ನು ಕಂಡುಕೊಂಡಿರುವ ರಘುಪತಿಭಟ್ ಅವರು ಶ್ರೀರಂಗಪಟ್ಟಣದಲ್ಲಿ ಅನೇಕ ಶೈಲಿಯ ನೂರಾರು ಗಂಜೀಫಗಳನ್ನು ವ್ಯವಸ್ಥಿತವಾಗಿ ಪ್ರದರ್ಶಿಸಿದ್ದಾರೆ.

**ಮರಿ / ಅಲನ**

## ಗಾಂಧಾರ

ಗ್ರೀಸ್ ದೇಶದ ಅಲೆಗ್ಝಾಂಡರನು ತನ್ನ ಸೇನೆಯೊಡನೆ ಆಕ್ರಮಿಸಿದ ರಾಜ್ಯಗಳಲ್ಲೆಲ್ಲಾ ಗ್ರೀಕ್ ಕಲೆಯು ವಿಸ್ತರಿಸಿತು. ಭಾರತಕ್ಕೆ ಗ್ರೀಕ್ ಕಲೆಯು ಅಫಘಾನಿಸ್ಥಾನದ ಮೂಲಕ ವಾಯವ್ಯ ಗಡಿಯಿಂದ ಪ್ರವೇಶಿಸಿತು. ಹಿಂದಿನ ಕಾಲದಲ್ಲಿ ಆ ಗಡಿ ಪ್ರದೇಶಕ್ಕೆ ಗಾಂಧಾರವೆಂಬ ಹೆಸರಿತ್ತು. ಅದು ಅಶೋಕನ ಕಾಲದಲ್ಲಿ ಬೌದ್ಧರಿಗೆ ಪವಿತ್ರ ಸ್ಥಳವಾಗಿತ್ತು. ಅಲ್ಲಿ ಕೆಲವು ಚಿಕ್ಕ ದೊಡ್ಡ ಸ್ತೂಪಗಳೂ ಕಾಣಸಿಗುತ್ತವೆ. ಅಲ್ಲಿಯ ದೇಶೀಯ ಕಲೆಯ ಮೇಲೆ ಗ್ರೀಕರ ಕಲೆಯ ಪ್ರಭಾವ ಬಿತ್ತು. ಹೀಗೆ ಭಾರತ ಮತ್ತು ಗ್ರೀಕ್ ಕಲೆಗಳ ಮಿಶ್ರಣದಿಂದ ಗಾಂಧಾರ ಕಲೆಯೆಂಬ ಶೈಲಿ ಮೂಡಿತು.



ಗಾಂಧಾರ ಕಲಾವಿದರು ಗ್ರೀಸ್ ದೇಶದ ಶಿಲ್ಪಲಕ್ಷಣಗಳಿಂದ ಕೂಡಿದ ರಮ್ಯವಾದ ಮುಖಭಾವವುಳ್ಳ ಬುದ್ಧನ ವಿಗ್ರಹಗಳನ್ನು ಕೆತ್ತಿದರು. ಬುದ್ಧದೇವನ ಜೀವನದ ಘಟನೆಗಳನ್ನು ನಿರೂಪಿಸಿದ ಉತ್ಕೀರ್ಣಶಿಲ್ಪದ ಶಿಲಾಫಲಕಗಳೂ ಇವೆ. ಕಾಲಕಳೆದಂತೆ ಗಾಂಧಾರ ಬುದ್ಧನ ಮೂರ್ತಿಗಳು ಸುಧಾರಣೆ ಹೊಂದಿದುವು. ಅಭಯ, ಧ್ಯಾನ ಮೊದಲಾದ ಹಸ್ತಮುದ್ರೆಗಳನ್ನೂ ಅರ್ಧನಿಮೀಲಿತ ನೇತ್ರಗಳನ್ನೂ ಆಸನಗಳನ್ನೂ ಭಾರತೀಯ

ಬುದ್ಧ ಮಥುರಾ

ಪದ್ಧತಿಯನ್ನು ಅನುಸರಿಸಿ ರಚಿಸಿದರು. ಗ್ರೀಕ್ ಕಲೆಯು ದೈಹಿಕ ರೂಪದರ್ಶನ ಮಾಡಿಸುತ್ತದೆ. ಭಾರತೀಯ ಕಲೆಯು ಬುದ್ಧದೇವನ ಆಧ್ಯಾತ್ಮಿಕತೆಯನ್ನು ನಿರೂಪಿಸಲು ಯತ್ನಿಸುತ್ತದೆ.

'ಗಾಂಧಾರ ಕಲೆಯು ಕ್ರಿ.ಶ. ಒಂದರಿಂದ ಮೂರನೇ ಶತಮಾನದವರೆಗೆ ವಿಶೇಷವಾಗಿ ರಚನೆಯಾಯಿತು. ಅಷ್ಟರಲ್ಲಿ ಭಾರತೀಯ ಸ್ವರೂಪವು ಹೆಚ್ಚು ಹೆಚ್ಚಾಗಿ ಮಿಶ್ರವಾಯಿತು. ಗಾಂಧಾರ ಕಲೆಯನ್ನು ಹೇಳುವಾಗ ಗ್ರೀಕ್ ಸಂಸ್ಕೃತಿಯು ಪೂರ್ವಕ್ಕೆ ವಿಸ್ತರಿಸಿತೆಂದು ಅಥವಾ ಭಾರತೀಯ ಸಂಸ್ಕೃತಿಯು ಆ ರೂಪದಲ್ಲಿ ಪಶ್ಚಿಮಕ್ಕೆ ಸಂಬಂಧ ಬೆಳೆಯಿಸಿತೆಂದು ಹೇಳಬಹುದಾಗಿದೆ. ಐದನೇ ಶತಮಾನದಲ್ಲಿ ಗಾಂಧಾರ ಕಲೆಯು ಮಾಯವಾಯಿತು' ಎಂಬುದಾಗಿ ಡಾ|| ಆನಂದ ಕುಮಾರ ಸ್ವಾಮಿಯವರ ಅಭಿಪ್ರಾಯಪಡುತ್ತಾರೆ.

**ಬಿಪಿಬಾ**

## ಗಾಜಿನ ಚಿತ್ರಗಳು (Glass Paintings)

ಗಾಜಿನ ಚಿತ್ರಗಳಲ್ಲಿ ಎರಡು ವಿಧ. ಬಣ್ಣ ಬಣ್ಣದ ಗಾಜುಗಳನ್ನು ಬೇಕಿದ್ದ ಆಕಾರಕ್ಕೆ ತಕ್ಕಂತೆ ಕತ್ತರಿಸಿ ಜೋಡಿಸಿ ಆಕೃತಿಗಳನ್ನು ರಚಿಸಿ, ಕಿಟಕಿ ಅಥವಾ ಬಾಗಿಲಿನಂತೆ ರೂಪಿಸಿ ಕಟ್ಟಡದ ವಾಸ್ತುವಿನೊಂದಿಗೆ ಹೊಂದಿಸುವುದು ಒಂದು ವಿಧ. ಬೆಳಗಿನ ವೇಳೆಯಲ್ಲಿ ಕಟ್ಟಡದ ಒಳಗಿನಿಂದ ನೋಡಿದರೆ ಹೊರಗಿನ ಬೆಳಕಿಗೆ ಆಕೃತಿಗಳು ಅದ್ಭುತ ರಮ್ಯವಾಗಿ ಕಾಣಿಸುತ್ತದೆ. ಮಧ್ಯಯುಗದ ಯುರೋಪಿನ ಚರ್ಚ್ ಅರಮನೆಗಳಲ್ಲದೆ ಖಾಸಗಿ ಮನೆಗಳ ಕಿಟಕಿ ಬಾಗಿಲುಗಳು ಈ ರೀತಿ ಅಲಂಕೃತಗೊಂಡಿರುತ್ತಿದ್ದವು. ಮನುಷ್ಯಾಕಾರಗಳಲ್ಲಿ ಮುಖ ಹಾಗೂ ಕೈಗಳು ತೆರೆದ ಭಾಗವಾಗಿದ್ದು ಇಲ್ಲಿ ಆಮ್ಲಗಳಿಂದ ಛಾಯಾಂಕನ ಮಾಡಿ ನೈಜತೆಯನ್ನು ತರುತ್ತಿದ್ದರು. ಉಳಿದ ದೇಹದ ಭಾಗ ಹಾಗೂ ಹಿನ್ನೆಲೆಗಳಿಗೆ ಬಣ್ಣದ ಗಾಜನ್ನು ಕತ್ತರಿಸಿ ಮೆದುವಾದ ಸತುವಿನಿಂದ ಕೂಡಿಸುತ್ತಿದ್ದರು. ಇವು ೧೭-೧೮ನೇ ಶತಮಾನದಲ್ಲಿ ಯೂರೋಪಿನ್ ಧರ್ಮ ಪ್ರಸಾರಕರ ಮೂಲಕ ಭಾರತಕ್ಕೂ ಬಂದಿತು. ಪಶ್ಚಿಮ ಕರಾವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದೇಶಿಯರು ಇದ್ದುದರಿಂದ ಇಲ್ಲಿಯ ಚರ್ಚ್‌ಗಳಲ್ಲೂ ಈ ಬಗೆಯ ಗಾಜಿನ ಚಿತ್ರಗಳು ಬಂದು ಇಂದಿಗೂ ಅವು ಉಳಿದುಕೊಂಡಿರುವುದನ್ನು ಕಾಣಬಹುದು.



ಇಂದು ಸಾಮಾನ್ಯವಾಗಿ ಗಾಜಿನ ಚಿತ್ರಗಳೆಂದು ಕರೆಯುವುದು, ಗಾಜಿನ ಫಲಕದ ಒಂದು ಬದಿಯಲ್ಲಿ ಚಿತ್ರ ಬರೆದು, ಇನ್ನೊಂದು ಬದಿಯಿಂದ ವೀಕ್ಷಿಸುವುದು.

ಉಳಿದ ಚಿತ್ರಗಳಂತೆ ಇದನ್ನೂ ಗೋಡೆಗೆ ತೂಗುಹಾಕುವಂತಹದು. ಈ ಬಗೆಯ ಕಲೆಯೂ ವಿದೇಶದ್ದೇ ಆಗಿದ್ದು ಭಾರತದ ಮುಸ್ಲಿಂ ದೊರೆಗಳ ಪ್ರೋತ್ಸಾಹದಿಂದ ೧೮ನೇ ಶತಮಾನದಲ್ಲಿ ಭಾರತದಲ್ಲಿ ಬಳಕೆಗೆ ಬಂತು. ಮರಾಠ, ಮೈಸೂರು ಮತ್ತು ತಂಜಾವೂರು ಅರಸರುಗಳಿಂದಾಗಿ ವ್ಯಾಪಕವಾಗಿ ಪ್ರಚಾರಗೊಂಡಿತು. ಶಿಷ್ಟ ಶೈಲಿಯದಲ್ಲದೆ ಜಾನಪದ ಶೈಲಿಯಲ್ಲೂ ರಚನೆಗಳಾದವು. ಒಂದೆರಡು ಶತಮಾನ ಹಳೆಯವು ಅಲ್ಲಲ್ಲಿ ನೋಡಲು ದೊರೆಯುತ್ತವೆಯಲ್ಲದೆ ಇಂದಿಗೂ ಹಳೆಯ ಶೈಲಿಯಲ್ಲಿ ಚಿತ್ರರಚಿಸುವವರು ದಕ್ಷಿಣ ಭಾರತದಲ್ಲಿದ್ದಾರೆ.

ಈ ಕಲೆಯ ಸಾಧ್ಯತೆಯನ್ನು ಹೆಚ್ಚು ದುಡಿಸಿಕೊಂಡವರು ನವ್ಯ ಶೈಲಿಯ ಕಲಾವಿದರು. ಮೊದಲಿಗೆ ಉಲ್ಟ ಬರೆದು ಸೀದಾ ನೋಡುವ ಹಾಗೂ ಬಣ್ಣಗಳನ್ನು ಹತೋಟಿಯಿಂದ ಬಳಸುವ, ಫಲಕದೊಳಕ್ಕೆ ಬಣ್ಣ ಇಳಿಯಲು ಸಾಧ್ಯವಿಲ್ಲದೆ ಮೇಲು ಪದರದಲ್ಲೇ ಒಣಗುವ, ತೀರಾ ನುಣುಪಾದ ಮೈಯುಳ್ಳ ಫಲಕದ ಮೇಲೆ ಬಣ್ಣಗಳನ್ನು ನಿಯಂತ್ರಿಸುವ, ಆಕಾರಗಳನ್ನು ಮೂಡಿಸುತ್ತಾ ಹೋಗುವ ಕಾರ್ಯಗಳು ಕಲಾವಿದನಿಗೆ ಅನನ್ಯವಾದ ಖುಷಿಯನ್ನು ಕೊಡುತ್ತವೆ. ಈಚೆಗೆ ಪಾರದರ್ಶಕ ಅಕ್ರಲಿಕ್ ಹಾಳೆಗಳು ಗಾಜಿನ ಸ್ಥಾನವನ್ನು ಆಕ್ರಮಿಸಿದ್ದು ಗಾಜಿಗೆ ಇದ್ದ ನಶ್ವರತೆಯನ್ನು ಹೋಗಲಾಡಿಸಿದೆ.

ಅಲನ

## ಗ್ರಾಫಿಕ್ ಕಲೆ

ಚಿತ್ರ, ಶಿಲ್ಪಕಲೆಯಂತೆ 'ಗ್ರಾಫಿಕ್ ಕಲೆ' ಹಲವು ವರ್ಷಗಳಿಂದ ಜನಪ್ರಿಯವಾಗಿದ್ದು ಕಲಾವಿದನ ಅಭಿವ್ಯಕ್ತಿಗೆ, ಮಾಧ್ಯಮವಾಗಿದೆ. ಗ್ರಾಫಿಕ್ ಎಂಬ ಪದವು ಗ್ರಾಫಿಯನ್ ಎಂಬ ಗ್ರೀಕ್ ಪದದಿಂದ ಬಂದಿದೆ. ಇದರ ಅರ್ಥ 'ಬರೆ' ಅಥವಾ ಚಿತ್ರಿಸು ಎಂದು ಇದು ಕಲಾವಿದನ ರೇಖಾಕೃತಿಗಳನ್ನು ರಚನಾತ್ಮಕವಾಗಿ ಮತ್ತು ಕುಶಲ ಕಲಾವಿದನ ಕೃತಿಯನ್ನು ಉಪಯೋಗಿಸಿಕೊಳ್ಳುವ ಮೂಲಕ ಸೂಕ್ತ ವಸ್ತುವಿನ ಮೇಲೆ ಪುನಃ ಮುದ್ರಿಸುತ್ತದೆ. ಇದರಿಂದಾಗಿ ಸಾಕಷ್ಟು ಸಲ ಕೃತಿಯನ್ನು ಪುನಃ ಮುದ್ರಿಸಲು ಸಾಧ್ಯವಾಗುತ್ತದೆ. ಈ ಮುಂದಿನ ಅಗತ್ಯಗಳನ್ನು ಪೂರೈಸಿದರೆ ಮುದ್ರಣವನ್ನು ಮೂಲ ಕೃತಿಯೆಂದು ಪರಿಗಣಿಸಬಹುದು. ೧) ಮಾದರಿ ಅಥವಾ ವಿಷಯದ ರೇಖಾ ಕೃತಿಯು ಮೂಲದ್ದಾಗಿರಬೇಕು ೨) ಕಲಾವಿದನು ಮುದ್ರಣ ಫಲಕ ಅಥವಾ ಕರಡಚ್ಚನ್ನು ಸ್ವತಃ ತಾನೇ ತಯಾರಿಸಿರಬೇಕು ೩) ಅಭಿವ್ಯಕ್ತಿ ಮಾಧ್ಯಮವನ್ನು ಸೂಕ್ತವಾಗಿ ಆಯ್ಕೆ ಮಾಡಬೇಕು ಮತ್ತು ವಸ್ತುಗಳ ಮೇಲೂ ಗಮನವಿಡುವುದು ಅಗತ್ಯ ೪) ಕಲಾವಿದನು ಸ್ವತಃ ತಾನೇ ಅಥವಾ ವೃತ್ತಿಪರ ಮುದ್ರಕನ ಸಹಾಯದಿಂದ ಮೂಲ ಫಲಕದಿಂದ ಪಾರಂಪರಿಕ ಕುಶಲ ವಿಧಾನವನ್ನು ಉಪಯೋಗಿಸಿ ಎಲ್ಲ ಪ್ರತಿಗಳನ್ನು ತೆಗೆಯಬೇಕು. ೫) ಕಲಾವಿದನು ಎಲ್ಲ ಪ್ರತಿಗಳನ್ನು ಪ್ರಮಾಣೀಕರಿಸಿರಬೇಕು ಮತ್ತು ಅದೇ ವೇಳೆಗೆ ಮುದ್ರಣಗಳ ಒಟ್ಟು ಸಂಖ್ಯೆಯನ್ನು ಗುರುತಿಸಬೇಕು. ಮುದ್ರಣದ ಮಿತಿಯನ್ನು ಮೀರಬಾರದು.

ತಾಂತ್ರಿಕ ದೃಷ್ಟಿಯಿಂದ ಮುದ್ರಣ ಎಂದರೆ ರೇಖಾ ಚಿತ್ರಗಳ ಮೂಲಕ ಬರೆದ ವಿನ್ಯಾಸದ ಪುನರುತ್ಪಾದನೆಯಾಗಿದ್ದು, ಇದನ್ನು ಮುದ್ರಣಶಾಯಿಯನ್ನು ಮುದ್ರಣ ಫಲಕದಿಂದ ಮುದ್ರಣ ಕಾಗದ ಅಥವಾ ಇತರ ಸೂಕ್ತ ಸಾಮಗ್ರಿಯ ಮೇಲೆ ವರ್ಗಾಯಿಸಿರುವುದರಿಂದ

ಪಡೆಯುಬಹುದು. ಗ್ರಾಫಿಕ್ ವಿದಾನದ ಸಹಾಯದಿಂದ ಕಲಾತ್ಮಕ ಪರಿಕಲ್ಪನೆಯನ್ನು 'ಮುದ್ರಣ ಫಲಕ'ದಲ್ಲಿ ಕಾಣಬಹುದಾಗಿದೆ. ಫಲಕದಲ್ಲಿನ ಮುದ್ರಣ ಭಾಗಕ್ಕೆ ಶಾಯಿಯನ್ನು ಹಾಕಿದಾಗ ಮುದ್ರಣವಾಗುತ್ತದೆ. ಮುದ್ರಣ ಫಲಕವನ್ನು ವಿವಿಧ ವಸ್ತುಗಳಿಂದ ಮಾಡಬಹುದಾಗಿದೆ. ಉದಾ: ಮರ, ಲಿನೋಲಿಯಂ, ಶಿಲೆ, ರಬ್ಬರ್, ಪ್ಲಾಸ್ಟಿಕ್, ಜಿಂಕ್ ಮುಂತಾದವುಗಳು. ಇದಲ್ಲದೆ ಒಂದೇ ಮುದ್ರಣ ಫಲಕದ ವಿವಿಧ ಕೆಲಸಗಳ ಮುಖಗಳನ್ನು ದಾಖಲಿಸುವಂಥ ಪ್ರತಿಗಳು ಇರುತ್ತವೆ. ಈ ಪ್ರತಿಗಳನ್ನು 'ಸ್ಥಿತಿ' ಎಂದು ಕರೆಯುತ್ತೇವೆ ಹಾಗೂ ಕಲಾವಿದನು ಮುದ್ರಣ ಗುಗುತಿನ ಬಗ್ಗೆ ಪ್ರಾಮಾಣೀಕರಿಸಬೇಕು.

ಕಲಾಕೃತಿಯ ಕೆಳತುದಿಯಲ್ಲಿ ಚಿತ್ರಕಲಾವಿದನ ಸಂಖ್ಯೆಯಿದ್ದು ಸಹಿ ಮತ್ತು ದಿನಾಂಕ ಇರುತ್ತದೆ. ಕೆಳಗಡೆ ಬಲಭಾಗದ ಮೂಲೆಯಲ್ಲಿ ಅಂಶದ ಸ್ಥಾನದಲ್ಲಿ ಆವೃತ್ತಿಯಲ್ಲಿ ಒಟ್ಟು ಮುದ್ರಣಗಳ ಸಂಖ್ಯೆಯನ್ನು ಸೂಚಿಸಲಾಗುತ್ತದೆ. ಒಂದು ಕೆತ್ತನೆಯ ಫಲಕದಿಂದ ತಯಾರಿಸಿದ ಪ್ರತಿಯೊಂದು ಪ್ರತಿಯನ್ನು ಮೂಲ ಪ್ರತಿಯೆಂದೇ ಪರಿಗಣಿಸಬೇಕಾದರೆ, ಆವೃತ್ತಿಯ ಗಾತ್ರವು ಕೆಲವು ಮಿತಿಗಳನ್ನು ಮೀರತಕ್ಕದ್ದಲ್ಲ. ಗ್ರಾಫಿಕ್ ಕಲೆಯನ್ನು ನಾಲ್ಕು ಪ್ರಬೇಧಗಳಾಗಿ ವಿಂಗಡಿಸಲಾಗಿದೆ. ಹಲವಾರು ವರ್ಷಗಳಿಂದ ಕಲಾವಿದರು ಈ ಎಲ್ಲ ಮುದ್ರಣದ ಸಾಧ್ಯತೆಯನ್ನು ಬಳಸಿಕೊಂಡು ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಇಲ್ಲಿ ಸೌಂದರ್ಯಕ್ಕೆ ಕೊಡುವಷ್ಟೇ ಮಹತ್ವ ತಂತ್ರಕ್ಕೆ ಕೊಡುತ್ತಾರೆ. ಪ್ರಯೋಗಶೀಲರಿಂದ ಹಲವಾರು ಮಿಶ್ರ ಮಾಧ್ಯಮಗಳ ಹೊಸ ತಂತ್ರ, ಹೊಸ ರೂಪಗಳನ್ನು ಕಾಣಬಹುದು.

**ಗ್ರಾಫಿಕ್ ಮುದ್ರಣದ ನಾಲ್ಕು ಪ್ರಬೇಧಗಳು**

| ಸೆರಿಗ್ರಾಫ್ | ಉಬ್ಬಚ್ಚು | ಸಮತಲ. | ಇಂಟಾಗ್ಲಿಯೋ |
|---|---|---|---|
| ಪೇಪರ್ ಕಟಿಂಗ್ | ಕಾರ್ಡ್‌ಬೋರ್ಡ್ | - | - |
| - | - | ಲಿಥೋ ಗ್ರಾಫ್ | ಎಚ್ಚಿಂಗ್ |
| ಬ್ಲಾಕ್ ಔಟ್ | ವುಡ್ ಕಟ್ | - | - |
| ಸಿಲ್ಕ್‌ಸ್ಕ್ರೀನ್ | - | ಆಫ್‌ಸೆಟ್ | ಎನ್‌ಗ್ರೇವಿಂಗ್ |
| ಅ) ನೇರ | ಲಿನೋ ಕಟ್ | | ಅಕ್ವಾಟಿಂಟ್ |
| ಆ) ಪರೋಕ್ಷ | ಬ್ಲಾಕ್ | | |
| - | ಪಡಿಯಚ್ಚು | | ಮೆಜಾಟಿಂಟ್ |
| ಸ್ಟೆನ್ಸಿಲ್ | ಅ) ರೇಖಾ ಅಚ್ಚು | | - |
| | ಆ) ಬಿಂದು (ಛಾಯೆ) | | ಡ್ರೈಪಾಯಿಂಟ್ |
| | | | - |

ಇದಲ್ಲದೆ, ಛಾಯಾಚಿತ್ರ, ಅಮೋನಿಯಾ ಮುದ್ರಣ, ಬ್ರೊಮೈಡ್, ಜೆರಾಕ್ಸ್, ಮಾನೋಪ್ರಿಂಟ್‌ಗಳಲ್ಲದೆ ಇತ್ತೀಚೆಗೆ ಕಂಪ್ಯೂಟರ್ ಆರ್ಟನ್ನು ಗ್ರಾಫಿಕ್ ಕಲೆ ಎಂದು ಪರಿಗಣಿಸಲಾಗಿದೆ.

**ಮರಿ**

## ಗ್ರಾಫಿಕ್ ಮುದ್ರಣ (ಮೂಲ ಅಂಶಗಳು)

**ಬಿಂದು (Point)**

ಬಿಂದುವು ಅಗಲವಾಗಲೀ, ಉದ್ದವಾಗಲೀ ಇಲ್ಲದ ಒಂದು ಗುರುತು. ಅದು ಸ್ಥಾನವನ್ನು ನಿರ್ದೇಶಿಸುತ್ತದೆ. ಉದ್ದ ಅಗಲಗಳು ಇಲ್ಲದ್ದರಿಂದ ಅದು ಅವಕಾಶದಲ್ಲಿ ಹರಡಿಕೊಳ್ಳುವುದಿಲ್ಲ. ಬಿಂದುವು ರೇಖೆಯ ಆದಿ ಮತ್ತು ಅಂತ್ಯ ಎರಡು ರೇಖೆಗಳು ಒಂದನ್ನೊಂದು ಕೂಡುವೆಡೆ ಅಥವಾ ಛೇದಿಸುವೆಡೆಯಲ್ಲಿ ಬಿಂದುವು ಕಂಡು ಬರುತ್ತದೆ.

**ರೇಖೆ (Line)**

ಬಿಂದುವೊಂದು ಚಲಿಸಿದಂತೆ ಅದರ ಪಾತ್ರವು ರೇಖೆಯಾಗುತ್ತದೆ. ರೇಖೆಗೆ ಉದ್ದವಿದೆ ಆದರೆ ಅಗಲವಿಲ್ಲ. ರೇಖೆಗೆ ಸ್ಥಾನವಿದೆ ಮತ್ತು ದಿಶೆಯಿದೆ. ಎರಡು ಬಿಂದುಗಳು ರೇಖೆಯ ಪರಿಮಿತಿಯಾಗಿದ್ದು, ರೇಖೆಯು ಸಮತಲದ ಗಡಿಯಾಗುತ್ತದೆ.

**ಸಮತಲ (Plane)**

ರೇಖೆಯೊಂದು ಚಲಿಸಿದಾಗ (ತನ್ನ ಆಂತರಿಕ ಚಲನೆಯ ದಿಶೆಯನ್ನು ಬಿಟ್ಟು) ಸಮತಲವೊಂದು ಸೃಷ್ಟಿಯಾಗುತ್ತದೆ. ಸಮತಲಕ್ಕೆ ಉದ್ದ, ಅಗಲಗಳಿದ್ದು, ಸ್ಥಾನ ಮತ್ತು ದಿಶೆ ಕೂಡ ಇದೆ. ರೇಖೆಗಳು ಸಮತಲದ ಪರಿಮಿತಿಯಾಗಿದ್ದು ಘನದ ಅಂಚನ್ನು ಗುರುತಿಸುತ್ತದೆ.

**ಘನತ್ವ (Volume)**

ಸಮತಲವೊಂದರ ಚಲನೆ (ತನ್ನ ಆಂತರಿಕ ಚಲನೆಯ ದಿಶೆಯನ್ನು ಬಿಟ್ಟು) ಘನವನ್ನು ಉಂಟುಮಾಡುತ್ತದೆ. ಅವಕಾಶದಲ್ಲಿ ಇದಕ್ಕೆ ಸ್ಥಾನವಿದ್ದು, ಘನವು ಸಮತಲಗಳಿಂದ ಉಂಟಾಗಿರುತ್ತದೆ ದ್ವಿಮಾನದಲ್ಲಿ ಘನವು ಕಾಲ್ಪನಿಕವಾಗಿರುತ್ತದೆ.

**ಆಕಾರ (Shape)**

ಯಾವಾವುದನ್ನು ನೋಡಲು ಸಾಧ್ಯವೋ ಅದೆಲ್ಲದಕ್ಕೂ ತನ್ನದೇ ಆದ ಅನನ್ಯ ಆಕಾರವಿದ್ದು ನಮ್ಮ ಗ್ರಹಿಕೆಗೆ ದಕ್ಕುತ್ತದೆ. ಉದಾ: ವೃತ್ತ, ಚೌಕ, ತ್ರಿಕೋನ ಇತ್ಯಾದಿ ಬೇರೆ ಬೇರೆ ಆಕಾರಗಳು.

**ಗಾತ್ರ (Size)**

ಎಲ್ಲ ಆಕಾರಗಳಿಗೂ ಗಾತ್ರವಿದೆ. ದೊಡ್ಡದು ಅಥವಾ ಸಣ್ಣದು ಎಂದು ಹೇಳುವಾಗ ಗಾತ್ರವು ಒಂದನ್ನೊಂದು ಅವಲಂಬಿಸಿಯೇ ನಿರ್ಧರಿತವಾಗುತ್ತದೆ. ಅಷ್ಟೇ ಅಲ್ಲ ಗಾತ್ರವನ್ನು ದೈಹಿಕವಾಗಿ ಅಳೆಯಬಹುದು.

**ಬಣ್ಣ (Colour)**

ಒಂದು ಬಣ್ಣ ಅದರ ಹಿನ್ನೆಲೆಯಿಂದ ಬೇರ್ಪಡಿಸುವುದರಿಂದ ಆಕಾರವನ್ನು ಗುರುತಿಸಬಹುದು. ಇಲ್ಲಿ ಬಣ್ಣವನ್ನು ಅದರ ಪೂರ್ಣ ಸಾಮರ್ಥ್ಯದಲ್ಲಿ ಕಾಣುವುದಲ್ಲದೆ, ಪ್ರತಿಯೊಂದೂ ಬಣ್ಣದ

ಅನೇಕ ಛಾಯೆಗಳು, ಕರಿ, ಬಿಳಿ ಮತ್ತು ಮಧ್ಯಮ ವರ್ಗದ ಬೂದು ಬಣ್ಣಗಳೂ ಕಂಡು ಬರುತ್ತವೆ.

**ಮೈವಳಿಕೆ (Texture)**

ಮೈವಳಿಕೆ ಆಕಾರದ ಮೇಲ್ಮೈ ಗುಣಗಳನ್ನು ತಿಳಿಸುತ್ತದೆ. ಇದು ಸರಳವೋ, ಅಲಂಕಾರಿಕವೋ ಆಗಿರಬಹುದು. ನಯ ಅಥವಾ ಒರಟಾಗಿರಬಹುದು. ಮೈವಳಿಕೆಯು ನಮ್ಮ ಸ್ಪರ್ಶ ಮತ್ತು ದೃಶ್ಯ ಇಂದ್ರಿಯವೆರಡಕ್ಕೂ ಗೋಚರವಾಗುತ್ತದೆ.

**ಮೂಲ ಮುದ್ರಿತ ಕೃತಿ (Original print)**

೧) ಲೋಹ, ಕಲ್ಲು, ಮರದ ಅಚ್ಚು ಅಥವಾ ಸ್ಟೆನ್ಸಿಲ್‌ಗಳು ಇತರ ವಸ್ತುಗಳ ಮೇಲೆ ಕಲಾವಿದನೇ ಮುದ್ರಣವನ್ನು ಉದ್ದೇಶಿಸಿಯೇ ಮೂಲ ಚಿತ್ರವನ್ನು ರಚಿಸಿರಬೇಕು

೨) ಮುದ್ರಿತವಾಗುವ ಪ್ರತಿ ಈ ಮೇಲೆ ಹೇಳಿದ ಮೂಲದಿಂದಲೇ ಮಾಡಿದ್ದಾಗಿರಬೇಕು.

೩) ಮುದ್ರಣವನ್ನು ಕೈಯಿಂದಲೇ ಹಸ್ತ ಮುದ್ರಣ ತಂತ್ರವನ್ನು ಉಪಯೋಗಿಸಿ ಮಾಡಬೇಕು.

೪) ಎಲ್ಲ ಪ್ರತಿಗಳ ಗುಣ ಮಟ್ಟವನ್ನೂ ಕಲಾವಿದ ಪರೀಕ್ಷಿಸಿ ಆವೃತ್ತಿಯ ಸಂಖ್ಯೆ ಹಾಗೂ ದಿನಾಂಕದೊಂದಿಗೆ ಸಹಿ ಮಾಡಬೇಕು.

**ರಿಲೀಫ್ ಮುದ್ರಣ (Relief printing) (ಉಬ್ಬಚ್ಚು ಮುದ್ರಣ)**

ರಿಲೀಫ್ ಮುದ್ರಣವು ಇತರ ವಿಧಾನಗಳಿಗಿಂತ ಪುರಾತನವಾದದ್ದು. ಇಂಕನ್ನು



ನಂದಲಾಲ್‌ಬೋಸ್

ಮೇಲುಳಿದ ಭಾಗಗಳಿಗಷ್ಟೆ ಹಚ್ಚಿ ಆದರಿಂದ ಆ ಮರದ ಅಚ್ಚು ಅಥವಾ ಲೋಹದ ಅಚ್ಚಿನ ಪ್ರತಿಯನ್ನು ತೆಗೆಯಲಾಗುತ್ತದೆ. ಯಾವಯಾವ ಜಾಗದಲ್ಲಿ ಕಲಾವಿದ ಮರವನ್ನು ಕೆತ್ತಿ ತೆಗೆದಿದ್ದಾನೋ, ಅವು ಮೈಲ್ಮೈಯಿಂದ ಕೆಳಗೆ ಉಳಿದು ಮುದ್ರಣವಾಗದೆ ಖಾಲಿ ಹಾಳೆಯಾಗಿ ಕಾಣುತ್ತದೆ. ರಿಲೀಫ್ ಮುದ್ರಣ ತಂತ್ರದಲ್ಲಿ ಮರ, ಲಿನೋ, ಕಲ್ಲು, ಪ್ಲಾಸ್ಟರ್ ಆಫ್ ಪ್ಯಾರಿಸ್, ಪ್ಲಾಸ್ಟಿಕ್ ಲೋಹಗಳು, ಕಾರ್ಡ್‌ಗಳು, ಆಲೂಗಡ್ಡೆ, ಬಟ್ಟೆ ಹೀಗೆ ಅನೇಕ ಮಾಧ್ಯಮಗಳು ಬಳಕೆಯಾಗುತ್ತವೆ. ಹೆಚ್ಚು ಜನಪ್ರಿಯಾಗಿ ಕಂಡುಬರುವುದೆಂದರೆ ವುಡ್‌ಕಟ್, ಲಿನೋಕಟ್ ಮತ್ತು ವುಡ್ ಎನ್‌ಗ್ರೇವಿಂಗ್.

**ವುಡ್‌ಕಟ್ (Wood cut)**

ಪುರಾತನ ಈಜಿಪ್ಷಿಯನ್ನರು, ಭಾರತೀಯರು ಹಾಗೂ ಅರಬರು ಮರದಚ್ಚು ಮುದ್ರಣ ತಂತ್ರವನ್ನು ಬಟ್ಟೆಗಳ ಮೇಲೆ ವಿನ್ಯಾಸವನ್ನು ಮುದ್ರಿಸಲು ಬಳಸುತ್ತಿದ್ದರು. ಏಳನೇ ಶತಮಾನದ ವೇಳೆಗೆ ಚೀನಾದಲ್ಲಿ ಪಾಠ(text) ಮತ್ತು ವಿನ್ಯಾಸ ಎರಡನ್ನೂ ಒಂದೇ ಅಚ್ಚಿನ ಮೇಲೆ ಕೆತ್ತಿ



ಯುರೋಪಿನಲ್ಲಿ ೧೩ನೇ ಶತಮಾನದಲ್ಲಿ ಕಾಗದದ ಬಳಕೆ ಆರಂಭವಾಗಿ ೧೪ನೇ ಶತಮಾನದ ವೇಳೆಗೆ ಮರದಚ್ಚನ್ನು ಮುದ್ರಣದಲ್ಲಿ ಬಳಸುವ ತಂತ್ರ ಸುಧಾರಿತಗೊಂಡಿತು. ಆಲ್ಬರ್ಟ್ ಡ್ಯೂರರ್ ಈ ತಂತ್ರವನ್ನು ಹೆಚ್ಚೆಚ್ಚು ಶೋಧಿಸಿ, ಅನೇಕ ಸುಧಾರಣೆಗಳನ್ನು ತಂದು ಅದನ್ನು ಕೇವಲ ಮುದ್ರಣ ತಂತ್ರದ ಸ್ಥಾನದಿಂದ ಮೇಲೆ ತಂದ. ಚೀನ ಮತ್ತು ಜಪಾನುಗಳಲ್ಲಿ ೧೮ ಮತ್ತು ೧೯ನೇ ಶತಮಾನದ ವೇಳೆಗೆ ಮರದಚ್ಚು ಮುದ್ರಣ ಕಲೆಯು ತನ್ನ ತುರೀಯಾವಸ್ಥೆಯನ್ನು ಪಡೆಯಿತು. ಜಪಾನಿನ ಉಕಿಯೊ-ಮಿ 'ತೇಲುವ ಲೋಕ'ದ ಶೈಲಿಯು ಮಾಸನೋಬು, ಶರಾಕು, ಉಪಮಾರೋ, ಹಿಲೋಕ್ಸಿಗೆ, ಹೊರಸೈ ಇವರ ಕೃತಿಗಳಲ್ಲಿ ಸಾರ್ಥಕತೆಯನ್ನು ಪಡೆಯಿತು. ಫ್ರೆಂಚ್ ಕಲಾವಿದರಾದ ಗಾಗಿನ್‌ನಂತಹವರು ಈ ಜಪಾನಿ ಮರದಚ್ಚು ಕೃತಿಗಳಿಂದ ಪ್ರಭಾವಿತಗೊಂಡರು. ಜರ್ಮನಿಯಲ್ಲಿ ಈ ಶತಮಾನದ ಮೊದಲಲ್ಲಿ 'ದಿ ಬ್ರಿಡ್ಜ್' ಎಂಬ ಸಮೂಹವು ಈ ಮಾಧ್ಯಮವನ್ನು ಬಳಸಿತು. ೧೯೦೫ರಲ್ಲಿ ಡ್ರೆಸ್ಡನ್‌ನಲ್ಲಿ ಆರಂಭವಾದ ಈ ಗುಂಪು ಜರ್ಮನಿಯ ಪೂರ್ವೈತಿಹಾಸಿಕ ಕಲೆಗಳಲ್ಲಿ ಅಪಾರ ಆಸಕ್ತಿಯನ್ನು ತೋರಿತು. ಈ ಕಲಾವಿದರು ಮರದಚ್ಚು ಮಾಧ್ಯಮದ ನೇರ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಬಹು ಚೆನ್ನಾಗಿ ದುಡಿಸಿಕೊಂಡರು.

### ವುಡ್ ಕಟ್ ಉಪಕರಣಗಳು (Woodcut tools)



ವುಡ್‌ಕಟ್‌ನಲ್ಲಿ ಬಳಸುವ ಉಪಕರಣಗಳಲ್ಲಿ ಮೂರು ಮುಖ್ಯವಾದುವು ಚಾಕು, V ಆಕಾರದ ಹಾಗೂ U ಆಕಾರದ ಕೆತ್ತುವ ಸಾದನಗಳು. ಚಾಕುವನ್ನು ಹೊರ ಅಂಚಿನ ರೇಖೆಗಳನ್ನು ಕೊಯ್ಯುವುದಕ್ಕಾಗಿ ಮತ್ತು ಇನ್ನುಳಿದ ಎರಡನ್ನು ಮರದ ಭಾಗಗಳನ್ನು ಕೆತ್ತಿ ಹೊರತೆಗೆಯುವುದಕ್ಕಾಗಿ ಬಳಸುವರು. ಅಗಲವಾದ ಭಾಗಗಳನ್ನು ಕೆತ್ತಲು ಚಪ್ಪಟೆಯಾದ ಉಳಿಗಳನ್ನು ಸಹ ಬಳಸಬಹುದು.

ಈ ರೀತಿಯ ಸಾಂಪ್ರದಾಯಿಕ ಉಪಕರಣಗಳನ್ನು ಬಿಟ್ಟು ಲೋಹದ ಒತ್ತಚ್ಚುಗಳನ್ನು ಬೇರೆ ಬೇರೆ ಮೈವಳಿಕೆಗಳ ಸೃಷ್ಟಿಗಾಗಿ ಬಳಸಬಹುದು. ವಿದ್ಯುತ್ ಡ್ರಿಲ್‌ಗಳನ್ನು ಮರವನ್ನು ಕೊಯ್ಯಲು, ಕೆತ್ತಲು, ರಂಧ್ರ ಮಾಡಲು ಬಳಸಬಹುದು.

### ವುಡ್ ಎನ್‌ಗ್ರೇವಿಂಗ್ (Wood engraving)

ತಾಮ್ರದ ಮೇಲೆ ಬಳಸುವ ಎನ್‌ಗ್ರೇವಿಂಗ್ ಉಪಕರಣವನ್ನು ಅಡ್ಡಕೋಯ್ದು ಬಾಕ್ಸ್‌ವುಡ್ ಮೇಲೆ ಬಳಸುವ ತಂತ್ರವನ್ನು ಥಾಮಸ್ ಬೆವಿಕ ಎಂಬುವನು ೧೮ನೇ ಶತಮಾನದಲ್ಲಿ ಆರಂಭಿಸಿದ.

ವುಡ್ ಎನ್‌ಗ್ರೇವಿಂಗ್ ಪುಸ್ತಕಗಳಿಗೆ ಸಾಂದರ್ಭಿಕ ಚಿತ್ರಗಳನ್ನು ಒದಗಿಸುವ ತಂತ್ರವಾಯಿತು. ನಂತರ ೧೯ನೇ ಶತಮಾನದ ಕೊನೆಯ ವೇಳೆಗೆ ಛಾಯಗ್ರಹಣ ತಂತ್ರದಿಂದ ತಯಾರಿಸಿದ ಲೋಹದ ಬ್ಲಾಕ್‌ಗಳಿಂದಾಗಿ ವುಡ್ ಎನ್‌ಗ್ರೇವಿಂಗ್ ಜನಪ್ರಿಯತೆ ಕಳೆದುಕೊಂಡು ಕೆಲವೇ ಕಲಾವಿದರು ಬಳಸುವ ತಂತ್ರವಾಯಿತು.

### ವುಡ್ ಎನ್‌ಗ್ರೇವಿಂಗ್ ಉಪಕರಣಗಳು (Wood engraving tools)



ವುಡ್ ಎನ್‌ಗ್ರೇವಿಂಗ್ ಉಪಕರಣಗಳನ್ನು ಉತ್ತಮ ದರ್ಜೆಯ ಕಬ್ಬಿಣದಿಂದ ತಯಾರಿಸಿ ನಾಯಯಿಕೊಡೆಕಾರದ ಹಿಡಿಯಲ್ಲಿ ಕೂಡ್ರಿಸಲಾಗುತ್ತದೆ.

ಎನ್‌ಗ್ರೇವಿಂಗ್‌ನಲ್ಲಿ ಮೂಲ ಉಪಕರಣವೇ ಗ್ರೇವರ್. ಇದು ಚೌಕ ಅಥವಾ ವಜ್ರಾಕೃತಿಯಾಗಿರುತ್ತದೆ. ಹಿಡಿಯಲ್ಲಿ ಇದನ್ನು ಓರೆಯಾಗಿ ಕೂರಿಸಲಾಗುತ್ತದೆ. ಚೌಕದ ಗ್ರೇವರ್‌ಗಳು ಸ್ವಲ್ಪ ಅಗಲವಾದ ರೇಖೆಯನ್ನೂ, ವಜ್ರಾಕಾರದ ಗ್ರೇವರ್‌ಗಳು ಸೂಕ್ಷ್ಮವಾದ ರೇಖೆಗಳನ್ನು, Tint ಉಪಕರಣಗಳನ್ನು ನೇರವಾದ ಸರಳ ರೇಖೆಗಳನ್ನು ಕೆತ್ತಲು ಬಳಸಲಾಗುವುದು.

### ಲಿನೋಕಟ್ (Lino cut)

ವಿಶೇಷ ಕಾರ್ಕ್ ರೀತಿಯ ವಸ್ತುವಿನಿಂದ ತಯಾರಾದ್ದು ಲಿನೋಲಿಯಮ್. ವುಡ್‌ಕಟ್

ನಂತಹುದೇ ಪರಿಣಾಮವನ್ನು ಲಿನೋಕಟ್‌ನಲ್ಲಿ ಪಡೆಯಬಹುದು. ಲಿನೋದ ಮೇಲ್ಮೈ ಮೃದುವಾಗಿದ್ದು ಕೆತ್ತನೆ ಸುಲಭ. ಆದರೆ ಉಪಕರಣವು ಚೂಪಾಗಿಲ್ಲದಿದ್ದರೆ ಒರಟಾದ ರೇಖೆಗಳು ಉಂಟಾಗುತ್ತವೆ.

ಲಿನೋವನ್ನು ಕೆತ್ತುವ ಮುಂಚೆ ಪ್ಲೆವುಡ್‌ಗೆ ಅಂಟಿಸುವುದು ವಾಡಿಕೆ. ಇದರಿಂದ ಬಹುವರ್ಣದ ಮುದ್ರಣವನ್ನು ಮಾಡುವಾಗ ರಿಜಿಸ್ಟ್ರೇಷನ್ ಮಾಡುವುದು ಸುಲಭ. ಲಿನೋವನ್ನು ಮುದ್ರಣ ಮಾಡುವುದಕ್ಕೆ ಹಸ್ತ ಮುದ್ರಣ ತಂತ್ರವನ್ನೋ ಅಥವಾ ಯಾಂತ್ರಿಕ ಮುದ್ರಣ ತಂತ್ರವನ್ನೋ ಉಪಯೋಗಿಸಬಹುದು.

**ರಿಲೀಫ್ ಮುದ್ರಣದ ತಂತ್ರಗಳು (Relief Printing Techniques)**

ಹಸ್ತ ಮುದ್ರಣ: ಸೂಕ್ಷ್ಮವಾದ ಕೆತ್ತನೆಯಿರುವ ಅಚ್ಚನ್ನು(Block) ಮುದ್ರಿಸಲು ರಬ್ಬರಿನ ರೋಲರ್ ಮತ್ತು ಜಿಗುಟಾದ ಇಂಕನ್ನು ಬಳಸಿದಲ್ಲಿ ಉತ್ತಮ. ಮೃದುವಾದ ರೋಲರ್ ಮತ್ತು ಸಡಿಲವಾದ ಇಂಕನ್ನು ಉಪಯೋಗಿಸಿದಲ್ಲಿ ಮುದ್ರಣವು ಮುಂದುವರೆದಂತೆ ರೇಖೆಗಳು ಮುಚ್ಚಿಹೋಗುವ ಸಂಭವವುಂಟು. ರೋಲರ್ ಇಲ್ಲದಿದ್ದಲ್ಲಿ ಡ್ಯಾಬರ್ (ಚರ್ಮದ ಉಬ್ಬಿದ ತಟ್ಟೆಯಂತಹ ಉಪಕರಣ) ಅಥವಾ ಕುಂಚವನ್ನು ಸಹ ಬಳಸಬಹುದು.

ಈ ವಿಧಾನದಲ್ಲಿ ಬಳಸುವ ಕಾಗದ ತೆಳುವಾಗಿದ್ದು ಇಂಕನ್ನು ಹೀರಿಕೊಳ್ಳುವ ಗುಣ ಹೊಂದಿರುತ್ತೆ. ಮುದ್ರಣಕ್ಕೆ ಮುನ್ನ ಕಾಗದವನ್ನು ಹಸಿಯಾದ ಇನ್ನೆರಡು ಕಾಗದಗಳ ನಡುವೆ ಇಟ್ಟಲ್ಲಿ ತೇವವಾದ ಕಾಗದವು ಉತ್ತಮ ಗುಣಮಟ್ಟದ ಮುದ್ರಣಕ್ಕೆ ಕಾರಣವಾಗುತ್ತದೆ.

ಕಾಗದವನ್ನು ಇಂಕನ್ನು ಹರಡಿದ ಅಚ್ಚಿನ ಮೇಲೆ ಇಟ್ಟು ಹಿಂದಿನಿಂದ ಅದನ್ನು ಉಜ್ಜಿ ಚಿತ್ರವನ್ನು ಕಾಗದಕ್ಕೆ ವರ್ಗಾಯಿಸಲಾಗುತ್ತದೆ. ಹೀಗೆ ಉಜ್ಜಲು ಯಾವುದೇ ನಯವಾದ, ಗೋಲಾಕಾರದ ವಸ್ತುವನ್ನೂ ಬಳಸಬಹುದು. ಚಮಚದ ಹಿಂಬದಿ ಸೂಕ್ತವಾದ್ದು.

**ಯಾಂತ್ರಿಕ ಮುದ್ರಣ**

ಅಚ್ಚನ್ನು ಮುಂಚಿನಂತೆಯೇ ಇಂಕನ್ನು ಸವರಿ ತಯಾರು ಮಾಡಲಾಗುತ್ತದೆ. ಯಂತ್ರದಲ್ಲಿ ಹಾಯಿಸುವ ಮುನ್ನ ಅಚ್ಚಿನ ಕೆಳಬದಿಗೆ ಹಾಗೂ ಕಾಗದದ ಮೇಲ್ಬದಿಗೆ ಒತ್ತು ಕಾಗದ ನೀಡಬೇಕಾದ್ದು ಅಗತ್ಯ. ಇದಕ್ಕೆ ಕಾಗದದ ಬದಲಿಗೆ ಕೆಲವೊಮ್ಮೆ ರಬ್ಬರ್ ಹಾಳೆಗಳನ್ನು ಬಳಸುತ್ತಾರೆ. ಯಂತ್ರದ ಒತ್ತಡವನ್ನೂ ಸಹ ಮುದ್ರಣಕ್ಕೆ ಮುಂಚೆಯೇ ನಿರ್ಧರಿಸಬೇಕು. ಕಮ್ಮಿ ಒತ್ತಡವಿದ್ದಲ್ಲಿ ಗಾಢವಾದ ಪ್ರತಿಯನ್ನು ತೆಗೆಯಲಾಗುವುದಿಲ್ಲ. ಒತ್ತಡ ಜಾಸ್ತಿಯಾದಲ್ಲಿ ಸೂಕ್ಷ್ಮವಾದ ವಿವರಗಳು ನಿಧಾನವಾಗಿ ಮುಚ್ಚಿ ಹೋಗುತ್ತವೆ.

**ರಿಲೀಫ್ ಮುದ್ರಣದ ಇತರ ತಂತ್ರಗಳು**

ರಿಲೀಫ್ ಮುದ್ರಣದ ಅಚ್ಚನ್ನು ತಯಾರಿಸಲು, ಮರ ಮತ್ತು ಲಿನೋಗಳೇ ಅಲ್ಲದೆ ಇತರ ಮಾಧ್ಯಮಗಳನ್ನೂ ಸಹ ಬಳಸಬಹುದು. ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ನಯವಾದ ಮೇಲ್ಮೈಯಲ್ಲಿ ಅನೇಕ ಗುರುತುಗಳನ್ನು ಒತ್ತಿ ಅದರ ಮುದ್ರಣವನ್ನು ಮಾಡಬಹುದು. ಆದರೆ ಮುದ್ರಿಸುವ ಮುನ್ನ ಪಿ.ವಿ.ಎ. ಅಥವಾ ಶೆಲ್ಲಾಕ್‌ನ ಒಂದು ತೆಳು ಪದರವನ್ನು ಪ್ಲಾಸ್ಟರ್ ಮೇಲೆ ನೀಡುವುದುಗತ್ಯ.

ಆಕ್ರಲಿಕ್ ಹಾಳೆ (ಪರ್ಸ್‌ಫೆಕ್ಸ್, ಲೂಸೈಟ್)ಗಳನ್ನೂ ಎನ್‌ಗ್ರೇವಿಂಗ್‌ಗೆ ಬಳಸಬಹುದು. ಅಷ್ಟೇ ಅಲ್ಲ ಕಾರ್ಡ್ ಬೋರ್ಡ್‌ಗಳ ಹಾಳೆಯನ್ನು ಬೇರೆ ಬೇರೆ ಆಕಾರದಲ್ಲಿ ಕತ್ತರಿಸಿ, ಯಾವುದಾದರೊಂದು ಗಟ್ಟಿ ಹಾಳೆಯ ಮೇಲೆಯೋ ಅಥವಾ ಪ್ಲೈವುಡ್‌ನ ಮೇಲೋ ಅಂಟಿಸಿ. ಆದರ ಮೇಲೆ ಶೆಲ್ಲಾಕ್‌ನ ಪದರ ಸವರಿ ನಂತರ ಪ್ರತಿ ತೆಗೆಯಬಹುದು.

**ಇಂಟಾಗ್ಲಿಯೋ (Intaglio)**

ಇಂಟಾಗ್ಲಿಯೋ ಮುದ್ರಣ ತಂತ್ರದಲ್ಲಿ ರೇಖೆಗಳನ್ನು ಲೋಹದ ಪ್ಲೇಟ್‌ನ ಆಳಕ್ಕೆ ಕೆತ್ತಲಾಗುತ್ತದೆ ಅಥವಾ ಕೊರೆಯಲಾಗುತ್ತದೆ. ತಯಾರಾದ ಪ್ಲೇಟನ್ನು ಇಂಕ್ ಹಚ್ಚಿ ನಂತರ ಒರೆಸಿದಾಗ ಕೊರೆದ ಹಳ್ಳದಂತಹ ರೇಖೆಯಲ್ಲಿ ಮಾತ್ರ ಇಂಕ್ ಉಳಿದುಕೊಂಡು ಮೇಲ್ಮೈಯು



ಶುಭ್ರವಾಗುತ್ತದೆ. ತೇವವಾದ ಮೃದು ಕಾಗದವನ್ನು ಪ್ಲೇಟ್‌ನ ಮೇಲಿಟ್ಟು, ಹಾಳೆ ಮತ್ತು ಪ್ಲೇಟ್ ಎರಡನ್ನೂ ಒಟ್ಟಿಗೇ ಎಚ್ಚಿಂಗ್ ಪ್ರೆಸ್‌ನಲ್ಲಿ ಹಾಯಿಸಲಾಗುತ್ತದೆ. ಎಚ್ಚಿಂಗ್ ಯಂತ್ರದಲ್ಲಿ ಮೇಲೆ ಕೆಳಗೆ ಎರಡೂ ಕಡೆಗಳಲ್ಲಿ ಇರುವ ಕಬ್ಬಿಣದ ರೋಲರ್‌ಗಳು ಬೀರುವ ಒತ್ತಡಕ್ಕೆ ಇಂಕ್ ಕಾಗದಕ್ಕೆ ವರ್ಗಾವಣೆಯಾಗುತ್ತದೆ.

ಇಂಟಾಗ್ಲಿಯೋ ಮುದ್ರಣದ ಎರಡು ಪ್ರಮುಖ ತಂತ್ರಗಳೆಂದರೆ ಎನ್‌ಗ್ರೇವಿಂಗ್ ಮತ್ತು ಎಚ್ಚಿಂಗ್. ಎನ್‌ಗ್ರೇವಿಂಗ್‌ನಲ್ಲಿ ಬಿಂದು ಮತ್ತು ರೇಖೆಗಳನ್ನು ಬ್ಯೂರಿನ್ ಹಾಗೂ ಇತರ ಉಪಕರಣಗಳನ್ನು ಬಳಸಿ ಕೈಯಿಂದ ಕೆತ್ತಲಾಗುತ್ತದೆ. ಆದರೆ ಎಚ್ಚಿಂಗ್‌ನಲ್ಲಿ ಆಮ್ಲ ನಿರೋಧಕ ಪದರವೊಂದನ್ನು ಪ್ಲೇಟ್ ಮೇಲೆ ಸವರಿ, ನಂತರ ಅದರಲ್ಲಿ ಚಿತ್ರವನ್ನು ಗೀಚಿದ ಜಾಗದಲ್ಲಿ ಆಮ್ಲವು ಪ್ಲೇಟನ್ನು ಕೊರೆಯುತ್ತದೆ.

**ಎನ್‌ಗ್ರೇವಿಂಗ್ (Engraving)**

ಎನ್‌ಗ್ರೇವಿಂಗ್‌ನ ಬಳಕೆಯನ್ನು ಪೂರ್ವೈತಿಹಾಸಿಕ ಮನುಷ್ಯನವರೆಗೆ ಗುರುತಿಸಬಹುದು. ಕಲ್ಲು ಮತ್ತು ಗುಹೆಯಂತಹ ಒರಟಾದ ಮೇಲ್ಭಾಗಗಳ ಮೇಲೆ ರೇಖಾಚಿತ್ರಗಳನ್ನು ಕೊರೆದಿದ್ದಾನೆ. ಎನ್‌ಗ್ರೇವಿಂಗ್‌ಗೆ ಇನ್ನೂ ಹತ್ತಿರ ಬರುವ ತಂತ್ರವೆಂದರೆ ಗುರಾಣಿ ಮತ್ತು ಆಭರಣಗಳನ್ನು ಕೆತ್ತುತ್ತಿದ್ದ ಕಮ್ಮಾರ ಮತ್ತು ಜನಿವಾರನ ಕಾರ್ಯಗಳು. ಹದಿನೈದನೆ ಶತಮಾನದ ಇಟಲಿಯ ಕುಶಲ ಕರ್ಮಿಗಳ ಕೃತಿಗಳು ಇವಕ್ಕೆ ಉದಾಹರಣೆ.

೧೪೪೬ರ ಜರ್ಮನಿಯ "ಕ್ರಿಸ್ತನ ನೋವು" ಎಂಬ ಕೃತಿ ನಿಖರವಾಗಿ ದಿನಾಂಕ ಗೊತ್ತಾದ ಮೊದಲ ಕೃತಿ. ೧೫ನೇ ಶತಮಾನದ ಕೊನೆಯಲ್ಲಿ ಬಾಳಿದ ಆಂದ್ರೆಯ ಮಾಂತೆಗ್ನನ (೧೪೩೧-೧೫೦೬) ದಿಟ್ಟ ಎನ್‌ಗ್ರೇವಿಂಗ್‌ಗಳು ಪ್ರಖ್ಯಾತ. ಆಲ್ಬರ್ಟ್ ಡ್ಯೂರರ್‌ನ (೧೪೭೧-೧೫೨೮) ಎನ್‌ಗ್ರೇವಿಂಗ್‌ಗಳು ಅತಿ ಸಮರ್ಥವಾಗಿ ರಚಿತವಾದುವು. ಬಹಳ ಬೇಗ ತಾಮ್ರದ ಎನ್‌ಗ್ರೇವಿಂಗ್‌ಗಳು ಚಿತ್ರಗಳನ್ನು ಪುನರ್‌ಪ್ರತಿಮಾಡುವ ಜನಪ್ರಿಯ ವಿಧಾನವಾಯಿತು. ವಿಲಿಯಂ ಹೋಗಾರ್ತ್ ಮತ್ತು ವಿಲಿಯಂ ಬ್ಲೇಕ್ ಇವರ ಎನ್‌ಗ್ರೇವಿಂಗ್‌ಗಳು ಇಲ್ಲಿ ನೆನೆಪಿಸಿಕೊಳ್ಳಬಹುದು.

**ಎಚ್ಚಿಂಗ್ (Etching)**

೧೬ನೇ ಶತಮಾನದ ಮೊದಲಲ್ಲಿ ಆಲ್ಬರ್ಟ್ ಡ್ಯೂರರ್, ಆಲ್ಬರ್ಟ್ ಆಲ್‌ಥ್ರಾಫಿರ್ ಮೊದಲಾದವರು ಈ ಪದ್ಧತಿಯಲ್ಲಿ ಚಿತ್ರರಚನೆ ಮಾಡಿದರು. ಹದಿನೇಳನೇ ಶತಮಾನದ ವೇಳೆಗೆ ಈ ಮಾಧ್ಯಮದ ಸಾಧ್ಯತೆಗಳು, ಸಾಕಷ್ಟು ಹಿರಿದಾದವು. ರೆಂಬ್ರಾಂಡ್‌ನ (೧೬೦೮-೧೬೬೯) ಅದ್ಭುತ ಎಚ್ಚಿಂಗ್‌ಗಳಲ್ಲಿ ಈ ಮಾಧ್ಯಮವು ತನ್ನ ಪ್ರೌಢಾವಸ್ಥೆಯನ್ನು ಪಡೆಯಿತು.



ಶ್ಯಾಮಸುಂದರ್

ಹದಿನೆಂಟನೇ ಶತಮಾನದಲ್ಲಿ ಗಿಯಾವಾನಿ ಪೀಲಾನೇಸಿ (೧೭೨೦-೧೭೭೮) ಹಾಗೂ ಗೋಯನ (೧೭೪೬-೧೮೨೮) ಅತ್ಯುತ್ಕೃಷ್ಟ ಕೃತಿಗಳಲ್ಲಿ ಎಚ್ಚಿಂಗ್ ತುರೀಯಾವಸ್ಥೆಯನ್ನು ತಲುಪಿತು.

**ಎಚ್ಚಿಂಗ್ ತಂತ್ರ**

ಎಚ್ಚಿಂಗ್‌ನಲ್ಲಿ ಎನ್‌ಗ್ರೇವಿಂಗ್‌ನಂತಲ್ಲದೆ ಗೆರೆಗಳನ್ನು ಕೊರೆಯಲು ಆಮ್ಲದ (ನೈಟ್ರಿಕ್, ಫೆರ್‍ರಿಕ್ ಕ್ಲೋರೈಡ್, ಕಾಪರ್ ನೈಟ್ರೇಟ್ ಇತ್ಯಾದಿ) ಅವಶ್ಯಕತೆಯಿದೆ. ಆಮ್ಲ ನಿರೋಧಕದ ಕವಚವೊಂದನ್ನು ತಾಮ್ರ ಅಥವಾ ಸತುವಿನ ಪ್ಲೇಟ್‌ನ ಮೇಲೆ ಹರಡಲಾಗುತ್ತದೆ. ಇದೊಂದು ಮೇಣದಂತಹ ವಸ್ತುವಾಗಿದ್ದು ಮೃದು ಅಥವಾ ಗಟ್ಟಿಯಾಗಿ ಇರಲು ಸಾಧ್ಯವಿದೆ. ಇದನ್ನು ಗ್ರೌಂಡ್ ಎನ್ನುತ್ತಾರೆ. ಹಾಳೆಯ ಬದಿಗಳನ್ನು ಮತ್ತು ಹಿಂಬದಿಯನ್ನು ಸಹ ವಾರ್ನಿಷ್ ಶೆಲ್ಲಾಕ್‌ನಿಂದ ಕಾಪಾಡಲಾಗುತ್ತದೆ.

ಚೂಪಾದ ಮೊನೆಯಿರುವ ಉಪಕರಣದಿಂದ ಚಿತ್ರವನ್ನು ಗ್ರೌಂಡ್ ಮೇಲೆ ಗೀಚಲಾಗುತ್ತದೆ. ಹಾಗೆ ಗೀಚಿದಾಗ ಆ ಜಾಗದಲ್ಲಿ ಆಮ್ಲ ನಿರೋಧಕ ಕವಚವು ಕಿತ್ತು ಬಂದು, ನಂತರದಲ್ಲಿ ಪ್ಲೇಟನ್ನು ನೈಟ್ರಿಕ್ ಆಮ್ಲದಲ್ಲಿ ಅದ್ದಿದಾಗ ಗೀಚಿದ ಜಾಗದಲ್ಲಿ ಆಮ್ಲವು ಲೋಹವನ್ನು ಕೊರೆಯುತ್ತದೆ. ಆಮ್ಲದ ಸಾಮರ್ಥ್ಯ ಹಾಗೂ ಕೊರೆಯಲು ಬಿಟ್ಟ ಸಮಯ ಇವೆರಡನ್ನೂ ಅವಲಂಬಿಸಿ ರೇಖೆ ಒರಟಾಗಿಯೋ, ಸಪೂರವಾಗಿಯೋ, ಉಂಟಾಗುತ್ತದೆ.

ಕಲಾವಿದನ ಅವಶ್ಯಕತೆ ಇರುವಷ್ಟು ರೇಖೆಯು ಕೊರೆತವಾದ ನಂತರ ಪ್ಲೇಟನ್ನು ತೊಳೆದು ಮುದ್ರಣಶಾಯಿಯನ್ನು ತುಂಬಿ ಮುದ್ರಿಸಲಾಗುತ್ತದೆ.

**ಗ್ರೌಂಡ್‌ಗಳು**

ಗ್ರೌಂಡ್‌ಗಳೆಂದರೆ ಚಿತ್ರರಚನೆಗೆ ಮೊದಲು ಲೋಹದ ಫಲಕದ ಮೇಲೆ ಹರಡುವ ಹಲವಾರು ತಳಹದಿಗಳು. ಇವು ಇಡೀ ಫಲಕವನ್ನು ಆಮ್ಲದಿಂದ ಕೊರೆಯದಂತೆ ರಕ್ಷಿಸುತ್ತದೆ.

**ಹಾರ್ಡ್‌ಗ್ರೌಂಡ್ (Hard ground)**

ಎಚ್ಚಿಂಗ್ ಮಾಡುವಾಗ ಆಮ್ಲವು ಪ್ಲೇಟನ್ನು ಕೊರೆಯುವುದನ್ನು ತಪ್ಪಿಸಲು ಬಳಸಲಾಗುವ ನಿರೋಧಕ. ೨ ಭಾಗ ಜೇನು ಮೇಣ, ೨ ಭಾಗ ಬಿಟುಮಿನ್ ೧ ಭಾಗ ರೋಸಿನ್, ಇದು ಹಾರ್ಡ್ ಗ್ರೌಂಡ್‌ನ ಪ್ರಮಾಣ. ಇದು ಗಟ್ಟಿಯಾಗಿರುತ್ತದೆ. ಮೊದಲು ಪ್ಲೇಟನ್ನು ತವವೊಂದರ ಮೇಲೆ ಕಾಯಿಸಿ ನಂತರ ರೋಲರ್‌ನಿಂದ ಎಲ್ಲೆಡೆಗೆ ಸಮನಾಗಿ ಹಾರ್ಡ್‌ಗ್ರೌಂಡನ್ನು ಹರಡಲಾಗುತ್ತದೆ.

**ಸಾಫ್ಟ್‌ಗ್ರೌಂಡ್ (Soft ground)**

ಸಾಫ್ಟ್‌ಗ್ರೌಂಡ್ ಎಚ್ಚಿಂಗ್‌ನಲ್ಲಿ ಕ್ರೇಯಾನ್ ಅಥವಾ ಪೆನ್ಸಿಲ್ ಚಿತ್ರಣದ ಪರಿಣಾಮಗಳನ್ನು ಅನುಕರಿಸಲು ಸಾಧ್ಯ. ಹಾರ್ಡ್ ಗ್ರೌಂಡ್ ಮಿಶ್ರಣಕ್ಕೆ ಅದರ ಅರ್ಧದಷ್ಟು ಭಾಗ ಗ್ರೀಸ್ ಅಥವಾ ವ್ಯಾಸಲೀನ್‌ನ್ನು ಮಿಶ್ರ ಮಾಡಿದಾಗ ಮಿದುವಾದ ಸಾಫ್ಟ್‌ಗ್ರೌಂಡ್ ತಯಾರಾಗುತ್ತದೆ. ಸಾಫ್ಟ್‌ಗ್ರೌಂಡನ್ನು ಲೋಹದ ಹಾಳೆಯ ಮೇಲೆ ಸವರಿಯಾದ ನಂತರ ಕಾಗದವನ್ನು ಇಟ್ಟು ಕಾಗದದ ಮೇಲೆ ಚಿತ್ರಿಸಿದಾಗ ಕಾಗದದ ಒರಟು ಮೇಲ್ಮೈನಂತಹ ಚಿತ್ರಣ ಪ್ಲೇಟ್‌ನ ಮೇಲೂ ಮೂಡಿರುತ್ತದೆ. ಹಲವು ಬಾರಿ ಎಚ್ಚಿಂಗ್‌ನ ಇತರ ತಂತ್ರಗಳೊಂದಿಗೆ ಇದನ್ನು ಬಳಸುತ್ತಾರೆ.

ಪ್ಲೇಟ್‌ನ ಮೇಲೆ ಬಟ್ಟೆ, ತಂತಿ, ಎಲೆ ಇತ್ಯಾದಿಗಳ ಮೈವಳಿಕೆಯನ್ನು ವರ್ಗಾಯಿಸುವ ಅಗತ್ಯವಿದ್ದಾಗ ಸಾಫ್ಟ್ ಗ್ರೌಂಡ್ ಉಪಯೋಗಕಾರಿ.

**ಲಿಫ್ಟ್‌ಗ್ರೌಂಡ್ ಶುಗರ್ ಅಕ್ವಾಟಿಂಟ್** (Sugar aquatint)

ಪ್ಲೇಟ್‌ನ ಮೇಲೆ ಕುಂಚದ ಅಥವಾ ಲೇಖಣಿಯ ರೇಖೆಗಳನ್ನು ತದ್ರೂಪವಾಗಿ ಪಡೆಯಬೇಕಾದಾಗ ಈ ವಿಧಾನವನ್ನು ಬಳಸುತ್ತಾರೆ. ಅರ್ಧ ಭಾಗ ಇಂಡಿಯಾ ಇಂಕ್‌ಗೆ ಇನ್ನರ್ಧ ಭಾಗ ಸಕ್ಕರೆಯನ್ನು ಬೆರೆಸಿ ಆ ಮಿಶ್ರಣದಿಂದ ಚಿತ್ರವನ್ನು ಪ್ಲೇಟ್‌ನ ಮೇಲೆ ಬಿಡಿಸಲಾಗುತ್ತದೆ. ಇದು ಒಣಗಿಯಾದ ನಂತರ ಲಿಕ್ವಿಡ್‌ಗ್ರೌಂಡ್‌ನ್ನು ಅದರ ಮೇಲೆಯೇ ಹಚ್ಚಲಾಗುತ್ತದೆ. ನಂತರ ಪ್ಲೇಟನ್ನು ಬಿಸಿಯಾದ ನೀರಿನಲ್ಲಿ ಅದ್ದಿದಾಗ ಸಕ್ಕರೆ ಕರಗಿ ಗ್ರೌಂಡ್‌ನಿಂದ ಚಿತ್ರಿತ ಭಾಗವು ಬೇರೆಯಾಗುತ್ತದೆ. ನಂತರ ಅದರ ಮೇಲೆ ಅಕ್ವಾಟಿಂಟ್ ತಂತ್ರವನ್ನು ಉಪಯೋಗಿಸಲಾಗುತ್ತದೆ.

**ಆಮ್ಲಗಳು**

ಎಚ್ಚಿಂಗ್‌ನಲ್ಲಿ ಮುಖ್ಯವಾಗಿ ನೈಟ್ರಿಕ್ ಆಮ್ಲ ಮತ್ತು ಫೆರ್ರಿಕ್ ಕ್ಲೋರೈಡ್ ಮತ್ತು ಡಚ್ ಮಾರ್ಡೆಂಟ್‌ಗಳನ್ನು ಬಳಸಲಾಗುತ್ತದೆ. ನೈಟ್ರಿಕ್ ಆಮ್ಲವು ಎಲ್ಲಕ್ಕಿಂತ ಸಮರ್ಥವಾಗಿದ್ದು ಇದರ ೩:೧ ರಿಂದ ೧:೧ ಭಾಗ ನೀರು, ಒಂದು ಭಾಗ ಆಮ್ಲದ ಮಿಶ್ರಣವನ್ನೂ ಬಳಸುತ್ತಾರೆ.

**ಲಿಥೋಗ್ರಾಫಿ** (Lithography)



ಲಿಥೋಗ್ರಾಫಿಯ ಶೋಧನೆ ಮತ್ತು ಸುಧಾರಣೆ ಆದದ್ದು ೧೮ನೇ ಶತಮಾನದ ಅಂತ್ಯದಲ್ಲಿ, ಶೋಧಕ ಎ. ಸೆನೆಫೀಲ್ಡರ್ (೧೭೭೧-೧೮೩೪) ತನ್ನ ಮ್ಯೂನಿಚ್‌ನಲ್ಲಿನ ಸಂಶೋಧನಾ ಕೇಂದ್ರದಲ್ಲಿ ಇದನ್ನು ಸಾಧಿಸಿದ. ಅವನ ಶೋಧನೆಗಳು ಎಷ್ಟು ಮೌಲಿಕವಾದದ್ದೆಂದರೆ ೧೫೦ ವರ್ಷಗಳ ನಂತರವೂ ಅವನು ಬರೆದ ಪುಸ್ತಕ ಪಠ್ಯ ಪುಸ್ತಕವೆನಿಸುವಷ್ಟು ಚಾಲ್ತಿಯಲ್ಲಿದೆ. ಸೆನೆಫೀಲ್ಡರ್ ಸ್ವತಃ ಕಲಾವಿದನಾಗಿರಲಿಲ್ಲ ಆದರೂ ಬಹುಬೇಗ ಇಂಗ್ರೆ, ಗೋಯ, ಡೆಲಕ್ರವನಂತಹ ಕಲಾವಿದರು ಈ ಮಾಧ್ಯಮವನ್ನು ಅಳವಡಿಸಿಕೊಂಡರು. ರೇಖಾಚಿತ್ರಣಕ್ಕೆ ಬಹು ಹತ್ತಿರವಾಗುವ ಪರಿಣಾಮಗಳು ಸಾಧ್ಯವಾಗುವ ಲಿಥೋಗ್ರಾಫಿ, ಮಾನೆ, ಸೂರ,

ಕಾರ್ಲಾ ರೂಡೆಲ್

ಡೆಗಾನಂತಹ ಕಲಾವಿದರನ್ನು ಸೆಳೆಯಿತು. ಟುಲೂಸ್ ಲಾತ್ರೆಯು ಆಕರ್ಷಕವಾದ ಬಣ್ಣದ ಪೋಸ್ಟರ್‌ಗಳನ್ನು ಮುದ್ರಿಸಲು ಲಿಥೋ ಬಳಸಿದನು.

**ಲಿಥೋಗ್ರಫಿ ತಂತ್ರ**

ಲಿಥೋಗ್ರಾಫಿಯಲ್ಲಿ ನೀರು ಮತ್ತು ಗ್ರೀಸ್‌ನ ನಡುವಣ ವೈರುಧ್ಯವನ್ನು ಉಪಯೋಗಿಸಿ ಕೊಳ್ಳಲಾಗುತ್ತದೆ. ಲಿಥೋದಲ್ಲಿ ಮುದ್ರಣವಾಗುವ ಚಿತ್ರ ಮತ್ತು ಇತರ ಮುದ್ರಣವಾಗದ ಭಾಗಗಳು ಒಂದೇ ಸಮತಲದಲ್ಲಿರುತ್ತವೆ. ಚಿತ್ರಿತ ಭಾಗಗಳನ್ನು ಗ್ರೀಸ್ ಅಂಶವಿರುವ ಕ್ರೇಯಾನ್ ಅಥವಾ ಇಂಕ್‌ನಿಂದ ರಚಿಸುವುದರಿಂದ ಅದು ಮುದ್ರಣ ಶಾಯಿಯನ್ನು ಸಹಜವಾಗಿಯೇ ಆಕರ್ಷಿಸುತ್ತದೆ. ಮಿಕ್ಕಿದ ಭಾಗಗಳು ನೀರನ್ನು ಆಕರ್ಷಿಸುವುದರಿಂದ ಅಲ್ಲಿ ಮುದ್ರಣ ಶಾಯಿ ಕೂರುವುದಿಲ್ಲ.

ಚಿತ್ರಿತ ಭಾಗಗಳನ್ನು ಉಳಿದು ಮಿಕ್ಕ ಭಾಗಗಳಲ್ಲಿ ಅರೇಬಿಯದ ಅಂಟನ್ನು ಸವರಲಾಗುತ್ತದೆ. ಇದರಿಂದ ಆ ಭಾಗದಲ್ಲಿ ಗ್ರೀಸ್ ಹತ್ತಿಕೊಳ್ಳುವುದು ತಪ್ಪುವುದಲ್ಲದೆ, ನೀರನ್ನು ಚೆನ್ನಾಗಿ ಹಿಡಿದುಕೊಳ್ಳುತ್ತದೆ.

ತೇವವಾದ ಕಲ್ಲಿನ ಮೇಲೆ ಮುದ್ರಣ ಶಾಯಿಯನ್ನು ಹಚ್ಚಿದ ನಂತರ ಅದರ ಮೇಲೆ ಕಾಗದವನ್ನು ಇಡಲಾಗುತ್ತದೆ. ನಂತರ ಅದನ್ನು ಲಿಥೋ ಮುದ್ರಣ ಯಂತ್ರದಲ್ಲಿ ಹಾಯಿಸಲಾಗುತ್ತದೆ. ಯಂತ್ರದಲ್ಲಿ ಸ್ಕ್ರೈಪರ್‌ನಿಂದ ಒತ್ತಡ ಬೀಳುತ್ತದೆ. ಸ್ಕ್ರೈಪರ್ ಮತ್ತು ಕಲ್ಲಿನ ನಡುವೆ ಟಿಂಪ್‌ಮ್ಯಾನ್ ಎಂದು ಕರೆಯಲ್ಪಡುವ ತೆಳುವಾದ ಲೋಹದ ಹಾಳೆಯನ್ನು ಬಳಸಲಾಗುತ್ತದೆ.

ಹಿಂದೆ ಲಿಥೋಗ್ರಾಫಿಯನ್ನು ಯುರೋಪಿನ ಬವಾರಿಯದಿಂದ ಬಂದ ವಿಶೇಷ ಕಲ್ಲಿನ ಮೇಲೆ ಮಾತ್ರ ಮಾಡುತ್ತಿದ್ದರು. ಇತ್ತೀಚೆಗೆ ಅಳತೆಗಾಗಿ ನಿಖರವಾಗಿ ಒರಟುಗೊಳಿಸಲ್ಪಟ್ಟ ಸತು ಮತ್ತು ಅಲ್ಯೂಮಿನಿಯಂ ಹಾಳೆಗಳ ಮೇಲೆಯೂ ಲಿಥೋ ತಂತ್ರದಲ್ಲಿ ರಚಿಸುತ್ತಾರೆ. ಇವುಗಳಿಗೆ ಕ್ರಮವಾಗಿ ಜಿಂಕೋಗ್ರಾಫಿ(Zincography) ಹಾಗೂ ಅಲ್ಯೂಮಿನಾಗ್ರಾಫಿ (Aluminagraphy) ಎಂದು ಕರೆಯುತ್ತಾರೆ.

**ಟ್ರಾನ್ಸ್‌ಫರ್ ಲಿಥೋಗ್ರಾಫಿ**

ನೇರವಾಗಿ ಕಲ್ಲಿನ ಮೇಲೆ ಚಿತ್ರ ಬಿಡಿಸುವ ಪದ್ಧತಿಗೆ ಇದು ವಿರುದ್ಧ. ಟ್ರಾನ್ಸ್‌ಫರ್ ಪೇಪರ್ ಎಂಬ ವಿಶೇಷ ಕಾಗದದ ಮೇಲೆ ಮೊದಲು ಚಿತ್ರ ಬರೆದು ನಂತರ ಅದನ್ನು ಯಂತ್ರದ ಒತ್ತಡದ ಸಹಾಯದಿಂದ ಕಲ್ಲಿನ ಮೇಲಕ್ಕೆ ವರ್ಗಾಯಿಸಲಾಗುತ್ತದೆ. ಈ ಕಾಗದದ ಮುಖ್ಯ ಲಕ್ಷಣವೆಂದರೆ ಅದರಲ್ಲಿ ನೀಡಿದ ಪದರ ನೀರಿನಲ್ಲಿ ಕರಗುವ ಗುಣವನ್ನು ಹೊಂದಿರುತ್ತೆ.

   

**ಅ. ಲಾ. ಪುಪೆ** (a la Pupee)

ಇಂಟಾಗ್ಲಿಯೋ ತಂತ್ರದಲ್ಲಿ ಒಂದೇ ಪ್ಲೇಟಿನ ಮೇಲೆ ಹಲವು ವರ್ಣಗಳನ್ನು ಒಮ್ಮೆಲೇ ಹಚ್ಚುವ ತಂತ್ರ ಈ ಹಚ್ಚುವಿಕೆಯನ್ನು ಕೈಯಿಂದಲೂ, ಪೇಪರಿನ ಸಣ್ಣ ಸುರುಳಿಗಳಿಂದಲೂ ಮತ್ತು ರೋಲರ್‌ನಿಂದಲೂ ಮಾಡಬಹುದು.

**ಕಾರ್ಬೋರಾಂಡಂ** (Corborandum)

ಲಿಥೋಗ್ರಾಫಿಯಲ್ಲಿ ಮುದ್ರಣವಾದ ನಂತರ ಈಗ ಇರುವ ಚಿತ್ರವನ್ನು ಉಜ್ಜಿ ಅಳಿಸಿ ಮತ್ತೊಂದು ಚಿತ್ರಣಕ್ಕೆ ಕಲ್ಲನ್ನು ತಯಾರು ಮಾಡಬೇಕಾಗುತ್ತದೆ. ಹಾಗೆ ಉಜ್ಜಲು ಬಳಸುವ ಪುಡಿ. ಇದರ ತಾಂತ್ರಿಕ ಹೆಸರು ಸಿಲಿಕಾನ್ ಕಾರ್ಬೈಡ್.

**ಕ್ರೋಮೋ ಲಿಥೋಗ್ರಾಫಿ** (Chromo lithography)

೧೯ನೇ ಶತಮಾನದಲ್ಲಿ ತೈಲ ಮತ್ತು ಜಲವರ್ಣ ಚಿತ್ರಗಳನ್ನು ಪುನರ್‌ಪ್ರತಿ ಮಾಡಲು ಬಳಸುತ್ತಿದ್ದ ಬಹುರಂಗೀನ ಮುದ್ರಣದ ಪದ್ಧತಿ.

**ಕಾಂಪೋಸೈಟ್ ಪ್ರಿಂಟ್** (Composite print)

ಒಂದೇ ಪ್ರಿಂಟ್‌ನಲ್ಲಿ ಎರಡು ಮೂರು ಮುದ್ರಣ ತಂತ್ರಗಳನ್ನೂ ಉದಾ: ಲಿಥೋಗ್ರಾಫ್, ವುಡ್‌ಕಟ್, ಸಿಲ್ಕ್‌ಸ್ಕ್ರೀನ್ ಮಾಧ್ಯಮ ಇತ್ಯಾದಿ ಬಳಸಿ ಮುದ್ರಿಸಿದರೆ ಅದು ಕಾಂಪೋಸೈಟ್ ಪ್ರಿಂಟ್ ಎನ್ನಿಸಿಕೊಳ್ಳುತ್ತದೆ.

**ಡ್ಯಾಬರ್** (Dabber)

ಹತ್ತಿಯ ಉಂಡೆಯೊಂದರ ಮೇಲೆ ರೇಷಿಮೆ ಅಥವಾ ಚರ್ಮದ ಹೊದಿಕೆಯನ್ನು ಕೊಟ್ಟ ವಸ್ತು. ಇದನ್ನು ಮುದ್ರಣ ಸಮಯದಲ್ಲಿ ಪ್ಲೇಟ್‌ನ ಮೇಲೆ ಬಣ್ಣವನ್ನು ಹಚ್ಚಲು ಮತ್ತು ಎಚ್ಚಿಂಗ್ ಪ್ಲೇಟ್‌ನ ಮೇಲೆ ಗ್ರೌಂಡನ್ನು ಹರವಲು ಬಳಸುತ್ತಾರೆ.

**ಉಬ್ಬಿದ ಪ್ರಿಂಟ್** (Embossed print)

ಇಂಟಾಗ್ಲಿಯೋದಲ್ಲಿ ಉಬ್ಬಿದ ಪ್ರತಿಮೆಗಳನ್ನು ಸೃಷ್ಟಿಸಲು ಬಳಸುವ ತಂತ್ರ. ಇದನ್ನು Embossed ಎಂದು ಆಂಗ್ಲ ಭಾಷೆಯಲ್ಲಿ Ganftrage ಎಂದು ಫ್ರೆಂಚ್‌ನಲ್ಲಿ Blind Drack ಎಂದು ಜರ್ಮನಿಯಲ್ಲಿ Karazugiri ಎಂದು ಜಪಾನೀ ಭಾಷೆಯಲ್ಲೂ ಹೇಳುತ್ತಾರೆ.

**ಆವೃತ್ತಿ** (Edition)

ತದ್ವತ್ತಾದ ಮುದ್ರಿತ ಪ್ರತಿಗಳ ಗುಂಪು. ಇವುಗಳಲ್ಲಿ ಸಹಿ ಹಾಕಿ ಆವೃತ್ತಿ ಸಂಖ್ಯೆಯನ್ನು ನಮೂದಿಸುವುದು ವಾಡಿಕೆ ಇವು ಸ್ವತಃ ಕಲಾವಿದನಿಂದಲೇ ಅಥವಾ ಕಲಾವಿದನ ಮೇಲ್ವಿಚಾರಣೆಯಲ್ಲಿ ಮುದ್ರಿತವಾದವು.

**ಎಚ್ಚಿಂಗ್ ಪ್ರೆಸ್** (Etching Press) Intaglio Pranting press)

ಎರಡು ದೊಡ್ಡ ಸಿಲಿಂಡರ್‌ಗಳ ನಡುವೆ ಒಂದು ಜಾರುವ ಲೋಹದ ದಪ್ಪ ಹಾಳೆಯನ್ನು ಕೆಳಗಿನ ಸಿಲಿಂಡರ್ ಎತ್ತಿ ಹಿಡಿಯುತ್ತೆ. ಈ ಲೋಹದ ಹಾಳೆಯ ಮೇಲೆ ಇಂಕ್









ಹಚ್ಚಿದ ಪ್ಲೇಟ್ ಹಾಗೂ ಕಾಗದ ಎರಡನ್ನೂ ಇಟ್ಟು ಈ ಕಡೆಯಿಂದ ಆ ಕಡೆಗೆ ಹಾಯಿಸಿದಾಗ ಸಿಲಿಂಡರ್ ಬೀರುವ ಒತ್ತಡಕ್ಕೆ ಇಂಕ್ ಕಾಗದಕ್ಕೆ ವರ್ಗಾವಣೆಯಾಗುತ್ತದೆ.

**ಹಾಫ್‌ಟೋನ್** (Half tone)

ಛಾಯಾಚಿತ್ರಿತ ಬಿಂಬದಲ್ಲಿ ಇರುವ ಕಂಟ್ಯೂನಿಯಸ್ ಟೋನ್‌ಗಳನ್ನೂ ಬೇರೇ ಬೇರೆ ಗಾತ್ರದ ಬಿಂದುಗಳಾಗಿ ಪರಿವರ್ತಿಸುವ ತಂತ್ರ. ಇದರಿಂದ ಮುದ್ರಣ ಸಮಯದಲ್ಲಿ ಛಾಯೆಗಳನ್ನು ಪಡೆಯಬಹುದು. ಚುಕ್ಕೆಗಳು ಹೆಚ್ಚು ಇರುವೆಡೆ ಗಾಢವಾದ ಛಾಯೆ, ಕಮ್ಮಿ ಇರುವೆಡೆ ತೆಳು ಛಾಯೆ ಹೀಗೆ ಛಾಯಾಂಕನವನ್ನು ಪಡೆಯಬಹುದು.

**ಹೀಲಿಯೋ ಗ್ರಾವ್ಯೂರ್** (Helio gravure)

ಛಾಯಾಚಿತ್ರ ತಂತ್ರಗಳನ್ನು ಬಳಸಿ ರಚಿತವಾದ ಇಂಟಾಗ್ಲಿಯೋ ಪ್ಲೇಟ್‌ನಿಂದ ಪ್ರತಿಗಳನ್ನು ಮುದ್ರಿಸುವುದಕ್ಕೆ ಈ ಹೆಸರಿದೆ.

**ಮಾನೋಟೈಪ್** (Manotype)

ತಾಂತ್ರಿಕವಾಗಿ ಹೇಳುವುದಾದರೆ ಇದು ಒಂದೇ ಪ್ರತಿಯ ಆವೃತ್ತಿ ಗಾಜು ಅಥವಾ ಲೋಹದ ಹಾಳೆಯ ಮೇಲೆ ರಚಿಸಿದ ಬಿಂಬವನ್ನು ಕಾಗದಕ್ಕೆ ವರ್ಗಾಯಿಸುವ ತಂತ್ರ.

**ನೆಗಟಿವ್** (Negative)

ಮೂಲದ ಬಿಂಬಕ್ಕೆ ತದ್ವಿರುದ್ಧವಾಗಿ ನೆರಳು, ಬೆಳಕು ಕಾಣುವಂತಹ ಬಿಂಬ. ಪಾಸಿಟಿವ್‌ಗೆ ವಿರುದ್ಧವಾದ್ದು (ವಿಷಮ ಚಿತ್ರ).

**ಫೋಟೋ ಲಿಥೋಗ್ರಾಫಿ** (Photo litho)

ಛಾಯಾಚಿತ್ರ ತಂತ್ರವನ್ನು ಉಪಯೋಗಿಸಿ ಚಿತ್ರಿತ ಬಿಂಬವೊಂದನ್ನು ಲಿಥೋ ಕಲ್ಲಿನ ಮೇಲೋ ಅಥವಾ ಲೋಹದ ಪ್ಲೇಟ್‌ನ ಮೇಲೂ ವರ್ಗಾಯಿಸುವುದು.

**ಫೋಟೋ ಸಿಲ್ಕ್‌ಸ್ಕ್ರೀನ್** (Photo silk screen)

ಛಾಯಾ ಚಿತ್ರದ ತಂತ್ರಗಳನ್ನು ಬಳಸಿ ಛಾಯಾಚಿತ್ರದ ಬಿಂಬಗಳನ್ನು ಸಿಲ್ಕ್‌ಸ್ಕ್ರೀನ್ ಮುದ್ರಣದ ಸ್ಟೆನ್ಸಿಲ್‌ಗೆ ವರ್ಗಾಯಿಸುವ ವಿಧಾನ.

**ಪಾಸಿಟಿವ್** (Poistive)

ಮೂಲದ ಬಿಂಬದಂತೆಯೇ ನೆರಳು ಬೆಳಕಿನ ಹಂಚಿಕೆ ಹೊಂದಿರುವ ಛಾಯಾಬಿಂಬ. ನೆಗೆಟಿವ್‌ಗೆ ವಿರುದ್ಧವಾದುದು.

**ಫಲ್ಪ್** (Pulp)

ಕಾಗದದ ಮೂಲ ವಸ್ತು. ಹತ್ತಿ ಅಥವಾ ತರಕಾರಿಗಳ ಎಳೆಗಳು, ತುಂಡುಗಳನ್ನು ನೀರಿನೊಡನೆ ಬೆರೆಸಿ, ಚೆನ್ನಾಗಿ ಅರೆದ ಪಾಕ. ನಂತರ ಇದನ್ನು ಸೂಕ್ತ ಜಾಲರಿಗಳನ್ನು ಬಳಸಿ ಬೇಕಾದ ಕಾಗದದ ಆಕಾರ, ಗಾತ್ರಕ್ಕೆ ಎರಕ ಹೊಯ್ಯಲಾಗುತ್ತದೆ.

**ರ‍್ಯಾಗ್‌ಪೇಪರ್** (Rag Paper)

ಮುದ್ರಣಕ್ಕೆ ಅಗತ್ಯವಾದ ಈ ಕಾಗದದಲ್ಲಿ ನೂರಕ್ಕೆ ನೂರರಷ್ಟು ಹತ್ತಿಯ ಬಟ್ಟೆಯ ಪಲ್ಪ್‌ನ ಬಳಕೆಯಾಗಿದ್ದು ಯಾವುದೇ ಮರದ ಪಲ್ಪ್‌ನ ಬಳಕೆಯಾಗಲೀ ಆಮ್ಲದ ಬಳಕೆಯಾಗಲೀ ಇರುವುದಿಲ್ಲ ಇದಕ್ಕೆ ವಿರುದ್ಧವಾಗಿ ನ್ಯೂಸ್‌ಪ್ರಿಂಟ್ ಪೇಪರನ್ನು ಬೊಂಬಿನ ಪಲ್ಪ್‌ನಿಂದ ಮಾಡಲಾಗಿರುತ್ತದೆ.

**ದಾಖಲಾತಿ ಗುರುತುಗಳು** (Registration marks)

ಮುದ್ರಣದ ಸಮಯದಲ್ಲಿ ಒಂದಕ್ಕಿಂತ ಹೆಚ್ಚು ವರ್ಣಗಳನ್ನು ಮುದ್ರಿಸಬೇಕಾದಾಗ ಪ್ಲೇಟ್‌ಗಳನ್ನು , ಸ್ಟೆನ್ಸಿಲ್‌ಗಳನ್ನು, ಮರದಚ್ಚುಗಳನ್ನು ಒಂದೇ ಕಡೆ (ಕಾಗದಕ್ಕೆ ಸಂಬಂಧಿಸಿದಂತೆ) ಕೂಡುವಂತೆ ಯೋಜಿಸಬೇಕಾದಾಗ ಇಟ್ಟುಕೊಳ್ಳುವ ಗುರುತುಗಳು.

**ಪುನರ್‌ಮುದ್ರಣ** (Restrike)

ಒಂದು ಆವೃತ್ತಿಯು ಮುದ್ರಣವಾದ ನಂತರ ಆ ಚಿತ್ರದ ಮೇಲೆ ಇನ್ನಷ್ಟು ಕೆಲಸ ಮಾಡಿ ಅದನ್ನು ಮತ್ತೆ ಮುದ್ರಿಸುವುದು. ಹಲವು ಬಾರಿ ಕಲಾವಿದನ ಸಾವಿನ ನಂತರ ಆತನ ಹಳೇ ಪ್ಲೇಟ್‌ಗಳನ್ನು ಮತ್ತೆ ಮುದ್ರಿಸುವಾಗ ರೀ ಸ್ಟ್ರೈಕ್ ಎಂದು ಬರೆಯುತ್ತಾರೆ. ಉದಾ: ಗೋಯಾನ ರೀಸ್ಟ್ರೈಕ್ ಪ್ರತಿಗಳು ಮಾರುಕಟ್ಟೆಯಲ್ಲಿವೆ. ಇದನ್ನು ಮಾರುವ ಸಂಸ್ಥೆಗಳು ಆ ಪ್ರತಿಯ ಮೂಲದ ಖಚಿತತೆಯ ಬಗ್ಗೆ ಅರ್ಹತಾ ಪತ್ರವನ್ನು ನೀಡುತ್ತಾರೆ.

**ರಾಕರ್ (Rocker)**

ಮೆಜ್ಝೋಟಿಂಟ್‌ನಲ್ಲಿ, ಗೆರೆ ಗೆರೆಯಂತಿರುವ ಬಾಗಿದ ಹರಿತವಾದ ಈ ಉಪಕರಣವನ್ನು ಪ್ಲೇಟಿನ ಮೇಲೆ ಕ್ರಮಬದ್ಧವಾಗಿ ಓಡಿಯಾಡಿಸಿ ಒರಟು ಮೈವಳಿಕೆಯನ್ನು ಉಂಟು ಮಾಡಬಹುದು.

**ರೂಲೆಟ್ (Rolette)**

ಒರಟಾದ ಮೇಲ್ಮೈ ಇರುವ ಮುಳ್ಳು ಗಾಲಿ. ಇದನ್ನು ಪ್ಲೇಟಿನ ಮೇಲೆ ಒತ್ತಡ ನೀಡಿ



ಓಡಾಡಿಸಿ. ಒರಟು ಮೈವಳಿಕೆ ಉಂಟು ಮಾಡಲು ಸಾಧ್ಯ. ಇದರಲ್ಲೇ ಬೇರೆ ಬೇರೆ ಮಟ್ಟದ ಒರಟುತನದ ಮುಳ್ಳು ಗಾಲಿಗಳು ಲಭ್ಯ.

**ಸೆರಿಗ್ರಾಫಿ (Serigraphy)**

ಈ ಪದವನ್ನು ಕಾರ್ಲ ಜಿಗ್ರೋಪರ್ ಎಂಬುವನು ಸೃಷ್ಟಿಸಿದ ಬಿಂಬವನ್ನು ಹೊಂದಿದ ಸ್ಟೆನ್ಸಿಲ್‌ನ್ನು ಜಾಲರಿಯಂತಹ ರೇಷಿಮೆ ಅಥವಾ ನೈಲಾನ್ ಬಟ್ಟೆಯ ಮೇಲೆ ಅಂಟಿಸಲಾಗುತ್ತದೆ. ಸ್ಟೆನ್ಸಿಲ್‌ನಲ್ಲಿ ತೆರಪಿರುವ ಜಾಗದ ಮೂಲಕ ಬಣ್ಣ ಹಾಯ್ದು ಕೆಳಗಿರುವ ಕಾಗದ ಅಥವಾ ಇನ್ನಾವುದೇ ಮೇಲ್ಮೈ ಮೇಲೆ ಸಹ ಮುದ್ರಣವಾಗುತ್ತದೆ. ಬಣ್ಣವನ್ನು ಜಾಲರಿ ಮೂಲಕ ತಳ್ಳಲು ಸ್ಕ್ವೀಜಿಯನ್ನು ಬಳಸಲಾಗುತ್ತದೆ.

**ಸ್ಕ್ವೀಜಿ (Squeeze)**

ಸಿಲ್ಕ್‌ಸ್ಕ್ರೀನ್ ಮುದ್ರಣದಲ್ಲಿ ಇಂಕನ್ನು ಜಾಲರಿಯ ಮೂಲಕ ತಳ್ಳಲು ಬಳಕೆಯಾಗುವ ಚಪ್ಪಟೆಯಾದ ಸಾಧನ. ಇದರಲ್ಲಿ ಕೈಯಲ್ಲಿ ಹಿಡಿದುಕೊಳ್ಳಲು ಮರದ ಹಿಡಿಯಂತಹ ಭಾಗವಿದ್ದು, ಮುಂಬಾಗದಲ್ಲಿ ರಬ್ಬರ್ ಅಥವಾ ಪ್ಲಾಸ್ಟಿಕ್‌ನ ಪಟ್ಟಿಯಿರುತ್ತದೆ.

**ಟುಷ್ (Tusche)**

ಲಿಥೋಗ್ರಾಫಿಯಲ್ಲಿ ಲಿಥೋ ಕಲ್ಲಿನ ಮೇಲೆ ಚಿತ್ರಗಳನ್ನು ಬಿಡಿಸಲು ಬಳಸುವ

ವಿಶೇಷವಾದ ಕರಿಶಾಯಿ. ಇದರಲ್ಲಿ ಮೇಣ, ಪ್ರಾಣಿ ಕೊಬ್ಬು, ಸಾಬೂನು, ಶೆಲ್ಲಾಕ್ ಮತ್ತು ಮಸಿ ಇವಿಷ್ಟೂ ಸೇರಿರುತ್ತದೆ. ಇದು ಕಡ್ಡಿಯ ರೂಪದಲ್ಲೂ, ದ್ರವ ರೂಪದಲ್ಲೂ ಲಭ್ಯವಿದೆ.

**ಉಕಿಯೋ-ಯಿ** **(Ukio-Ye)**

'ತೇಲುವ ಸ್ವರ್ಗ' ಎಂದು ನಾಮಾಂಕಿತವಾದ ಈ ವುಡ್‌ಕಟ್‌ಗಳು ಜಪಾನಿನಲ್ಲಿ ಹದಿನೇಳನೇ ಶತಮಾನದಿಂದ ೧೯ನೇ ಶತಮಾನದವರೆಗಿನ ಅವಧಿಯಲ್ಲಿ ತಯಾರಾದವು.

**ವೆಲ್ಲಮ್** **(Vellam)**

ಹಿಂದಿನ ಕಾಲದಲ್ಲಿ ಕುರಿ, ಮೇಕೆ ಮತ್ತು ಹಂದಿಯ ಚರ್ಮದಿಂದ ತಯಾರು ಮಾಡುತ್ತಿದ್ದ ಕಾಗದ, ಇದಕ್ಕೆ ಪಾರ್ಚ್‌ಮೆಂಟ್ ಪೇಪರ್ ಎಂದೂ ಕರೆಯುವರು.

**ವಾಟರ್ ಮಾರ್ಕ್** **(Water mark)**

ಕಾಗದ ತಯಾರಾಗುವ ಸಮಯದಲ್ಲಿ ಕಾಗದದ ತಯಾರಕರು ಅದರಲ್ಲಿ ಅಳವಡಿಸಿದ ತನ್ನ ಕಂಪನಿಯ ಚಿಹ್ನೆ, ಕಾಗದವನ್ನು ಬೆಳಕಿಗೆ ಎದುರಾಗಿ ಹಿಡಿದಲ್ಲಿ ಇದನ್ನು ಕಾಣಬಹುದು. ಇದು ಕಾಗದದ ಗುಣಮಟ್ಟವನ್ನು ಖಾತ್ರಿಯಾಗಿಸುವ ಸಾಕ್ಷಿ.

**ಆರ್ಟಿಸ್ಟ್ ಪ್ರೂಫ್** **[Artist Proof (A/P)/ Eprevve d'Artisté (E/A)]**

ಆರ್ಟಿಸ್ಟ್ ಪ್ರೂಫ್‌ಗಳು ಸಾಮಾನ್ಯವಾದ ಆವೃತ್ತಿಯಿಂದ ಹೊರಗಿದ್ದರೂ, ಆವೃತ್ತಿಯನ್ನು ಮುದ್ರಣ ಮಾಡುವ ಸಮಯದಲ್ಲೇ ಈ ಪ್ರತಿಗಳನ್ನೂ ಮುದ್ರಿಸಲಾಗುತ್ತದೆ. ವಾಡಿಕೆಯಂತೆ ಈ ಪ್ರತಿಗಳನ್ನು ಕಲಾವಿದ ತನ್ನ ಸ್ವಂತ ಸಂಗ್ರಹಕ್ಕಾಗಿ ಅಥವಾ ಸ್ವತಃ ಮಾರುವುದಕ್ಕಾಗಿ ಇಟ್ಟುಕೊಳ್ಳುತ್ತಾನೆ. ಆವೃತ್ತಿಯ ಪ್ರತಿಶತ ಹತ್ತರಷ್ಟು ಪ್ರತಿಗಳನ್ನು ಆರ್ಟಿಸ್ಟ್ ಪ್ರೂಫ್ ಎಂದು ಕರೆಯಬಹುದು. ಕಡಿಮೆ ಸಂಖ್ಯೆಯ ಮುದ್ರಣದ ಆವೃತ್ತಿಯಿದ್ದಲ್ಲಿ ಐದು ಪ್ರತಿಗಳನ್ನು ಆರ್ಟಿಸ್ಟ್ ಪ್ರೂಫ್ ಎಂದು ಮುದ್ರಿಸಲಾಗುತ್ತದೆ.

**ಬಾನ್ ಎ ತಿರೆ** **(Bon a Tiré) B.A.T.**

ಪಾಶ್ಚಾತ್ಯ ದೇಶಗಳಲ್ಲಿ ಕಲಾವಿದ ಅಚ್ಚನ್ನು(Block) ತಯಾರಿಸಿದ್ದಾದ ನಂತರ ಅದರ ಪ್ರತಿಗಳನ್ನು ವೃತ್ತಿಪರ ಮುದ್ರಣಕಾರರು ತೆಗೆಯುವ ಪದ್ಧತಿಯಿದೆ. ಅಲ್ಲಿ ಮುದ್ರಣಕಾರನು ಒಂದು ಪ್ರತಿ ತೆಗೆದು ಕಲಾವಿದನಿಗೆ ತೋರಿಸುತ್ತಾನೆ. ಕಲಾವಿದ ಆ ಪ್ರತಿಯನ್ನು ನೋಡಿ ಸಂತುಷ್ಟವಾದಲ್ಲಿ ಬಿ.ಎ.ಟಿ. ಎಂದು ಬರೆದು ಸಹಿ ಹಾಕುತ್ತಾನೆ. ಮುದ್ರಣಕಾರ ತೆಗೆಯುವ ಮಿಕ್ಕ ಎಲ್ಲ ಪ್ರತಿಗಳು ಈ ಪ್ರತಿಯಂತೆಯೇ ಇದ್ದು, ಅದೇ ಗುಣಮಟ್ಟವನ್ನು ಹೊಂದಿರಬೇಕು. ಸಾಮಾನ್ಯತಃ ಈ ಬಿ.ಎ.ಟಿ. ಪ್ರತಿಯು ಮುದ್ರಣಕಾರನ ಬಳಿ ಅಥವಾ ಕಾರ್ಯಾಗಾರದಲ್ಲಿ ಉಳಿಯುತ್ತದೆ.

**ಕ್ಯಾನ್ಸಲೇಷನ್ ಪ್ರಿಂಟ್** **(Cancellation print)**

ಆವೃತ್ತಿಯನ್ನು ಮುದ್ರಣ ಮಾಡಿದ ನಂತರ ಪ್ಲೇಟ್‌ನಲ್ಲಿರುವ ಬಿಂಬವನ್ನು ಬದಲಾಯಿಸಲಾಗುತ್ತದೆ. ಯಾ ಚಿತ್ತು ಮಾಡುತ್ತಾರೆ. ಹಾಗೆ ಚಿತ್ತು ಮಾಡುವಾಗ ಮೂಲದ ಬಿಂಬವು ಹಿಂದಿನಂತೆಯೇ ಉಳಿದುಕೊಳ್ಳಲಾಗದಂತೆ ಮಾಡುತ್ತಾರೆ. ನಂತರ ಈ ರೀತಿ ಚಿತ್ತು

ಮಾಡಲಾದ ಪ್ಲೇಟಿನಿಂದ ತೆಗೆದ ಪ್ರತಿಗೆ ಕ್ಯಾನ್ಸ್‌ಲೇಷನ್ ಪ್ರಿಂಟ್ ಎನ್ನುತ್ತಾರೆ. ಇದು ಬಿಂಬ ನಷ್ಟವಾದದಕ್ಕೆ ದಾಖಲೆ.

**ಸಂಗ್ರಾಹಕನ ಚಿಹ್ನೆ (Collectors Mark)**

ಸಂಗ್ರಾಹಕರು ಕೆಲವೊಮ್ಮೆ ತಮ್ಮ ಸಂಗ್ರಹದಲ್ಲಿರುವ ಪ್ರಿಂಟ್‌ಗಳ ಮೇಲೆ ತಮ್ಮ ಗುರುತಿನ ಚಿನ್ಹೆಯನ್ನು ಒತ್ತುತ್ತಾರೆ. ಇದನ್ನು ಪ್ರತಿಯ ಹಿಂಭಾಗದಲ್ಲೋ ಅಥವಾ ಮುಂಭಾಗದಲ್ಲೋ ಒತ್ತಬಹುದು. ಸರಿಯಾದ ಜಾಗದಲ್ಲಿಲ್ಲದಿದ್ದಾಗ ಈ ಚಿಹ್ನೆ ಚಿತ್ರದ ಸೌಂದರ್ಯಕ್ಕೆ ಧಕ್ಕೆ ತರುವುದುಂಟು ಹಳೆಯ ಪ್ರಿಂಟುಗಳ ಮೇಲೆ ಇರುವ ಈ ಸಂಗ್ರಹಕಾರನ ಚಿಹ್ನೆಗಳು ಕೃತಿಯ ಇತಿಹಾಸದ ಬಗ್ಗೆ ದಾಖಲೆಯಾಗುವುದರಿಂದ ಅದಕ್ಕೆ ಬಹಳ ಮಹತ್ವವಿದೆ.

**ಅರ್ಪಣಾ ಪ್ರತಿ (Dedicated prints)**

ಕಲಾವಿದ ಮುದ್ರಿತ ಪ್ರತಿಗೆ ಸಹಿ ಹಾಕುವಾಗ ಕೆಲವು ಸಲ ತನ್ನ ಆ ಕೃತಿಯನ್ನು ಸ್ನೇಹಿತನಿಗೋ, ಸಂಗ್ರಹಕಾರನಿಗೋ, ಮತ್ತಾರಿಗೋ ಆ ಇಡೀ ಅವೃತ್ತಿಯನ್ನೇ ಅರ್ಪಿಸುವುದುಂಟು. ಈ ಪ್ರತಿಗಳನ್ನು ಹಲವು ಸಂದರ್ಭಗಳಲ್ಲಿ ಆವೃತ್ತಿಯ ಸಂಖ್ಯೆಯ ಹೊರಗೆ ಎಂದು ಪರಿಗಣಿಸುತ್ತಾರೆ.

**ಮಾರ್ಗದರ್ಶಿ ಪ್ರತಿಗಳು (Guide proofs)**

ಕಲಾವಿದನು ಮುದ್ರಕನೊಡಗೂಡಿ ಅಥವಾ ಕಾರ್ಯಾಗಾರದಲ್ಲಿ ಮುದ್ರಣ ಮಾಡುವಾಗ ಮುದ್ರಕನು ಮೊದಲ ಪ್ರತಿ ತೆಗೆದುಕೊಟ್ಟಾಗ ಅದು ಸಮಾಧಾನ ತರದಿದ್ದರೆ ಅದರಲ್ಲೇ ಮುಂದಿನ ಬದಲಾವಣೆಗಳನ್ನೂ ಬರೆದು ಸೂಚಿಸುತ್ತಾನೆ. ಈ ಬದಲಾವಣೆಗಳನ್ನು ಅನುಸರಿಸಿ ಮುದ್ರಕರು ಮುಂದಿನ ಕಾರ್ಯ ನಡೆಸುತ್ತಾನೆ. ಇದನ್ನು ಮಾರ್ಗದರ್ಶಿ ಪ್ರತಿ ಎಂದು ಪರಿಗಣಿಸುತ್ತಾರೆ.

**ಹಾರ್ಸ್ ಕಾಮರ್ಸ್ (Hors Commerce/ H.C.)**

ಹಾರ್ಸ್ ಕಾಮರ್ಸ್ ಎಂದರೆ ಮಾರಾಟಕ್ಕಿಲ್ಲದಿರುವ ಪ್ರತಿಗಳು ಮುದ್ರಣಕಾರ ಅಥವಾ ಪ್ರಕಟನಾಕಾರ ಅಥವಾ ಇದನ್ನು ಜನಕ್ಕೆ ತೋರಿಸಲು ಅಥವಾ ಪ್ರದರ್ಶನಗಳಿಗೆ, ಸ್ಪರ್ಧೆಗಳಿಗೆ ಕಳುಹಿಸಲು ಬಳಸುತ್ತಾರೆ. ಬಹಳ ಜನರ ಕೈಯಲ್ಲಿ ಓಡಾಡಬಹುದಾದ್ದರಿಂದ ಈ ಪ್ರತಿ ಕೊಳೆಯಾಗುವ ಸಂಭವ ಅಧಿಕ. ಅಷ್ಟಿದ್ದೂ ಇವು ಒಮ್ಮೊಮ್ಮೆ ಮಾರುಕಟ್ಟೆ ಬರುವುದುಂಟು.

**ಐ.ಎಮ್.ಪಿ. (I.M.P.)**

ಲ್ಯಾಟಿನ್ ಭಾಷೆಯಿಂದ ಬಂದ ಈ ಪದ 'ಇಂಪ್ರೆಸಿಟ್'ದ ಅರ್ಥ 'ಮುದ್ರಣ ಮಾಡಿದ್ದಾನೆ' ಎಂದು. ಕಲಾವಿದನು ಸ್ವತಃ ತಾನೇ ಪ್ರತಿಗಳನ್ನು ಮುದ್ರಿಸಿದರೆ ತನ್ನ ಸಹಿಯ ನಂತರ IMP ಎಂದು ಬರೆಯುತ್ತಾನೆ. ಆದರೆ ಅದು ವೃತ್ತಿನಿರತ ಮುದ್ರಕನಿಂದ ಮುದ್ರಿತವಾಗಿದ್ದರೆ ಅಲ್ಲಿ ಆತನ ಠಸ್ಸೆ ಇರುತ್ತದೆ. ಕೆಲವೊಮ್ಮೆ ಮುದ್ರಕನು ತನ್ನ ಸಹಿ ಹಾಕಿ ಐ.ಎಮ್.ಪಿ. ಎಂದೂ ಸೂಚಿಸಿರುತ್ತಾನೆ.

**ಮುದ್ರಕನ ಪ್ರತಿ (Printers proof)**

ಆವೃತ್ತಿಯ ಮುದ್ರಣ ಮುಗಿದಾದ ನಂತರ ಕಲಾವಿದ ಬಿ.ಎ.ಟಿ. ಪ್ರತಿಯನ್ನು ತನ್ನ

ವಶಕ್ಕೆ ಕೇಳಿದರೆ ಆಗ ಮುದ್ರಕನು ತನ್ನ ಬಳಿ ಇಟ್ಟುಕೊಳ್ಳಲು ಪ್ರತಿಯೊಂದನ್ನು ಮುದ್ರಿಸಿಕೊಳ್ಳುತ್ತಾನೆ. ಅದರಲ್ಲಿ ಕಲಾವಿದ ಪ್ರಿಂಟರ್ಸ್ ಪ್ರೂಫ್ ಎಂದು ಬರೆದು ಸಹಿ ಮಾಡುತ್ತಾನೆ.

**ಪ್ರೊಗ್ರೆಸಿವ್ ಪ್ರೂಫ್ (Progressive proof)**

ಬಿ.ಎ.ಟಿ. ಪ್ರತಿಗಳನ್ನು ತೆಗೆಯುವ ಮುನ್ನ ಅನೇಕ ವರ್ಣ ಸಂಯೋಜನೆಗಳನ್ನು ಪ್ರಯೋಗಿಸಿ ನೋಡಬೇಕಾಗುತ್ತದೆ ಅಥವಾ ಯಾವ ಬಣ್ಣದ ನಂತರ ಯಾವ ಬಣ್ಣ ಮುದ್ರಣವಾಗಬೇಕು ಎಂದು ಮುದ್ರಕನಿಗೆ ತಿಳಿಹೇಳಲು ಒಂದಾದ ನಂತರ ಒಂದು ಬಣ್ಣದ ಎಲ್ಲ ಘಟ್ಟಗಳನ್ನು ಬೇರೆ ಬೇರೆ ಮಾಡಿ ಮುದ್ರಿಸಲಾಗುತ್ತದೆ. ಈ ಕರಡು ಪ್ರತಿಗಳು ಅಪೂರ್ಣವಾದ ಕಾರಣ ಮಾರಾಟಕ್ಕೆ ಬರುವುದಿಲ್ಲ.

**ರ. ಕಾಶಿ**

## ಗ್ರಾಮ/ನಗರ ವಿನ್ಯಾಸ

ಗ್ರಾಮ/ನಗರಗಳನ್ನು ೪೦ ರೀತಿಯಲ್ಲಿ ನಿರ್ಮಿಸಬಹುದೆಂದು ಮನಸಾರ ತಿಳಿಸುತ್ತದೆ. ಅವುಗಳನ್ನು ೫೦೦ ರಿಂದ ೫೦,೦೦೦ ಚತರಸ್ರ ದಂಡದ ಅಳತೆಯಲ್ಲಿ ನಿರ್ಮಿಸಬಹುದು.

ಗ್ರಾಮ, ನಗರಗಳ ಸುತ್ತಲೂ ಇರುವ ಭೂಮಿಯನ್ನು 'ಮಂಗಳ ಬೀದಿ' ಎನ್ನುತ್ತಾರೆ. ಅದು ಐದು ದಂಡಗಳ ಅಗಲವಿರಬೇಕು. ಪೂರ್ವದಿಂದ ಪಶ್ಚಿಮಕ್ಕೆ ಹೋಗುವ ಮಾರ್ಗವನ್ನು ರಾಜಪಥವೆನ್ನುತ್ತಾರೆ. ಸಣ್ಣ ಸಂಧಿಗಳ ಮಾರ್ಗವನ್ನು 'ಸಂಧಿವೀಧಿ' ಎನ್ನುತ್ತಾರೆ. ದಕ್ಷಿಣಕ್ಕೆ ಹೋಗುವ ದಾರಿ 'ಮಹಾಕಾಲ' ಇಲ್ಲವೇ 'ವಾಮನ'ವೆನ್ನುತ್ತಾರೆ.

ಗ್ರಾಮ ನಿರ್ಮಾಣದಲ್ಲಿ ಎಂಟು ವಿಧಗಳನ್ನು ಹೇಳಲಾಗಿದೆ.

೧) ದಂಡಕ, ೨) ಸರ್ವತೋಭದ್ರ, ೩) ನಂದ್ಯಾವರ್ತ, ೪) ಪದ್ಮಕ, ೫) ಸ್ವಸ್ತಿಕ ೬) ಸಪ್ರಸ್ತರ ೭) ಕಾರ್ಮುಕ ೮) ಚತುರ್ಮುಖ ಎಂಬವು. ಒಂದೊಂದು ಗ್ರಾಮದ ಲಕ್ಷಣವನ್ನು ಪ್ರತ್ಯೇಕ ವಿವರಿಸಲಾಗಿದೆ.

ದಂಡಕ ವರ್ಗಕ್ಕೆ ಸೇರಿದ ಗ್ರಾಮವು ಪ್ರತ್ಯೇಕವಾಗಿ ಬ್ರಾಹ್ಮಣರಿಗಾಗಿ ನಿರ್ದೇಶಿತವಾಗಿದ್ದು, ಈ ವರ್ಗದ ಹಳ್ಳಿಯಲ್ಲಿ ೧೨, ೨೪, ೫೬, ೧೦೮, ೩೦೦ಕ್ಕೆ ಹೆಚ್ಚಾಗಿ ಮನೆಗಳು ಇರಬಹುದು. ಎಲ್ಲಕ್ಕಿಂತಲೂ ಚಿಕ್ಕದಾದ ೧೨ ಗೃಹಗಳ ಗ್ರಾಮವು ಆಶ್ರಯವೆನ್ನಿಸಿಕೊಳ್ಳುತ್ತದೆ. ಇದನ್ನು ಪರ್ವತ ಸಮೀಪದಲ್ಲಿ ಕಾಡಿನಲ್ಲಿ ತಪಸ್ವಿಗಳಿಗಾಗಿಯೇ ನಿರ್ಮಿಸಬೇಕು. ೨೪ ಮನೆಗಳುಳ್ಳ ಹಳ್ಳಿಯನ್ನು ನದೀ ತೀರದಲ್ಲಿ ಕಟ್ಟಿ ಯತಿಗಳಿಗಾಗಿ ನಿರ್ಮಿಸಬೇಕು. ಇದನ್ನು 'ಪುರ'ವೆನ್ನುತ್ತಾರೆ. ಯಜ್ಞ, ಯಾಗಾದಿ ಕರ್ಮಗಳವರಿಗಾಗಿ ಕಟ್ಟಲಾಗುವ ೫೦ಮನೆಗಳಿರುವ ಗ್ರಾಮವನ್ನು 'ಮಂಗಳ'ವೆನ್ನುವರು. ೧೦೮ ಮನೆಗಳಿರುವ ಗ್ರಾಮವನ್ನು ಕೋಷ್ಠಕವೆನ್ನುತ್ತಾರೆ. ಇತ್ಯಾದಿಯಾಗಿ ಎಲ್ಲ ಬಗೆಯ ಗ್ರಾಮಗಳ ಬಗ್ಗೆಯೂ ಶಾಸ್ತ್ರಗ್ರಂಥಗಳಲ್ಲಿ ವಿವರಗಳು ದೊರೆಯುತ್ತವೆ.

**ದೇಕೊರೆ**

## ಗ್ವಾಷ್

ಈ ವಿಧಾನಗಳೂ ಜಲವರ್ಣ ವಿಧಾನದ ಶಾಖೆಗಳಾಗಿದ್ದು ವರ್ಣಗಳನ್ನು ನೀರಿನಲ್ಲಿಯೇ ಬೆರೆಸುವಂತಿದ್ದು ದಪ್ಪವಾಗಿದ್ದು ಅಪಾರದರ್ಶಕಗಳಾಗಿರುತ್ತವೆ. ಕಾಗದದ ಮೇಲೆ ಬಳಿದ ಬಣ್ಣವು ಒಣಗಿದ ನಂತರ ಗದುವು ಗದುವಾಗಿರದೇ ಒಂದೇ ಸಮನಾಗಿ ಲೇಪಿಸಿದಂತಿರುತ್ತವೆಯಾದ್ದರಿಂದ ಈ ವಿಧಾನಗಳು ವಾಣಿಜ್ಯ ಕಲಾಕೃತಿಗಳಿಗೆ ಇಲ್ಲವೇ ಪ್ರಚಾ ಚಿತ್ರಗಳಿಗೆ ಹೆಚ್ಚು ಯೋಗ್ಯವಾಗಿವೆ. ಈ ವಾಣಿಜ್ಯ ಇಲ್ಲವೇ ವ್ಯಾವಹಾರಿಕ ಕಲಾಕೃತಿಗಳಲ್ಲಿ ಬಳಸಲಾಗುವ ಬಣ್ಣಗಳು ಪ್ರಕಾಶಮಾನವಾಗಿಯೂ ಜನಸಾಮಾನ್ಯರ ಕಣ್ಣುಕೋರೈಸುವಂತೆಯೂ ರಂಜನೀಯವಾಗಿಯೂ ಇರಬೇಕಾದುದು ಅತ್ಯವಶ್ಯಕವಾಗಿದೆ. ಸಾಮಾನ್ಯ ಜಲವರ್ಣ ವಿಧಾನದಲ್ಲಿ ಬಣ್ಣಗಳನ್ನು ಪಾರದರ್ಶಕವಾಗಿ ಬಳಸಿ ವ್ಯವಹಾರಿಕ ಕಲಾಕೃತಿಗಳಿಗಿಂತ ಸೂಕ್ಷ್ಮವಾದ ವರ್ಣಸಾಂದ್ರತೆಗಳ ವೈವಿಧ್ಯ ಚಿತ್ರಣವು ಪ್ರಾಮುಖ್ಯವಾಗಿದೆ. ಹಳೆಯ ಪದ್ಧತಿಯ ಜಲವರ್ಣ ವಿಧಾನದಲ್ಲಿ ಪರಿಣಿತರೆನಿಸಿದ ಸರ್ ವಿಲಿಯಂ ನಿಕೋಲ್ಸನ್‌ರಂಥ ಕಲಾವಿದರು ಸಹ ಗ್ವಾಷ್ ಇಲ್ಲವೆ ಅಪಾರದರ್ಶಕ ವರ್ಣಗಳ ಬಳಕೆ ಹಾಗೂ ಪ್ರಚಾರ ಚಿತ್ರಕಲಾಕೃತಿಗಳ ರಚನೆಯಲ್ಲಿ ಅಂತರ್‍ರಾಷ್ಟ್ರೀಯ ಮನ್ನಣೆಗೆ ಪಾತ್ರರಾಗಿದ್ದರು. ಟೂಲೂಸ್ ಲಾತ್ರೆ ಮತ್ತೊಬ್ಬ ವಿಶ್ವವಿಖ್ಯಾತ ಪೋಸ್ಟರ್ ಚಿತ್ರಕಲಾವಿದನಾಗಿದ್ದನಲ್ಲದೇ ಭಾರತದಲ್ಲಿ ಪ್ರಪ್ರಥಮವಾಗಿ ಪೋಸ್ಟರ್ ವರ್ಣಗಳನ್ನು ಬಳಕೆಯಲ್ಲಿ ತಂದ ಕೀರ್ತಿಗೆ ಪಾತ್ರರಾಗಿದ್ದ ಕನ್ನಡಿಗ ಎಸ್. ಎಂ. ಪಂಡಿತರಂಥ ಕಲಾವಿದರ ಮೇಲೆ ಪ್ರಭಾವ ಬೀರಿದ ಕಲಾವಿದನಾಗಿದ್ದನು.

ಎ. ಟಿ. ಕಾ.

## ಗಿಲ್ಡ್

ಮಧ್ಯಯುಗದಲ್ಲಿ ವ್ಯಾಪಾರಸ್ತರು ಆರ್ಥಿಕ, ಧಾರ್ಮಿಕ ಮತ್ತು ಸಾಮಾಜಿಕ ಉದ್ದೇಶಗಳಿಗಾಗಿ ಸಭೆಗಳನ್ನು ರೂಪಿಸಿಕೊಳ್ಳುತ್ತಿದ್ದರು. ಕೆಲವು ವೇಳೆ ವಿವಿಧ ವ್ಯಾಪಾರಗಾರರು ಒಟ್ಟಾಗಿ ಒಂದೇ ಸಭೆಯನ್ನು ರೂಪಿಸುತ್ತಿದ್ದರು. ಫ್ಲಾರೆನ್ಸ್‌ನಲ್ಲಿ ಚಿತ್ರಕಾರರು ವೈದ್ಯ ಸಂಘಗಳಿಗೆ ಸೇರಿದ್ದರು. ಎಲ್ಲೂ ಚಿತ್ರಕಾರರಿಗೆ ರಾಜರ ಆಶ್ರಯವಿಲ್ಲದಿದ್ದರೆ, ಈ ಸಭೆಗಳಿಗೆ ಸೇರಬೇಕಾಗಿತ್ತು. ಇಲ್ಲಿ ಗುರು ಸ್ಥಾನ ಪಡೆಯಲು ಪ್ರದರ್ಶನಾರ್ಥವಾಗಿ ಅತ್ಯಂತ ಉತ್ಕೃಷ್ಟ ಕೃತಿಯನ್ನು ಈ ಸಭೆಗೆ ಕೊಡಬೇಕು.ಈ ಸಭೆಯ ಅಧಿಕಾರಿಗಳು ಅನೇಕ ಉದ್ಯೋಗಾರ್ಥಿಗಳನ್ನು ಮತ್ತು ಕೆಲಸ ನಿಬಂಧನೆ ಮತ್ತು ವಸ್ತುಗಳನ್ನು ಗಮನಿಸುತ್ತಿದ್ದರು. ಕೆಲವು ಸಭೆಗಳು ತಮ್ಮ ಚಿತ್ರಕಾರ ಸದಸ್ಯರಿಗೆ, ತಮ್ಮ ಮುದ್ರೆಯಿರುವ ಪ್ಯಾನಲ್‌ಗಳನ್ನು ಕೊಡುತ್ತಿದ್ದರು. ಈ ಸಮಾನತೆಯ ಅಭ್ಯಾಸ ಮತ್ತು ವ್ಯಾಪಾರಿ ವೃತ್ತಿ ಮನೋಭಾವವು ಲಿಯೋನಾರ್ಡೊ ಮತ್ತು ಮೈಕೇಲ್ ಎಂಜಲೋ ಮುಂತಾದ ಕಲಾಕಾರರಲ್ಲಿ ಕಲಾಕಾರನ ಸ್ವಾತಂತ್ರ್ಯ ಮತ್ತು ಮೂಲ ಭೂತತೆಯನ್ನು ಹಾಗೂ ಅವನ ಔದ್ಯೋಗಿಕ ಮಟ್ಟ ಪ್ರತಿಭಾವಂತ ತನವನ್ನು ಗಳಿಸಬೇಕೆಂಬ ಭಾವನೆ ಮೂಡಿತು. ಪ್ರಾಮಾಣಿಕ ವ್ಯಾಪಾರಕ್ಕಿಂತ ಭಿನ್ನವಾದ ಸ್ಪೂರ್ತಿಗೊಂಡ ವ್ಯಕ್ತಿ ಎನ್ನುವ ಈ ಹೊಸ ಕಲ್ಪನೆ ಮೂಡಿ ಈ ಸಭೆಗಳ ಅವನತಿಗೆ ಕಾರಣವಾಗಿ, ಬೋಧನೆಯ ಕೆಲಸವನ್ನು ಕೈಗೊಂಡ ಅಕಾಡೆಮಿಗಳು ಪ್ರಾರಂಭವಾದವು.

ಎನ್. ವಿ.

## ಗ್ರೀಸ್ (ಪುರಾತನ)

ಗ್ರೀಕರು ಇಂದಿನ ಗ್ರೀಸ್ ದೇಶದ ದಕ್ಷಿಣ ಭಾಗದಲ್ಲಿ ನೆಲೆಸಿದ್ದರು. ಅವರ ಕಾಲ ಕ್ರಿ.ಪೂ. ೮೦೦ ರಿಂದ ಕ್ರಿ. ಪೂ. ೧೯೭. ಇವರು ಭವ್ಯವೂ ಸುಂದರವೂ ಆದ ಕಟ್ಟಡಗಳನ್ನೂ ಶಿಲ್ಪ



ಕಲಾಕೃತಿಗಳನ್ನೂ ರಚಿಸಿದರು. ಗ್ರೀಕ್ ಕಲಾವಿದರು ವಾಸ್ತವಿಕತೆಯನ್ನು ಹೆಚ್ಚು ಪ್ರೀತಿಸುತ್ತಿದ್ದರು. ಪ್ರಮಾಣ ಮತ್ತು ರೇಖೆಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟಿದ್ದರು. ಈ ಕಾಲದ ಕಲಾವಿದನು ತನ್ನ ಪೂರ್ವಜರ ಸಾಧನೆಗಳಿಂದ ಮೊದಲುಗೊಂಡು "ಏನಾದರೂ ಹೊಸದನ್ನೇ ಮಾಡಲು" ಯತ್ನಿಸುತ್ತಿದ್ದನು. ಕೆಲವು ಅವಧಿಗಳಲ್ಲಿ 'ಪಡಿಕಟ್ಟು'(Pattern) ಪ್ರಧಾನವಾಗಿದ್ದರೆ ಇನ್ನುಳಿದ ಅವಧಿಗಳಲ್ಲಿ "ಸಂಯೋಜನೆ"(Composition) ಅಥವಾ "ಭಾವೋದ್ವೇಗ"ವು ಪ್ರಧಾನವಾಗಿರುತ್ತಿತ್ತು, ಆದರೆ ಬೆಳವಣಿಗೆಯು ಮಾತ್ರ ಒಂದೇ ತೆರನಾಗಿತ್ತು.

ಕ್ರಿ. ಪೂ. ೧೨ರಿಂದ ೮ನೇ ಶತಮಾನದ ಅವಧಿಯಲ್ಲಿ ಕುಂಬಾರರು ಕಂದು ಬಣ್ಣದ ಹೂಜಿಗಳ ಮೇಲೆ ರೇಖೆ ಮತ್ತು ವೃತ್ತಗಳಿಂದ ಸಂಪೂರ್ಣ ಹೂಜಿಯು ಪಡಿಕಟ್ಟಿನ ನಕ್ಷೆಗಳಿಂದ ಅಲಂಕಾರಗೊಳ್ಳುವಂತೆ ಕುಂಭಗಳನ್ನು ತಯಾರಿಸುತ್ತಿದ್ದರು. ಈ ಭೂಮಿತಿಯಾಕಾರದ ಶೈಲಿ(Geometrical Style) ಯಲ್ಲಿ ಪ್ರಾಣಿಗಳು, ಸ್ಮಶಾನಕ್ಕೆ ಹೋಗುತ್ತಿರುವವರ ಮೆರವಣಿಗೆ, ರಥಗಳಲ್ಲಿ ಹೋಗುತ್ತಿರುವ ಇಲ್ಲವೇ ನರ್ತನದಲ್ಲಿ ತೊಡಗಿರುವ ಮಾನವರು ಮುಂತಾದವುಗಳನ್ನು

ಚಿತ್ರಿಸಲಾಗುತ್ತಿತ್ತು. ಕ್ರಿ. ಪೂ. ೬೫೦ರಲ್ಲಿ ಪ್ರಪ್ರಥಮವಾಗಿ ಸುಮಾರು ಆಳೆತ್ತರದ ಪ್ರತಿಮೆಗಳ ನಿರ್ಮಾಣವಾಯಿತು. ಕ್ರಿ.ಪೂ. ೫ನೆಯ ಶತಮಾನದ ಸುಪ್ರಸಿದ್ಧ ಗ್ರೀಕ್ ಕವಿ 'ಏಷಿಲಸ್'ನು-ಹೊಸ ಪ್ರತಿಮೆಗಳು ಆಶ್ಚರ್ಯಕಾರಕ ಕೃತಿಗಳಾಗಿದ್ದರೂ ಪುರಾತನ ಪ್ರತಿಮೆಗಳಲ್ಲಿ "ಅದೇನೋ ದೈವತ್ವವಿದೆ" ಎಂದು ಹೇಳುವುದನ್ನು ಗಮನಿಸಿದಾಗ ಪುರಾತನ ಗ್ರೀಕ್ ಶಿಲ್ಪಕಲೆಯ ಶ್ರೇಷ್ಠತೆ-ಏನೆಂದು ಊಹಿಸಲು ಸಾಧ್ಯವಿದೆ. ಗ್ರೀಕ್ ಕಾಲದಲ್ಲಿ ನಿರ್ಮಾಣಗೊಂಡ ಶಿಲ್ಪಕಲಾಕೃತಿಗಳೆಲ್ಲ ಸಾಮಾನ್ಯವಾಗಿ ವರ್ಣರಂಜಿತವಾಗಿರುತ್ತಿದ್ದವು.

ಅಥೆನ್ಸ್, ಸ್ಪಾರ್ಟ್, ಥೀಬ್ಸ್, ಕೊರಿಂಥ್‌ಗಳು ಪ್ರಮುಖ ಪಟ್ಟಣಗಳಾಗಿದ್ದವು. ಇದೇ ಕಾಲದಲ್ಲಿಯೇ ರೋಮ್ ಸಾಮ್ರಾಜ್ಯವು ಪ್ರಬಲಗೊಂಡು ಗ್ರೀಸನ್ನು ಜಯಿಸಿತು.

ವಿ. ಟಿ. ಕಾ.

## ಗುಡಿಮಲ್ಲಂ

ಆಂಧ್ರದ ರೇಣಿಗುಂಟದಿಂದ ಆರು ಮೈಲಿಯಲ್ಲಿರುವ ಗ್ರಾಮ 'ಪರಶುರಾಮೇಶ್ವರ' ಶಿವಾಲಯ ಇಲ್ಲಿ ತುಂಬ ಪ್ರಸಿದ್ಧ. ಇಲ್ಲಿನ ಶಿವಲಿಂಗಕ್ಕೇ ಹೆಚ್ಚು ಪೂಜ್ಯತೆ. ಈ ಶಿಲ್ಪ ಕ್ರಿ.ಶ. ೨ನೇ ಶತಮಾನದಲ್ಲಿ ಭಾರ್ಹೂಟ್, ಜಗ್ಗಯ್ಯ ಪೇಟಾಗಳಿಂದ ಬಂದದ್ದು ಎನ್ನಲಾಗಿದೆ.

ಗುಡಿಮಲ್ಲಂ ದೇವಾಲಯ ಬೃಹದ್‌ವ್ಯಾಸದ ಗುಡಿಯನ್ನೂ ಹೊಂದಿದೆ. ಮೊಗಸಾಲೆ, ನವರಂಗ, ಸ್ತಂಭದ ಹಜಾರ, ನಂದಿಮಂಟಪದ ಸುಂದರ ನಂದೀಶ ಪರಶಿವಮೂರ್ತಿಯ ಭವ್ಯ ವಿರಾಟ್‌ರೂಪ, ಮನೋಜ್ಞವೆನಿಸುತ್ತದೆ. ಪುರುಷ ಲಿಂಗಾಕಾರದಲ್ಲಿರುವ ಲಿಂಗದಿಂದ ಒಡಮೂಡಿರುವ ನಗ್ನ ಶಿವನ ಭವ್ಯ ಮೂರ್ತಿಯನ್ನು ಹೊಂದಿರುವ ಅಪರೂಪದ ಪೂಜಾ ಮೂರ್ತಿಯಿದು.

ಇಲ್ಲಿ ಪಲ್ಲವ, ಚೋಳ, ಬಾಣರ ಶಾಸನ ಇವೆ. ಕ್ರಿ.ಶ. ೧೧೨೬ರ ಚೋಳರ ಶಾಸನದಂತೆ ಇದನ್ನು ವಿಕ್ರಮ ಚೋಳದೇವನ ಕಾಲದಲ್ಲಿ ಹೊಸತಾಗಿ ನಿರ್ಮಿಸಿದರೆಂದು ದಾಖಲೆಯಿದೆ. ಪಲ್ಲವರ ಕಾಲದಿಂದಲೂ ಇರುವ ಬೃಹತ್‌ವ್ಯಾಸವು, ಗುಡಿಮಲ್ಲಂ-ಚೆಂಗಲ್‌ಪೇಟಾದ ವಡಮಲ್ಲೀಶ್ವರಾಲಯಕ್ಕೂ ಹೋಲುತ್ತದೆ.

ವಿಕನಾ

## ಗುಲೆರಾ

ಗುಲೆರಾ-ಒಂದು ಚಿಕ್ಕ ರಾಜ್ಯವಾಗಿದ್ದು ಸೀಬ ಮತ್ತು ಪಂಜಾಬ ಬಯಲು ಸೀಮೆಯ ಗಡಿಯಲ್ಲಿದೆ. ಚಿಕ್ಕ ಪಟ್ಟಣವಾದ ಹರಿಪುರ ಇದರ ರಾಜಧಾನಿ. ೧೭೩೯ರಲ್ಲಿ ನಾದಿರ್‌ಶಾನ ದೆಹಲಿಯ ದಂಡಯಾತ್ರೆ ಮತ್ತು ಆಕ್ರಮಣವು ಕಾಂಗ್ರ ಶಾಲೆಯ ಚಿತ್ರಕಲೆಗೆ ದಾರಿಯಾಯಿತು. ನಂತರ ಗುಲೆರಾ ದಿಲೀಪ್‌ಸಿಂಗ್‌ನಿಂದ (೧೬೯೫-೧೭೪೪) ಆಳಲ್ಪಟ್ಟಿತು. ೧೭೩೯-೪೦ರಲ್ಲಿ ಮೊಗಲ್ ಶೈಲಿಯಲ್ಲಿ ಅಭ್ಯಸಿಸಿದ್ದ ಹಿಂದೂ ಕಲಾವಿದರು ಲಾಹೋರ್ ಅಥವಾ ದೆಹಲಿಯಿಂದ

ಪಂಜಾಬ್ ಬಯಲುಸೀಮೆಗೆ ವಲಸೆ ಹೋದರು. ದಿಲೀಪ್‌ಸಿಂಗ್‌ನ ಹಿರಿಮಗ ಬಿಶನ್‌ಸಿಂಗ್‌ನ ಅನೇಕ ಭಾವಚಿತ್ರಗಳನ್ನು ಗುಲೆರಾ ಚಿತ್ರಕಲೆಯ ಶೈಲಿಯಲ್ಲಿವೆ. ಭಾವಚಿತ್ರದ ಹಿಂಭಾಗದಲ್ಲಿ ಸುರುಳಿಯಾದ ಬೆಟ್ಟಗಳು ಇರುವಂತೆ ಚಿತ್ರಿಸಲಾಗಿದೆ. ಇವನೂ ಸಹ ಕಲಾನಿಪುಣ. ಇವನ ಅನೇಕ ಭಾವಚಿತ್ರಗಳು ಚಂಡೀಗಡದ ಮ್ಯೂಸಿಯಂನಲ್ಲಿವೆ. ಅದರಲ್ಲಿ ಸುಮಾರು ೧೭೫೦ರಲ್ಲಿ ಚಿತ್ರಿಸಿದ ಚಿತ್ರವೊಂದರಲ್ಲಿ ಅವನು ನೆಲದಲ್ಲಿ ಶ್ವೇತಶಿಲೆಯ ಮೇಲೆ ಕುಳಿತು ಹುಕ್ಕಾವನ್ನು ಸೇದುತ್ತಿರುವ ಭಂಗಿಯಲ್ಲಿ ಕುಳಿತಿರುವುದನ್ನು ಕಾಣಬಹುದು.

ಹಿಂದೂ ಧರ್ಮದ ವೈಷ್ಣವ ಪಂಥ ಹಾಗೂ ರಾಧ-ಕೃಷ್ಣರ ಆಧ್ಯಾತ್ಮಿಕ ಪ್ರೀತಿ ಕಾಂಗ್ರ ಚಿತ್ರಕಲೆಯ ಸ್ಫೂರ್ತಿಯಾಗಿತ್ತು. ಕಾಂಗ್ರ ಚಿತ್ರಕಲೆಯ ಬಗ್ಗೆ ಚರ್ಚಿಸುತ್ತಾ ಆನಂದ ಕೆ. ಕುಮಾರ ಸ್ವಾಮಿ ಹೇಳುತ್ತಾರೆ: 'ಆ ಶೈಲಿಯ ಮನೋಭಾವವು ಅಪೂರ್ವವಾಗಿದೆ. ಚೈನೀ ಚಿತ್ರಕಲೆಯಲ್ಲಿ ಪ್ರಕೃತಿ ದೃಶ್ಯಕ್ಕೆ ಏನು ಸಾಧನೆಗೊಂಡಿತೊ ಅದನ್ನು ಇಲ್ಲಿ ಮಾನವನ ಪ್ರೀತಿಗೆ ಸಾಧಿಸಲಾಗಿದೆ.' ಪ್ರೇಮಿಗಳ ಕೈಗಳು ಒಬ್ಬರಿಗೊಬ್ಬರ ಕುತ್ತಿಗೆಯ ಮೇಲೆ ಇರುವ, ಇಬ್ಬರ ಕಣ್ಣಿನ ದೃಷ್ಟಿಯು ನೇರವಾಗಿರುವ, ಏನೂ ಮಾತಿಲ್ಲದೇ ಸುಮ್ಮನೆ ಪಿಸುಗುಡುವ ಸಖಿಯರು, ಕೃಷ್ಣನ ಅನುನಯದ ಸಮಯದಲ್ಲಿ ಪ್ರಾಣಿಗಳು ಕೊಳಲಿನ ನಾದದಲ್ಲಿ ವಶೀಕೃತವಾಗಿರುವುದು ಮತ್ತು ರಾಗ - ರಾಗಿಣಿಯನ್ನು ತಟಸ್ಥವಾಗಿ ಆಲಿಸುತ್ತಿರುವುದು, ಹೀಗೆ ಅನೇಕ ದೃಶ್ಯಗಳನ್ನು ಚಿತ್ರಿಸಲಾಗಿದೆ. ಈ ಕಲೆಯು ಜೀವನದ ವಾಸ್ತವಗಳನ್ನು ಮಾತ್ರ ಒಳಗೊಂಡಿದೆ.

ಭಾಗವತ ಪುರಾಣದಲ್ಲಿ ಕೃಷ್ಣನ ಸಾಹಸದ ಅನೇಕ ದೃಶ್ಯಗಳನ್ನು ನಿರೂಪಿಸಲಾಗಿದೆ. ಹುಕ್ಕಾ ಸೇದುತ್ತಿರುವ ಹೆಂಗಸಿನ ಭಾವಚಿತ್ರವು ಆದಿಕಾಲದ ಗುಲೆರಾ ಚಿತ್ರಕಲೆಗೆ ಸಂಬಂಧಪಡುತ್ತದೆ. ಮಹಮ್ಮದ್ ಶಾನ ಕಾಲದ ಮೊಗಲ್ ಚಿತ್ರಕಲೆಯಲ್ಲಿ ಇದ್ದ ಹಾಗೆ ಸ್ತ್ರೀಯ ಮುಖವು ಗುಂಡಗಿದೆ. ಆದರೆ ದೃಶ್ಯದ ಹಿಂಭಾಗದಲ್ಲಿ ಇರುವ ಕೆಂಬಣ್ಣದ ಮೋಡಗಳು ಅದು ಗುಲೆರಾ ಚಿತ್ರಕಲೆಯೆಂದು ಸೂಚಿಸುತ್ತವೆ. ಕಲಾವಿದ ಗುರುಸಹಾಯಿಯಿಂದ ಅನೇಕ ಶೃಂಗಾರ ಚಿತ್ರಗಳನ್ನು ನಿರೂಪಿಸಲಾಯಿತು. ಅದರ ಸೂಕ್ಷ್ಮತೆ ಹಾಗೂ ನೀಲಿ ಮತ್ತು ಹಸಿರು ಬಣ್ಣಗಳನ್ನು ಉಪಯೋಗಿಸಿರುವ ರೀತಿ ಮನಮೋಹಕವಾಗಿದೆ.

**ಸುಮ**

## ಗುಹಾ ಚಿತ್ರಕಲೆ

ಆದಿಮಾನವನು ಬೇಸಾಯದಂತಹ ನಾಗರಿಕ ಜೀವನದ ರೀತಿಯಿಂದ ದೂರವಿದ್ದ ಕಾಲದಲ್ಲಿ ವನ್ಯಮೃಗಗಳ ಎಡೆಯಲ್ಲಿ ತನ್ನದೇ ಆದ ಬದುಕು ನಡೆಸುತ್ತಿದ್ದಾಗ, ಅರಣ್ಯ ಮಧ್ಯದ ಗುಹೆಗಳಲ್ಲಿ ವಾಸಮಾಡಿರಬಹುದು. ಮಳೆ, ಬಿಸಿಲು ಗಾಳಿ ಹೆಚ್ಚಾದಾಗ ಹೆಬ್ಬಂಡೆಗಳು ಮುಂದುಗಡೆ ಮತ್ತು ಮೇಲುಗಡೆ ಚಾಚಿಕೊಂಡು ಸ್ಥಳಗಳನ್ನು ತಾತ್ಕಾಲಿಕ ನಿವಾಸಗಳಾಗಿಯೋ, ವಿಶ್ರಾಂತಿಯ ತಾಣಗಳಾಗಿಯೋ ಆಶ್ರಯಿಸಿರಬೇಕು. ಇಂತಹ ಸ್ಥಳಗಳನ್ನು ಬಂಡೆಯಾಸರೆ(Rock Shelters)ಗಳು ಎಂದು ಕರೆಯಲಾಗುತ್ತಿದೆ. ಈ ರೀತಿಯ ಶಿಲಾಶ್ರಯದಲ್ಲಿ ಬಯಲು ಬಂಡೆಯ ಮೇಲೆ ಮತ್ತು ಗವಿಯ ಒಳಗೆ ಚಿತ್ರಿಸಿದ ಶಿಲಾಶ್ರಯದ ವರ್ಣಚಿತ್ರ ಮತ್ತು ರೇಖಾಚಿತ್ರಗಳು ರಚನೆಗೊಂಡಿವೆ. ಈ ರಾಕ್‌ಶೆಲ್ಟರ್ಸ್‌ಗಳಲ್ಲಿ ಕುಟ್ಟಿದ ಅಂದರೆ ಕಚ್ಚುಮಾಡಿದ (Brusings)ಚಿತ್ರಗಳಿವೆ. ಕೆಲವು ಕಡೆಗೆ ಕೆತ್ತನೆ(ಊರಿದ) ಮಾಡಿ ನಿರ್ಮಿಸಿದ ರೇಖಾವಿನ್ಯಾಸದ



ಲಾಸ್ಕಾಸ್ ಫ್ರಾನ್ಸ್

ಚಿತ್ರಗಳು ಕಂಡುಬಂದಿವೆ. ಇವುಗಳಿಗೆ ಗೀರುಚಿತ್ರಗಳೆಂದೂ, ಕೊರೆದ ಚಿತ್ರಗಳೆಂದೂ ಕರೆಯಲಾಗುತ್ತಿದೆ.

ವಿಶ್ವದಲ್ಲಿ ಅತೀಪ್ರಾಚೀನ ಚಿತ್ರಕಲೆಯ ಇಂತಹ ಕುರುಹುಗಳು ಸ್ಪೇನಿನ ಗವಿಗಳಲ್ಲಿ ಫ್ರಾನ್ಸಿನ ಡೋರಡೋನ್ ಪ್ರಾಂತದ ಲಾಗ್ರೀಜ್ ಗವಿಗಳಲ್ಲಿ ದೊರೆತಿವೆ. ಸುಮಾರು ೨೭೦೦೦ ವರ್ಷಗಳ ಹಿಂದೆ ಆರಿನೇಷಿಯನ್ ನಾಗರಿಕತೆಯ ಕಾಲದಲ್ಲಿ ಮನುಷ್ಯನ ಪ್ರಾಚೀನ ಕಲಾಕೃತಿಗಳು ದೊರೆಯುತ್ತವೆ. ಕಾಡುಕೋಣ, ಕುದುರೆ, ಕರಡಿ ಮುಂತಾದ ಪ್ರಾಣಿಗಳ ಆಕೃತಿಗಳು, ಮಾನವಾಕೃತಿಯ ಚಿತ್ರಗಳು ಬೇಟೆ, ಕೃಷಿ, ಮಂತ್ರ ಮಾಟಗಳಿಗೆ ಸಂಬಂಧಿಸಿದವುಗಳು ಹೆಚ್ಚಾಗಿ ಕಂಡುಬಂದಿವೆ. ಆಫ್ರಿಕಾ, ಅಮೇರಿಕಾ, ಇಜಿಪ್ತ, ಏಷ್ಯಾ ಮತ್ತು ಯುರೋಪ ಖಂಡಗಳಲ್ಲಿ ಇವು ಹೇರಳವಾಗಿ ಕಂಡುಬರುತ್ತವೆ.

ಎಸ್. ಸಿ. ಪಾ.

**ಗುಹೆ ಮತ್ತು ಬಂಡೆಯಾಶ್ರಯ ಚಿತ್ರಗಳು - ಭಾರತ**

ಸುಮಾರು ೧೦,೦೦೦ ವರ್ಷಗಳ ಹಿಂದೆಯೇ ನಮ್ಮ ದೇಶದ ದಟ್ಟಅರಣ್ಯಗಳ ನಡುವಿನ ಗುಹೆ, ಬಂಡೆಯಾಶ್ರಯ(Rock Shelters)ಗಳಲ್ಲಿ ಇತಿಹಾಸ ಪೂರ್ವಜರ ಚಿತ್ರಕಲೆ ಅರಳಿತ್ತು. ಪುರಾತನ ಶಿಲಾಯುಗ, ಹೊಸ ಶಿಲಾಯುಗಗಳಿಂದ ಚರಿತ್ರೆಯ ಆರಂಭದವರೆಗೆ ಸೃಷ್ಟಿಯಾದ ಈ ಚಿತ್ರಕಲೆಯನ್ನು ದೇಶದ ನೂರಾರು ಶಿಲಾಶ್ರಯಗಳಲ್ಲಿ ಇಂದಿಗೂ ನಾವು ನೋಡಬಹುದು. ವಿಶ್ವವೆಲ್ಲಾ ಇಂದಿನಂತೆ ವಿಭಜನೆಗೊಳ್ಳದ ಭೌಗೋಳಿಕವಾಗಿ ಒಂದೇ ಆಗಿದ್ದ. ವ್ಯವಸಾಯವಿನ್ನೂ ಬಳಕೆಗೆ ಬರದಿದ್ದ ಸಂದರ್ಭದಲ್ಲಿ ಚಿತ್ರಿಸಿದ ಚಿತ್ರಗಳಿವು. ವಿಶ್ವದ ೧೦,೦೦೦ ವರ್ಷಗಳ ಹಿಂದಿನ ಇತಿಹಾಸ ಪೂರ್ವ ಮಾನವ ಸಂಸ್ಕೃತಿಗಳ ಆಯ್ದ

ನಿವೇಶನಗಳಲ್ಲೊಂದಾದ ನರ್ಮದಾ ನದಿ ದಂಡೆಯ ಎರಡೂ ಕಡೆ ಹಾಗೂ, ನಮ್ಮ ದೇಶದ ಉದ್ದಗಲಕ್ಕೂ ಹರಡಿದ ಈ ಕಲೆಯ ಶೋಧನೆ ಆಕಸ್ಮಿಕವಾಗಿ ಅಲ್ಲಲ್ಲಿ ೧೮೮೦ರಿಂದ ಪ್ರಾರಂಭವಾಯಿತೆಂದು ಹೇಳಲಾಗಿದೆ. ಹ್ಯೂಬರ್ಟ್ ನಾಕ್ಸ್ ಬಳ್ಳಾರಿಯ ಸಮೀಪದ ಕುಪ್ಪಗಲ್ಲು ಗ್ರಾಮದ ಗುಡ್ಡದ ಗುಂಡುಗಳ ಮೇಲೆ ಕುಟ್ಟಿ, ಊರಿ ಬಿಡಿಸಿದ ಚಿತ್ರಗಳನ್ನು ಕಂಡುಕೊಂಡದ್ದು ಆಗಲೆ. ಇದೇ ಸಮಯದಲ್ಲಿ ಮಧ್ಯಪ್ರದೇಶದ ಮಿರ್ಜಾಪುರದ ಬಳಿಯ ವಿಂಧ್ಯ ಪ್ರದೇಶದ ಕೈಮೂರ್ ಬೆಟ್ಟಗಳ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳನ್ನು ಕಂಡುಕೊಳ್ಳಲಾಯಿತು. ನಂತರ ೧೯೦೦ರಿಂದೀಚೆಗೆ ಉತ್ತರ ಭಾರತದಲ್ಲಿ ಇಂಥ ಕಲೆಯ ನೂರಾರು ಶಿಲಾಶ್ರಯಗಳು ಬೆಳಕಿಗೆ ಬಂದಿವೆ. ೧೯೫೭ರಲ್ಲಿ ಮಧ್ಯ ಪ್ರದೇಶದ ರೈಸಾನ್ ಜಿಲ್ಲೆಯ ಭೀಮ್‌ಭೇಟ್ಕಾದಲ್ಲಿನ ಶಿಲಾಶ್ರಯಗಳ ಚಿತ್ರಗಳನ್ನು ಉಜ್ಜಯಿನಿಯ ವಿಷ್ಣು ಶ್ರೀಧರ್‌ವಾಕಾಂಕರ್ ಅನಾವರಣಗೊಳಿಸಿದರು. ಇಲ್ಲಿನ ಮಾನವರ, ಪ್ರಾಣಿಗಳ ಚಿತ್ರಗಳು, ಬೇಟೆ, ಕದನದ ದೃಶ್ಯಗಳನ್ನೇ ಅಲ್ಲದೆ ದಿನನಿತ್ಯದ ಬದುಕನ್ನೂ ಪರಿಚಯಿಸುತ್ತವೆ. ಬಹುತೇಕ ಕೆಂಪು, ಕಾವಿ ಮತ್ತು ಬಿಳಿಯ ಬಣ್ಣಗಳು ಹಾಗೂ ಈ ಬಣ್ಣಗಳ ವಿವಿಧ ಛಾಯೆಗಳನ್ನು ಹೊಂದಿವೆ. ಕ್ರಮಸಂಖ್ಯೆ ಎ.ಎಸ್.ಐ. ೯ರ ಶಿಲಾಶ್ರಯದಲ್ಲಿ ಕೆಲವು ಹಳದಿ ಮತ್ತು ಹಸಿರು ವರ್ಣಚಿತ್ರಗಳೂ ಇವೆ. ಮ್ಯಾಂಗನೀಸ್, ಹೆಮಟೈಟ್, ಮೃದುಕೆಂಪು ಶಿಲೆ ಮತ್ತು ಮರದ ಇದ್ದಿಲಿನಿಂದ ವರ್ಣಗಳನ್ನು ಪಡೆಯಲಾಗಿದೆ. ಪ್ರಾಣಿಗಳ ಕೊಬ್ಬು ಮತ್ತು ಮರದ ಎಲೆಗಳ ರಸವನ್ನು ಈ ಬಣ್ಣಗಳೊಂದಿಗೆ ಮಿಶ್ರಮಾಡಿ ಚಿತ್ರಿಸಲಾಗಿದೆ. ಹೋಶಂಗಾಬಾದ್ ಬಳಿಯ ಆದಂಗಡ, ಪಚ್‌ಮಡಿಗಳಲ್ಲಿ ಬೀಂಭೇಟ್ಕಾದಷ್ಟೇ ಸುಂದರವಾದ, ಮುಖ್ಯವಾದ ಸಮಕಾಲೀನ ಚಿತ್ರಗಳನ್ನು ನೋಡಬಹುದು.

ಒರಿಸ್ಸಾ, ಗುಜರಾತ್, ರಾಜಾಸ್ಥಾನ್, ಉತ್ತರ ಪ್ರದೇಶ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮತ್ತು ನಮ್ಮ ರಾಜ್ಯದಲ್ಲೂ ಇಂಥ ಚಿತ್ರಗಳು ಇವೆ. ಬಹುಷಃ ಗುಹೆ ಮತ್ತು ಶಿಲಾಶ್ರಯ ಚಿತ್ರಗಳ ಸಂಖ್ಯಾ ದೃಷ್ಟಿಯಿಂದ ಭಾರತ ವಿಶ್ವದಲ್ಲೇ ಮೊದಲನೆಯದಾಗಬಹುದು. ನಮ್ಮ ರಾಜ್ಯದ ರಾಯಚೂರು ಜಿಲ್ಲೆಯ ಹಿರೇಬೆನಕಲ್, ತೆಕ್ಕಲಕೋಟೆ, ಬಾದಾಮಿಯ ಸುತ್ತಮುತ್ತ ಇರುವ ಸಿಡಿಲುಫಡಿ, ಸೀತಿದೋಣಿ, ತಟಕೋಟೆ, ಕುಟುಕನಕೇರಿ ಹತ್ತಿರದ ಸಿಡ್ಲುಪಡಿ, ಕೋಳಿಫಡಿ, ರಾಮದುರ್ಗ, ಹಂಪೆಯ ಆನೆಗೊಂದಿ ಬಳಿಯ ರಾಮಾಪುರದ ತಿರುವಿನಲ್ಲಿರುವ ಒನಕೆಕಿಂಡಿ, ಯಾದ್‌ಗೀರ್ ಬಳಿಯ ಬಲಿಚಕ್ರ, ಚಿತ್ರದುರ್ಗದ ಮತ್ತು ಬ್ರಹ್ಮಗಿರಿಯ ಬೆಟ್ಟಗಳಲ್ಲಿ, ಕೋಲಾರ ಜಿಲ್ಲೆಯ ಟೇಕಲ್ ಸುತ್ತಮುತ್ತಲ ಕಲ್ಲಿನ ಬೆಟ್ಟಗಳಲ್ಲಿ ಇತಿಹಾಸ ಪೂರ್ವ ಚಿತ್ರಕಲೆಯನ್ನು ಗುರುತಿಸಬಹುದಾಗಿದೆ. ಈ ಚಿತ್ರಗಳು ಸಮಕಾಲೀನ ಸಾಂಸ್ಕೃತಿಕ ಆಚರಣೆಗಳು, ಚಟುವಟಿಕೆಗಳು, ಬೇಟೆ ಇತ್ಯಾದಿಗಳನ್ನು ಅಭಿವ್ಯಕ್ತಿಸುತ್ತವೆ. ಕೆಮ್ಮಣ್ಣಿನೊಂದಿಗೆ ರಕ್ತ ಅಥವಾ ವನಸ್ಪತಿಯನ್ನು ಸೇರಿಸಿ ತಯಾರಿಸಿದ ಬಣ್ಣಗಳನ್ನು ಬಳಸಲಾಗಿದೆ. ಬಿಳಿಯಬಣ್ಣದ ಚಿತ್ರಗಳೂ ಸಾಕಷ್ಟಿವೆ. ಯಾದ್‌ಗೀರ್ ಬಳಿಯ ಬಲ ಚಕ್ರದಲ್ಲಿರುವ ಚಿತ್ರಗಳನ್ನು ಹೆಣ್ಣಿನ ಹೆರಿಗೆಯ ರಕ್ತದಿಂದ ಚಿತ್ರಿಸಿರಬಹುದೆಂದು ಅಲ್ಲಿನ ಜನ ಹೇಳುತ್ತಾರೆ. ಒಟ್ಟಾರೆ ಇಡೀ ಭಾರತದ ಇತಿಹಾಸಪೂರ್ವ ಕಲೆಯಲ್ಲಿ ಎಲ್ಲವನ್ನೂ ಒಟ್ಟಾಗಿ ಬೆಸೆಯುವಂಥ ಏಕತೆಯನ್ನು ಅಲ್ಪಸ್ವಲ್ಪ ಬದಲಾವಣೆಗಳ ನಡುವೆ ಗುರುತಿಸಬಹುದಾಗಿದೆ. ಕುತೂಹಲದ ಅಂಶವೆಂದರೆ ಆಸ್ಟ್ರೇಲಿಯಾದ ಇತಿಹಾಸ ಪೂರ್ವಜರ ಸಂತತಿ ಅಲ್ಲಿನ ಅರಣ್ಯಗಳಲ್ಲಿ ಉಳಿದುಕೊಂಡು ಇಂದಿಗೂ ಚಿತ್ರಕಲೆಯನ್ನು ಮುಂದುವರೆಸಿರುವಂತೆ ಭಾರತದ ಮಧ್ಯಪ್ರದೇಶದ ರಾಯಗರ್‌ನ ಸನ್ನಾ, ಬ್ಲಾದರ್‌ಪಾಟ್ ಮೊದಲಾದ ಗುಡ್ಡಗಾಡು ಹಳ್ಳಿಗಳ ಕೊರವರ ಮಾಂತ್ರಿಕ ಬರಹದಂಥ ರೇಖಾಚಿತ್ರಕಲೆ ಇಂದಿಗೂ ಅಲ್ಲಿನ ಹಲವು ಕಲಾವಿದರಿಂದ

ಜೀವಂತವಾಗಿದೆ. ಬಸ್ತಾರ್ ಪ್ರದೇಶದಲ್ಲೂ ಇತಿಹಾಸ ಪೂರ್ವ ಚಿತ್ರಕಲೆಯ ಸೆಳಕುಗಳನ್ನು ಚಿತ್ರಿಸುವ ಕಲಾವಿದರ ಪೀಳಿಗೆ ಇಂದಿಗೂ ಉಳಿದುಕೊಂಡು ಬಂದಿದೆ.

**ಕೆ. ವಿ. ಸು.**

## ಗುಳೇದಗುಡ್ಡ

ಬಾದಾಮಿ ಬಳಿಯ ಗುಳೇದ ಗುಡ್ಡದ ಶ್ರೀಶಂಕರಪ್ಪ ನಾಣಪ್ಪ ಹೊಸಮನಿ ಗೌಡ್ರಮನೆಯಲ್ಲಿ ಸುಮಾರು ನೂರು ವರ್ಷಗಳ ಹಿಂದೆ ಬರೆಸಿರಬಹುದಾದ ಭಿತ್ತಿಚಿತ್ರಗಳಿವೆ. ಮಹಡಿಯ ಮೇಲಿನ ವಿಶ್ರಾಂತಿ ಕೋಣೆಯ ನಾಲ್ಕೂ ಬದಿಯಲ್ಲಿ ಚಿತ್ರಗಳಿದ್ದು ಈಗ ಮೂರು ಬದಿಯವು ನಾಶವಾಗಿವೆ. ಗಣಪತಿ, ವಿಷ್ಣು, ಗರುಡ, ಕಾಮಧೇನು, ರತಿಮನ್ಮಥ, ಹನುಮಂತ ಇತ್ಯಾದಿ ದೇವಾನು ದೇವತೆಗಳ ಬಿಡಿ ಚಿತ್ರಗಳು ಹೂಬಳ್ಳಿ ಅಲಂಕರಣ ಇಲ್ಲಿ ಜಿನಪದ ಶೈಲಿಯಲ್ಲಿ ಚಿತ್ರಿತವಾಗಿವೆ. ಉತ್ತರ ಕರ್ನಾಟಕದ ಜನಪದ ಶೈಲಿಯಲ್ಲಿದ್ದರೂ ರೇಖೆ ಹಾಗೂ ಬಣ್ಣಗಾರಿಕೆಗಳಲ್ಲಿ ಪ್ರೌಢಿಮೆ ಕಾಣಬಹುದು. ಮನೆಯ ಇಂದಿನ ಗೃಹಸ್ತರಾದ ಚಂದ್ರಶೇಖರ ಹೊಸಮನಿ ಅವರು ಕಲಾವಿದ ಮಹದೇವ ಜಗತಾಪ ಅವರಿಂದ ಕೆಲವು ಕೃತಿಗಳನ್ನು ನಕಲು ಮಾಡಿಸಿ ಇರಿಸಿದ್ದಾರೆ.

**ಅಂಸ**

## ಗೋಕಾಕ್‌ಕಲೆ

ಜಿನಗಾರ ಮನೆತನದ ಹಲವಾರು ವೃತ್ತಿಚಿತ್ರಕಾರರ ಮನೆತನಗಳು ಇಲ್ಲಿವೆ. ಇವರ ಪೂರ್ವಜರು ಶೋಲಾಪುರ ಮಹಾರಾಜರ ಕಾಲದಲ್ಲಿ ಆಶ್ರಯವನ್ನು ಪಡೆದಿದ್ದರಂತೆ ಅಲ್ಲಿಂದ ಗೋಕಾಕಕ್ಕೆ ವಲಸೆ ಬಂದು ನೆಲೆಸಿದುದಾಗಿ ಹೇಳುತ್ತಾರೆ.

ಬೆಳಗಾಂವ ಜಿಲ್ಲೆಯ ಗೋಕಾಕ್ ಅಂಟಿನ ಕರದಂಟಿಗೆ ಪ್ರಸಿದ್ಧವಾದಂತೆ ಅಲ್ಲಿಯ ಕಟ್ಟಿಗೆಯ ವರ್ಣರಂಜಿತ ತರಕಾರಿ, ಹಣ್ಣುಗಳನ್ನು ಆಟಿಗೆಯ ಗೊಂಬೆ ವಸ್ತುಗಳನ್ನು ತಯಾರಿಸುವಲ್ಲಿಯೂ ಅಷ್ಟೇ ಕೀರ್ತಿಯನ್ನು ಪಡೆದಿದೆ. ಈ ವಸ್ತುಗಳ ತಯಾರಿಕೆಗಾಗಿ ಇವರು ಹರಿವಾಳ (ಹಾಲವಾಳ) ಅಥವಾ ಪೋಲಕಿ ಕಟ್ಟಿಗೆ ಬಳಸುತ್ತಾರೆ. ಈ ಕಟ್ಟಿಗೆ ಅತ್ಯಂತ ಹಗುರವಾಗಿರುತ್ತದೆ. ಇದರ ಜೊತೆಗೆ ಬಿದಿರಿನಲ್ಲಿ ಮೈದಾಹಿಟ್ಟಿನ ಸರಿ, ಕಲ್ಲುನಾರಿನ ಹಾಳೆ, ಅಂಟು ಬಣ್ಣದ ದಾರ ಎಳೆ ಮುಂತಾದ ವಸ್ತುಗಳನ್ನು ಉಪಯೋಗಿಸುತ್ತಾರೆ.

ಕಲಾವಿದರು ಹಾರಿವಾಳದ ಕಟ್ಟಿಗೆಯನ್ನು ಮೊದಲು ಚೆನ್ನಾಗಿ ಒಣಗಿಸಿ, ನಂತರ ಕೆತ್ತಿ ನುಣುಪುಗೊಳಿಸಿ, ಬೇಕಾದ ಆಕಾರಕ್ಕೆ ಕತ್ತರಿಸಿಕೊಳ್ಳುತ್ತಾರೆ. ನಂತರ ಸುಣಬುರಲಿ ಹರಳನ್ನು ಪುಡಿಮಾಡಿ ದ್ರಾವಣ ತಯಾರಿಸಿ, ಅದಕ್ಕೆ ಅಂಟು ಸೇರಿಸಿ ವಸ್ತುಗಳ ಮೇಲೆ ನಾಲ್ಕಾರು ಬಾರಿ ಲೇಪನ ಮಾಡುತ್ತಾರೆ. ಕಟ್ಟಿಗೆಯಲ್ಲಿರುವ ಬಿರುಕು, ತಗ್ಗುಗಳನ್ನು ಲಾಬಿಯಿಂದ ತುಂಬಿಕೊಂಡು, ಆಯಾ ವಸ್ತುವಿನ ಗುಣ ಬಣ್ಣಕ್ಕನುಗುಣವಾಗಿ ಬಣ್ಣವನ್ನು ತಿಳಿಯಾಗಿ ಲೇಪನ ಮಾಡುತ್ತ ೩-೪ಬಾರಿ ಬೆಳಕು ನೆರಳಿನ ಛಾಯೆಯನ್ನು ವರ್ಣಗಳಲ್ಲಿ ಮೂಡಿಸುತ್ತಾರೆ. ಕೊನೆಯ

ಹಂತದಲ್ಲಿ ಬಹಳ ಸಂಯಮದಿಂದ ಬಣ್ಣದ ವಿನ್ಯಾಸ ಪೂರ್ಣಗೊಳಿಸುತ್ತಾರೆ. ಬಣ್ಣ ಮಾಸದಿರಲು ವಾರ್ನಿಸನ್ನು ಸವರಲಾಗುತ್ತದೆ.

ವಸ್ತುಗಳಲ್ಲಿ ಇನ್ನೂ ಹೆಚ್ಚಿನ ನೈಜತೆಯನ್ನು ಮೂಡಿಸಲು, ಹಣ್ಣುಗಳಲ್ಲಿ ಅರ್ಧಹೋಳು ಮಾಡಿದಂತೆ ಕತ್ತರಿಸುತ್ತಾರೆ. ಕಲ್ಲಂಗಡಿ, ಸೇಬು ಮೊದಲಾದ ಹಣ್ಣುಗಳು ನೈಜವಾಗಿರುವ ಹಾಗೆ ಬಣ್ಣದ ವಿನ್ಯಾಸ ರೂಪಿಸಿ, ಒಳಗಿನ ಬೀಜಗಳನ್ನು ಸ್ಪಷ್ಟವಾಗಿ ತೋರಿಸಿರುತ್ತಾರೆ. ಮಾರಾಟಕ್ಕೆ ಸಿದ್ಧವಾಗಿಟ್ಟ ವಸ್ತುಗಳಂತೆಯೇ ಇವು ಕಾಣಿಸುತ್ತವೆ. ಸಾಮಾನ್ಯವಾಗಿ ಮಾವು, ನಿಂಬೆ, ಗಜನಿಂಬೆ, ದ್ರಾಕ್ಷಿ, ನೇರಳೆ, ಚಿಕ್ಕು, ಸೇಬು, ಮೋಸಂಬೆ, ಬಾಳೆಯಹಣ್ಣು, ಕಲ್ಲಂಗಡಿ, ನೆಲ್ಲಿಕಾಯಿ, ಅಂಜೂರ, ಗೋಡಂಬಿ, ದಾಳಿಂಬೆ ಮುಂತಾದ ಹಣ್ಣುಗಳನ್ನು ಸ್ವಲ್ಪ ದೂರದಲ್ಲಿ ನೋಡಿದರೆ ಅವು ಕಟ್ಟಿಗೆಯಿಂದ ಮಾಡಿದವುಗಳೆಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಇಲ್ಲಿಯ ವರ್ಣವಿನ್ಯಾಸ, ಪರಿಣತಿ ಬಣ್ಣಗಳ ಮಿಶ್ರಣದ ರೀತಿಗಳು ಈ ಜನಪದ ಕಲಾವಿದರ ನೈಪುಣ್ಯತೆಗೆ ಸಾಕ್ಷಿಯಾಗಿವೆ.

ಈ ಕಲಾ ಸೃಷ್ಟಿಗಳು ಮದುವೆ, ಹುಟ್ಟುಹಬ್ಬದ, ಇತ್ಯಾದಿ ಸಂದರ್ಭಗಳಲ್ಲಿ ವಿಶೇಷವಾಗಿ ಉಡುಗೊರೆಯ ವಸ್ತುಗಳಾಗಿ ಮಾರಾಟವಾಗುತ್ತವೆ. ಮನೆಯ ಅಲಂಕರಣ ವಸ್ತುಗಳಲ್ಲಿ ಗೋಕಾಕದ ಈ ಕಲಾತ್ಮಕ ವಸ್ತುಗಳು ಇರುವುದು ಸರ್ವೇಸಾಮಾನ್ಯ.

**ಎಸ್. ಸಿ. ಪಾ.**

## ಗೋಥಿಕ್



೧೮ನೇ ಹಾಗೂ ೧೯ನೇ ಶತಮಾನಗಳಲ್ಲಿ ಗೋಥಿಕ್ ಶೈಲಿಯ ಪುನರುಜ್ಜೀವನವು ಕೇವಲ ಅದಕ್ಕೇ ಸೀಮಿತವಾಗಿರದೇ ಸಾಹಿತ್ಯ, ಲಲಿತಕಲೆ, (ಅಲಂಕಾರಿಕ ವಿನ್ಯಾಸಗಳೂ ಸೇರಿದಂತೆ) ಎಲ್ಲಕ್ಕಿಂತ ಮಿಗಿಲಾಗಿ, ವಾಸ್ತುಶಿಲ್ಪವನ್ನೂ ಒಳಗೊಂಡಿತ್ತು. ಕೆನ್ನೆತ್ ಕ್ಲಾರ್ಕನು ಗೋಥಿಕ್ ಪುನರುಜ್ಜೀವನವನ್ನು 'ಪ್ರಾಯಃ ಪ್ಲಾಸ್ಟಿಕ್ ಕಲೆಯಲ್ಲಿ ಇದು ಆಂಗ್ಲರ ಏಕೈಕ ಚಳುವಳಿ' ಎಂಬುದಾಗಿ ಹೇಳಿದ್ದಾನೆ.

ಆದರೆ ಈ ಅದ್ಭುತ ಚಳುವಳಿ ಬಹು ಪ್ರಮುಖವಾದುದು. ಇದು ಇಡಿಯ ಈ ಭೂಭಾಗದಲ್ಲಿಯೇ ತನ್ನ ಸಾದೃಶ್ಯವನ್ನು ಕಂಡಿತ್ತು. (ಗೋಯಿತ್‌ನ ಸ್ಟ್ರಾಸ್‌ಬರ್ಗ್ ಕ್ರೈಸ್ತಮಂದಿರದ ಬಗೆಗಿನ ಪ್ರಶಂಸೆ ಇಲ್ಲಿ ಒಂದು ಒಳ್ಳೆಯ ಉದಾಹರಣೆಯಾಗುತ್ತದೆ) ಇಂಗ್ಲಂಡಿನಲ್ಲಿ ಈ ಗೋಥಿಕ್ ಪುನರುಜ್ಜೀವನ ವ್ಯವಸ್ಥೆಯಲ್ಲಿ ಮುಖ್ಯವಾಗಿ ಎರಡು ಹಂತಗಳಿದ್ದವು. ಮೊದಲನೆಯದು ೧೮ನೇ ಶತಮಾನದ ಮಧ್ಯಾನಂತರದ

ಕಾಲದಲ್ಲಿ ಉದಯಿಸಿದರೆ, ಎರಡನೆಯದು ೧೯ನೇ ಶತಮಾನದ ಅಂತ್ಯದ ವೇಳೆ ತನ್ನ ಯಶಸ್ಸಿನ ಶಿಖರವನ್ನೇರಿತು. ಚಳವಳಿಯ ಮೊದಲ ಅಂಗವಾಗಿ ಸ್ಮಾರಕ ಕಟ್ಟಡವು ಶಾಸ್ತ್ರೀಯವಾಗಿ ಕಟ್ಟಲ್ಪಟ್ಟಿತು. ಅದು ಹೊರಾಸ್ ವಾಲ್‌ಪೋಲ್‌ನ 'ಸೂಡೋ ಗಾಥಿಕ್‌ವಿಲ್ಲಾ ಸ್ಟ್ರಾಬೆರ್ ಡಿಲ್' ಎಂಬುದು. ಇದು ಟ್ವಿಕೆನ್‌ಹ್ಯಾಮ್ ಎಂಬಲ್ಲಿ ೧೭೪೮ರಲ್ಲಿ ಪ್ರಾರಂಭಗೊಂಡಿತ್ತು. ಇಲ್ಲಿ ಒಂದು ಬಹಳ ವಿಶಿಷ್ಟವಾದ ತಾಂತ್ರಿಕತೆಯು ಬಳಕೆಯಾಗಿದ್ದು, ಇದನ್ನು ಹೊರಗಿನಿಂದ ತಂದು ರೂಢಿಸಲಾದ ಶೈಲಿಗಳ ಗುಂಪಿಗೆ ಸೇರಿಸಬಹುದಾದ ರೆಕೋಕೋ ಪ್ರಯೋಗದಲ್ಲಿ ಬರುವ 'ಶೈನೋಸೆರಿ'ಗೆ ಧಾರಾಳವಾಗಿ ಹೋಲಿಸಬಹುದಾಗಿದೆ. ಇಂತಹ ಗೋಥಿಕ್ ಕಲೆಯು ಪ್ರಾಚೀನಾನ್ವೇಷಣೆಯನ್ನು ಆದರಿಸಿತ್ತು ಮತ್ತು ಚಿತ್ರಮಯ ಚಳುವಳಿಯ ಪ್ರತ್ಯಕ್ಷ, ಸಾಂಕೇತಿಕ ಸಂವೇದನೆಯೂ ಕೂಡ ಆಗಿತ್ತು. ಇದು 'ಕರಡು ಚಿತ್ರಯುಗ'ದ ಒಂದು ಉತ್ಪಾದನೆಯಾಗಿತ್ತು. ಜಲವರ್ಣ ಮಾಧ್ಯಮದ ಕಲಾವಿದರಿಗೂ ಹಾಗೂ ತಗಡಿನ ಮೇಲೆ ಚಿತ್ರವನ್ನು ಕೊರೆದ ಕಲಾವಿದರಿಗೂ ಈ ಗೋಥಿಕ್ ಅವಶೇಷಗಳು ನೆಚ್ಚಿನ ವಿಷಯವಾಗಿಯೇ ಉಳಿದವು. (ಉದಾ: ಟಿನ್‌ಟರ್ನ್ ಅಬ್ಬೆ)

ಚಳವಳಿಯ ಎರಡನೇ ಹಂತದಲ್ಲಿ ಗೋಥಿಕ್ ಪುನರುಜ್ಜೀವನ ಕಾರ್ಯವು ಇನ್ನಷ್ಟು ಗಂಭೀರವಾಗಿ, ಯೋಜನಾತ್ಮಕವಾಗಿ ರೂಪುಗೊಂಡಿತು. ಅಗಸ್ಟಸ್ ವೆಲ್ ಬೆ ಪೂಜಿನ್ ಹಾಗೂ ಜಾನ್ ರಸ್ಕಿನ್‌ರ ಲೇಖನವು ಹೇಳುವಂತೆ, ಗೋಥಿಕ್ ಶೈಲಿಯು ಅನಿವಾರ್ಯವಾದ ಮನಪ್ರವೃತ್ತಿಯ ವಿಚಾರವಾಯಿತು. ವಾಸ್ತುಶಿಲ್ಪದ ನಕ್ಷೆಯನ್ನು ತಯಾರಿಸುವಲ್ಲಿ ವಿಶೇಷ ಪ್ರಾವೀಣ್ಯವನ್ನು ಪಡೆದಿದ್ದ ಮತ್ತು ಗೋಥಿಕ್ ಸ್ಮಾರಕಗಳನ್ನು ಯಥಾವತ್ತಾಗಿ ಚಿತ್ರಿಸುವ, ಫ್ರೆಂಚಿನವನಾದ ಅಗಸ್ಟ್‌ಚಾರ್ಲ್ಸ್ ಪ್ಯೂಜಿನ್ (ಪ್ಯೂಜಿನನ ತಂದೆ) ಈ ಚಳವಳಿಯ ಎರಡು ಮಜಲುಗಳ ನಡುವೆ ಒಂದು ಸೇತುವೆಯನ್ನು ಗುರುತಿಸುತ್ತಾನೆ. ೧೯ನೇ ಶತಮಾನದಲ್ಲಿ ಸಾರ್ವಜನಿಕ ಕಟ್ಟಡಗಳಿಗೆ ಶ್ರೇಷ್ಠವಾದ ಶೈಲಿಯತ್ತಲೇ ಒಲವಿದ್ದರೂ, (ಲಂಡನಿನ ಹೊಸ ಸಭಾಮಂದಿರವೊಂದನ್ನು ಹೊರತುಪಡಿಸಿ) ಕ್ರೈಸ್ತ ಮಂದಿರಗಳಿಗೆ ಮಾತ್ರ, ಗೋಥಿಕ್ ಶೈಲಿಯೇ ನಿರ್ವಿವಾದವಾಗಿ ಅಪೇಕ್ಷಣೀಯವಾಗಿತ್ತು. ಗೋಥಿಕ್ ಪುನರುಜ್ಜೀವನ ಕಾಲದಲ್ಲಿ ಲಲಿತಕಲೆಯ ಮಟ್ಟಿಗೆ ಹೇಳುವುದಾದರೆ, ಗೋಥಿಕ್ ಶೈಲಿಗಿಂತಲೂ, ತನ್ಮೂಲಕ ಹೊರನೋಟಕ್ಕೇ ವ್ಯಕ್ತವಾಗುತ್ತಿದ್ದ ವಿಷಯ ವಸ್ತುವೇ ಮುಖ್ಯವಾಗಿತ್ತು. ಮಧ್ಯಯುಗದಲ್ಲಿ ಈ ಐತಿಹಾಸಿಕ ವಿಷಯಗಳು ಬ್ರಿಟನ್, ಫ್ರಾನ್ಸ್, ಮತ್ತು ಜರ್ಮನಿಗಳಲ್ಲಿ ಜನಜನಿತವಾದವು. ಮತ್ತು ನಜಾರೆನ್ಸ್, ಪೂರ್ವ-ರಾಫೇಲಿಟ್ಸ್, ಕಲೆ ಮತ್ತು ಕಸುರಿ ಕೆಲಸಗಳ ಚಳವಳಿಯಂತಹ ಕೆಲವು ಆದರ್ಶ ಚಳವಳಿಗಳು ಗೂಢಾರ್ಥವೆಂದು ಮಂಜುಕವಿದ ಈ ಮಧ್ಯಯುಗದಲ್ಲಿ ಪ್ರಚಲಿತಗೊಂಡವು.

ಮ.ಹೇ.

## ಗೋಪುರ

ಗೋಪುರವೆಂಬುದು ದೇವಾಲಯವನ್ನು ಸುತ್ತುವರೆದ ಪ್ರಾಕಾರದ ದ್ವಾರಗಳ ಮೇಲೆ ಹಂತ ಹಂತವಾಗಿ ಎಬ್ಬಿಸಲಾದ ಕಟ್ಟಡ. ಆರಂಭದಲ್ಲಿ ಆಲಯದ ದ್ವಾರಕ್ಕೆ ಅಳವಡಿಸಲಾದ ಕಿರಿದಾದ ಅಲಂಕೃತ ಮೇಲ್ಕಟ್ಟಡವಾಗಿದ್ದ ಇದು, ಕ್ರಮೇಣ ಹೆಚ್ಚು ಪ್ರಾಶಸ್ತ್ಯ ಪಡೆದು ಎತ್ತರದಲ್ಲಿ ವಿಮಾನವನ್ನು ಮೀರಿ ನಿಂತಿತು. ಉತ್ತಮ ಜಾತಿಯ ಗೋಪುರವು ಮುಖ್ಯದೇವಾಲಯದ



ಅಗಲಕ್ಕೆ ಒಂದೂವರೆ ಇಲ್ಲವೆ ಎರಡರಷ್ಟು ಅಗಲವಾಗಿ ಕಟ್ಟಬೇಕೆಂದು ಶಾಸ್ತ್ರಗ್ರಂಥಗಳಲ್ಲಿ ಹೇಳಿದೆ. ಗೋಪುರದ ಶೈಲಿ ಬೇಧಗಳನ್ನು ಅನುಸರಿಸಿ ಸೌರಕಾಂತ, ಚಂದ್ರಕಾಂತ, ಮೊದಲಾದ ಹನ್ನೆರಡು ವಿಧದ ಗೋಪುರಗಳನ್ನು ಮಾನಸಾರದಲ್ಲಿ ವಿವರಿಸಲಾಗಿದೆ. ಒಂದು ಪ್ರಾಕಾರಕ್ಕೆ ಇಂತಹ ಒಂದು, ಎರಡು ಅಥವಾ ನಾಲ್ಕು ಗೋಪುರ ದ್ವಾರಗಳಿರಬಹುದು. ಶಾಸ್ತ್ರಗ್ರಂಥಗಳಲ್ಲಿ ಐದು ವಿಧದ ಗೋಪುರಗಳ ಉಲ್ಲೇಖವಿದೆ. ಒಂದು ಅಥವಾ ಎರಡು ಅಂತಸ್ತುಳ್ಳ ಗೋಪುರಕ್ಕೆ 'ದ್ವಾರಶೋಭಾ', ಎರಡರಿಂದ ನಾಲ್ಕು ಅಂತಸ್ತುಗಳಿರುವ ಗೋಪುರಕ್ಕೆ 'ದ್ವಾರಶಾಲಾ', ಮೂರರಿಂದ ಐದು ಅಂತಸ್ತುಗಳಿದ್ದರೆ 'ದ್ವಾರಪ್ರಸಾದ', ಐದರಿಂದ ಏಳು ಅಂತಸ್ತುಗಳಿದ್ದರೆ 'ದ್ವಾರಹರ್ಮ್ಯ' ಎಂದೂ ಏಳರಿಂದ ಹದಿನಾರು ಅಂತಸ್ತುಗಳಿದ್ದರೆ 'ದ್ವಾರಗೋಪುರ' ಎಂದು ಹೆಸರಿಸಲಾಗಿದೆ. ಇದು ಕರ್ನಾಟಕದಲ್ಲಿ ೧೧-೧೨ನೇ ಶತಮಾನದ ನಂತರ ಹಾಗೂ ವಿಜಯನಗರದ ಅರಸರ ಕಾಲದಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುವುದು. ವಿಜಯನಗರ ಕಾಲದ ಉತ್ತರವಾದ ಗೋಪುರಗಳನ್ನು 'ರಾಯಗೋಪುರ' ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ. ಮೂಲ ಮೂರ್ತಿ ಶಯನಾವಸ್ಥೆಯಲ್ಲಿದ್ದಲ್ಲಿ (ಉದಾ: ಅನಂತಶಯನ) ಆ ದೇವಾಲಯದ ಗೋಪುರ ತುದಿಯಲ್ಲಿ ಚೂಪಾಗದೆ ಅಡ್ಡವಾಗಿದ್ದು ಇವಕ್ಕೆ 'ಶಾಲಾ' ಶಿಖರವೆಂದು ಕರೆಯುತ್ತಾರೆ. ಗೋಪುರಗಳೆಲ್ಲ ಗಾರೆಯಲ್ಲಿ ನಿರ್ಮಿತವಾಗಿದ್ದು ಅನೇಕ ಮೂರ್ತಿ ಶಿಲ್ಪಗಳಿಗೆ ಆಗರವಾಗುವಂತಿರುತ್ತವೆ. ಶೃಂಗಾರ ಶಿಲ್ಪಗಳಿಗೂ ಕೊರತೆಯಿರುವುದಿಲ್ಲ.

ಪಿ. ವಿ. ಕೆ.

## ಚನ್ನಪಟ್ಟಣ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ನಂಟ ಹಾಗೂ ಫೌಜುದಾರ ತಿಮ್ಮಪ್ಪ ರಾಜನು ೧೯ನೇ ಶತಮಾನದ ಮಧ್ಯದಲ್ಲಿ ಕಟ್ಟಿಸಿದ ವಿಶಾಲವಾದ ಅರಮನೆ ಇಂಡೋ ಸಾರ್ಸನಿಕ್ ಶೈಲಿಯಲ್ಲಿ ನಿರ್ಮಿತವಾಗಿದೆ. ಇದರ ದರ್ಬಾರ್ ಹಾಲ್ ಮತ್ತಿತರ ಕಡೆಗಳಲ್ಲಿ ಎಲೆ, ಹೂ ಬಳ್ಳಿಗಳ ನಿಬಿಡವಾದ ಚಿತ್ರಣಗಳು ಕಂಡು ಬರುತ್ತವೆ. ಇವು ಬೆಂಗಳೂರು ಹಾಗೂ ಶ್ರೀರಂಗಪಟ್ಟಣದ ಟಿಪ್ಪುವಿನ ಅರಮನೆಯ ಅಲಂಕರಣಗಳನ್ನು ಹೋಲುತ್ತವೆ. ಆದರೆ ಈಗ ನಿರ್ವಸತಿಯಾಗಿರುವುದರಿಂದ ಇಡೀ ಕಟ್ಟಡ ಶಿಥಿಲವಾಗಿ ನಾಶವಾಗಿದೆ.

ಅಲನ

## ಚಲನಶೀಲ ಕಲೆ(Kinetic Art)

ವಿಜ್ಞಾನದಿಂದ ಆಯ್ದುಕೊಳ್ಳಲಾದ ಹೆಸರು; ಇದನ್ನು ಮೊದಲಿಗೆ ನಾಮ್‌ಗ್ಯಾಬೋ (Gabo)ಮತ್ತು ಪೆವ್ಸ್ನರ್(Pevsner)ರವರ ಕಲೆ ಕುರಿತಂತೆ ೧೯೨೦ರ ದಶಕದಲ್ಲಿ ಅವರ ಮೊದಲ ನೈಜ-ಹೇಳಿಕೆ(Realist Manifesto) ಬರಹದಲ್ಲಿ ಅಳವಡಿಸಿಕೊಳ್ಳಲಾಯಿತು. ಈ ಚಲನಶೀಲ ಕಲೆಯಲ್ಲಿ ಚಲನೆ(Movement) ನಿಜವಾಗಿಯೂ ಉಂಟಾಗಬಹುದು ಅಥವಾ ಕಲಾಕೃತಿಯಲ್ಲಿ ಚಲನೆಯ ಭ್ರಮೆಯುಂಟಾಗಬಹುದು. ಬಹಳ ಹಿಂದೆಯೇ (೧೯೧೨ರಲ್ಲಿ) ಬೊಚ್ಚಿಯೋನಿ(Boccioni) (ಇಟಾಲಿಯನ್ ಫ್ಯೂಚರಿಸ್ಟ್ ಶಿಲ್ಪಿ)ಯ ಫ್ಯೂಚರಿಸ್ಟ್ ಶಿಲ್ಪಗಳ ತಾಂತ್ರಿಕ ಹೇಳಿಕೆ(Technical Manifesto of Futurist sculputre)ಯಲ್ಲಿ ಈ ಚಲಿಸುವ ಗುಣವನ್ನು ಗುರುತಿಸಲಾಗಿತ್ತು. ಆದರೆ ಆಗ Kinetic ಗಿಂತಲೂDynamic (ಬಲಿಷ್ಠ ಹಾಗೂ ರಭಸಯುಕ್ತತೆ) ಎಂಬ ಪದವನ್ನೇ ಸೂಕ್ತವಾಗಿ ಬಳಸಲಾಗಿದ್ದು ೧೯೫೦ರ ದಶಕದಿಂದಷ್ಟೇ Kinetic ಪದವನ್ನು ಗಂಭೀರ ವಿಮರ್ಶೆಗೆ ಬಳಸಿಕೊಳ್ಳಲಾಯಿತು ಅಂದಿನಿಂದ ಈ ಪದವನ್ನು ಅನೇಕ ವೈವಿಧ್ಯಮಯ ತಂತ್ರಗಳು ಹಾಗೂ ಶೈಲಿಗಳಲ್ಲಿ ಬಳಸಲಾಗಿದೆ. ಈ ಪದವು(Kinetic/ಚಲನಶೀಲ) ಸಾಮಾನ್ಯವಾಗಿ ಮೂರು ಆಯಾಮದ ಶಿಲ್ಪಾಕೃತಿಗಳ ಚಲನೆಯನ್ನು ಗುರುತಿಸಿದರೂ, ದೃಶ್ಯ-ಭ್ರಮಾತ್ಮಕ(Optical illusion) ಚಿತ್ರಕೃತಿಗಳು, ಸಿನೆಮಾದ ಪ್ರಭಾವಗಳು(Cinimatic effects), ಬೆಳಕಿನ ಚಲಿಸುವ ಭ್ರಮಾತ್ಮಕ ಪ್ರಭಾವಗಳಲ್ಲಿಯೂ ಕಂಡುಬರುತ್ತದೆ. ೧೯೫೦ರಿಂದ ೧೯೬೦ರ ತನಕ ಆಗಿಹೋದ ಪ್ರಮುಖ ಚಲನಶೀಲ(Kinetic) ಕಲಾವಿದರೆಂದರೆ ಪಾಲ್ ಬರಿ (Pol Bury), ಜೀನ್ ಟೆಂಗ್ವೆಲಿ(Jean Tingueley) ಮತ್ತು ಟಾಕಿಸ್(Takis).

ಎಚ್. ಎ. ಅ.

## ಚಿತ್ರ, ಚಿತ್ರಾರ್ಧ, ಚಿತ್ರಾಭಾಸ

ಸಂಸ್ಕೃತ ಹಾಗೂ ಕನ್ನಡ ಕಾವ್ಯಗಳಲ್ಲಿ ಹಾಗೂ ಕೆಲವು ಶಾಸ್ತ್ರಗ್ರಂಥಗಳಲ್ಲಿ ಈ ಪದ ಪ್ರಯೋಗ ಹಲವಾರು ಕಡೆಗಳಲ್ಲಿ ಬಂದಿದ್ದು ಇವನ್ನು ಕ್ರಮವಾಗಿ ಪೂರ್ತಿಯಾಗಿ ಕಡೆದಿರುವ

ಶಿಲ್ಪ, ಪಟ್ಟಿಕೆಗಳಲ್ಲಿ ಕೊರೆದ ಉಬ್ಬು ಶಿಲ್ಪ ಹಾಗೂ ಚಿತ್ರಕಲೆ ಎಂದು ವ್ಯಾಖ್ಯಾನಿಸಲಾಗಿದೆ. 'ಚಿತ್ರ' ಮತ್ತು 'ಚಿತ್ರಾರ್ಧ'ಗಳನ್ನು ಮಣ್ಣು, ಗಾರೆ, ಮರ, ಕಲ್ಲು, ಇಟ್ಟಿಗೆ ಲೋಹ ಇತ್ಯಾದಿಗಳಿಂದ ರೂಪಿಸಬಹುದೆಂದೂ ಹೊಂದುವಂತಹ ಬಣ್ಣಹಾಕಿ ಇನ್ನೂ ಸುಂದರಗೊಳಿಸ ಬಹುದೆಂದೂ ಶ್ರೀಕುಮಾರನ ಚಿತ್ರಲಕ್ಷಣ ಹೇಳುತ್ತದೆ. ಆದರೆ ಕಾವ್ಯ ನಾಟಕಾದಿಗಳಲ್ಲಿ ಚಿತ್ರಕಲೆ(Painting)ಯನ್ನು ಕುರಿತು ಹೇಳುವಾಗ "ಚಿತ್ರ" "ಆಲೇಖ್ಯ" ಎಂಬ ಪದ ಪ್ರಯೋಗಗಳೇ ಕಂಡುಬರುತ್ತವೆಯೇ ಹೊರತು ಚಿತ್ರಕಲೆಗೆ(Painting) 'ಚಿತ್ರಾಭಾಸ' ಎಂಬ ಪ್ರಯೋಗ ಕಂಡುಬರುವುದಿಲ್ಲ. 'ಆಭಾಸ'ವೆಂದರೆ ಭ್ರಾಂತಿ, ತಪ್ಪುತಿಳುವಳಿಕೆ ಎಂಬ ಅರ್ಥವಿರುವಂತೆ ಸಾದೃಶ್ಯ, ಪ್ರತಿಬಿಂಬ ಎಂಬ ಅರ್ಥಗಳೂ ಇವೆ. ಪ್ರಾಯಶಃ ನೆರಳು ಬೆಳಕಿನಿಂದ ಕೂಡಿದ ಚಿತ್ರವು ಬಣ್ಣ ಹಾಕಿದ ನೈಜ ಪ್ರಮಾಣದ ಶಿಲ್ಪವನ್ನು ಹೋಲುವಂತೆ 'ಭಾಸ'ವಾಗುತ್ತಿದ್ದರಿಂದ 'ಚಿತ್ರಕಲೆ'ಗೆ, 'ಚಿತ್ರಾಭಾಸ' ಎಂದು ಕರೆದಿರಬಹುದು. ಚಿತ್ರಿತ ಆಕೃತಿಗಳೇ ನಿಜವಾದ ಆಕೃತಿಗಳೆಂದು ಭ್ರಮಿಸುವ ಹಲರಾರು ಪ್ರಸಂಗಗಳು ಕಾವ್ಯ ನಾಟಕಾದಿಗಳಲ್ಲಿ ದೊರೆಯುತ್ತವೆ. ಅಂತೆಯೇ ಗೋಪುರಗಳಲ್ಲಿರುವ ಗಾರೆಯ ಶಿಲ್ಪಗಳಿಗೆ ಇಂದಿಗೂ ಬಣ್ಣಗಳಿಂದ ಅಲಂಕರಿಸುತ್ತಾರಲ್ಲದೆ ಕಲ್ಲಿನಲ್ಲಿ ಕಡೆದ ಶಿಲ್ಪ, ಉಬ್ಬು ಶಿಲ್ಪಗಳಿಗೂ ಬಣ್ಣ ಹಾಕುತ್ತಿದ್ದ ಉದಾಹರಣೆಗಳು ದೊರೆಯುತ್ತವೆ.

ಅಲನ

## ಚಿತ್ರಕಥಿ

ಚಿತ್ರಕಾತಿ ಜನಾಂಗವು ಮಹಾರಾಷ್ಟ್ರದಾದ್ಯಂತ ಹಾಗೂ ಆಂಧ್ರ ಮತ್ತು ಕರ್ನಾಟಕದ ಹಲವು ಭಾಗಗಳಲ್ಲಿ ಕಥೆ ಹೇಳುತ್ತಾ ವಲಸೆ ಹೋಗುವವರು. ಅವರು ಕಥೆ ಹೇಳುವಿಕೆಯನ್ನು ಒಂದೇ ಕಾಗದದ ಮೇಲೆ ಚಿತ್ರಿಸಿ, ಒಂದು ಪುರಾಣ ಅಥವಾ ಕಥೆಯನ್ನು ವಿವರಿಸುತ್ತಾರೆ ಚಿತ್ರಗಳನ್ನು ಸುರುಳಿ ಮಾಡಿ ಅದಕ್ಕೆ 'ಪೋಥಿ' ಎಂದೂ ಕರೆಯುತ್ತಾರೆ. ಒಂದು ಜೊತೆ ಚಿತ್ರಗಳನ್ನು ಹಿಡಿಯುವುದಕ್ಕೆ ಸುಲಭವಾಗಿರಲು ಮಧ್ಯಭಾಗದಲ್ಲಿ ಕೋಲಿನೊಂದಿಗೆ ಒಂದಕ್ಕೊಂದು ವಿರುದ್ಧ ದಿಕ್ಕಿನಲ್ಲಿ ಹಿಂದೆ ಮುಂದೆ ಅಂಟಿಸಿ, ಪ್ರೇಕ್ಷಕರ ಮುಂದೆ ಕಥೆಗಾರ ಕಥೆ ಹೇಳುತ್ತಾನೆ. ರಾಮಾಯಣ, ಮಹಾಭಾರತ, ಬಭ್ರುವಾಹನನ ಕಥೆ, ಹರಿಶ್ಚಂದ್ರನ ಕಥೆ, ಲವಕುಶರ ಕಥೆ ಮುಂತಾದ ಜನಪ್ರಿಯ ಪುರಾಣಗಳನ್ನು ಸ್ಥಳೀಯ ಕಥನಗಳಿಗೆ ಅಳವಡಿಸಿ ಚಿತ್ರಗಳನ್ನು ರಚಿಸುತ್ತಾರೆ. ಅವರು ಯಾವ ಪ್ರದೇಶದಿಂದ ಬಂದರು ಎಂಬುದನ್ನು ಆಧರಿಸಿ ಶೈಲಿಯ ವ್ಯತ್ಯಾಸಗಳಾವುವು. ಉದಾಹರಣೆಗೆ ಪಿಂಗುಲಿ, ಸಾವಂತವಾಡಿ ಮುಂತಾದವುಗಳಲ್ಲಿ ಆಕರ್ಷಕ ಬಣ್ಣಗಳ ಉಪಯೋಗ ಅಸಾಧಾರಣವಾಗಿರುತ್ತದೆ.

ಮರಿ

## ಚಿತ್ರಕಲೆ

ಚಿತ್ರಕಲೆ ಪ್ರಕೃತಿಯಲ್ಲಿ ಅಸಾಮಾನ್ಯವಾದ ಆದರೆ ಅದನ್ನೇ ಪೂರ್ಣವಾಗಿ ಅನುಸರಿಸಿದೆಯೆಂಬ ಭ್ರಮೆ ಮೂಡಿಸುವುದು ಒಂದು ಚತುರ ಕೃತಿ ಪ್ರಕೃತಿಯಲ್ಲಿ ಪದಾರ್ಥಗಳಿಗೆ ತ್ರಿಪರಿಮಾಣಗಳಿವೆ.



ಜಾಮಿನಿರಾಯ್



ವಿ. ಜಿ. ಸಿಂಧೂರ್

ಆದರೆ ಉದ್ದ, ಅಗಲ ಎರಡೇ ಪರಿಮಾಣಗಳಲ್ಲಿ ತ್ರಿಪರಿಣಾಮವನ್ನೂ ಸೂಚಿಸುವುದು ಚಿತ್ರಕಲೆಯ ಮುಖ್ಯ ಸೂತ್ರ. ಕಲೆಯಲ್ಲಿ ಮೂರು ತಂತ್ರಗಳು ಹಿಂದಿನಿಂದಲೂ ಬಳಕೆಯಲ್ಲಿವೆ. ಯಥಾ ದೃಷ್ಟಿರೂಪಣ, ನೆರಳು-ಬೆಳಕಿನ ಸಂಯೋಜನೆ ಮತ್ತು ವರ್ಣ ವಿನ್ಯಾಸ. ಚಿತ್ರಕಲೆಯಲ್ಲಿ ಎರಡು ವಿಧ, ವರ್ಣಚಿತ್ರ ಮತ್ತು ರೇಖಾಚಿತ್ರ. ಟೆಂಪರಾ, ಜಲವರ್ಣ, ತೈಲವರ್ಣ, ಪ್ಯಾಸ್ಟಲ್ ಮುಂತಾದ ಮಾಧ್ಯಮಗಳಿಂದ ಚಿತ್ರ ರಚನೆ ಮಾಡುವರು ಇತ್ತೀಚೆಗೆ ಚಿತ್ರಕಲೆಯಲ್ಲಿ ಅನೇಕ ಪ್ರಯೋಗಗಳು ನಡೆದು, ಅನೇಕ ಹೊಸ ವಿಧಾನಗಳನ್ನು ಅಳವಡಿಸಿದ್ದಾರೆ. ವಿಜ್ಞಾನದ ಹೊಸ ಆವಿಷ್ಕಾರಗಳನ್ನು ನಾನಾ ರೀತಿಯಲ್ಲಿ ಹೊಸ ತಂತ್ರಗಳಿಗಾಗಿ ಉಪಯೋಗಿಸಲಾಗುತ್ತಿದೆ.

ಚಿತ್ರಕಲೆಗೆ ಸಂಬಂಧಿಸಿದಂತೆ ಶಾಸ್ತ್ರ ಹಾಗೂ ಕಾವ್ಯಗಳಲ್ಲಿ ಚಿತ್ರಿಸು, ವರ್ಣಿಸು, ರೂಪಿಸು, ಆಲೇಖ್ಯ ಇತ್ಯಾದಿ ಪದಪ್ರಯೋಗಗಳಿವೆ. 'ಚಿತ್ರ' ಎಂಬ ಪದಕ್ಕೆ ನಿಘಂಟಿನಲ್ಲಿ ಹದಿನಾರು ವಿವಿಧ ಅರ್ಥಗಳಿವೆ. ಚಿತ್ರ ಎಂದರೆ ಆಶ್ಚರ್ಯ ಅದ್ಭುತ ಎಂಬ ಅರ್ಥವೂ ವ್ಯಾಪಕವಾಗಿ ಬಳಕೆಯಲ್ಲಿದೆ. ಅಮರಕೋಶದಲ್ಲಿ ವರ್ಣಚಿತ್ರದ ಅಲಂಕಾರಗಳಿಂದ ಆನಂದ ಉಂಟಾಗುವಂತೆ ಮಾಡುವ ಕೆಲಸಕ್ಕೆ ರಚನಾ ಪರಿಸ್ಪಂದ ಎಂದೂ ಅದ್ಭುತ ರಸಕ್ಕೆ ವಿಸ್ಮಯ, ಅದ್ಭುತ, ಆಶ್ಚರ್ಯ ಚಿತ್ರ ಎಂದು ನಾಲ್ಕು ಪರ್ಯಾಯ ಪದಗಳನ್ನು ಕೊಟ್ಟಿದೆ.

ಚಿತ್ರಕಲೆ ನಾಲ್ಕು ಹಂತಗಳಲ್ಲಿಆಗುತ್ತದೆ. (೧) ರೇಖಾಪಾತ (ಆಕೃತಿಯ ಹೊರ ಮೈಯನ್ನು ಕೆಂಪು ಅಥವ ಕಪ್ಪು ಬಣ್ಣದ ದಪ್ಪಗೆರೆಯಿಂದ ನಿರ್ದೇಶಿಸಿಕೊಳ್ಳುವುದು) ೨) ವರ್ತನ (ಮುಖ್ಯವಾದ ವಿವರಗಳನ್ನು ಎದ್ದುಕಾಣುವಂತೆ ಅಳವಡಿಸಿಕೊಳ್ಳುವುದು) ೩) ಅಲಂಕಾರ (ಚಿತ್ರಗಳಿಗೆ ಸೊಗಸು ಹೆಚ್ಚಿಸುವಂತೆ ವಿನ್ಯಾಸಗಳನ್ನು ಸೇರಿಸುವುದು) ೪) ವರ್ಣ (ಬಣ್ಣಗಳನ್ನು ತುಂಬಿಸುವುದು) ಮಾರ್ಕಂಡೇಯ ಪುರಾಣದಲ್ಲಿ 'ಕಲಾನಾಂ ವರಂ ಚಿತ್ರಂ' ಎಂಬ ಮಾತಿದೆ. ಎಂದರೆ ಕಲೆಗಳಲ್ಲಿ ಚಿತ್ರಕರ್ಮವೇ ಉತ್ತಮವಾದುದು ಎಂದು. ಚಿತ್ರವನ್ನು 'ಮಾಂಗಲ್ಯ'ವೆಂದೂ ಉತ್ತಮ ರಸಭಾವದ ಚಿತ್ರಗಳು ಮನೆಯಲ್ಲಿದ್ದರೆ ಒಳ್ಳೆಯದೆಂದೂ, ದುಃಖ ಆರ್ತ ಇತ್ಯಾದಿ ಚಿತ್ರಗಳಿದ್ದರೆ ಕೆಡುಕೆಂದೂ ಶಾಸ್ತ್ರಗ್ರಂಥಗಳು ಹೇಳುತ್ತವೆ.

## ಚಿತ್ರಕಲೆ ಶಾಸ್ತ್ರಗ್ರಂಥಗಳಲ್ಲಿ

ಚಿತ್ರಕಲೆಯನ್ನೇ ಕುರಿತು ಪ್ರತ್ಯೇಕ ಶಾಸ್ತ್ರಗ್ರಂಥಗಳು ಇರುವಂತಿಲ್ಲ. ಶಿಲ್ಪಶಾಸ್ತ್ರವನ್ನು ಕುರಿತು ಹೇಳುವ ಕೆಲವು ಗ್ರಂಥಗಳೇ ಚಿತ್ರಕಲೆಯನ್ನೂ ಕುರಿತು ಹೇಳುತ್ತದೆ. ಕೆಲವೊಮ್ಮೆ ಚಿತ್ರಕಲೆಯ ಭಾಗವನ್ನಷ್ಟೇ ಪ್ರತ್ಯೇಕವಾಗಿ ಪ್ರತಿಮಾಡಿರುವುದುಂಟು. ಟಿಬೆಟ್ ಭಾಷೆಯ 'ತಾಂಜೂರು'ನಿಂದ ಹಾಗೂ ಕೇರಳದ ಶ್ರಿಕುಮಾರನ ಶಿಲ್ಪರತ್ನದಿಂದ 'ಚಿತ್ರಲಕ್ಷಣ'ದ ಭಾಗವಷ್ಟೇ ಪ್ರತಿಮಾಡಿ ಪ್ರಚುರ ಪಡಿಸಿದೆ. ಇವುಗಳಲ್ಲಿ 'ಚಿತ್ರಸೂತ್ರ', ಅಭಿಲಷಿತಾರ್ಥ ಚಿಂತಾಮಣಿ, ಕಾಮಶಾಸ್ತ್ರ ನಾಟ್ಯಶಾಸ್ತ್ರ, ವಿಷ್ಣು ಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಪಂಚದಶಿ, ಶಿವತತ್ವರತ್ನಾಕರ, ಶ್ರೀತತ್ವನಿಧಿ ಇತ್ಯಾದಿಗಳು ಮುಖ್ಯವಾದುವು. ಈ ಬಗೆಯ ಶಾಸ್ತ್ರಗ್ರಂಥಗಳಲ್ಲಿ ಭಿತ್ತಿಯ ರಚನೆಗೆ ಬೇಕಾಗುವ ಸಾಮಗ್ರಿಗಳ ವಿವರ, ತಯಾರಿಕೆಯ ಪದ್ಧತಿ ಪಟ, ಬಣ್ಣ, ಕುಂಚ ಇತ್ಯಾದಿಗಳ ತಯಾರಿಕೆ ಬಳಕೆ, ಇತ್ಯಾದಿ ತಾಂತ್ರಿಕ ಅಂಶಗಳೂ ಚಿತ್ರಿಸಬೇಕಾದ ವಿಷಯ, ಆಕಾರ-ರೂಪಗಳು ದೇವಾದಿದೇವತೆಗಳು ಋಷಿಗಳು ರಾಜರು ಇತ್ಯಾದಿ ಆಕಾರಗಳ ರಚನೆ, ಪ್ರಮಾಣ, ಬಣ್ಣ ವಸ್ತ್ರಾಭರಣ ಇತ್ಯಾದಿಗಳ ವಿವರಗಳಿರುತ್ತವೆ. ಇಲ್ಲಿಯ ನಿಮಯಗಳನ್ನು ಅನುಸರಿಸಿ ಕೃತಿಕಾರ ರಚಿಸಿದನೋ ಅಥವ ಕೃತಿಗಳನ್ನು ನೋಡಿ ಶಾಸ್ತ್ರಗ್ರಂಥಗಳು ರಚಿತವಾಯಿತೋ ಎಂದು ಹೇಳುವುದು ಕಷ್ಟ. ಶಾಸ್ತ್ರಗ್ರಂಥಗಳು ಆಕಾರಗಳ ನಿಲುವು ಆಯುಧ, ಸಂಕೇತ ಬಣ್ಣ ಇತ್ಯಾದಿಗಳಿಗೆ ನಿಬಂಧನೆಗಳನ್ನು ಹಾಕಿದ್ದು ಉಳಿದಂತೆ ಅವುಗಳ ಚಲವು-ಸಂಯೋಜನೆ ಇತ್ಯಾದಿಗಳ ಬಗ್ಗೆ ಕಲಾವಿದನಿಗೆ ಸ್ವಾತಂತ್ರ್ಯವನ್ನು ನೀಡುತ್ತದೆ. ಅದರಿಂದಾಗಿಯೇ ನಾವು ಸಾಂಪ್ರದಾಯಕ ಕೃತಿಗಳಲ್ಲಿ ವೈವಿಧ್ಯತೆಯನ್ನು ಕಾಣಲು ಸಾಧ್ಯವಾಗಿದೆ.

ಅಲಶ

## ಚಿತ್ರಕಲೆಯಾಗಿ ಪ್ರದರ್ಶನ ಮತ್ತು ಘಟನೆಗಳು (Preformance as art and happenings)

ಅಮೆರಿಕಾ ಹಾಗೂ ಬ್ರಿಟನ್ ನಡುವೆ ಸಂಪರ್ಕ ಹೆಚ್ಚಾದಂತೆ, ಬೀಟಲ್ಸ್ ಯುರೋಪ್‌ನಲ್ಲಿ ಹಾಗೂ ಬಿಬಿಸಿ ಯ ಡಾಡಾ ಪ್ರಸಂಗಗಳು ಅಮೆರಿಕಾದಲ್ಲಿ ಪ್ರಭಾವ ಬೀರಿದಂತೆ, ಇತರ ವಿಷಯಗಳಲ್ಲೂ ಖಂಡಾಂತರದ ವ್ಯತ್ಯಾಸ ಕಾಣದೇ ಹೋಯ್ತು. ಇಂತಹ ಸಂದರ್ಭದಲ್ಲಿ ಜನಿಸಿದ ಈ ಕಲೆ ಒಂದು ಬಗೆಯ ರಾಷ್ಟ್ರಾತೀತ ಕಲೆ. ಅಮೂರ್ತ ಚಿತ್ರಕಲೆಯನ್ನು ಆರಂಭದಿಂದಲೂ ನಾಟಕೀಯ ಚಿತ್ರಕಲೆ ಎಂದೇ ಕರೆಯುತ್ತಿದ್ದರು. ಅದರ ರಚನೆಯೂ ನಾಟಕೀಯವಾಗಿರುತ್ತಿದ್ದುದೇ ಇದಕ್ಕೆ ಕಾರಣ. ಮ್ಯಾಥ್ಯೂ, ಕ್ಲೈನ್ ಮುಂತಾದವರು ಚಿತ್ರದಂತೆಯೇ ಚಿತ್ರ ರಚನೆಯೂ ಸಹ ವೀಕ್ಷಣಾರ್ಹ ಎಂಬ ವಾದ ನಡೆಸಿ ಪ್ರೇಕ್ಷಕರೆದುರು ಚಿತ್ರ ರಚಿಸುವ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. (ನಮ್ಮಲ್ಲಿ ಹುಸೇನ್‌ರವರು ಮಾಡಿದಂತೆ)

ಜೋಸೆಫ್ ಜಾಯ್ಸ್ ಈ ಪಂಥದ ಹರಿಕಾರ. ಆತನ ಚಿತ್ರಕ್ಕೂ ನಿಜ ಜೀವನದ ಘಟನೆಗೂ ವ್ಯತ್ಯಾಸ ಕಾಣುವುದೇ ದುಸ್ತರ ಎಂದು ವಿಮರ್ಶಕ ಆಂಡ್ರಿಯನ್ ಹೆನ್ರಿ ಹೇಳುತ್ತಾನೆ. ಈತನ ವಿಲಕ್ಷಣ ಚಿತ್ರಗಳ ಪೈಕಿ ೧೯೬೫ರಲ್ಲಿ ಪ್ರದರ್ಶಿಸಿದ 'ಸತ್ತ ಮೊಲಕ್ಕೆ ಚಿತ್ರಗಳನ್ನು ವಿವರಿಸುವುದು ಹೇಗೆ?' ಪ್ರಮುಖವಾದುದು. ಈತ ಫ್ಲಕ್ಸಸ್ ಸಂಘದ ಜೀವಾಳವಾಗಿದ್ದ. ಫ್ಲಕ್ಸಸ್ ಜರ್ಮನ್ ಹಾಗೂ ಅಮೆರಿಕನ್ ಕಲಾವಿದರ-ಅದರಲ್ಲೂ ಸಂಗೀತಗಾರ ಜಾನ್ ಕೇಜ್‌ನ ಅನುಯಾಯಿಗಳ-ಒಂದು ಅನಧಿಕೃತ ಸಂಘವಾಗಿತ್ತು.

ಇದರ ಇನ್ನೊಂದು ಶಾಖೆಯಾಗಿ ಬೆಳೆದುದು ಶರೀರಕಲೆ (Body Art), ತನ್ನ ಶರೀರವನ್ನೇ ಕಲೆ ಎಂದು ಪ್ರದರ್ಶಿಸುವುದು. ರಾಬರ್ಟ್ ಮೋರೀಸ್ ತಾನೆ ಸ್ವತಃ ನಗ್ನನಾಗಿ ಪೆಟ್ಟಿಗೆಯೊಂದರಲ್ಲಿ ನಿಂತಿದ್ದ! ಕ್ರಿಸ್ ಬರ್ಡನ್ ಗೋಂದಿನ ಪಟ್ಟಿಗಳ ನಡುವೆ ತನ್ನನ್ನು ತಾನೇ ಹುದುಗಿಸಿಕೊಂಡು ಮ್ಯೂಸಿಯಂನ ಕಾಲಾವಧಿ ಪೂರ್ಣ ನಿಂತಿದ್ದ. ಇನ್ನೊಮ್ಮೆ ಗುಂಡೇಟು ತಿನ್ನುವ ಕ್ರಿಯೆಯನ್ನು ಛಾಯಾಗ್ರಹಿಸಿ ತೋರಿಸಿದ್ದ. ಲೂಕಾಸ್ ಸಮಾರಾಸ್ ಪೋಲಾರಾಯ್ಡ್ ಚಿತ್ರಗಳ ಮೂಲಕ ವಿಕೃತಗೊಳಿಸಿದ ದೇಹ ಪ್ರದರ್ಶನ ಮಾಡಿದ್ದ. ಹುಸೇನ್ ಅವರು ನಗ್ನ ರೂಪದರ್ಶಿಯ ಮೇಲೆ ಬಣ್ಣ ಎರಚಿ ಚಿತ್ರ ರಚಿಸಿದುದನ್ನು ಇಲ್ಲಿ ನೆನೆಯಬಹುದು. ಗಿಲ್ಬರ್ಟ್ ಮತ್ತು ಜಾರ್ಜ್ ತಮ್ಮ ಎಲ್ಲಾ ಕಾರ್ಯಗಳಲ್ಲೂ ಶಿಲ್ಪಗಳನ್ನೇ ಕಾಣುತ್ತಿದ್ದರು.

**ರ. ಕಾಶಿ**

## ಚಿತ್ರಕಾರ

ಚಿತ್ರಕಲಾವಿದ ತಾನು ಕಂಡದ್ದನ್ನು, ಅನುಭವಿಸಿದ್ದನ್ನು ತನ್ನ ಭಾವನೆಗಳನ್ನು ಚಿತ್ರಗಳ ಮೂಲಕ ತಿಳಿಸುವವನು. ಚಿತ್ರಕಲಾವಿದ ಸೃಜನಶೀಲನಾಗಿದ್ದು, ಪ್ರತಿಭೆಯಿದ್ದು ಕಲೆಯ ಅವ್ಯಕ್ತ ಭಾವಗಳಿಗೆ ಅಭಿವ್ಯಕ್ತಿ ಕೊಡುವ ಸಾಮರ್ಥ್ಯ ಇರಬೇಕು. ಇವೆರಡೂ ಒಂದಕ್ಕೊಂದು ಪೂರಕ ಚಿತ್ರ ಕಲಾವಿದನ ಅಭಿವ್ಯಕ್ತಿ ವಿಧಾನ ಕಾಲ ಕಾಲಕ್ಕೆ ಬದಲಾಗುತ್ತ ಬಂದಿದೆ.

ಕಾವ್ಯ ಹಾಗೂ ಶಾಸ್ತ್ರಗ್ರಂಥಗಳಲ್ಲಿ ಚಿತ್ರಕಾರನಿಗೆ ಸಂಬಂಧಿಸಿದಂತೆ ಚಿತ್ರಿಕ, ಚಿತ್ತರಿಗೆ, ಚಿತ್ರಕಾರಕ, ಚಿತ್ರಗಾರ, ಚಿತ್ರಿಕೆ ರಂಗಾಜೀವ ಇತ್ಯಾದಿ ಪ್ರಯೋಗಗಳಿವೆ. ಕಲಾವಿದನಿಗೆ ಉಪನಾಮವಾಗಿ ಅವನ ಪರ್ಯಾಯವಾಗಿ 'ಚಿತ್ರಗಾರ' ಎಂಬ ಪದ ಇಡೀ ಭಾರತದಲ್ಲಿ ಬಳಕೆಯಲ್ಲಿದೆ. ಕಾವ್ಯ ನಾಟಕಗಳಲ್ಲಿ ಸಂದರ್ಭಾನುಸಾರವಾಗಿ ಚಿತ್ರಕಾರ ಅಥವಾ ಚಿತ್ರಗಾರ ಎಂಬಲ್ಲಿ Painter ಎಂದೂ ಕಲಾವಿದ ಎಂಬಲ್ಲಿ artist ಎಂದೂ ಬಳಸಿದೆ. ಇಂಗ್ಲಿಷ್‌ನಲ್ಲಿ artist ಎಂದರೆ ಚಿತ್ರಗಾರ ಎಂದೂ artiste ಎಂದರೆ ಉಳಿದಂತೆ ಎಲ್ಲ ಲಲಿತಕಲೆಗಳನ್ನು ಬಲ್ಲವ ಎಂಬ ಅರ್ಥವಿದೆ. ಮಹಾವಜ್ರ ಭೈರವ ತಂತ್ರದಲ್ಲಿ 'ಚಿತ್ರಕಲಾವಿದ ಒಳ್ಳೆಯ ಮನುಷ್ಯನಾಗಿರಬೇಕು. ಸೋಮಾರಿಯಾಗಬಾರದು. ಕೋಪಗೊಳ್ಳಬಾರದು, ಶುದ್ಧ ಜೀವನ ನಡೆಸುವ ಅಧ್ಯಯನ ಶೀಲನಾದ, ಆತ್ಮ ಸಂಯಮದ, ಭಕ್ತಿ ಮನೋಭಾವದ, ಉದಾರ ಹೃದಯದ, ದ್ವೇಶಾಸೂಯ ರಹಿತನಾದ ವ್ಯಕ್ತಿಯಾಗಿರಬೇಕು' ಎಂದು ಹೇಳುತ್ತದೆ. ಕಾವ್ಯಮೀಮಾಂಸೆಯಲ್ಲಿ 'ಕಲಾವಿದನ ಆಕಾರ ಹೇಗೋ ಹಾಗೆ ಆತನ ಕಲೆಯೂ ಇರುತ್ತದೆ' ಎಂಬ ಮಾತಿದೆ.

**ಮರಿ**

## ಚಿತ್ರಲಕ್ಷಣ (ನಗ್ನಜಿತ್‌ನ)

ಆರನೆಯ ಶತಮಾನದ ಗುಪ್ತರ ಕಾಲದಲ್ಲಿ ಸಂಸ್ಕೃತದಲ್ಲಿ ರಚಿತವಾದ 'ಚಿತ್ರಲಕ್ಷಣ'ವು ಕೆಲಕಾಲದಲ್ಲೇ ಟಿಬೆಟ್ ಭಾಷೆಗೆ ಅನುವಾದಗೊಂಡಿತು. ಮೂಲದ ಸಂಸ್ಕೃತ ಗ್ರಂಥ ಕಾಣೆಯಾಗಿದ್ದು ಟಿಬೆಟ್ ಭಾಷೆಯ ಗ್ರಂಥ ದೊರೆಯುತ್ತದೆ. ಇತ್ತೀಚೆಗೆ ಇದರ ಇಂಗ್ಲಿಷ್ ಅನುವಾದ ವ್ಯಾಖ್ಯಾನ ಸಹಿತ ಆಗಿದೆ. ಭಯಾಜಿತ್ ಎಂಬ ಧರ್ಮಪಾಲಕ ರಾಜನೊಬ್ಬನ

ರಾಜ್ಯದಲ್ಲಿ ಬ್ರಹ್ಮಣ ಬಾಲಕನೊಬ್ಬ ನಿಧನ ಹೊಂದಲು ಬ್ರಾಹ್ಮಣನ ಅಳಲಿನಂತೆ, ರಾಜ ಯಮನೊಂದಿಗೇ ಯುದ್ಧಕ್ಕೆ ನಿಲ್ಲುತ್ತಾನೆ. ಮೂರು ಲೋಕವೂ ತಲ್ಲಣಗೊಳ್ಳುತ್ತದೆ. ಆಗ ಬ್ರಹ್ಮನು ಬಂದು ರಾಜನಿಗೆ ಬಾಲಕನನ್ನು ಹೋಲುವಂತೆ ಚಿತ್ರವೊಂದನ್ನು ರಚಿಸಬೇಕೆಂದೂ ಆದಕ್ಕೆ ತಾನು ಜೀವಕೊಡುವುದಕಾಗಿಯೂ ತಿಳಿಸುತ್ತಾನೆ. ನಂತರ ಬ್ರಹ್ಮನ ಸಲಹೆಯಂತೆ ವಿಶ್ವಕರ್ಮನಿಂದ ಚಿತ್ರಕಲೆಯು ಎಲ್ಲ ಲಕ್ಷಣಗಳನ್ನು ತಿಳಿದುಕೊಂಡು ಪ್ರಚುರ ಪಡಿಸುತ್ತಾನೆ. ಅಂದಿನಿಂದ ರಾಜನಿಗೆ (ನಗ್ನ ಪ್ರೇತವನ್ನು ಗೆದ್ದಿದ್ದಕ್ಕೆ) ನಗ್ನಜಿತ್ ಎಂಬ ಹೆಸರಾಗುತ್ತದೆ. ಎಂದು ಆರಂಭವಾಗುವ ಚಿತ್ರಲಕ್ಷಣದಲ್ಲಿ; ಪರ್ವತಗಳಲ್ಲಿ ಸುಮೇರುವಿನಂತೆ, ನದಿಗಳಲ್ಲಿ ಗಂಗೆಯಂತೆ ಆಕಾಶಕಾಯಗಳಲ್ಲಿ ಸೂರ್ಯನಂತೆ, ಪಕ್ಷಿಗಳಲ್ಲಿ ಗರುಡನಂತೆ, ದೇವತೆಗಳಲ್ಲಿ ಇಂದ್ರನಂತೆ, ಹೇಗೆ ಅತ್ಯುನ್ನತವಾದುದೆಂದು ತಿಳಿಯುತ್ತೇವೆಯೋ ಹಾಗೆ ಕುಶಲವಿದ್ಯೆಗಳಲ್ಲಿ(Skills) ಚಿತ್ರಕಲೆ ಅತ್ಯುತ್ತಮವಾದುದು ಎಂದು ಚಿತ್ರಕಲೆಯ ಹಿರಿಮೆಯನ್ನು ಸಾರುತ್ತದೆ. ಮುಂದೆ ತಾಳಮಾನಗಳು ಅಂಗಾಂಗಳ ರಚನೆ, ಬಣ್ಣಗಾರಿಕೆ ಬಗ್ಗೆ ತಿಳಿಸುತ್ತದೆ. ತಾಳಮಾನದ ಅಳತೆಗಳನ್ನು ಕಡ್ಡಾಯವಾಗಿ ಪಾಲಿಸಬೇಕಿಲ್ಲವೆಂದೂ ಕಲಾವಿದನ ಸ್ವಂತಿಕೆಯಂತೆ ಚಿತ್ರರಚನೆ ಮಾಡಬಹುದೆಂದೂ ಕಲಾವಿದನಿಗೆ ಸ್ವಾತಂತ್ರ್ಯವನ್ನು ನೀಡುತ್ತದೆ.

ಅಂನ

## ಚಾಮರಾಜನಗರ

ಮೈಸೂರು ಜಿಲ್ಲೆಯ ಚಾಮರಾಜನಗರವನ್ನು ೧೮೨೬ರಲ್ಲಿ ಮುಮ್ಮಡಿಯವರು ವಿಸ್ತರಿಸಿ ಚಾಮರಾಜೇಶ್ವರ ದೇವಾಲಯವನ್ನು ಕಟ್ಟಿಸಿದರು. ಅದೇ ವೇಳೆಯಲ್ಲಿ ರಾಜರಾಜೇಶ್ವರಿ, ಚಾಮುಂಡೇಶ್ವರಿಯ ಭಿತ್ತಿ ಚಿತ್ರಗಳನ್ನು ವಿಸ್ತಾರವಾದ ಅಂಕಣದಲ್ಲಿ ಬರೆಯಿಸಿದರು. ಈ ದೇವಾಲಯದ ಬಳಿಯಲ್ಲಿಯೇ ಮುಮ್ಮಡಿಯವರ ತಂದೆ ಚಾಮರಾಜರು ೧೭೭೪ರಲ್ಲಿ ಜನಿಸಿದ ಸ್ಥಳದಲ್ಲಿ ಮಂಟಪವೊಂದನ್ನು ನಿರ್ಮಿಸಿ ಅದರಲ್ಲೂ ಇದೇ ದೇವಿಯರ ಚಿತ್ರಗಳನ್ನು ಬರೆಯಿಸಿದರು. ಈ ಚಿತ್ರಗಳು ಪರಿವಾರ ದೇವತೆಗಳೊಂದಿಗೆ, ಸಕಲ ವಸ್ತ್ರಾಭರಣ, ಆಯುಧಗಳ ಸಮೇತ ರಚಿತವಾಗಿದ್ದು ಮೈಸೂರು ಶೈಲಿಯ ಚಿತ್ರಗಳಿಗೆ ಉದಾಹರಣೆಯಾಗಿದೆ.

ವಿಷ್ಣುವರ್ಧನನ ದಂಡಾದೀಶ ಪುನೀಸ ಎಂಬಾತ ಚಾಮರಾಜನಗರದಲ್ಲಿ (ಹಿಂದೆ ಈ ಊರಿಗೆ ಇದ್ದ ಹೆಸರು 'ಅರಿಕುಠಾರ' ಎಂದು) ೧೧೧೭ರಲ್ಲಿ ಪುನೀಸ ಜಿನಾಲಯವನ್ನು ಪಾರ್ಶ್ವನಾಥನಿಗೆ ಕಟ್ಟಿಸಿದ್ದು ಅದರ ಮುಖ ಮಂಟಪದ ಒಳಛಾವಣಿಯಲ್ಲಿಇರುವ ಚಿತ್ರಗಳು ಸುಣ್ಣದಿಂದ ಮುಚ್ಚಿಹೋಗಿದೆ. ಇವು ೧೮ನೇ ಶತಮಾನದ ಅಂತ್ಯದಲ್ಲಿ ರಚಿಸಿದಂತಿದೆ.

ಅಂನ

## ಚಾರಿತ್ರಿಕ ಚಿತ್ರಗಳು

ಬರಹದ ದಾಖಲೆಗಳಾದ ಹಸ್ತಪ್ರತಿಗಳ ಸೌಂದರ್ಯನ್ನು ಹೆಚ್ಚಿಸಲು ಅಲಂಕಾರದ ಚಿತ್ರರಚನೆಗಳನ್ನು ಮಾಡಿರುವುದು ಸಾಮಾನ್ಯ. ಆದರಂತೆ ಜನತೆಯ ಭಕ್ತಿ ಶ್ರದ್ಧೆಯ ಪ್ರತೀಕವಾಗಿ ದೇವಾನುದೇವತೆಗಳು, ಅವರ ಲೀಲೆ-ಓಲಗಗಳ ಚಿತ್ರಣವನ್ನು ಮಾಡಿರುತ್ತಾರೆ.

ಇಂಥ ಸೌಂದರ್ಯವರ್ಧಕ ಹಸ್ತಪ್ರತಿ ಚಿತ್ರಗಳು ಅವು ಒಳಗೊಂಡ ಚಾರಿತ್ರಿಕ ಚಿತ್ರರಚನೆಗಳಿಂದ ಚಾರಿತ್ರಿಕ ಮಹತ್ವವನ್ನು ಪಡೆಯುತ್ತವೆ.

ವೀರಶೈವ ಹಸ್ತಪ್ರತಿಗಳ ಗರಿ ಹಾಗೂ ಫಲಕಗಳಲ್ಲಿ ಇಂತಹ ಹಲವಾರು ಮಹತ್ವದ ಚಿತ್ರರಚನೆಗಳಿದ್ದು ಅವುಗಳಲ್ಲಿ ಶಿವಶರಣರ, ಶಿವಕವಿಗಳ ಹಾಗೂ ಅವರ ಜೀವನದ ಘಟನೆಗಳ ಚಿತ್ರಗಳನ್ನು ಬಿಡಿಸಲಾಗಿದೆ. ಬಸವಣ್ಣ, ಪ್ರಭುದೇವ, ಮಡಿವಾಳ, ಮಾಚಿದೇವ, ತೋಂಟದಸಿದ್ಧಲಿಂಗ ಯತಿ,-ಮುಂತಾದ ಶಿವಶರಣರ ಮಹಾಕವಿ ರಾಘವಾಂಕ, ಮಾಯಿದೇವ ಮುಂತಾದ ಚಾರಿತ್ರಿಕ ವ್ಯಕ್ತಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ಹಾಗೆಯೇ ಆಯಾ ಮಠದ ಪರಂಪರೆಗೆ ಸೇರಿದ ಪ್ರಖ್ಯಾತರಾಗಿ ಪ್ರಭಾವ ಬೀರಿದ ಸ್ವಾಮಿಗಳ ಹಾಗೂ ಮಠಗಳ ವೈಭವದ ಚಿತ್ರಗಳನ್ನು ಅದರಂತೆ ಆಯಾ ಸ್ವಾಮಿಗಳಲ್ಲಿ ಭಕ್ತಿ-ಶ್ರದ್ಧೆ ಹೊಂದಿದ ಅರಸರು ಮಾಂಡಲಿಕರು ಅಲ್ಲದೆ ಶಿಷ್ಯರ-ಭಕ್ತರ ಚಿತ್ರಗಳನ್ನೂ ರಚಿಸಲಾಗಿದೆ. ಇಂಥ ರಚನೆಗಳು ಚರಿತ್ರೆ ಮತ್ತು ಇತಿಹಾಸದ ಅಮೂಲ್ಯವಾದ ಸಾಮಗ್ರಿಗಳೆನಿಸುತ್ತವೆ. ನಾಡಿನ ವಿಶ್ವವಿದ್ಯಾಲಯಗಳು, ಮಠಮಾನ್ಯಗಳು ಹಾಗೂ ವ್ಯಕ್ತಿಸಂಗ್ರಹಗಳಲ್ಲಿನ ಹಸ್ತಪ್ರತಿಗಳಲ್ಲಿ ಇಂತಹ ಹಲವಾರು ಚಾರಿತ್ರಿಕ ಚಿತ್ರಗಳನ್ನು ಕಾಣಬಹುದಾಗಿದೆ. ಮೂಡಬಿದರೆಯ ಓಲೆ ಹಸ್ತಪ್ರತಿಯ ಚಿತ್ರವೊಂದನ್ನು ವಿಷ್ಣುವರ್ಧನ-ಶಾಂತಲೆಯರದಿರಬಹುದೆಂದು ಗುರುತಿಸಲಾಗಿದೆ. ದಖ್ಖನಿ ಹಾಗೂ ಮುಘಲ್ ಅರಸರು ತಮ್ಮ ಸಮಕಾಲೀನ ವ್ಯಕ್ತಿಗಳು, ಯುದ್ಧ ಪ್ರವಾಸ ಇತ್ಯಾದಿ ಘಟನೆಗಳನ್ನು ಚಿತ್ರರೂಪದಲ್ಲಿ ದಾಖಲಿಸಿದ್ದಾರೆ. ಮುಂದಿನ ಐರೋಪ್ಯ ಕಲಾವಿದರು ಇನ್ನಷ್ಟು ಅಧಿಕೃತವಾಗಿ ರಚಿಸಿದರು.

ಬಿ. ಕೆ. ಹಿ.

## ಚಿತ್ರಾಲಂಕೃತ ಗ್ರೀಕ್ ಕುಂಭಗಳು(Greek vase Painting)

ನೈಜತೆಯನ್ನು(Realism/Naturalism) ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ನೆಲೆಗೊಳ್ಳಲು ಮೊದಲ ಹೆಜ್ಜೆ ಗ್ರೀಕರ ಕಲೆಯಲ್ಲಿದೆ. ಗ್ರೀಕರ ಪ್ರಸಿದ್ಧ ಶಿಲ್ಪಗಳು ಒಡಮೂಡುವ ಮೊದಲು ಅವರ ಹೂಜಿ ಚಿತ್ರಗಳು(Vase Painting) ಮೂಡಿಬಂದವು (ಕ್ರಿ.ಪೂ. ೧೦೦೦- ೬೦೦) ಗ್ರೀಕರ ಚಿತ್ರಕಲೆ ಪ್ರಮುಖವಾಗಿ ಕಂಡುಬರುವುದೇ ಹೂಜಿ ಚಿತ್ರಗಳಲ್ಲಿ. ಇವುಗಳಲ್ಲಿ ಎರಡು ವಿಧ:

(೧) ಕಪ್ಪುಚಿತ್ರಶೈಲಿ ಮತ್ತು (೨) ಕೆಂಪು ಚಿತ್ರಶೈಲಿ

ಕಪ್ಪು ಚಿತ್ರಶೈಲಿಯಲ್ಲಿ ಹೂಜಿಯ ಮೇಲಿನ ಕಪ್ಪು ಮನುಷ್ಯಾಕಾರಗಳಿದ್ದು ಹಿನ್ನೆಲೆಯಲ್ಲಿ ಕೆಂಪು ಬಣ್ಣವಿರುತ್ತದೆ. ಕೆಂಪು ಚಿತ್ರಶೈಲಿಯಲ್ಲಿ ಮಾನವಾಕಾರಗಳು ಕೆಂಪಗಿದ್ದು ಹಿನ್ನೆಲೆ ಕಪ್ಪಾಗಿರುತ್ತದೆ.

ಹೂಜಿಚಿತ್ರಗಳಲ್ಲಿ ಗ್ರೀಕರ ಪೌರಾಣಿಕ ವಿಷಯಗಳು ಪ್ರಮುಖವಾಗಿದ್ದು ಆದರ್ಶೀಕೃತ ದೇಹದಾರ್ಢ್ಯ ಹೊಂದಿದ ನಾಯಕರು, ದೇವದೇವತೆಗಳು (ಪ್ರಾಣಿ ಹಾಗೂ ಮನುಷ್ಯರ ದೇಹಭಾಗಗಳನ್ನು ಒಟ್ಟಾಗಿ ಹೊಂದಿರುವಂತಹವು. ಉದಾಹರಣೆಗೆ: ಸೆಂಟಾರ್: ಮನುಷ್ಯ ದೇಹ ಕುದುರೆ ಮೈ) ಸಾಹಸಗಾಥೆಗಳನ್ನು ಚಿತ್ರಿಸಲಾಗಿದೆ.

ಇಂದಿನ ಈಸಲ್(Easel) ಚಿತ್ರಗಳಂತಲ್ಲದೆ ಸಮತಟ್ಟಲ್ಲದ, ದುಂಡಾಕಾರದ ಮೇಲ್ಮೈ

ಮೇಲೆ ಆಕಾರಗಳು ಮೂಡಿಬರುತ್ತಿದ್ದುದರಿಂದ ನಾಲ್ಕಾರು ದಿಕ್ಕುಗಳಿಂದ ನೋಡಿದಾಗ ಒಂದೊಂದು ಮಾನವಾಕಾರ/ಪ್ರಾಣಿಯಾಕಾರಗಳನ್ನು ವಿಭಿನ್ನ ಕೋನಗಳಿಂದ ನೋಡಿದಂತಹ ಅನುಭವ ಮೂಡಿಸುತ್ತವೆ. ಸಾಮಾನ್ಯವಾಗಿ ೬ ಅಂಗುಲದಿಂದ ೨-೩ ಅಡಿಯವರೆಗೂ ಹೂಜಿ ಚಿತ್ರಗಳಿರುತ್ತವೆ. ಹೂಜಿಯ ಮೈಭಾಗದಲ್ಲಿ ಚಿತ್ರಗಳು ಹೆಚ್ಚಾಗಿದ್ದರೂ ಮುಚ್ಚಳದ ಮೇಲೆಯೂ ಕಂಡುಬರುವುದುಂಟು. ಇಂತಹ ಹೂಜಿಗಳನ್ನು ಕಲಾತ್ಮಕತೆ ಹಾಗೂ ಕೆಲಸ ಕಾರ್ಯಗಳಿಗೂ ಬಳಸುತ್ತಿದ್ದು, ದ್ವಿಕಾರ್ಯ(Bi-Functional) ನಿರ್ವಹಿಸುವ ಗುಣ ಇವುಗಳಲ್ಲಿದೆ.

ಎಚ್. ಎ. ಅ.

## ಚಿದಂಬರಂ

ದಕ್ಷಿಣ ಆರ್ಕಾಟ್ ಜಿಲ್ಲೆಯ ಸುಪ್ರಸಿದ್ಧ ಯಾತ್ರಾಸ್ಥಳ. ಈಶ್ವರನು ನಟರಾಜನಾಗಿ ಇಲ್ಲಿ ವಿರಾಜಿಸುತ್ತಿದ್ದಾನೆ. ಸಂಪ್ರದಾಯದ ಕತೆಯಂತೆ, ಪ್ರಾಯಶಃ ಪಲ್ಲವ ಕುಟುಂಬದ ಮೈತ್ರಿ ಇರಿಸಿಕೊಂಡಿದ್ದ ಹಿರಣ್ಯವರ್ಮನ್ ಎಂಬಾತ, ಮೂಲ ಶಿವಾಲಯವನ್ನು ಚಿದಂಬರದಲ್ಲಿ ನಿರ್ಮಿಸಿದ. ಒಂದು ಕಿರು ದೇವಾಲಯವಾಗಿ ಆರಂಭವಾದದ್ದು ಅನಂತರ (ಕನಕಸಭಾ) ಸುವರ್ಣ ನಾಟ್ಯಮಂದಿರ-ಬೃಹತ್ ದೇವಾಲಯಕ್ಕೆ ಸೇರಿದ ಅಂಗಳ ಎಲ್ಲವೂ ಸೇರ್ಪಡೆಯಾದವು. ಪಲ್ಲವರ ಕಾಲದ ಶಿವಭಕ್ತರನೇಕರು ನಟರಾಜನನ್ನು ವೈಭವೀಕರಿಸಿದರು.

ಚಿದಂಬರಂ ದೇವಾಲಯದ ನಾಟ್ಯಮಂದಿರವನ್ನು ೧೦ನೆಯ ಶತಮಾನದ ಮೊದಲಲ್ಲಿ ಆಳಿದ ಚೋಳರಾಜ ಒಂದನೆಯ ಪರಾಂತಕನೆಂಬುವವನು, ಚಿನ್ನದ ತಗಡಿನಿಂದ ಅಲಂಕರಿಸಿದ ಕಾಲ ಕಾಲಕ್ಕೆ ಚಿದಂಬರದ ದೇವಾಲಯವು ವಿಸ್ತರಿಸಲ್ಪಟ್ಟು ಇಂದಿನ ಭವ್ಯ ವಾಸ್ತುವಿಗೆ ಕಾರಣವಾಗಿದೆ. ಬೃಹತ್ತಾದ ಕಂಬಗಳು ವಿಶಾಲವಾದ ಮಂಟಪಗಳು ಹಲವಾರು ಕೆತ್ತನೆಗಳಿಂದ ಕೂಡಿ ಸುಂದರವಾಗಿ ಕಂಗೊಳಿಸುತ್ತದೆ.

ಪಾರ್ವತಿ ಸನ್ನಿಧಿಯ ಹಜಾರದ ಒಳ ಮಾಳಿಗೆಯಲ್ಲಿ ಭಿತ್ತಿ ಚಿತ್ರಗಳು ವಿಪುಲವಾಗಿದ್ದು ವಿಜಯನಗರ ಕಾಲದ ರಚನೆಯಾಗಿದೆ. ಹಲವಾರು ಅಂಕಣಗಳಲ್ಲಿ ಚಿತ್ರಗಳಿದ್ದು ಅವೆಲ್ಲಾ ಶಿವನ ಲೀಲೆಗೆ ಸಂಬಂಧಿಸಿವೆ. ಅದರಲ್ಲೂ ಭಿಕ್ಷಾಟನಾ ಶಿವ ಮತ್ತು ಮೋಹಿನಿಯರ ಚಿತ್ರಣ ಪ್ರಸಿದ್ಧವಾಗಿದೆ.

ನಿಕ್ಸ್‌ನಾ

## ಚೀನಾ ಕಲೆ, ಪ್ರಾಚೀನ

ಚೀನಾದ ಕಲೆಗೆ ೨೫ ಶತಮಾನಗಳಿಗಿಂತಲೂ ಹೆಚ್ಚಿನ ಪ್ರಾಚೀನತೆ ಇದೆ. ಆದರೆ ಇಂದಿಗೂ ಪ್ರಪಂಚಕ್ಕೆ ಬಹುಮಟ್ಟಿಗೆ ಅಪರಿಚಿತವಾಗಿಯೇ ಇವು ಉಳಿದಿವೆ.

ದೇವಾಲಯಗಳ ರಚನೆ, ಅರಮನೆಗಳ ನಿರ್ಮಾಣ, ಚಿತ್ರ, ಶಿಲ್ಪಕಲೆಗಳು, ಬಳಕೆ ವಸ್ತುಗಳ ರಚನೆ ಇವುಗಳಲೆಲ್ಲ ಚೀನಿಯರ ಕಲಾಭಿರುಚಿಯನ್ನೂ ಕಾಣಬಹುದು. ಚಿತ್ರಕಲೆ



ಮತ್ತು ಬರವಣಿಗೆ ಇವೆರಡನ್ನೇ ಚೀನಿಯರು ಲಲಿತಕಲೆಗಳೆಂದು ತಿಳಿದಿದ್ದರು. ಇವರು ಪ್ರಕೃತಿಯನ್ನು ಚಿತ್ರಿಸುವಾಗ ಅದರ ವಾಸ್ತವಿಕತೆಗಿಂತ ನಿಗೂಢತೆಯ ಕಡೆಗೆ ಹೆಚ್ಚು ಲಕ್ಷ್ಯಕೊಟ್ಟು ಅದನ್ನು ಚಿತ್ರಗಳಲ್ಲಿ ಮೂಡಿಸಲು ಪ್ರಯತ್ನಿಸಿದರು.

ಹ್ಯಾನ್ ರಾಜಸಂತತಿಯ ಕಾಲದಲ್ಲಿ (ಕ್ರಿ. ಪೂ. ೨೦೨ರಿಂದ ಕ್ರಿ.ಶ. ೨೨೦ರ ವರೆಗೆ) ಚಿತ್ರಗಳಲ್ಲಿ ಆಕೃತಿಗಳು ಎದ್ದು ಕಾಣುತ್ತವೆ. ಈ ಚಿತ್ರಗಳ ರೇಖಾರಚನೆಯಲ್ಲಿ ಅಪಾರ ನೈಪುಣ್ಯವಿದೆ. ಅಲ್ಲಿಂದೀಚಿನ ಚಿತ್ರಗಳಲ್ಲಿ ಈ ವಿಧಾನ ಒಂದು ಸಂಪ್ರದಾಯವಾಯಿತು.

ಪ್ರಾಚೀನ ಚೀನಿ ಕಲೆಯಲ್ಲಿ ನಾವು ನಿಸರ್ಗ ಚಿತ್ರಗಳನ್ನು ಕಾಣುತ್ತೇವೆ. ಇಂತಹ ಆಕರ್ಷಕ ದೃಶ್ಯಗಳನ್ನು ಕಾಗದದ ಮೇಲೋ ಅಥವಾ ರೇಶ್ಮೆ ಬಟ್ಟೆಯ ಮೇಲೋ ಕುಂಚ ಬಣ್ಣಗಳಿಂದ ಬರೆಯತೊಡಗಿದರು. ಬೇಕಾದಷ್ಟು ಉದ್ದನೆಯ ಚಿತ್ರವನ್ನು ಬರೆದು ಸುರಳಿಗಳಾಗಿ ಇರಿಸುವದಕ್ಕೂ ಬರುತ್ತಿತ್ತು. ಎಲೆ, ಮರ, ಪಶು, ಪಕ್ಷಿ ಮತ್ತು ಪ್ರಾಣಿ ಮುಂತಾದ ಚಿತ್ರಗಳಲ್ಲಿ ಅಷ್ಟೇ ಸೂಕ್ಷ್ಮವಾದ ಮತ್ತು ಲಲಿತವಾದ ಬಣ್ಣಗಾರಿಕೆಯನ್ನೂ ರೇಖಾವಿನ್ಯಾಸವನ್ನೂ ನಾವು ಗುರುತಿಸಬಹುದು.

ಇವರ ಕಲೆಯಲ್ಲಿ ಶಿಲ್ಪಕ್ಕೆ ಬಳಸಿದ ಒಂದು ಮಾಧ್ಯಮ ಸುಡಾವೆ ಮಣ್ಣು. ಸ್ವಂತ ಶೈಲಿಯನ್ನು ಹೊಂದಿದ ರೇಖಾಲಾವಣ್ಯ, ಭಾವವನ್ನು ಪ್ರದರ್ಶಿಸುವ ಚಿಕ್ಕ ಆಟಿಕೆಗಳಿಂದ ಅರಸರ ಅಂತಃಪುರಕ್ಕೆ ಸಂಬಂಧಪಟ್ಟ ಮೂರ್ತಿಗಳನ್ನು ನಿರ್ಮಿಸಿ ಬಣ್ಣಗಳನ್ನು ಲೇಪಿಸುತ್ತಿದ್ದರು.

ಕ್ರಿ.ಶ. ಮೊದಲ ಶತಮಾನದ ನಂತರ ಚೀನದಲ್ಲಿ ಹರಡಿದ ಬೌದ್ಧಧರ್ಮ ಅಲ್ಲಿಯ ಕಲೆಯ ಮೇಲೆ ಪ್ರಬಲ ಪ್ರಭಾವ ಬೀರಿತು. ಚೀನಿಯರ ಪ್ರಾಚೀನ ವಾಸ್ತುಶಿಲ್ಪ ಹೇಗಿತ್ತೆಂಬುದಕ್ಕೆ ಸ್ಪಷ್ಟ ಕುರುಹುಗಳಿಲ್ಲ. ಚಿತ್ರಶಿಲ್ಪಗಳಲ್ಲಿ ಕಾಣುವ ಕಟ್ಟಡ, ದೇವಾಲಯಗಳ ಪ್ರತಿರೂಪಗಳ ಆಧಾರದ ಮೇಲೆ ಹಿಂದಿನ ವಾಸ್ತುಶಿಲ್ಪದ ಸ್ವರೂಪವನ್ನು ಊಹಿಸಬಹುದು. ಪಗೋಡಾಗಳು ಇಲ್ಲಿ ಉಳಿದಿರುವ ಪ್ರಾಚೀನ ವಾಸ್ತುಶಿಲ್ಪಗಳು. ಸ್ತೂಪಗಳಂತಿರುವ ಪಗೋಡಾಗಳು ವೃತ್ತ ಅಥವಾ ಚೌಕ ಆಕಾರದಲ್ಲಿವೆ. ವಾಸ್ತುರಚನೆಯ ಓರೆಗೆರೆಗಳ ಮರುಕಳಿಸುವಿಕೆಯಿಂದ ಲಾಲಿತ್ಯವನ್ನು ಒದಗಿಸುತ್ತದೆ. ಚೀನಿಯರು ವಾಸ್ತುಗಳಿಗೆ ಬಣ್ಣದ ಮಿರುಗು ಕೊಡುತ್ತಿದ್ದರು. ಈ ಕಾರಣದಿಂದ ಅವುಗಳ ಚೆಲುವು ಇನ್ನಷ್ಟು ಹೆಚ್ಚುತ್ತಿತ್ತು.

ಒ.ಗ

## ಚೀನಾ ಪಿಂಗಾಣಿ ಚಿತ್ರಕಲೆ

ಚೀನಾದಲ್ಲಿ ತಾಂಗ್ ಆಳ್ವಿಕೆಯ ಪಿಂಗಾಣಿ ಕಲೆಯಲ್ಲಿ ಮುಖ್ಯ ಅಂಶವೆಂದರೆ ಹೊಳಪುಕೊಡುವುದು(glazed). ಕಾಲದಲ್ಲೇ (ಕ್ರಿ.ಶ. ೬೧೮-೯೦೬) ಪಿಂಗಾಣಿ ಕಲೆಯ ಅಸ್ತಿತ್ವವಿದ್ದಿತೆಂಬುದಕ್ಕೆ ಪುರಾವೆಗಳಿವೆ. ಈ ಕಲೆಯಲ್ಲಿ under glazed, over glazed ಮತ್ತು unglazed ಎಂದು ಮೂರು ವಿಭಾಗಗಳನ್ನು ಗುರುತಿಸಬಹುದು. ಮೊದಲ under glazed ತಂತ್ರದಲ್ಲಿ ಶಾಖಕ್ಕೆ ಒಡ್ಡದ ಪಾತ್ರೆಗಳ ಮೇಲೆ ಚಿತ್ರಿಸಿದರೆ, over glazed ಮತ್ತು unglazed ತಂತ್ರಗಳಲ್ಲಿ ಶಾಖಕ್ಕೆ ಒಡ್ಡಿದ ಪಾತ್ರೆಗಳ ಮೇಲೆ ಚಿತ್ರಿಸುತ್ತಾರೆ. ಇವುಗಳ ಜೊತೆಗೆ ಉಬ್ಬು ಅಲಂಕರಣ ಚಿತ್ರಗಳೇ ಅಲ್ಲದೆ ಸಾಲು ರಂಧ್ರಗಳನ್ನೂ(perforation) ದುಡಿಸಿಕೊಂಡಿದ್ದಾರೆ.

ವಿಸು.

## ಚೀನಾಯ್ಸರೀ (Chinoiserie)

ಚೀನಾ ದೇಶದ ವಸ್ತುಗಳು ಅಥವಾ ವಿಶಿಷ್ಟವಾದ ಚೀನೀ- ರೂಪಹೊಂದಿದ ವಸ್ತುಗಳ ಬಗೆಗೆ ಇರುವ ಅಭಿರುಚಿ. ರೋಮನ್ನರ ಸಾಮ್ರಾಜ್ಯದಷ್ಟು ಹಿಂದಿನ ಕಾಲದಲ್ಲೇ ಯುರೋಪಿಯನ್ ಜನರು ಚೀನೀ ಡಿಸೈನ್/ಮೈವಳಿಕೆ/ವಿವರಗಳನ್ನು; ಅದನ್ನೇ ಪ್ರತಿಮಾಡುವ ಅಭ್ಯಾಸ ಬೆಳೆಸಿಕೊಂಡಿದ್ದರು.

ಮತ್ತೊಂದು ಅರ್ಥದಲ್ಲಿ ಚಿನಾಯ್ಸರೀ ಎಂಬುದು ಪಶ್ಚಿಮದ ಕಲೆಯೊಂದರಲ್ಲಿ ಕಂಡುಬರುವ ಒಂದು ರೀತಿಯ ಫ್ಯಾಷನ್ ಸಹ ಆಗಬಹುದು. ಪೌರ್ವಾತ್ಯ ದೇಶಗಳೊಂದಿಗೆ ಯೂರೋಪಿಯನ್ನರ ಸಂಬಂಧ ಬೆಳೆದಂತೆ ಪಶ್ಚಿಮದಲ್ಲಿ ರೂಢಿಗೆ ಬಂದ, ಪೂರ್ವದೇಶಗಳ ಕಲೆಗಳ ಪ್ರಭಾವಿತ ಶೃಂಗಾರಗಳು(Decoration) ಇವು. (೧೭-೧೮ನೇ ಶತಮಾನದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಚೀನದೊಂದಿಗೆ ವ್ಯಾಪಾರ ಸಂಬಂಧ ಪ್ರಾರಂಭಿಸಿದ ನಂತರ) ಈ ಚಿನಾಯ್ಸರೀ ಅಂಶಗಳು ಸಾಮಾನ್ಯವಾಗಿ ಚೀನೀ ವಸ್ತುಗಳ ಗಂಭೀರ ಅಧ್ಯಯನಶೀಲ ಪ್ರತಿಬಿಂಬ/ಕೃತಿಗಳಾಗಿರದೆ ಸಹಜ-ನಕಲು ಆಗುವಂತಾಯಿತು. ೧೮ನೇ ಶತಮಾನದಲ್ಲಿ ಇದು ಪಶ್ಚಿಮದಲ್ಲಿ ಹೆಚ್ಚಿನ ಜನಪ್ರಿಯತೆ ಗಳಿಸಿತ್ತು.

ಭಾರತದಲ್ಲೂ ಈ ಪ್ರಭಾವ ಕಂಡುಬಂದರೂ ಯೂರೋಪಿನಲ್ಲಾದಂತೆ ಇಲ್ಲಿ ಆ

ಚಿನಾಯ್ಸರಿ ಗುಣಗಳು ಬೇರೆಯವು ಎನಿಸುವುದಿಲ್ಲ-ಕಾರಣ ಚೀನದ ಶೃಂಗಾರ ಕಲೆ ಮುಂತಾದವುಗಳಲ್ಲಿ, ಭಾರತದಲ್ಲಿ ಜನಿಸಿ ಅಲ್ಲಿ ಹರಡಿದ ಬೌದ್ಧಧರ್ಮದ ಗಾಢ ಪ್ರಭಾವವಿದೆ. ಇಂದಿಗೂ ಅನೇಕ ಮಡಕೆ, ತೊಗಲುಗೊಂಬೆ, ನಿಸರ್ಗಕೃತಿಗಳು ಇತ್ಯಾದಿಗಳಲ್ಲಿ ಈ ಪ್ರಭಾವವನ್ನು ಕಾಣಬಹುದಾಗಿದೆ.

ಎಚ್. ಎ. ಅ.

## ಚುಕ್ಕೆ ಚಿತ್ರ (Stippling)

ಸೀಸದಕಡ್ಡಿಯಿಂದ ನೂರಾರು ಚಿಕ್ಕಚಿಕ್ಕ ಚುಕ್ಕೆಗಳನ್ನಿಟ್ಟು ನೆಳಲು ಬೆಳಕುಗಳನ್ನು ರೂಪಿಸುವ ರೇಖಾಚಿತ್ರವಿಧಾನವನ್ನು ಚುಕ್ಕೆ ಚಿತ್ರ ಇಲ್ಲವೆ ಸ್ಟಿಪ್ಲಿಂಗ್‌ವರ್ಕ್ ಎಂದು ಕರೆಯಲಾಗುತ್ತದೆ. ಕಾಗದದ ಮೇಲೆ ಗುರುತಿಸಿದ ಚಿಕ್ಕ ಚಿಕ್ಕ ಚುಕ್ಕೆಗಳನ್ನು ಕಾಗದ, ರಬ್ಬರು ಮೊದಲಾದವುಗಳಿಂದ ತಯಾರಿಸಿದ, ಎರಡೂ ಕಡೆಯೂ ಶಂಕುವಿನಾಕಾರದ ಮೊಂಡು ತುದಿಗಳುಳ್ಳ 'ಸ್ಟಂಪ್' ಎಂದು ಕರೆಯುವ ಸುರುಳಿಯುರುಳೆಯಿಂದ ಉಜ್ಜಿ ಒಂದನ್ನೊಂದು ಕೂಡಿಸುವುದರಿಂದ ಛಾಯಾಚಿತ್ರ(Photography)ದಂತೆ ನಯವಾದ ಚಿತ್ರವನ್ನು ರೂಪಿಸಲು ಸಾಧ್ಯವಾಗುತ್ತದೆ. ವರ್ಣಚಿತ್ರಣದಲ್ಲಿ ಈ ವಿಧಾನವನ್ನು ಬಳಸುವಾಗ ಕುಂಚಗಳಿಂದ ಚಿಕ್ಕ ಚಿಕ್ಕ ಬಣ್ಣದ ಚುಕ್ಕೆಗಳನ್ನಿರಿಸಲಾಗುತ್ತದೆ. ಈ ಪದ್ಧತಿ ಇಂಪ್ರೆಷನಿಸಂನ ಅಂತಿಮ ಕಾಲದ ಪಾಯಿಂಟಲಿಸಂ ಶೈಲಿಗೆ ಹತ್ತಿರವಾದುದು.

ಶಾ.ದಿ.

## ಜಂಕ್ ಕಲೆ (Junk Art)

ಈ ಕಲೆಯ ಮೂಲ- 'ಕ್ಯೂಬಿಸ್ಟ್ ಕೊಲಾಜ'ದಿಂದಾಗಿದೆ. ಶ್ವಿಟರ್ಸ ಅವರ 'ದಾದಾಯಿಸಂ' ಮತ್ತು ೧೯೫೦ರ ರಾಬರ್ಟ್ ರೊಸೆನ್‌ಬರ್ಗ ಅವರ ಸಂಯೋಗದಿಂದ ಇದು ಪ್ರಾರಂಭವಾಯಿತು. ಅನಪೇಕ್ಷಿತ ವಸ್ತುಗಳನ್ನು ಉಪಯೋಗಿಸಿಕೊಂಡು ವೈವಿಧ್ಯಮಯ ರೀತಿಯಲ್ಲಿ ಚಿತ್ರಗಳನ್ನು ರಚಿಸಲಾಯಿತು. ಆಧುನಿಕ ತತ್ವಗಳಲ್ಲಿಯ ನಂಬಿಗೆಯನ್ನು ಅಲ್ಲಗಳೆಯುವದರಿಂದ ಹಿಡಿದು ಶೃಂಗಾರದ(ರೊಮ್ಯಾಂಟಿಕ್) ಭಾವನೆಗಳನ್ನು ನೆನಪಿಗೆ ತರುವ ಕೊನೆಯ ಅವಧಿಯವರೆಗೆ ಈ ಕಲೆಯ ಹಾವಭಾವಗಳನ್ನು ಗುರುತಿಸಬಹುದಾಗಿದೆ.

'ಕಸದಿಂದ ರಸ' ಎಂಬ ಅರ್ಥದಲ್ಲಿ ಭಾರತೀಯ ಕಲಾವಿದರೂ ಈ ಬಗೆಯ ಕೆಲವು ಪ್ರಯೋಗಗಳನ್ನು ಮಾಡಿರುವುದುಂಟು.

ಅ.ಹಿ.

## ಜಗನ್ಮೋಹನ ಚಿತ್ರಶಾಲೆ

೧೮೬೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ಜಗನ್ಮೋಹನ ಅರಮನೆಯನ್ನು ಕಟ್ಟಿಸಲು ಮೊದಲು ಮಾಡಿದರು. ೧೮೭೫ರ ವೇಳೆಗೆ ಅದು ಚಿತ್ರಶಾಲೆಯಾಗಿ



ಎಸ್. ಎಲ್. ಹಲ್ದಂಕರ್

ಪರಿವರ್ತನೆಗೊಂಡಿತು. ಈ ಕಲಾಸಂಗ್ರಹದಲ್ಲಿ ಕೆಲವು ಭಿತ್ತಿಚಿತ್ರಗಳಿವೆ. ೧೯ನೇ ಶತಮಾನದ ಕಲಾವಿದರು ಬರೆದ ಭಿತ್ತಿಚಿತ್ರಗಳಲ್ಲಿ ಮುಮ್ಮಡಿಯವರ ವಂಶವೃಕ್ಷ, ಮೈಸೂರು ಅರಸರ ವಂಶಾವಳಿಯನ್ನು ತೋರುವ "ಸಂತಾನಾಂಬುಜ", ಆನೆಗಳನ್ನು ಕಟ್ಟಿರುವ ರಥದಲ್ಲಿ ರಾಜರ ಮೆರವಣಿಗೆ ಹೊರಟಿರುವ ಚಿತ್ರ ಸುಂದರವಾಗಿದೆ. ಅಲ್ಲದೆ ಪ್ರಸನ್ನ ಪಾರ್ವತಿ, ದುರದುಂಡಿ, ಸರ್ವಮಂಗಲ, ಜಗದಂಬ, ಪುಟ್ಟ ಚಾಮುಂಡಿ, ವರಚಾಮುಂಡಿ, ಚೆಲುವೆ ಚಾಮುಂಡಿಯರೆಂಬ ಪಟ್ಟದ ಹಸುಗಳು, ವಿಜಯ ಎಂಬ ಪಟ್ಟದ ಕುದುರೆ, ಸರ್ವಚಿತ್ರ ರಂಜನಿ, ಸರ್ವಾಂಗ ಸುಂದರಿ ಎಂಬ ಮೋಹಕ ಕನ್ಯೆಯರು ಚಿತ್ರಿತರಾಗಿದ್ದಾರೆ. ಮತ್ತೊಂದು ಭಿತ್ತಿಯಲ್ಲಿ ಮುಮ್ಮಡಿಯವರ ಸಮಕಾಲೀನ ನವಾಬರ ಭಕ್ಷಿಗಳ ಪರಿವಾರದವರ ರೂಪ ಚಿತ್ರಗಳನ್ನು ಚಿತ್ರಿಸಲಾಗಿದೆ. ಮುಮ್ಮಡಿಯವರ ವಸಂತೋತ್ಸವದ ನೋಟ, ಚದುರಂಗದಾಟ ಮುಂತಾದವನ್ನು ಬಹು ಸುಂದರವಾಗಿ ಚಿತ್ರಿಸಲಾಗಿದೆ. ೧೮೮೯ರಲ್ಲಿ ಶಿಕಾರಿಪುರದ ತಿಪ್ಪಯ್ಯ ಬರೆದ ಭೀಷ್ಮಾರ್ಜುನರ ಯುದ್ಧದ ಸುಂದರ ರೇಖಾಚಿತ್ರವೂ ಇಲ್ಲಿದೆ.

ಜಗನ್ಮೋಹನ ಚಿತ್ರಶಾಲೆಯಲ್ಲಿ ರವಿವರ್ಮ, ರಾಮವರ್ಮ, ಕೆ. ವೆಂಕಟಪ್ಪ, ಅಳಂದಕರ್ ಗಗನೇಂದ್ರನಾಥ್ ಠಾಕೂರ್, ರೆಹಮಾನ್‌ಚುಗ್‌ತಾಯ್, ಮುನ್ಷಿಡೇ, ಬೀರೇಶ್ವರ ಸೇನ್ ಮುಂತಾದವರ ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಎಸ್.ಎಲ್. ಹಲ್ದಂಕರ್ ಅವರ ದೀಪ ಹಿಡಿದ ಮಹಿಳೆ (glow of hope) ಚಿತ್ರದ ನೆರಳು ಬೆಳಕಿನ ವಿನ್ಯಾಸ ಹೆಚ್ಚು ಆಕರ್ಷಣೆಯನ್ನು ಪಡೆದಿದೆ.

ಪಿ. ಆರ್. ತಿ.

## ಜನಪದ ಕಲೆ, ಭಾರತ

ಪುರಾತನ ಭಾರತೀಯ ಚಿತ್ರ ಮತ್ತು ಶಿಲ್ಪಕಲೆಗಳು ಸಾವಿರಾರು ವರ್ಷಗಳಿಂದ ಇಂದಿನವರೆಗೂ ಮುಂದುವರಿಯುತ್ತಾ ಬಂದಿವೆ. ಭಾರತದ ಜನಪದ ಕಲೆಯ ಇತಿಹಾಸ ಮತ್ತು ಗುಣಲಕ್ಷಣಗಳನ್ನು ಬುಡಕಟ್ಟು ಜನಾಂಗಗಳ ಜೀವನದ ಆರಂಭಿಕ ಸಮಾಜದಿಂದಲೇ ಗುರುತಿಸಬಹುದು. ಗ್ರಾಮಕಲೆ ಹುಟ್ಟುವ ಮೊದಲ ಬುಡಕಟ್ಟು ಜನಾಂಗದ ಅಲೆಮಾರಿ ತಂಡಗಳು ಒಂದು ಸ್ಥಳದಲ್ಲಿ ನೆಲೆಸಲು ಪ್ರಾರಂಭಿಸಿದ ದಿನದಿಂದ ಕರಕುಶಲ ಕಲೆಗಳು

ಹುಟ್ಟಿಕೊಂಡವು. ಭಾರತದ ಪ್ರತಿಯೊಂದು ರಾಜ್ಯವೂ ತನ್ನದೇ ಆದ ಸಾಂಸ್ಕೃತಿಕ ಚರಿತ್ರೆಯನ್ನು ಹೊಂದಿದೆ ಮತ್ತು ನಿರ್ದಿಷ್ಟ ಲಕ್ಷಣಗಳನ್ನು ಪಡೆದಿದೆ ಸಮಗ್ರ ಭಾರತೀಯ ಕಲೆಯ ಪ್ರಮುಖ ಭಾಗವಾದ ಜಾನಪದ ಕಲೆಯನ್ನು ಬಿಂಬಿಸುವಂಥ ಮೂಲಾಂಶಗಳು ಮೂರು ಅನುಕ್ರಮ ಹಂತಗಳಲ್ಲಿ ಅಭಿವೃದ್ಧಿ ಹೊಂದಿವೆ. ೧) ವರ್ಗ ಸಮಾಜ ಬರುವುದಕ್ಕೆ ಮುಂಚಿನ ಪ್ರಾಥಮಿಕ ಸ್ಥಿತಿ, ೨) ಹರಪ್ಪ ಅವಧಿಯಿಂದ ವಸಾಹತು ಯುಗದ ಪ್ರಾರಂಭದವರೆಗೆ ಶಾಶ್ವತವಾದ ಭಾರತೀಯ ಕಲೆಯೊಂದಿಗೆ ಪರಸ್ಪರ ವಿನಿಮಯ ಮಾಡಿಕೊಳ್ಳುವ ಸ್ಥಿತಿ ಮತ್ತು ೩) ಚಾರಿತ್ರಿಕವಾಗಿ ಸಮಗ್ರತಾ ಅಂಶವಾಗಿ ಮಾತ್ರವಲ್ಲದೇ, ಅದರ ಹಲವು ಸ್ಥಳೀಯ ಪ್ರದರ್ಶನಗಳಲ್ಲಿ ಹೆಚ್ಚು ಕಡಿಮೆ ಕಲಾತ್ಮಕ ಚಟುವಟಿಕೆಯ ಸ್ವಾಯತ್ತ ಶಾಖೆ.

ಭಾರತೀಯ ಜನಪದ ಕಲೆಯ ಸಮಗ್ರ ಚಿತ್ರವನ್ನು ರೂಪಿಸಲು ಭಾರತೀಯ ಕಲೆ ಪೂರ್ಣವಾಗಿ ಬೆಳೆದು ಬಂದ ಪ್ರಮುಖ ಮಾರ್ಗಗಳ ವಿಸ್ತರಣೆಯೊಂದಿಗೆ, ಇಂದಿಗೂ ಉಳಿದಿರುವ ಕುಶಲಕಲೆಗಳೊಂದಿಗೆ, ದಾಖಲೆಗಳಾಗಿ ಉಳಿದಿರುವ ಹಳೆಯ ಶಿಲಾ ವರ್ಣಚಿತ್ರಗಳು, ಮಡಿಕೆಗಳು ಮತ್ತು ಪ್ರತ್ಯೇಕ ಶೋಧನೆಗಳಲ್ಲಿ ಕಂಡುಬಂದವುಗಳನ್ನು ನಾವು ಪರಿಗಣಿಸಬಹುದು. ಬುಡಕಟ್ಟಿನ ಮತ್ತು ರೈತಾಪಿ ಕುಶಲ ಕರ್ಮಿಗಳಿಂದ ರಚಿತವಾದ ಕಲೆಯು, ರೂಪ ಮತ್ತು ವಿಷಯಕ್ಕಾಗಿ ರಚಿಸಿದ್ದರೂ ಬಹಳಷ್ಟು ಅಲ್ಪಕಾಲಿಕವಾಗಿದೆ ಹಾಗೂ ಬಹು ಸುಲಭವಾಗಿ ನಾಶವಾಗುವಂಥದು. ವಸ್ತುಗಳ ಉಪಯುಕ್ತತೆಯು ಅವರ ಆಚರಣೆ ಮತ್ತು ಧಾರ್ಮಿಕ ಉದ್ದೇಶಗಳು ಮುಗಿದ ತಕ್ಷಣವೇ ಕೊನೆಗೊಳ್ಳುವಂಥದು. ವಿಶೇಷವಾಗಿ ಕೌಟುಂಬಿಕ ಮತ್ತು ಸಾರ್ವಜನಿಕ ಉತ್ಸವಗಳಿಗೆ ರಚಿಸಿದ ಶಿಲ್ಪಗಳು ಹಾಗೂ ವರ್ಣ ಚಿತ್ರಗಳು, ಅವುಗಳು ಮುಕ್ತಾಯಗೊಂಡ ಮೇಲೆ ಅವುಗಳನ್ನು ವಿಸರ್ಜನೆ ಮಾಡಲಾಗುತ್ತಿತ್ತು. ಸತತ ಪುನಾರಾವರ್ತನೆ ಹಾಗೂ ಪುನರ್ ರಚನೆ ಒಂದರಿಂದಲೇ ಜನಪದ ಕಲೆ ಅವಿಚ್ಛಿನ್ನತೆಯನ್ನು ಸಾಧಿಸಿತು.

ಗ್ರಾಮದೊಳಗಿನ ಕಲಾಕೃತಿಗಳನ್ನು ರಚಿಸುತ್ತಿದ್ದ ವ್ಯಕ್ತಿಗಳ ವಿಭಿನ್ನ ಗುಂಪುಗಳಿವೆ. ಮೊದಲನೆಯದಾಗಿ ವೃತ್ತಿ ಕುಶಲ ಕಲೆಗಳು ಹಾಗೂ ಇನ್ನೊಂದು ಗುಂಪು ಹವ್ಯಾಸಿ ವೃತ್ತಿಯೇತರ ಕಲಾವಿದರು. ಅವರಲ್ಲಿ ಬಹಳಷ್ಟು ಜನ ಮಹಿಳೆಯರು. ಅವರು ಕಲೆಯ ಚೌಕಟ್ಟಿನಲ್ಲಿ ತಮ್ಮ ಸಂಪ್ರದಾಯಗಳನ್ನು, ಅಂದರೆ ಕೌಟುಂಬಿಕ ಪದ್ಧತಿ ಮತ್ತು ಮತಾಚರಣೆಯನ್ನು ಅನುಸರಿಸುವವರು. ಭಾರತದಲ್ಲಿಂದು ಚಾರಿತ್ರಿಕ ಬೆಳವಣಿಗೆಯ ಜನಪದ ಕಲಾ ಸಾಮಗ್ರಿ ಬಹಳಷ್ಟು ವರ್ಷಗಳಿಂದ ಭಾರತೀಯ ಜನಪದ ಕಲೆಯ ಚರಿತ್ರೆಯನ್ನು ಉಲ್ಲೇಖಗಳಲ್ಲಿ ಗುರ್ತಿಸಬೇಕಾಗಿದೆ ಮತ್ತು ಚಿತ್ರ, ವಾಸ್ತು, ಶಿಲ್ಪಗಳಲ್ಲಿ ಕಾಣಬಹುದು. ಹಿಂದಿನ ಮತ್ತು ಇಂದಿನ ನಡುವಿನ ಅತ್ಯಂತ ಪ್ರಮುಖ ಕಲಾತ್ಮಕ ಸಂಬಂಧವು, ಅಸಂಖ್ಯಾತ ಅಲಂಕಾರಿಕ ಆಶಯಗಳು, ಲಾಂಛನಗಳು ಮತ್ತು ಸಂಕೇತಗಳನ್ನೊಳಗೊಂಡಿದೆ.

**ಮರಿ**

## ಜಪಾನ್ ದೇಶದ ಕಲೆ

ಚೀನಾ ದೇಶದಿಂದಲೇ ಜಪಾನು ಚಿತ್ರ, ಶಿಲ್ಪ, ವಾಸ್ತು ಮೊದಲಾದ ಕಲೆಗಳಿಗೆ ಹೆಚ್ಚಿನ ಪ್ರೇರಣೆಯನ್ನು ಪಡೆಯಿತು. ಚೀನಕ್ಕಿಂತ ಜಪಾನ್ ಒಂದಿಷ್ಟು ಹೆಚ್ಚಿಗೆ ನಿಸರ್ಗ ಪ್ರೇಮವನ್ನು ಗಳಿಸಿಕೊಂಡ ದೇಶ, ಸ್ವಭಾವತಃ ಸೌಂದರ್ಯಾಭಿಮಾನಿಗಳು.



ಜಪಾನ್ ಚಿತ್ರಕಲೆಗೆ ೧೪ ಶತಮಾನದಷ್ಟು ಧೀರ್ಘ ಕಾಲದ ಇತಿಹಾಸವಿದೆ. ಹೋರ್ಯುಜಿ ದೇವಾಲಯದ ಭಿತ್ತಿಚಿತ್ರಗಳು ಅತ್ಯಂತ ಪ್ರಾಚೀನವಾದವು. ಕೋಸ್-ನೋ-ಕನೌಕ್ ಪ್ರಥಮ ಸ್ಥಳೀಯ ಕಲಾವಿದ. ಈತ 'ಯಮಾಟೋ' ಪ್ರದೇಶದ ಚಿತ್ರಶೈಲಿಯ ಆದ್ಯ ಪ್ರವರ್ತಕ.' ಈತನ ಮನೆತನದವರು ೧೪ನೇ ಶತಮಾನದವರೆಗೆ "ಕೋಸ್" ಶೈಲಿಯನ್ನು ಉಳಿಸಿಕೊಂಡು ಬಂದರು. ೧೨ನೇ ಶತಮಾನದಲ್ಲಿ ಸಾಹಿತ್ಯ ಕೃತಿಗಳಿಗೆ ಪೋಷಕವಾಗಿ ಚಿತ್ರಗಳನ್ನು ಬರೆಯುವ ಕಲೆ ಅಭಿವೃದ್ಧಿಗೆ ಬಂದಿತು. ಉದ್ದಕ್ಕೂ ಬಿಚ್ಚಿಕೊಂಡು ಹೋಗಬಹುದಾದ ಸುರಳಿ ಚಿತ್ರಗಳಲ್ಲಿ ಅವರ ಸೌಂದರ್ಯ ಪ್ರಜ್ಞೆಯನ್ನೂ ವಿಶಿಷ್ಟವಾದ ಕಲಾತ್ಮಕ ಚಲನೆಯನ್ನೂ ಕಾಣಬಹುದು.

ಟೋಡನ್ನು ಮತ್ತು ನ್ಯೋಸೆಟ್ಸು ಎಂಬಿಬ್ಬರು ಬೌದ್ಧ ಭಿಕ್ಷುಗಳು ೧೫ನೇ ಶತಮಾನದಲ್ಲಿ ಒಂದು ಹೊಸ ಚಿತ್ರಣ ಶೈಲಿಯನ್ನೇ ಆರಂಭಿಸಿದರು. ಕಪ್ಪುಮಸಿಯನ್ನು ಉಪಯೋಗಿಸಿ ಚಿತ್ರಗಳನ್ನು ಬರೆದರು. ನ್ಯೋಸೆಟ್ಸುವಿನ ಶಿಷ್ಯರು, ಷುಬುನ್ ಹಾಗೂ ಸೇಷ್ಯು. ಷಬುನ್‌ನ ಶಿಷ್ಯ ಕಾನೊಮೆಸಾನೋಮಿ "ಕಾನೊಶೈಲಿ" ಆರಂಭಿಸಿದ, ಟೋಸಾ "ಟೋಸಾ" ಶೈಲಿಯ ಪ್ರವರ್ತಕನಾದ. ಕಾನೊ ಶೈಲಿಯಲ್ಲಿ ವಿಶಾಲವಾದ ಭಾವನೆ, ಅತೀವ ಸರಳತೆ ಮತ್ತು ತೀಕ್ಷ್ಣವರ್ಣಸಂಯೋಜನೆ ಇರುತ್ತಿತ್ತು. ಸುಮಾರು ೧೭೭೫ರಲ್ಲಿದ್ದ ಔಕ್ಯೊ, ಪ್ರಾಣಿಜೀವನವನ್ನು ಚಿತ್ರಿಸುವದರಲ್ಲಿ ಖ್ಯಾತಿಗಳಿಸಿದ. ಪಶ್ಚಿಮದ ನಾಗರಿಕತೆ ಜಪಾನಿಗೂ ಹರಡಿ ಚಿತ್ರಕಲೆಯಲ್ಲೂ

ಪಾಶ್ಚಾತ್ಯರ ಶೈಲಿ ಪ್ರಾಮುಖ್ಯತೆ ಪಡೆಯಿತು. ಸೊಟಾರೊಯಾಸುಯಿ ಈ ಶೈಲಿಯ ಪ್ರಮುಖ ಚಿತ್ರಕಾರರಲ್ಲೊಬ್ಬ.

ಚೀನಿಯರ ವಾಸ್ತುಶಿಲ್ಪವೇ ಜಪಾನೀಯರ ವಾಸ್ತುಶಿಲ್ಪದ ಮೂಲ ಪ್ರೇರಕ. ಜಪಾನಿನ ಬಹುತೇಕ ಕಟ್ಟಡಗಳನ್ನು ಮರದಿಂದ ನಿರ್ಮಿಸುತ್ತಿದ್ದರು. ಇಂದಿಗೂ ಶಿಲ್ಪಕಲೆ ಹಾಗೂ ಲೋಹ ಮತ್ತು ಮರದ ಕೆತ್ತನೆ ಕೆಲಸಗಳಲ್ಲಿ ಜಪಾನು ಅತ್ಯುತ್ತಮ ಸಾಧನೆಗಳನ್ನು ಕೈಗೊಂಡಿದೆ. ಪವಿತ್ರ ಮೂರ್ತಿಗಳು, ಗಂಟೆಗಳು, ಹೂದಾನಿಗಳು, ದೀಪಗಳು, ಶಸ್ತ್ರ ಹಾಗೂ ಕವಚಗಳು ಜಪಾನೀ ಕಲಾವಿದರ ಕುಶಲತೆಗೆ ಸಾಕ್ಷಿಯಾಗಿವೆ. ಕಂಚು, ದಂತ ಮತ್ತು ಮರದ ವಸ್ತುಗಳು ರಚನೆಯಲ್ಲಿ ಉಪಯೋಗಿಸಿರುವ ವಸ್ತುಗಳು. ನಾರಾ(೬೪೫-೭೮೧) ಮತ್ತು ಕಾಮಕುರಾ ಅವಧಿ ಜಪಾನೀ ಶಿಲ್ಪಕಲೆಯ ಸ್ವರ್ಣಯುಗ. ಚಿನ್ನ, ಬೆಳ್ಳಿಗಳ ಒಳಕುಸುರಿ ಕೆಲಸ, ಕಂಚಿನಲ್ಲಿ ಕಲಾಕೃತಿ, ಮರದ ಕೆತ್ತನೆ, ಅಲ್ಲದೆ ಚೀನಾದ ಅರಗಿನ ಬಣ್ಣದ ಕೆಲಸದಲ್ಲಿ ತಮ್ಮದೇ ಕುಶಲತೆಯನ್ನು ಮೆರೆದರು.

ಅ.ಗ.

## ಜಲವರ್ಣ(Water-Colour)

ಜಲವರ್ಣ ಚಿತ್ರಗಳನ್ನು ಸಾಮಾನ್ಯವಾಗಿ ಕಾಗದಗಳ ಮೇಲೆ, ಕೆಲವು ವೇಳೆ ರೇಷ್ಮೆ ಬಟ್ಟೆ, ಹಸ್ತಿದಂತ ಇಲ್ಲವೇ ಎಲುಬುಗಳ ಮೇಲೆ ಚಿತ್ರಿಸುತ್ತಾರೆ. ಬಣ್ಣಗಳನ್ನು ನೀರಿನಲ್ಲಿ ಮಿಶ್ರಮಾಡಿ ಚಿತ್ರಗಳನ್ನು ಚಿತ್ರಿಸುವುದೇ ಜಲವರ್ಣ ವಿಧಾನ. ಬಹುದಿನಗಳಿಂದಲೂ ರೇಖಾಚಿತ್ರಗಳಿಗೆ(Drawings) ಜಲವರ್ಣಗಳಿಂದ ಮುಕ್ತಾಯ ಸ್ಪರ್ಶ(Finishing Touches)ಗಳನ್ನು ಕೊಡಲಾಗತ್ತಿತ್ತೆಂಬುದನ್ನು ಲಿಯೋನಾರ್ಡೋ ಡಾ ವಿನ್ಸಿ ಮತ್ತು ಡ್ಯೂರರ್ ಅವರ



ರುಮಾಲೆ ಚನ್ನಬಸವಯ್ಯ

ಅಸಂಖ್ಯಾತ ರೇಖಾಚಿತ್ರಗಳಿಂದ ತಿಳಿಯಬಹುದಾಗಿದೆ. ಈಗಲೂ ಈ ಪದ್ಧತಿಯು ರೂಢಿಯಲ್ಲಿರುತ್ತದೆಯಲ್ಲದೆ ಚಿಕಣಿ ವರ್ಣಚಿತ್ರಗನ್ನು ಹೆಚ್ಚಾಗಿ ಜಲವರ್ಣ ಮಾಧ್ಯಮದಲ್ಲಿಯೇ ಚಿತ್ರಿಸಲಾಗುತ್ತದೆ ಎಂಬುದು ಸರ್ವವಿದಿತ. ಇಂಗ್ಲೆಂಡ್‌ನಲ್ಲಿ ೧೮ನೇ ಶತಮಾನದ ಕೊನೆಗೆ ನಿಸರ್ಗದೃಶ್ಯಚಿತ್ರ(Landscape)ಗಳನ್ನು ಚಿತ್ರಿಸುವ ಕಲಾವಿದರ ತಂಡವೊಂದು ಉದಯಿಸಿತು. ಈ ತಂಡದ ಕಲಾವಿದರೇ ಈ ವಿಧಾನದಲ್ಲಿ ಘನವಂತರಾದ ಯುರೋಪಿಯನ್ ವರ್ಣಚಿತ್ರಕಾರರಾಗಿದ್ದರೆನ್ನಬಹುದು. ಜಲವರ್ಣಮಾಧ್ಯಮವು ಇನ್ನುಳಿದ ಯಾವುದೇ ಮಾಧ್ಯಮಗಳಿಗಿಂತಲೂ ನಿಸರ್ಗ ದೃಶ್ಯ ಚಿತ್ರಕಲಾಕೃತಿಗಳ ರಚನೆಗೆ ಅತ್ಯುತ್ತಮವಾದ ಮಾಧ್ಯಮವಾಗಿದೆಯಲ್ಲದೆ ಬಹು ಕಠಿಣವಾದ ಮಾಧ್ಯಮವೂ ಆಗಿದೆ. ಮಧ್ಯಯುಗೀನ ಅನೇಕ ಅಲಂಕೃತ ಹಸ್ತಪ್ರತಿಗಳು ಜಲವರ್ಣ ಮಾಧ್ಯಮದಲ್ಲಿಯೇ ರಚಿಸಲ್ಪಟ್ಟಿವೆ. ಫ್ರೆಸ್ಕೊ ವಿಧಾನವು ಜಲವರ್ಣಗಳನ್ನು ಬಳಸಿ ಕಲಾಕೃತಿಗಳನ್ನು ರಚಿಸುವ ಜಲವರ್ಣಮಾಧ್ಯಮದ ಇನ್ನೊಂದು ಪ್ರತ್ಯೇಕ ರೂಪವಾಗಿದೆ.

ಜೆ. ಆರ್. ಕಝೆನ್ಸ್, ಥಾಮಸ್ ಜಿರ್ಟಿನ್, ಜೆ. ಎಸ್. ಕಾಟ್ಮನ್, ಪೀಟರ್. ಡಿ. ವಿಕಟ್ ಮುಂತಾದವರು ಸುಪ್ರಸಿದ್ಧ ಜಲವರ್ಣ ಚಿತ್ರಕಾರರಾಗಿದ್ದರು. ಪ್ರಾಯಶಃ ಇವರ ಸಮಕಾಲಿನ ಕಲಾವಿದನಾದ ಜೆ. ಎಮ್. ಡಬ್ಲ್ಯೂ ಟರ್ನರನು ಸರ್ವೋತ್ಕೃಷ್ಟ ನಿಸರ್ಗದೃಶ್ಯಚಿತ್ರ ಕಲಾವಿದನಾಗಿದ್ದನು. ತೈಲವರ್ಣ ಮಾಧ್ಯಮದಲ್ಲಿ ಟರ್ನರನ ಪ್ರತಿಸ್ಪರ್ಧಿಯಾಗಿದ್ದ ಕಾನ್ಸ್ಟೇಬಲ್‌ನೂ ಕೆಲವು ಚಿತ್ರಗಳನ್ನು ಜಲವರ್ಣ ಮಾಧ್ಯಮದಲ್ಲಿ ಚಿತ್ರಿಸಿದ್ದಾನೆ. ೧೮೫೧ರಲ್ಲಿ ಟರ್ನರನು ಕಾಲವಾದನಂತರ ಜಲವರ್ಣ ಮಾಧ್ಯಮದ ಕಲಾವಿದರಲ್ಲಿ ಸಿಝಾನೆಯು ಸುಪ್ರಸಿದ್ಧ ಕಲಾವಿದನೆಂದು ಪರಿಗಣಿಸಲ್ಪಟ್ಟಿದ್ದಾನೆ. ಭಾರತದಲ್ಲಿ ಮೊದಲಿನಿಂದಲೂ ಜಲವರ್ಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ಗುಹಾಚಿತ್ರಗಳಿಂದ ಹಿಡಿದು, ಭಿತ್ತಿಚಿತ್ರಗಳು, ತಾಳೆಯೋಲೆ ಕಾಗದಗಳ ಮೇಲಿನ ಚಿತ್ರಗಳು ಜಲವರ್ಣದಲ್ಲಿಯೇ ರಚಿತವಾಗಿ ಚಿತ್ರಕಲೆಯ ಶಾಸ್ತ್ರಗ್ರಂಥಗಳು ಜಲವರ್ಣದ ಪುಡಿಗಳನ್ನು ಮಾಡಿಕೊಳ್ಳುವ ಬಗ್ಗೆ ಅನೇಕ ವಿಧಾನಗಳನ್ನು ತಿಳಿಸುತ್ತದೆ. ಜಲವರ್ಣದ ಜೊತೆಗೆ ಬೆರೆಸುವ ವಿವಿಧ ಬಗೆಯ ಅಂಟು ಪದಾರ್ಥಗಳ ಬಗ್ಗೆಯೂ ವಿವರಗಳು ದೊರೆಯುತ್ತವೆ.

ವಿ. ಟಿ. ಕಾ.

## ಜಲವರ್ಣ ಕಾಗದ

ಚಿಂದಿಯಾದ ನಾರು ಬಟ್ಟೆಯ ರುಬ್ಬಿದ ತಿರುಳನ್ನೇ ತನ್ನ ಬಂಡವಾಳವನ್ನಾಗಿಸಿಕೊಂಡಿರುವ ಒಂದು ಬಗೆಯ ಕಾಗದ. ಜಲವರ್ಣ ಮಾಧ್ಯಮಕ್ಕೆಂದೇ ವಿಶೇಷವಾಗಿ ತಯಾರಿಸಲ್ಪಡುವ ಈ ಕಾಗದವು ಸಾಕಷ್ಟು ತೂಕವನ್ನೂ ಧೃಡತೆಯನ್ನೂ ಹೊಂದಿರುವುದಷ್ಟೇ ಅಲ್ಲದೆ ಬಹಳ ನೀರಾದ ಜಲವರ್ಣವನ್ನು ಬಾರಿ ಬಾರಿ ಅದರ ಮೇಲೆ ಬಳಸಿದಾಗ್ಯೂ ತಾನು ಶಿಥಿಲಗೊಳ್ಳುವುದಿಲ್ಲ. ಕೈ ಕಾಗದ(hand made paper) ಎಂದು ಕರೆಸಿಕೊಳ್ಳುವ ಈ ಬಗೆಯ ಕಾಗದಗಳಲ್ಲಿ ಜಲದೊಂದಿಗೆ ವರ್ಣಗಳೂ ಆಳ ಪದರಗಳಿಗೆ ಇಳಿದು ಸ್ಥಿರವಾಗಿ ನಿಲ್ಲುವಂತಾಗುತ್ತದೆ.

ಮ.ಹೆ.

## ಜಾರ್ಜಿಯನ್ ವಾಸ್ತುಶಿಲ್ಪ

ನವೋದಯದ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿ ವಿಕಾಸಗೊಂಡ ವಾಸ್ತುಶಿಲ್ಪವನ್ನು ಜಾರ್ಜಿಯನ್ ವಾಸ್ತುಶಿಲ್ಪ ಎಂದು ಕರೆಯುತ್ತಾರೆ. ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡನ್ನು ಅನುಕ್ರಮವಾಗಿ ಮೂವರು ಜಾರ್ಜ್ ದೊರೆಗಳು ಆಳಿದರು. ಈ ಅವಧಿಯಲ್ಲೇ ಇಂಗ್ಲೆಂಡಿನಲ್ಲಿ ಅಧಿಕ ಸಂಖ್ಯೆಯಲ್ಲಿ ಚಿಕ್ಕ ಮನೆಗಳು ನಿರ್ಮಾಣಗೊಂಡವು. ಅಲ್ಲದೆ ದೊಡ್ಡ ಕಟ್ಟಡಗಳು, ಇಗರ್ಜಿಗಳು, ಸಾರ್ವಜನಿಕ ಭವನಗಳು, ಇವೆಲ್ಲವೂ ಹೆಚ್ಚಾಗಿ ಮನೆಯ ಮಾದರಿಯಲ್ಲೇ ಕಟ್ಟಲ್ಪಟ್ಟವು. ಈ ನಿರ್ಮಾಣ ಶೈಲಿಯನ್ನು ಜಾರ್ಜಿಯನ್ ವಾಸ್ತುಶಿಲ್ಪ ಎಂದು ಕರೆದರು.

ಮರಿ

## ಜೆನರೆ (Genre)

ಬಗೆ ಅಥವಾ ಪ್ರಕಾರ ಎಂಬರ್ಥ ಕೊಡುವ ಫ್ರೆಂಚ್ ಪದದ ಮೂಲವುಳ್ಳ 'ಜೆನರೆ' ಶಬ್ದವು ಚಿತ್ರಕಲೆಯ ಒಂದು ಪ್ರಕಾರವನ್ನು ಸೂಚಿಸುತ್ತದೆ. ಈ ಚಿತ್ರಕಲೆಯ ಕಲಾವಿದನನ್ನು 'ಜೆನರೆ ಚಿತ್ರಕಾರ', ಎಂದು ಗುರುತಿಸುವುದುಂಟು. ಜೆನರೆ ಚಿತ್ರಕಾರ ವಿಶಿಷ್ಟ ಕಲಾವಿದ. ಉಳಿದ ಕಲಾವಿದರಂತೆ ಇತಿಹಾಸ, ಧರ್ಮ ಕುರಿತಾದ ವಿಷಯಗಳು ಈತನ ಚಿತ್ರರಚನೆಗೆ ವಸ್ತುವಾಗಿರಲಿಲ್ಲ. ಬದಲಾಗಿ ನಿತ್ಯ ಬದುಕಿನ ಏನೆಲ್ಲ ಸಂಗತಿಗಳು ಈ ಚಿತ್ರಕಲೆಯ ವಸ್ತುವಾಗಿರುತ್ತಿದ್ದವು. ಆದರೆ ಚಿತ್ರದ ವಸ್ತುವಿನಷ್ಟೇ ಆ ವಸ್ತುವಿನ ಬಗೆಗಿನ ಕಲಾವಿದನ ಮನೋಭೂಮಿಕೆ ಜೆನರೆ ಕಲೆಯಲ್ಲಿ ಪ್ರಾಧಾನ್ಯ ಪಡೆಯುತ್ತದೆ. ಜೆನರೆ ಕಲಾವಿದನು ಐತಿಹಾಸಿಕ, ಧಾರ್ಮಿಕ ವಿಷಯಗಳನ್ನು ಮರೆಮಾಡಿ, ತನ್ನ ತೀಕ್ಷ್ಣ ದೃಷ್ಟಿಯು ಸೆರೆಹಿಡಿದ ವೇಷಭೂಷಣ, ಆಕಾರ, ಹಿನ್ನೋಟ, ವರ್ಣಸಮಂಜಸತೆ ಮೊದಲಾದವುಗಳ ಮೂಲಕ ಕಲಾಕೃತಿಗಳಲ್ಲಿ ಚೆಲುವನ್ನು ತೋರಿಸಿದನು.

ಯುರೋಪದ ಜೆನರೆ ಚಿತ್ರಕಲೆಯು ಮಧ್ಯಯುಗದ ಅಂಚಿನವರೆಗೆ ಕಾಣಸಿಕೊಳ್ಳಲಿಲ್ಲ. ೧೬ನೆಯ ಶತಮಾನದ ಕೊನೆಯ ಅವಧಿಯಿಂದ ೧೯ನೆಯ ಶತಮಾನದವರೆಗೆ ಅದು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಕ್ರಿ.ಶ. ೧೭ನೆಯ ಶತಮಾನದ ವ್ಹರ್‌ಮೀರ್, ಡಿ. ಹೂಚ್, ಟರ್ಬೋರ್ಚ ಮೊದಲಾದ ಡಚ್ ಜೆನರೆ ಕಲಾವಿದರು ಈ ಬಗೆಯ ಚಿತ್ರಕಲೆಯಲ್ಲಿ ಹೆಸರು ಮಾಡಿದವರಾಗಿದ್ದಾರೆ. ೧೮ನೆಯ ಶತಮಾನದಲ್ಲಿ ಗ್ರಾಜ್ ಎಂಬಾತನು ಜೆನರೆ ಕಲೆಗಾಗಿ ಪ್ರಸಿದ್ಧಿ ಪಡೆದ. ೨೦ನೆಯ ಶತಮಾನದಲ್ಲಿ ಫೋಟೋಗ್ರಾಫಿಯು ಜೆನರೆ ಚಿತ್ರಕಲೆಯ ಸ್ಥಾನವನ್ನು ಆಕ್ರಮಿಸಿತು. ಜೆನರೆ ಪ್ರಕಾರದ ಚಿತ್ರಕಲೆಯಿಂದಾಗಿ ಐತಿಹಾಸಿಕ ಸಂಗತಿಗಳ ಚಿತ್ರಣ ಮಾಯವಾಯಿತು.

-ಶಿ. ಷ.

## ಜೇಡಿಮಣ್ಣು (Clay)

ಜೇಡಿಮಣ್ಣು, ೦.೦೦೫ ಮಿಲಿಮೀಟರ್‌ಗಿಂತ ಕಡಿಮೆ ವ್ಯಾಸವಿರುವ ಮಣ್ಣಿನ ಕಣಗಳ ಸಮೂಹವಾಗಿರುತ್ತದೆ. ಕಲ್ಲಿನ ಭೌತಿಕಾಂಶವನ್ನು ಪೃಥಕ್ಕರಿಸಿ ಪಡೆದ ನೈಸರ್ಗಿಕ ಖನಿಜ ವಸ್ತುಗಳ ಸಮೂಹವಿದು. ಮೃತ್ತಿಕಾ ಶಿಲ್ಪ, ಪಾತ್ರೆಗಳನ್ನು ತಯಾರಿಸುವ ಮುನ್ನ ಜೇಡಿಮಣ್ಣನ್ನು ಶುದ್ಧೀಕರಿಸಿ, ಸಂಸ್ಕರಿಸುತ್ತಾರೆ. ಇದು ಅನೇಕ ಬಗೆಯ ಬಣ್ಣಗಳಲ್ಲಿ ಮೈವಳಿಕೆಗಳಲ್ಲಿ ದೊರೆಯುತ್ತದೆ. ಮೂರ್ತಿ ತಯಾರಿಕೆಗೆ ಬಳಸುವ ಜೇಡಿಮಣ್ಣು ಮತ್ತು ಸುಡಲು ಬಳಸುವ ಜೇಡಿಮಣ್ಣು ವಿಭಿನ್ನ ಗುಣಧರ್ಮಗಳನ್ನು ಹೊಂದಿರುತ್ತವೆ. ಶಿಲ್ಪಕ್ಕೆ ಬಳಸಲಾದ ಜೇಡಿಮಣ್ಣು, ಪಾತ್ರೆಯ ನಿರ್ಮಾಣಕ್ಕೆ ಉಪಯೋಗಿಸಲಾಗುವ ಜೇಡಿಮಣ್ಣಿಗಿಂತ ಹೆಚ್ಚು ಒರಟಾಗಿಯೂ, ಬಡಿದು ಸರಿಪಡಿಸಬಹುದಾದ್ದೂ ಆಗಿರುತ್ತದೆ. ಜೇಡಿಮಣ್ಣು ಹಸಿಯಾಗಿರುವಾಗ ಮೆದುವಾದ ಮುದ್ದೆಯಾಗಿರುತ್ತದೆ. ಇದರಿಂದಾಗಿ ಸುಲಭವಾಗಿ ಅದಕ್ಕೆ ಆಕಾರ ಕೊಡಬಹುದು. ಜೇಡಿಮಣ್ಣು ನೀರನ್ನು ಹಿಡಿದುಕೊಳ್ಳುವ ಗುಣವುಳ್ಳದ್ದಾಗಿದೆ ಮತ್ತು ಒಣದಾಗಿರುವಾಗ ಕಣಗಳೆಲ್ಲ ಒಂದಕ್ಕೊಂದು ಅಂಟಿಕೊಂಡು ಅದು ಬಂಧಿತವಾಗಿರುತ್ತದೆ. ಈ ಕಾರಣಗಳಿಂದಾಗಿ ಜೇಡಿಮಣ್ಣಿಗೆ ವ್ಯಾಪಕವಾದ ಮಹತ್ವ ಬಂದಿದೆ. ಮತ್ತಾವ ಬಗೆಯ ಮಣ್ಣೂ ಇದರಷ್ಟು ಪ್ರಯೋಜನಕಾರಿ ಎನಿಸಲಾರದು.

ಇತಿಹಾಸ ಪೂರ್ವದ ಕಾಲದಿಂದಲೂ ಮಣ್ಣಿನ ಪಾತ್ರೆಯ ನಿರ್ಮಾಣದಲ್ಲಿ ಜೇಡಿಮಣ್ಣಿನ ಬಳಕೆಯಾಗುತ್ತಿದ್ದ ಸಂಗತಿ ತಿಳಿದುಬರುತ್ತದೆ. ಈ ಪ್ರಾಚೀನ ಪಾತ್ರೆಗಳು ನಾಗರಿಕತೆಯನ್ನು ದಾಖಲೆಗೊಳಿಸಿವೆ. ಕಟ್ಟಡ ರಚನೆಯ ಸಾಮಗ್ರಿಯಾಗಿ ಇಟ್ಟಿಗೆಯು ಪ್ರಾಚೀನ ಕಾಲದಿಂದಲೂ ಬಳಕೆಯಾಗಿದೆ. ಅಶುದ್ಧ (ಕಚ್ಚಾ) ಜೇಡಿಮಣ್ಣನ್ನು ಇಟ್ಟಿಗೆ, ಹಂಚು ಮತ್ತು ಕಚ್ಚಾ ಮಣ್ಣಿನ ಪಾತ್ರೆ ತಯಾರಿಸಲು ಬಳಸುತ್ತಾರೆ.

ಜೇಡಿಮಣ್ಣನ್ನು ಹಾಗೆಯೇ ಅಥವಾ ಕೆಲವು ಅಂಟು ಪದಾರ್ಥಗಳೊಂದಿಗೆ ಬೆರೆಸಿ ಚೆನ್ನಾಗಿ ಕುಟ್ಟಿ, ನಾದಿದ ಮೇಲೆ ವಿಗ್ರಹಾದಿಗಳನ್ನು ರಚಿಸುತ್ತಾರೆ.

ಶಿ.ಪ.

## ಜೈನ ಚಿತ್ರಕಲೆ

ಅಜಂತಾನಂತರ ಭಿತ್ತಿಚಿತ್ರ ರಚನೆ ಕಡಿಮೆಯಾಗಿ ಸುಮಾರು ಕ್ರಿ. ಶ. ೧೧ರಿಂದ ೧೫ನೇ ಶತಮಾನದವರೆಗೆ ತಾಳೆ ಓಲೆಗಳ ಗ್ರಂಥಗಳಲ್ಲಿ ಚಿತ್ರರಚನೆ ಆರಂಭವಾಯಿತು. ಆ ಗ್ರಂಥಸ್ಥ ಚಿತ್ರಗಳಲ್ಲಿ ಪಾಲಿಶೈಲಿ ಮತ್ತು ಜೈನ ಶೈಲಿ ಎಂಬುದಾಗಿ ಎರಡು ಶೈಲಿಗಳು ಪ್ರಸಿದ್ಧವಾಗಿವೆ. ಪಾಲಿ ಶೈಲಿಯು ಪಾಲರಾಜರ ಆಳ್ವಿಕೆಗೊಳಪಟ್ಟ ಬಂಗಾಲ, ಬಿಹಾರಗಳದ್ದು. ಈ ರಾಜ್ಯಗಳು ಭಾರತದ ಪೂರ್ವದಿಕ್ಕಿನಲ್ಲಿರುವುದರಿಂದ ಈ ಚಿತ್ರಗಳಿಗೆ 'ಪೂರ್ವಿಶೈಲಿ' ಎಂದು ಕೂಡ ಹೇಳುತ್ತಾರೆ.

ಜೈನ ಸಾಹಿತ್ಯದಲ್ಲಿ ಚಿತ್ರಕಲಾತಂತ್ರ ಕುರಿತು ಅನೇಕ ವಿಚಾರಗಳು ಬರೆಯಲ್ಪಟ್ಟಿವೆ.



ಇತಿಹಾಸಕಾರರು ಜೈನ ಚಿತ್ರಕಲೆಯ ಕಾಲವನ್ನು ೧೧ರಿಂದ ೧೫ನೆಯ ಶತಮಾನದ್ದೆಂದು ಹೇಳುತ್ತಾರೆ. ಜೈನ ಧರ್ಮದ ಪ್ರಭಾವ ಪಡೆದಿರುವ ಪಶ್ಚಿಮ ಭಾರತ, ಗುಜರಾತ, ರಾಜಸ್ಥಾನದ ಆಗ್ನೇಯ ಭಾಗಗಳಲ್ಲಿ ಜೈನ ಚಿತ್ರಶೈಲಿಯು ಪ್ರಚಾರದಲ್ಲಿತ್ತು. ಆ ಕಾರಣದಿಂದ ಆ ಜೈನ ಚಿತ್ರಶೈಲಿಗೆ 'ಪಶ್ಚಿಮಿಶೈಲಿ' ಎಂಬ ಹೆಸರು ಕೂಡ ಬಂದಿದೆ. ಆರಂಭದಲ್ಲಿ ತಾಳೆ ಓಲೆಗಳ, ಗ್ರಂಥಗಳ ಮೇಲೆ ಈ ಚಿತ್ರರಚನೆಗಳಾಗುತ್ತಿದ್ದವು. ಕ್ರಮೇಣ ಒರಟಾದ ಮಸುಕು ಕಾಗದಗಳು ಬೆಳಕಿಗೆ ಬಂದುವು. ಜೈನ ಶಿಲೆಯಲ್ಲಿ ತೀರ್ಥಂಕರರ, ಕಥಾನಕದ ಚಿತ್ರಗಳಿರುತ್ತವೆ.

ಜೈನ ಚಿತ್ರಗಳಲ್ಲಿ ವಿಶಾಲವಾದ ಎದೆ, ಅಗಲವಾಗಿ ಚಿತ್ರಿಸಿದ ಕಣ್ಣುಗಳಿರುತ್ತವೆ. ಬದಿ ಮುಖ(profile)ದಲ್ಲಿ ಕೂಡ ಎರಡೂ ಕಣ್ಣುಗಳನ್ನು ಎಂದರೆ ಆಚೆ ಬದಿಯ ಕಣ್ಣನ್ನು ಕೂಡ ಚಿತ್ರಿಸಿ ತೋರಿಸುತ್ತಾರೆ. ಸಾಮಾನ್ಯವಾಗಿ ಮುಂದೆ ಬಂದಿರುವ ತ್ರಿಕೋನಾಕಾರದ ಮೂಗು ದೀರ್ಘವಾದ ಕಣ್ಣಿನ ಮೂಲೆ, ಬಿಲ್ಲಿನಾಕಾರದ ಹುಬ್ಬುಗಳು, ಕೋನಯುಕ್ತವಾದ ಮುಖ, ಸಪೂರವಾದ ಸೊಂಟ, ಮೊದಲಾದ ವೈಶಿಷ್ಟ್ಯಗಳು ಕಂಡುಬರುತ್ತವೆ.

ಬಿಪಿಬಾ

## **ಜೋಡಣೆ** (Assemblage)

ಆಕಸ್ಮಿಕವಾಗಿ ಸಿಕ್ಕ (Objects Troure's) ತ್ರಿಮಾನದ ವಸ್ತುಗಳನ್ನು ಕಲಾಕೃತಿಯ ನಿರ್ಮಾಣದಲ್ಲಿ ಬಳಸುವ ವಿಧಾನ. ೧೯೫೦ರ ಕೊನೆಯಲ್ಲಿ ಬಹುವಾಗಿ ಬಳಕೆಯಲ್ಲಿದ್ದ ಈ ತಂತ್ರದ ಮೂಲ ಕೊಲಾಜ್. ದಾದಾ ಪಂಥದ ಪುನರುಜ್ಜೀವನದ ಬಿಸಿಯೇರಿದ ಈ

ಕಾಲದಲ್ಲಿ ಕೆಲಸ ಮಾಡುತ್ತಿದ್ದವರು ರಾಬರ್ಟ್ ರೋಷನ್ ಬರ್ಗ್, ಜಿಸ್ಪರ್ ಜಾನ್ಸ್, ಲೂಯಿ ನೆವಲ್ಸನು ಇತ್ಯಾದಿ ಭಾರತದಲ್ಲಿ ಹಿಮ್ಮತ್ ಷಾ, ರಾಘವ ಕನೇರಿಯಾ, ಪಿಲೂ ಪೂಚ್‌ಕಾನ್‌ವಾಲಾ ಈ ವಿಧಾನದಲ್ಲಿ ಪ್ರಯೋಗ ನಡೆಸಿದವರಲ್ಲಿ ಪ್ರಮುಖರು.

ರ. ಕಾಶಿ

## ಜೋಧಪುರ(ಮಾರವಾರ)

೧೪೫೯ರಲ್ಲಿ ರಾವ್‌ಜೋಧನು ಮಾರವಾರವನ್ನು ಜೋಧಪುರದ ರಾಜಧಾನಿಯನ್ನಾಗಿ ಮಾಡಿಕೊಂಡನು. ಸುದೃಢವಾದ ಕಲ್ಲಿನ ಮೇಲೆ ನಿರ್ಮಿಸಿರುವ ಮಾರವಾರದ ಕೋಟೆಯು ರಾಜ್ಯದ ರಕ್ಷಣೆಗಾಗಿ ಕುಳಿತಿರುವ ದಿವ್ಯಪುರುಷನಂತೆ ತೋರುತ್ತದೆ. ಸುತ್ತಲಿನ ಪ್ರದೇಶವು ಮರುಭೂಮಿಯಾಗಿದ್ದು, ಅತಿವಿರಳವಾದ ಮರಗಿಡಗಳಿವೆ. ೧೫ ಮತ್ತು ೧೬ನೇ ಶತಮಾನದಲ್ಲಿ ರಾಜಸ್ಥಾನದ ಇತರ ರಾಜ್ಯಗಳಲ್ಲಿದ್ದಂತೆ, ಜೈನ ಶೈಲಿಯ ಚಿತ್ರಕಲೆಯು ಜೋಧಪುರದಲ್ಲಿ ಅಭಿವೃದ್ಧಿ ಪಡೆಯಿತು. ಅನಂತರ ಜನಪದ ಕಲಾ ಶೈಲಿಯು ಹೆಚ್ಚು ಪ್ರಾಧಾನ್ಯತೆ ಹೊಂದಿತು ಹಾಗೂ ೧೬೨೩ರಲ್ಲಿ ಈ ಶೈಲಿಯ ರಾಗಮಾಲದ ಸರಣಿಯನ್ನು ಪಲ್ಲಿ ಎಂಬ ಸ್ಥಳದಲ್ಲಿ ಚಿತ್ರಿಸಲಾಯಿತು. ಮಾಲ್ವ, ಗುಜರಾತ್ ಮತ್ತು ಡೆಕ್ಕನ್‌ಗಳಿಗೆ ಮೊಗಲರ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದ್ದ ಜಸ್ವಂತ್ ಸಿಂಗನ (೧೬೩೮-೭೮)ಅಧಿಕಾರಾವಧಿಯಲ್ಲಿ ಮೊಗಲ್ ಶೈಲಿಯ ಚಿತ್ರಕಲೆಯು ಅಭಿವೃದ್ಧಿ ಹೊಂದಿತು. ಜೋಧಪುರ ಅರಮನೆಯ ಸಂಗ್ರಹಣದಲ್ಲಿ ಇವನ ಅನೇಕ ಭಾವಚಿತ್ರಗಳಿದ್ದವು.

ಸುಮಾರು ೧೭೬೦ ಮತ್ತು ೧೭೮೦ರಲ್ಲಿ ಮೊಗಲ್ ಪ್ರಭಾವವು ನಾಶವಾಗಿ ಜೋಧಪುರದ ಚಿತ್ರಕಲೆಯಲ್ಲಿ ರಜಪೂತ ವಸ್ತುಗಳು ಪ್ರಾಮುಖ್ಯತೆ ಹೊಂದಿದವು ಹಾಗೂ ಅವುಗಳು, ರೇಖಾತ್ಮಕ ಸಾಮರಸ್ಯ ಮತ್ತು ಅತಿ ಕಾಂತಿಯುಕ್ತ ಬಣ್ಣಗಳಿಂದ ಕೂಡಿದ್ದಾಗಿದ್ದವು. ಹೀಗೆ ಅನೇಕ ರಾಜರುಗಳ ಆಳ್ವಿಕೆಯಲ್ಲಿ ಈ ಕಲೆಯು ಅಭಿವೃದ್ಧಿ ಹೊಂದುತ್ತ ಹೋಯಿತು. ಅನಂತರ ಬಂದ ಜೋಧಪುರದ ಶೈಲಿಯನ್ನು ಆ ರಾಜ್ಯದ ಮಣ್ಣಿನ ಶುದ್ಧ, ನೈಜ ಮೂಲಸ್ಥಾನದಿಂದ ಬಂದಿದೆ ಎಂದು ತಿಳಿದಿದ್ದು, ಮಾನ್‌ಸಿಂಗನ (೧೮೦೩-೧೮೪೩) ಆಳ್ವಿಕೆಯ ಕಾಲದಲ್ಲಿ. ಈ ಚಿತ್ರಗಳಲ್ಲಿ ಕಣ್ಣು ಕೋರೈಸುವ ಬಣ್ಣಗಳಿದ್ದು, ಹಳದಿ, ನೀಲಿ ಮತ್ತು ಹಸಿರು ಬಣ್ಣಗಳನ್ನು ಹೇರಳವಾಗಿ ಉಪಯೋಗಿಸಲಾಯಿತು. ಸುರುಳಿಯಾದ ಮೋಡಗಳು ದಿಗಂತದಲ್ಲಿ ನಿರ್ವಿಕಾರವಾಗಿ ಇರುವಂತೆ ಕಾಣುವುದು ಈ ಶೈಲಿಯ ಲಕ್ಷಣಗಳಲ್ಲಿ ಒಂದು.

ಸುಮ

## ಟೆಂಪೆರಾ (Tempera)

ಮೊಟ್ಟೆ ಅಥವಾ ಯಾವುದೇ ಬಗೆಯ ಅಂಟಿನೊಡನೆ ಕೆಲವು ಕರಗುವ ಮತ್ತು ಕರಗದ ಬಣ್ಣಗಳನ್ನು ಬೆರೆಸಿ ತಯಾರಿಸುವ ವಿಶೇಷ ವರ್ಣಗಳ ಮಾಧ್ಯಮ ಟೆಂಪೆರಾ. ಈಜಿಪ್ಷಿಯನ್ನರು, ರೋಮನ್ನರು ಹಾಗೂ ಗ್ರೀಕರಿಂದ ಉಪಯೋಗಿಸಲ್ಪಟ್ಟ ಹಳೆಯ ಚಿತ್ರ ವಿಧಾನ. ಭಿತ್ತಿಚಿತ್ರಗಳ

ರಚನೆಗೆ, ಗೋಡೆಯ ಮೇಲೆ ಅಥವಾ ಪಟ್ಟಿಗಳ ಮೇಲೆ ಚಿತ್ರರಚನೆಗೆ ಉಪಯೋಗಿಸಬಹುದಾದಂತಹ ಮಾಧ್ಯಮ. ಮೊಟ್ಟೆ ಬೆರೆಸಿದ ಟೆಂಪೆರಾವನ್ನು ನೀರಿನಿಂದ ತೆಳುಗೊಳಿಸಿ ರಚಿಸಿದ ಚಿತ್ರಕ್ಕೆ ಹೊಳಪಿನ ಲೇಪನ ಮಾಡಿದರೆ ಅದು ಜಲವರ್ಣದಂತೆ ಕಾಣುತ್ತದೆ. ಬಣ್ಣಗಳನ್ನು ಬಿಳಿಬಣ್ಣ ಮಿಶ್ರಮಾಡಿ ಹಚ್ಚಿದರೆ ಆಗ ಪೇಸ್ಟೆಲ್‌ನ ನಾಜೂಕು ಕಂಡುಬರುತ್ತದೆ. ಮಾಧ್ಯಮದಲ್ಲಿನ ತೈಲದಂಶ ಹೆಚ್ಚಿಸಿದರೆ ತೈಲವರ್ಣದಂತಹ ಟೆಂಪೆರಾ ಸಿದ್ಧ! ಟರ್ಪೆಂಟೈನ್‌ನೊಡನೆ ಬಳಸಿದರೆ ತೈಲವರ್ಣದ ಛಾಪು ಲಭ್ಯ. ತೆಳುವಾಗಿ ಲೇಪಿಸಿದ ಟೆಂಪೆರಾ ಮೇಲೆ ವಾರ್ನಿಷ್‌ನ ಒಂದು ಪದರ ಲೇಪಿಸಿದರೆ ಅದು ತೈಲವರ್ಣಕ್ಕೆ ಅತ್ಯುತ್ತಮ ತಳಪಾಯ ನೀಡುತ್ತದೆ. ಜನಸಾಮನ್ಯರು ತೈಲವರ್ಣವೆಂದು ಭಾವಿಸುವ ಮಧ್ಯಯುಗದ ಅನೇಕ ಕೃತಿಗಳು ವಾಸ್ತವದಲ್ಲಿ ಮೇಲೆ ಹೇಳಿದಂತೆ ರಚಿಸಿದ ಟೆಂಪೆರಾಗಳೇ ಮೂಲತಃ ಹೊಳಪಿಲ್ಲದ ಟೆಂಪೆರಾಗಳಿಗೆ ವಾರ್ನಿಷ್ ಹೊಳಪು ನೀಡುವುದರ ಜೊತೆಗೇ ಬಣ್ಣಗಳಿಗೆ ವಿಶೇಷ ಆಳ ನೀಡುವುದೇ ಇದಕ್ಕೆ ಕಾರಣ. ನವಯುಗಾರಂಭದ ನಂತರ ತೈಲವರ್ಣಗಳತ್ತ ಒಲವು ಜಾಸ್ತಿಯಾಗುತ್ತಾ ಬಂದ ಮೇಲೆ ಟೆಂಪೆರಾದ ಅವನತಿ ಆರಂಭವಾಯ್ತು. ಪುನಃ ೧೯ನೆಯ ಶತಮಾನದಲ್ಲಿ ಈ ಮಾಧ್ಯಮದ ಪುನರುತ್ಥಾನಕ್ಕಾಗಿ ಪ್ರಯತ್ನ ನಡೆಸಿದುದು ಕಂಡುಬರುತ್ತದೆ.

೨೦ನೆಯ ಶತಮಾನದ ಕಲೆಯಲ್ಲಿ ಟೆಂಪೆರಾಗೆ ವಿಶೇಷಸ್ಥಾನಕೊಟ್ಟವನು ಆಂಡ್ರೂವೈತ್. ಆತನ ಚಿತ್ರ-ಕ್ರಿಸ್ಟಿನಾಸ್ ವರ್ಲ್ಡ್-ಅಮೂರ್ತ ಕಲೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ, ರಿಯಲಿಸ್ಟಿಕ್ ಮಾದರಿಯಲ್ಲಿದ್ದೂ ಅತ್ಯಂತ ಮೇರುಕೃತಿಯೆಂದು ಪರಿಗಣಿಸಲ್ಪಟ್ಟ ಹಿರಿಮೆಯುಳ್ಳದ್ದು. ಇವನ ಹಿಂಬಾಲಕರಲ್ಲಿ ಇಂದು ಜನಪ್ರಿಯನಾಗಿರುವ ರಾಬರ್ಟ್ ವಿಕರಿಯನ್ನೂ ಇಲ್ಲಿ ನೆನೆಯಬೇಕು.

ಟೆಂಪೆರಾದ ಹಲವು ವೈಶಿಷ್ಟ್ಯಗಳು: ೧) ಬೇರೆ ಬೇರೆ ಮಾಧ್ಯಮಗಳ ಅನುಕರಣೆ, ೨) ಪದರವಾಗಿ ಬಳಿಯುವಿಕೆ, ೩) ಹೊಳಪಿಲ್ಲದ ಮೇಲ್ಮೈ, ೪) ಬೇಗ ಒಣಗುವಿಕೆ, ೫) ಯಾವುದೇ ಆಧಾರದ ಮೇಲೆ ಬರೆಯಬಹುದಾದ ಸಾಮರ್ಥ್ಯ ಇತ್ಯಾದಿ. ಕಾಲ ಕ್ರಮೇಣ ಮಾಸಿ ಹೋಗುವುದು ಇದರ ದುರ್ಗುಣಗಳಲ್ಲಿ ಒಂದು. ಈ ಮಾಸುವಿಕೆ ಸಹ ನಿರ್ದಿಷ್ಟವಲ್ಲ. ಮತ್ತೆ ಮತ್ತೆ ಹಾಗೂ ಮೇಲಿಂದ ಮೇಲೆ ಲೇಪನ ಮಾಡಬೇಕಾಗುವ ಅವಶ್ಯಕತೆ ಇದಕ್ಕಿದೆ.

**ರಕಾ**

## ಟೆಚ್-ಇಸಂ(Tech-ism)

ಫ್ರೆಂಚ್‌ನ ಮೂಲ ಶಬ್ದವಾದ "ಟಚ್-ಇಸಂ"ನ ಆಂಗ್ಲಾರ್ಥಗಳಲ್ಲಿ spot, blotch, stroks, peck and sudden blow ಎಂದೂ ಬಳಕೆಯಾಗಿದೆ. ಇದು ೧೯೫೦ರ ಸುಮಾರಿಗೆ ಬಂದ, ಅಮೇರಿಕೆಯ ಚಿತ್ರಕಲಾ ಶೈಲಿಯ ಕೃತಿ ರಚನಾ ವಿಧಾನಕ್ಕೆ ಸಂಬಂಧಿಸಿದ್ದಾಗಿದೆ. "ಟಚ್‌ಇಸಂ" ತಂತ್ರ/ಶೈಲಿ ಅನಿರೀಕ್ಷಿತವಾಗಿ ಕಲಾಕೃತಿಗಳಲ್ಲಿ ಮೂಡಿಬಂದದ್ದು.

ತೇಪೆ ಹಚ್ಚಿದಂತೆ ಎಳೆದ ಬಣ್ಣಗಳ ಹೊಡೆತಗಳು, ಅಲ್ಲಲ್ಲಿ ಚೆಲ್ಲಿದ ಬಣ್ಣಗಳು, ಕಾಟುಚಿತ್ತಾದ ಆಕಾರಗಳನ್ನೇ ಸಾಂದರ್ಭಿಕ ರೂಪಗಳಾಗಿ, ವಸ್ತುಗಳನ್ನಾಗಿ ಬಳಸಿಕೊಂಡ ಈ ಹೊಸವಿಧಾನವಾದ ಟಚ್‌ಇಸಂ ಪ್ರಾರಂಭದಲ್ಲಿಯೇ ಎಲ್ಲರನ್ನೂ ತಲುಪಿತು. ಹೊಸ

ಚಾಲನೆಯನ್ನು ಪಡೆದ ಇದು ಯುರೋಪ್ ಹಾಗೂ ಅಮೆರಿಕಾಗಳಲ್ಲಿ ಅಬ್‌ಸ್ಟ್ರಾಕ್ಟ್ ಎಕ್ಸ್‌ಪ್ರೆಷನಿಸ್ಟರನ್ನು ಸರಿಗಟ್ಟಿತು.

ಅಪೂರ್ಣ ಕಲ್ಪನೆಯೊಂದಿಗೆ ಆಟವಾಡುವ ಬಣ್ಣಗಳ ನೇರ ತೇಪೆ, ರೇಖೆ ಇತ್ಯಾದಿಗಳನ್ನು ಮನಸ್ವೇಚ್ಛೆಯಾಗಿ ಚಿತ್ರಿಸುತ್ತಾ, ಅಮೂರ್ತ ಕಲ್ಪನೆಗಳಿಗೆ ಭಾಸವಾಗುವಂತಿರುವ ಚಿತ್ರಾಕೃತಿಗಳು 'ಟಚ್ಇಸಂ'ನ ಶೈಲಿಗೆ ಸೇರಿದಂಥವು.

ಜಾಕ್‌ಸನ್ ಪೊಲಕ್, ವ್ಯೂಲ್ಸ್, ಡಫೆಟ್ ಈ ಶೈಲಿಯ ಮೂಲ ಕಾರಣರು. ಅನಂತರ ಇವರೊಂದಿಗೆ ಸೇರಿದವರು ಹರ್ಟಂಗ್, ಮಿಟೆಕ್ಸ್ ಮುಂತಾದವರು.

"ಅರೆ ಮನಸ್ಸಿನ ವ್ಯಕ್ತ ಭಾವನೆಗಳ ಸ್ವರೂಪ, ರೂಪ ಪಡೆಯುವುದು ಹೊಸ ತುಡಿತಗಳ ಭರವಸೆ ಮತ್ತು ಅವ್ಯಕ್ತದಾಚೆಯ ಸೆಳೆವಿನಿಂದ" ಎಂಬುದರ ಆಧುನಿಕ ಸಂಪ್ರದಾಯ ತಂತ್ರವೇ ಈ 'ಟಚ್ಇಸಂ'.

**ಆರ್. ಎ. ಶಾ.**

## ಟೈಟೇನಿಯಂ ಬಿಳಿ (Titanium White)

ಟೈಟೇನಿಯಂ ಎಂಬ ಒಂದು ಬೂದು ಬಣ್ಣ ಲೋಹದ ಆಕ್ಸೈಡ್‌ನಿಂದ ತಯಾರಿಸಲಾದ ಜಿಗುಟು ಗುಣವುಳ್ಳ ಬಿಳಿಯ ಬಣ್ಣವನ್ನು ಟೈಟೇನಿಂಯ ವೈಟ್ ಎಂದು ಕರೆಯಲಾಗುತ್ತದೆ. ಚಿತ್ರವೇದಿಕೆ(Ground)ಯ ತಯಾರಿಕೆಯಲ್ಲಿ ಟೈಟೇನಿಯಂ ಬಿಳಿ ಬಣ್ಣವನ್ನು ಬಳಸುವದರಿಂದ ವೇದಿಕೆಯು ಗಟ್ಟಿಯಾಗಿ ಬಣ್ಣಗಳ ಮೂಲ ಉಜ್ವಲತೆಯನ್ನು ಬಟ್ಟೆಯಾಗಲೀ, ಗೋಡೆ, ಕಟ್ಟಿಗೆ ಮುಂತಾದವುಗಳ ಮೇಲ್ಮೈಗಳು ಹೀರಿಕೊಳ್ಳಲಾರವು. ಟೈಟೇನಿಯಂ ಬಿಳಿಬಣ್ಣವು ಸ್ಥಿರತೆ, ಸಾಂದ್ರತೆ(Opacity) ಮತ್ತು ಶಕ್ತಿಗಳಿಂದಾಗಿ ಹೆಚ್ಚು ಉಪಯುಕ್ತವಾಗಿದೆ.

ಬಿಳಿಬಣ್ಣದ ಪಿಂಗಾಣಿಗಳ ತಯಾರಿಕೆಯಲ್ಲಿಯೂ ಬಿಳಿಪ್ಲಾಸ್ಟಿಕ್ ವಸ್ತುಗಳ ಉತ್ಪಾದನೆಯಲ್ಲಿಯೂ ಬಳಸಲಾಗುವ ಟೈಟೇನಿಯಂ ಬಿಳಿಬಣ್ಣವನ್ನು ಟೈಟಾನಿಕ್ ಆಸಿಡ್, ಟೈಟಾನಿಕ್ • ಆಕ್ಸೈಡ್, ಝಿಂಕ್ ಆಕ್ಸೈಡ್, ಟೈಟಾನಿಯಾ ಆಕ್ಸೈಡ್ ಎಂದೂ ಕರೆಯಲಾಗುತ್ತದೆ.

**ಶಾ.ಪಿ.**

## ಠಂಕಾ ಚಿತ್ರಪಟಗಳು

'ಠಂಕಾ' ಇದು ತಿಬೇಟಿನ ಒಂದು ಚಿತ್ರಸುರುಳಿ(Scroll) ಆಧ್ಯಾತ್ಮಿಕ ಉದ್ದೇಶಕ್ಕಾಗಿ ರಚಿಸಲಾಗುವ ಚಿತ್ರಪಟ ಅವರು ಇದನ್ನೊಂದು ಧರ್ಮಗ್ರಂಥವೆಂಬಂತೆ ಕಾಣುತ್ತಾರೆ. ಆದರೂ ಠಂಕಾ ಚಿತ್ರಗಳು ತಮ್ಮ ಕಲಾತ್ಮಕ ಚಿತ್ರಣ, ವರ್ಣವಿನ್ಯಾಸ, ಚಿತ್ರ ಸಂಯೋಜನೆ ಇತ್ಯಾದಿಗಳಿಂದ ನೋಡುಗರನ್ನು ಆಕರ್ಷಿಸಬಲ್ಲವು. ಠಂಕಾ ಚಿತ್ರಕಾರರು ತಲೆಮಾರುಗಳಿಂದ ಈ ಕಲೆಯನ್ನು ಸಾಂಪ್ರದಾಯಿಕವಾಗಿ ಬೆಳೆಸಿಕೊಂಡು ಬಂದಿದ್ದಾರೆ. ಈ ಚಿತ್ರಕಾರರು ಆಕೃತಿ-ಹಾಗೂ ಪ್ರತಿಮಾಲಕ್ಷಣ ಶಾಸ್ತ್ರಕ್ಕನುಗುಣವಾಗಿ ಇಲ್ಲಿನ ಚಿತ್ರಗಳನ್ನು ಧ್ಯಾನಕ್ಕೆ ನೆರವಾಗಿರುವಂತೆ

ಕೌಶಲದಿಂದ ಸಂಯೋಜಿಸಿರುತ್ತಾರೆ. ಆಧ್ಯಾತ್ಮಿಕ ಉದ್ದೇಶಕ್ಕಾಗಿ ಬಳಸಿಕೊಳ್ಳುವ ಈ ಚಿತ್ರ ತಿಬೇಟಿಯನ್ನರು ಒಬ್ಬ ಕಲಾವಿದನು ಬರೆದ ಕೇವಲ ಚಿತ್ರವೆಂದು ಭಾವಿಸದೆ ಅದನ್ನು ಪವಿತ್ರಾತ್ಮರು ಕಂಡ ದರ್ಶನ ಹಾಗೂ ಅದರ ಚಿತ್ರಣವೆಂದು ಭಾವಿಸುತ್ತಾರೆ. ಅದಕ್ಕಾಗಿಯೇ ಈ ಚಿತ್ರರಚನೆಗಳನ್ನು ತುಂಬಾ ಗೌರವದಿಂದ ಕಾಣುತ್ತಾರೆ.

ತಿಬೇಟಿಯನ್ನರು ಠಂಕಾ ಚಿತ್ರಗಳನ್ನು ಮನಸ್ಸಿನ ಏಕಾಗ್ರತೆಗಾಗಿ, ಧ್ಯಾನಕ್ಕಾಗಿ ಬಳಸುತ್ತಾರೆ. ಸಾಧಕನ ಆಂತರ್ಯದ ಕಣ್ಣನ್ನು ತೆರೆಯಿಸುವ, ವಿಕಸಿಸುವ ಕಾರ್ಯವನ್ನವು ಮಾಡುತ್ತವೆ. ಇವು ಆಧ್ಯಾತ್ಮಿಕ ರಹಸ್ಯವನ್ನು ಬಿಂಬಿಸುವ ಕೃತಿಗಳಾಗಿರುವುದರಿಂದ ಇವುಗಳನ್ನು ಯಾವಾಗಲೂ ತೆರೆದೇ ಇಟ್ಟಿರುವುದಿಲ್ಲ. ಧ್ಯಾನದ ಸಮಯದಲ್ಲಿ ಮಾತ್ರ ತೆರೆದಿದ್ದು ಇನ್ನುಳಿದ ಸಮಯುದಲ್ಲಿ ಚಿತ್ರದ ಮೇಲೆ ರೇಶಿಮೆಯ ಹೊದಿಕೆಯೊಂದನ್ನು ಹಾಕಿರುತ್ತಾರೆ.

ತಿಬೇಟದಲ್ಲಿ ಬೌದ್ಧ ಧರ್ಮದ ಆಶ್ರಯದಲ್ಲಿ ಠಂಕಾ ಚಿತ್ರಗಳ ಪರಂಪರೆ ಬೆಳೆದು ಬಂದಿದೆ. ಠಂಕಾದಲ್ಲಿ ಚಿತ್ರಿಸಲಾದ ಚಿತ್ರಗಳಲ್ಲಿ ಭಾರತದ ೮೪ಜನ ಮಹಾಸಿದ್ಧರ ಮತ್ತು ೧೬ಜನ ಅರ್ಹತರ ಜೀವನದ ಕಥಾನಕಗಳನ್ನು ಹಾಗೆಯೇ ಬೌದ್ಧ ಜಾತಕಗಳಲ್ಲಿ ಬರುವ ಬೋಧಿಸತ್ವನ ಜೀವನದ ದೃಷ್ಟಾಂತಗಳನ್ನು ಚಿತ್ರಿಸಲಾಗಿರುತ್ತದೆ.

ಸು.೧೪-೧೫ನೆಯ ಶತಮಾನದಷ್ಟು ಪ್ರಾಚೀನತೆ ಹೊಂದಿದ ಠಂಕಾ ಚಿತ್ರಗಳು ಕಲಾದೃಷ್ಟಿಯಿಂದಲೂ ಬಹಳಷ್ಟು ಮಹತ್ವವನ್ನು ಪಡೆಯುತ್ತವೆ. ಅಂತರಿಕ ಧ್ಯಾನಕ್ಕೆ ಕೊಠಡಿಯೊಳಗೆ ಹಾಕಿಕೊಳ್ಳುವ ಚಿಕ್ಕ ಅಳತೆಯ 'ಠಂಕಾ'ಗಳಿಂದ ಹಿಡಿದು, ಬಹುಮಹಡಿಯ ಕಟ್ಟಡಗಳ ಮೇಲಿನಿಂದ ಇಳಿಬಿಡುವಂತಿರುವ ४೦, ೫೦ ಅಡಿ ಎತ್ತರಗಳವರೆಗಿನ 'ಠಂಕಾ'ಗಳೂ ರಚನೆಯಾಗುತ್ತವೆ. ದೊಡ್ಡ ಅಳತೆಯ ಚಿತ್ರಣಗಳಲ್ಲಿ ಸಾಧಿಸುವ ತಾಳಮಾನ(Proportionate) ಅನನ್ಯವಾದುದು.

**ಬಿ. ಕೆ. ಹಿ.**

## ಡ್ರಾಯಿಂಗ್ ಬೋರ್ಡ್

ರೇಖನ ಫಲಕ ಗಟ್ಟಿಮುಟ್ಟಾದ ನೀಳಚೌಕಾಕಾರವಾಗಿರುತ್ತದೆ. ಕಲಾವಿದನು ವರ್ಣಚಿತ್ರ ಅಥವಾ ರೇಖಾಚಿತ್ರ ರಚಿಸುವಾಗ ಆಧಾರವಾಗಿ ಇರಿಸಿಕೊಳ್ಳುವ ಫಲಕ. ಸಾಮಾನ್ಯವಾಗಿ ಚಿತ್ರವನ್ನು ಫಲಕಕ್ಕೆ ಗುಂಡು ಸೂಜಿಗಳಿಂದ ಅಥವಾ ಕ್ಲಿಪ್‌ಗಳಿಂದ ಜೋಡಿಸಲಾಗುತ್ತದೆ.

ಇದು ಚಿತ್ರಕಲಾವಿದರಿಗಿಂತ ಇಂಜನಿಯರಿಂಗ್ ವಿದ್ಯಾರ್ಥಿಗಳ ತಾಂತ್ರಿಕ(technical) ಚಿತ್ರಣಗಳಿಗೆ ಹೆಚ್ಚು ಪ್ರಯೋಜನಕಾರಿಯಾಗಿದೆ. ಬೋರ್ಡ್ ಒಂದು ಬದಿಗೆ ವಿಶೇಷವಾದ ಪಟ್ಟಿಯನ್ನು ಹೊಂದಿದ್ದು, T ಆಕಾರದ ಪಟ್ಟಿ(scale) ಇರಿಸಿಕೊಂಡು ಸಮಾನಾಂತರ ರೇಖೆಗಳನ್ನು ಎಳೆಯಲು ಬರುವಂತೆ ಬೋರ್ಡ್‌ನ್ನು ಪರಿಪೂರ್ಣವಾಗಿ ರೂಪಿಸಿರುತ್ತಾರೆ. ಬೋರ್ಡ್‌ಗೆ ಬಳಸುವ ಮರವನ್ನು ಋತುಮಾನಕ್ಕೆ ಹೊಂದುವಂತೆ ಪರಿಷ್ಕರಿಸುತ್ತಾರೆ(seasoned). ಈಚೆಗೆ ಕೃತಕ ಮರದ ಹಲಗೆಯಿಂದಲೂ ರೂಪಿಸುತ್ತಿದ್ದಾರೆ.

**ಮರಿ**

## ಡಿ ಸ್ಟಿಲ್(Di still)

ಹಾಲೆಂಡ್‌ನಲ್ಲಿ ತಿಯೋವಾನ್ ಡೆಸ್‌ಬರ್ಗ್ ಎಂಬಾತನಿಂದ ೧೯೧೭ರಲ್ಲಿ ಆರಂಭವಾದ ಗುಂಪು. ಪಿಯೆಟ್ ಮಾಂಡ್ರೈನ್‌ನ ನಿಯೋ ಪ್ಲಾಸ್ಟಿಸಿಸಂನ್ನೂ ಒಳಗೊಂಡಂತೆ ಜನಸಾಮಾನ್ಯರಿಗೆ ಹೊಸಕಲೆಯ ಪರಿಜ್ಞಾನ ಮೂಡಿಸಲು ಹೊರಡಲ್ಪಡುತ್ತಿದ್ದ ಪತ್ರಿಕೆಯ ಹೆಸರಿನಿಂದಾಗಿ ಆ ಹೆಸರು ಬಂದಿತು. ಮೊದಲು ಕೆಲವು ವರ್ಷಗಳು ಮಾಂಡ್ರೇನ್ ಸ್ವತಃ ಪತ್ರಿಕೆಯನ್ನು ಹೊರಡಿಸುತ್ತಿದ್ದನು. ಆದರಲ್ಲಿ ಸೃಜನಶೀಲತೆ, 'ಬಣ್ಣವಲ್ಲದ' ಕಪ್ಪು ಬಿಳುಪು ಹಾಗೂ ಬೂದಿ ಬಣ್ಣಗಳ ಉಪಯೋಗ, ಉದ್ದ, ಅಡ್ಡಗೆರೆ ಮತ್ತು ಚೌಕಗಳ ಔಚಿತ್ಯ ಕುರಿತಂತೆ ಬರೆಯುತ್ತಿದ್ದ. ಹುಸ್ಸಾರ್, ಡೆರ್‌ಲೆಕ್, ವಾಂಟೋಂಗರ್‍ರೂ ಇತರ ಪ್ರಮುಖರು. ವಾನ್‌ಡೆಸ್‌ಬರ್ಗ್ ೧೯೨೩ರಲ್ಲಿ ಮಾಂಡ್ರೇನ್ ಕುರಿತಂತೆ ವಿಶೇಷ ಲೇಖನ ಪ್ರಕಟಿಸಿದ್ದ. ಆದರೆ ಅದೇ ವರ್ಷ ಆತ ಎಲಿಮೆಂಟೇರಿಸ್ಮ್ ಎಂಬ ಹೊಸ ಪಂಥ ಪ್ರಾರಂಭಿಸ ಹೋಗಿ ಆತ ಹಾಗೂ ಮಾಂಡ್ರೇನ್‌ನ ನಡುವೆ ವಿರಸವಾರಂಭವಾಯ್ತು. ೧೯೨೮ರಲ್ಲಿ ಪತ್ರಿಕೆ ನಿಂತಿತು. ಅಷ್ಟರಲ್ಲಿ ಆದರ ಅನುಯಾಯಿಗಳೂ ಚೆಲ್ಲಾಪಿಲ್ಲಿಯಾದ್ದರಿಂದ ಈ ಚಳವಳಿ ಸ್ಥಗಿತಗೊಂಡಿತು. ೧೯೩೧ರಲ್ಲಿ ವಾನ್‌ಡೆಸ್‌ಬರ್ಗ್‌ನ ಹೆಂಡತಿ ಅಗಲಿದ ತನ್ನ ಪತಿಯ ನೆನಪಿಗಾಗಿ ಒಂದು ವಿಶೇಷ ಸಂಚಿಕೆ ತರುವುದರೊಂದಿಗೆ ಅದು ಸಂಪೂರ್ಣ ಇತಿಹಾಸದಲ್ಲಿ ಲೀನವಾಯ್ತು. ಪ್ರಸಕ್ತ ಗುಂಪು ಹಾಗೂ ಪತ್ರಿಕೆ ಮಾಡಿದ ಹಲವು ಮುಖ್ಯಕಾರ್ಯಗಳಲ್ಲಿ ಒಂದು ಹಲವಾರು ಹೊಸ ಪರಿಚಯ ಮಾಡಿದುದು. ಇವರಲ್ಲಿ ಮಾನ್ ರೇ, ಕುರ್ಟ್ ಸ್ಚಿಟ್ಟರ್ಸ್, ಶಾನ್ ಆರ್ಪ್ ಮುಂತಾದವರೂ ಸೇರಿದ್ದರು.

ರಕಾ

## ತಂಜಾವೂರು

ತಮಿಳುನಾಡಿನ ತಂಜಾವೂರು ಕ್ರಿಸ್ತಶಕ ೯ ರಿಂದ ೧೨ನೇ ಶತಮಾನದವ೬. ಚೋಳರ ರಾಜಧಾನಿಯಾಗಿ ಪ್ರಸಿದ್ಧಿ ಪಡೆದಿತ್ತು. ಇಲ್ಲಿಯ ಬೃಹದೀಶ್ವರ ರಾಜರಾಜ ಚೋಳನ ಕಲ್ಪನೆಯಾಗಿದ್ದು (೧೦೧೦) ಹೆಸರಿಗೆ ತಕ್ಕಂತೆ ಇಲ್ಲಿಯ ಲಿಂಗ, ನಂದಿ, ಮಂಟಪಗಳು, ಗೋಪುರ ಎಲ್ಲವೂ ಬೃಹದಾಕಾರವಾಗಿಯೇ ಇವೆ. ಗರ್ಭಗೃಹದ ಮೇಲೆ ಚೌಕಾಕಾರದ ತಳದಿಂದ ಚೂಪಾಗುತ್ತಾ ಹೋಗಿ ಮೇಲಿನ ಅಮಲಕದಲ್ಲಿ ಸೇರಿಕೊಳ್ಳುವ ಗೋಪುರ ದಕ್ಷಿಣ ಭಾರತದಲ್ಲಿಯೇ ಅಪೂರ್ವವಾದುದು. ಗರ್ಭಗೃಹದ ಸುತ್ತಲೂ ಎರಡೂ ಬದಿಯ ಗೋಡೆಗಳಲ್ಲಿ ಚೋಳರ ಕಾಲದ ಭಿತ್ತಿಚಿತ್ರಗಳಿದ್ದು ಅವುಗಳ ಮೇಲೆ ನಾಯಕರ ಕಾಲದಲ್ಲಿ ಮತ್ತೆ ಚಿತ್ರ ರಚಿಸಿದ್ದು ಮೇಲಿನ ಪದರದ ಚಿತ್ರಗಳನ್ನು ತೆಗೆದುಹಾಕಿ ಕೆಳಗಿನ ಮೂಲ ಚಿತ್ರಗಳನ್ನು ಉಳಿಸಿಕೊಳ್ಳಲಾಗಿದೆ. ತ್ರಿಪುರ ಸಂಹಾರ, ಸುಂದರ ನಂದಿಯ ವಿವಾಹ, ಅಡಿಗೆ ಇತ್ಯಾದಿಗಳ ತಯಾರಿಕೆಯಲ್ಲಿರುವ ಸಾಮಾನ್ಯ ಜನರು, ದೇವ ಕನ್ಯೆಯರ ನರ್ತನ, ವಾದ್ಯಗಾರರು ಇತ್ಯಾದಿಗಳಲ್ಲದೆ ಸ್ವತಃ ರಾಜರಾಜ ತನ್ನ ಗುರು ಕರುವರೂರ್ ಜೊತೆ ಇರುವ ಭಾವಚಿತ್ರವೂ ಇದೆ. ಕೆಲವು ಗಾರೆಯ ಶಿಲ್ಪಗಳಿದ್ದು ಬಣ್ಣದಿಂದ ಅಲಂಕರಿಸಿದೆ.

ಪಾರ್ವತಿ ದೇವಾಲಯದ ಮುಖ ಮಂಟಪದಲ್ಲಿ ವಿಜಯನಗರ ಕಾಲದ ಹಾಗೂ ತೀರಾ ಹೊರ ಪ್ರಾಕಾರದ ಗೂಡುಗಳಲ್ಲಿ ನಾಯಕರ ಕಾಲದ ಶಿವ ಪುರಾಣಕ್ಕೆ ಸಂಬಂಧಿಸಿದ

ಹಲವಾರು ಭಿತ್ತಿಚಿತ್ರಗಳಿವೆ. ಊರೊಳಗಿರುವ ನಾಯಕರ ಅರಮನೆ ಕಲಾತ್ಮಕವಾಗಿದೆಯಲ್ಲದೆ ವಸ್ತ್ರಾಪಹರಣ ಇತ್ಯಾದಿ ಭಿತ್ತಿಚಿತ್ರಗಳಿವೆ. ಬಳಿಯ ಸರಸ್ವತಿ ಮಹಲ್‌ನಲ್ಲಿರುವ ಹಸ್ತ ಪ್ರತಿಗಳಲ್ಲಿ ಚಿತ್ರಕಲೆಯಿರುವುದಲ್ಲದೆ ಬಿಡಿ ಚಿತ್ರಗಳೂ ಇವೆ. ರಾಜ ಶರಭೋಜಿ(೧೮ನೇ ಶತಮಾನ) ಗಿಡ, ಮರ, ಪಶು ಪ್ರಾಣಿಗಳ ಚಿತ್ರಗಳನ್ನು ವಿವರ ಸಹಿತ ಬರೆಸಿ ಪುಸ್ತಕ ರೂಪದಲ್ಲಿ ಇರಿಸಿದ್ದ. ತಂಜಾವೂರು ಶೈಲಿಯ ಸಾಂಪ್ರದಾಯಕಲೆ ಇಲ್ಲಿ ಬೆಳೆದು ಬಂದು ಇಂದಿಗೂ ಆ ಶೈಲಿಯಲ್ಲಿ ರಚಿಸುವವರು ಇಲ್ಲಿದ್ದಾರೆ. ಈ ಬಗೆಯ ರಚನೆ ಕಲಿಸುವ ಶಾಲೆ ಸಹ ಇಲ್ಲಿದೆ.

**ಎಚ್. ಜ.**

## ತಂತ್ರಕಲೆ

ವಿಶಾಲವಾದ ಸಾಂಪ್ರದಾಯಿಕ ಮತ್ತು ಧಾರ್ಮಿಕ ನಂಬಿಕೆಯಿಂದ ಹುಟ್ಟಿದ ಅಥವಾ



ಜಿ. ಆರ್. ಸಂತೋಷ್

ಅಭೌತಿಕ ಅಥವಾ ಆಧ್ಯಾತ್ಮಿಕ ಮಹೋನ್ನತಿಯ ಒಂದು ನಡೆವಳಿಕೆಯೇ ಈ ತಂತ್ರ. ಸಕಲ ಜ್ಞಾನಗಳನ್ನು ಸ್ವೀಕರಿಸಿ, ಗ್ರಹಿಸಬಲ್ಲ ತತ್ವವೊಂದರ ಪ್ರತಿನಿಧಿ, ಮನೋನಿಗ್ರಹದೊಂದಿಗೆ, ಇಡೀ ಶರೀರವನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವ ಕಲೆಯನ್ನು ಒಳಗೊಂಡಿರುವಂತಹುದು ಹಾಗೂ ವಾಕ್ ಮತ್ತು ಮನಸ್ಸುಗಳನ್ನು ಪರಿಪೂರ್ಣದೆಡೆಗೆ (ಶಿವ ಮತ್ತು ಶಕ್ತಿಯ ಅಥವಾ ಲಿಂಗ ಮತ್ತು ಯೋನಿಯ ಸಂಯೋಗದಿಂದ ಉಂಟಾಗುವ ಜ್ಞಾನೋದಯಕ್ಕೆ, ಆತ್ಮ ಮುಕ್ತಿಯ ಕಡೆಗೆ) ಒಯ್ಯುವಂತಹ ದಾರಿಯಾಗಿದೆ. ಶಿವ ಶುದ್ಧವಾದ ಅಚಲತೆಯ ಪ್ರತೀಕವಾಗಿ ಕಟ್ಟಕಡೆಯ ನಿಜವಾದ ಸ್ಥಾಯಿ ಮೂರ್ತಿಯಾದರೆ, ಶಕ್ತಿ ಜಗತ್ತಿನ ವೇದಾತ್ಮಕ ಚಲನಶಕ್ತಿಯಾಗಿ ಅಂತಿಮ ಸತ್ಯವಾಗುತ್ತಾಳೆ. ಕೆಲವು ಕಲಾವಿದರ ಆಲೋಚನೆಗಳು ಬೇರೆ ಬೇರೆ. ಆದರೂ ಅವರ ಕಲಾಕೃತಿಗಳಲ್ಲಿ ತಂತ್ರದ ಶೈಲಿ ಕಂಡು ಬರುತ್ತದೆ. ಕೆಲವರು ಉಪನಿಷತ್ ಚಿಂತನೆಗಳನ್ನು, ಮಂತ್ರ, ಜ್ಯೋತಿಷ್ಯಶಾಸ್ತ್ರ, ಸ್ತ್ರೀ-ಪುರುಷರ ಸಂಯೋಗಗಳನ್ನು ತಮ್ಮ ಚಿತ್ರಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಕೆಲವು ಕಲಾವಿದರು ಜ್ಯಾಮಿತಿಯ ಆಕೃತಿಗಳಿಂದ ಆಕಾರಗಳನ್ನು ಸೃಷ್ಟಿಸಿ, ತಂತ್ರದ ಸಂಕೇತಗಳಲ್ಲಿ ಚಿತ್ರಿಸಿದ್ದಾರೆ, ಮೂಲ ಬಣ್ಣಗಳಾದ ಕೆಂಪು, ನೀಲಿ, ಹಳದಿ, ಹಸಿರು, ಕಪ್ಪು ಮತ್ತು ಬಿಳುಪುಗಳನ್ನು ಹೆಚ್ಚಾಗಿ ಉಪಯೋಗಿಸಿದ್ದಾರೆ.

ತಂತ್ರದ ಮೂಲ ಕಲ್ಪನೆಯಾದ ಶಿವ ಮತ್ತು ಶಕ್ತಿಯ ವಿಚಾರಗಳಿಂದ ಇದು ಕೂಡಿರುತ್ತದೆ. ಈ ವರ್ಗದ ಪ್ರತಿಯೊಬ್ಬ ಕಲಾವಿದನೂ ತನ್ನದೇ ಆದ ರೀತಿಯಲ್ಲಿ ಜಗತ್ತಿನ ಗೂಢತೆಯನ್ನು ವಿಭವಾನ್ವಿತವಾದ ಪ್ರಸಂಗವನ್ನು ಆಧ್ಯಾತ್ಮಿಕತೆಯ ದೃಷ್ಟಿಯಿಂದ ಕಂಡು ತನ್ನ ಅನುಭವಗಳನ್ನು ಮತ್ತೆ ಫಲಕದಲ್ಲಿ ಮೂಡಿಸುವಲ್ಲಿ ಪ್ರತಿಯೊಬ್ಬರೂ ಭಿನ್ನವಾಗಿದ್ದಾರೆ ಹಾಗೂ ಅವರ ಕ್ರಿಯಾತ್ಮಕ ಶಕ್ತಿ ಉನ್ನತ ಮಟ್ಟದ್ದಾಗಿರುತ್ತದೆ. ಜೆ. ಸ್ವಾಮಿನಾಥನ್, ಕೆ. ಸಿ. ಎಸ್. ಪಣಿಕ್ಕರ್, ಬಿರೆನ್‌ಡೇ, ಜಿ. ಆರ್. ಸಂತೋಷ್, ಕೆ. ವಿ. ಹರಿದಾಸನ್ ಮುಂತಾದವರು ತಂತ್ರಕಲೆಯ ಪ್ರಮುಖ ಕಲಾವಿದರು.

**ಎನ್.ಬಿ.ಹೇ.**

## ತಾಳೆಗರಿ ಚಿತ್ರಗಳು

ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಬೆಳೆಯುವ ಒಂದು ಮರದ ಎಲೆ ತಾಳೆಗರಿ. ಇದರಲ್ಲಿ ತಾಳ, ಶ್ರೀ ತಾಳ ಎಂದು ಎರಡು ವಿಧ. ತಾಳದ ಎಲೆ ಅಥವಾ ಗರಿಯು ಸ್ವಲ್ಪ ಚಿಕ್ಕದು ಅಂದರೆ ಒಂದೂವರೆ ಅಂಗುಲ ಅಗಲ, ಒಂದು-ಒಂದೂವರೆ ಅಡಿ ಉದ್ದವಾಗಿರುತ್ತದೆ. ಶ್ರೀ ತಾಳವು ಎರಡು ಎರಡೂವರೆ ಅಂಗುಲ ಅಗಲ ಎರಡು-ಮೂರು ಮೂರುವರೆ ಅಡಿ ಉದ್ದವಾಗಿರುತ್ತದೆ. ಭಾರತದಲ್ಲಿ ತಾಳೆಗರಿಯು ಬಹಳ ಪ್ರಾಚೀನ ಕಾಲದಿಂದಲೂ ಬರವಣಿಗೆಯ ಸಾಮಗ್ರಿಯಾಗಿ ಬಳಕೆಗೊಂಡಿದೆ. ಉತ್ತರ ಭಾರತದಲ್ಲಿ ಭೂರ್ಜ ಎಂಬ ಮರದ ಎಲೆಯ ಮೇಲೆ ಕುಂಚದಿಂದ ಬರೆಯುತ್ತಾರೆ.

ತಾಳೆಗರಿಗಳನ್ನು ವಿಶೇಷವಾಗಿ ಬರವಣಿಗೆಗಾಗಿಯೇ ಉಪಯೋಗಿಸಿದ್ದರೂ ಅದರಲ್ಲಿ ಚಿತ್ರ.-ವರ್ಣಚಿತ್ರರಚನೆಗಳೂ ಇವೆ. ತಾಳೆಗರಿಗಳಲ್ಲಿನ ಚಿತ್ರ ರಚನೆಗಳು ಎರಡು ಪ್ರಕಾರದವು. ಒಂದು - ಚೂಪಾದ ಸಾಧನ (ಕಂಟ)ದಿಂದ ಗೀರಿ ರಚಿಸುವುದು. ಇನ್ನೊಂದು ಕುಂಚದ ಸಹಾಯದಿಂದ ಬರೆದುದು. ಉತ್ತರ ಭಾರತದಲ್ಲಿ ದೊರಕುವ ಜೈನ, ಬೌದ್ಧ ಭೂರ್ಜಪತ್ರ

ಗ್ರಂಥಗಳು ವಿಶೇಷವಾಗಿ ಕುಂಚದಿಂದ ಬರೆದವುಗಳು. ಮೂಡಬಿದರೆಯ, ಧವಳ, ಶ್ರೀಧವಳ, ಮಹಾಧವಳಗಳಲ್ಲಿ ಚಿತ್ರಗಳಿದ್ದು, ಈ ಜೈನ ಗ್ರಂಥಗಳು ಕನ್ನಡ ನಾಡಿನಲ್ಲಿ ದೊರಕಿದ ಅಪರೂಪದ ಗ್ರಂಥಗಳಾಗಿವೆ.

ಚೂಪಾದ ಸಾಧನ ಕಂಟದಿಂದ ಗೀರಿ ರಚಿಸಿದ ಚಿತ್ರಗಳಲ್ಲಿ ವರ್ಣವೈವಿಧ್ಯಕ್ಕೆ ಆಸ್ಪದವಿಲ್ಲ. ಗರಿಗಳ ಮೇಲೆ ವರ್ಣಗಳನ್ನು ಲೇಪಿಸಿ ಚಿತ್ರಿಸಿದವುಗಳಲ್ಲ ವರ್ಣ ವೈವಿಧ್ಯ, ವರ್ಣವಿನ್ಯಾಸ ಕಂಡು ಬರುತ್ತದೆ. ತಾಳೆಗರಿಯ ಮೇಲೆ ಜಲವರ್ಣಗಳನ್ನು ಆವರಣ ಫಲಕಗಳ ಮೇಲೆ ಜಲ ಹಾಗೂ ತೈಲ ವರ್ಣಗಳನ್ನು ಬಳಸಿ ಚಿತ್ರ ರಚಿಸಿದ್ದು ಕಂಡು ಬರುತ್ತದೆ. ದಕ್ಷಿಣ ಭಾರತದಲ್ಲಿ ಕಂಟದಿಂದ ಗಿರಿ ಬರೆದ ಚಿತ್ರರಚನೆಗಳೇ ವಿಶೇಷ. ಗೀರಿದ ಎಲೆಯ ಮೇಲೆ ಕಪ್ಪು ಲೇಹ್ಯ ಲೇಪಿಸುವ ಮೂಲಕ ಚಿತ್ರಗಳು ಸ್ಫುಟಗೊಳ್ಳುವಂತೆ ಮಾಡಲಾಗುತ್ತದೆ. ಇದಲ್ಲದೆ ತಾಳೆ ಎಲೆಯ ಮೇಲೆ ಕೈವಾರ ಬಳಸಿ ಅನೇಕ ಬಗೆಯ ನಮೂನೆಗಳನ್ನು ರಚಿಸುವುದುಂಟು

**ಬಿ.ಕೆ.ಹಿ.**

## ತಿದ್ದು ಕಾಗದ(Tracing)

ಕರ್ಪೂರ ತೈಲ ಮುಂತಾದವುಗಳಿಂದ ತಯಾರಿಸಿದ ಪಾರದರ್ಶಕ ಕಾಗದವನ್ನು ಮೂಲಚಿತ್ರವೊಂದರ ಮೇಲಿರಿಸಿ ಚಿತ್ರದ ಪ್ರತಿಯನ್ನು ತೆಗೆದುಕೊಳ್ಳುವದನ್ನು ಟ್ರೇಸಿಂಗ್ ಎಂದು ಕರೆಯಲಾಗುತ್ತದೆ. ಹೀಗೆ ಪಾರದರ್ಶಕ ಕಾಗದದ ಮೇಲೆ ಮೂಡಿಸಿಕೊಂಡ ಚಿತ್ರವನ್ನು ಬೇರೆ ಕಾಗದ ಇಲ್ಲವೆ ಚಿತ್ರವೇದಿಕೆಗೆ ವರ್ಗಾಯಿಸಿಕೊಂಡು ಮೂಲಚಿತ್ರದ ಯಥಾವತ್ ಪ್ರತಿಯನ್ನು ಚಿತ್ರಿಸಲಾಗುತ್ತದೆ. ಇದಕ್ಕೂ ಮುನ್ನ ತಿದ್ದು ಕಾಗದದ ಮೇಲೆ ಮೂಲ ಚಿತ್ರವನ್ನು ಮೂಡಿಸಿಕೊಂಡಾದ ನಂತರ ತಿದ್ದು ಕಾಗದದ ಹಿಂಬದಿಯಲ್ಲಿ ಇದ್ದಲು(Charcoal) ಇಲ್ಲವೆ ಸೀಸದಕಡ್ಡಿಯಿಂದ ತಿಕ್ಕಿ ತಿದ್ದುಕಾಗದದ ಮೇಲೆ ಮೊದಲು ಮೂಡಿಸಿಕೊಂಡ ರೇಖೆಗಳನ್ನೇ ಮತ್ತೊಮ್ಮೆ ತೀಡಿ ಹೊಸ ಚಿತ್ರವೇದಿಕೆಯ ಮೇಲೆ ಮೂಡಿಸಿಕೊಳ್ಳಬೇಕಾಗುತ್ತದೆ.

**ಶಾ.ದಿ.**

## ತಿರುಚನಾಪಳ್ಳಿ

ಇಲ್ಲಿನ ಉಚ್ಚೈಪಿಳ್ಳೆಯಾರ್ ದೇವಾಲಯ (ಉನ್ನತ ಗಣಪತಿ) ಪ್ರಸಿದ್ಧ ಶಿಲಾಶೃಂಗದ ಮೇಲಿದೆ ಅದನ್ನು ತಲುಪುವ ಮೊದಲು ಒಂದು ಶಿವಾಲಯವಿದ್ದು ಅದರಲ್ಲಿ ಪುರಾತನ ಭಿತ್ತಿಚಿತ್ರಗಳಿವೆ. ದೇವಾಲಯದ ಸುತ್ತಣ ಗೋಡೆಯಲ್ಲಿ ಶ್ರೀ ಶಂಕರರ ಸೌಂದರ್ಯ ಲಹರಿ ಸ್ತೋತ್ರ ಕಂಡರಿಸಿದ್ದಾರೆ.

ಕಲ್ಲಿನಲ್ಲಿ ಕಂಡರಿಸಿರುವ, ದಕ್ಷಿಣಾಭಿಮುಖವಾದ ಒಂದು ಉತ್ಕೃಷ್ಟ ದೇವಾಲಯ ಒಂದನೆಯ ಮಹೇಂದ್ರವರ್ಮ ಇದನ್ನು ಕಟ್ಟಿಸಿದನೆಂಬುದನ್ನು ಇಲ್ಲಿರುವ ಶಾಸನವು ಸಮರ್ಥಿಸುತ್ತದೆ. ದೃಢವಾದ ಗುಹೆ. ಸಾಮಾನ್ಯವಾಗಿ ಇರುವಂತೆ, ಘನಾಕೃತಿ, ಅಷ್ಟದಳಾಕೃತಿಗಳ ಕಂಭಸಾಲು, ಮೇಲ್ಭಾಗ-ಕೆಳಭಾಗಗಳು ಕಮಲಗಳಿಂದಲಂಕೃತ ಹಾಗೂ ಗೋಡೆಯಿಂದ ಹೊರ ಚಾಚಿಕೊಂಡು ಭಾರ ಹೊತ್ತ ಕಲ್ಲು- ಬೋದಿಗೆಗಳು ಇವೆ.

ಮುಖ್ಯ ದೇವಸ್ಥಾನ ಖಾಲಿಯಿದೆ. ಮಂಟಪದ ಮೂಡಣದ ಗೋಡೆಯಲ್ಲಿ ಹೊಂದಿದೆ. ಎದುರಿನ ಭಿತ್ತಿಯಲ್ಲಿ ಅದ್ಭುತಾಕಾರದ ಶಿವಮೂರ್ತಿ, ಗಂಗಾಧರನಾಗಿ ಮೇಲಿಂದ ತೆರೆತೆರೆಯಾಗಿ ಬೀಳುತ್ತ, ಇಳಿಬಿದ್ದ ದಟ್ಟ ಕಪ್ಪುಕೂದಲೊಳಗಿನಿಂದ ಹರಿಯುತ್ತಿರುವ ದೇವನದಿಗಂಗೆಯನ್ನು ಕಾಣಬಹುದು ಶಿವನ ಬಲಪಾದ ಒಬ್ಬ ಕುಬ್ಜನ ಮೇಲಿದೆ. ಶಿವನ ಒಂದು ತೋಳು ತೊಡೆ ಮೇಲೆ, ಇನ್ನೊಂದು ಒಂದು ಹಾವನ್ನು ಹಿಡಿದಿದೆ. ಮೂರನೆ ತೋಳು, ಕೇಶರಾಶಿಯನ್ನು ಹಿಡಿದಿದೆ. ನಾಲ್ವರು ಶಿವನನ್ನು ಆರಾಧಿಸುತ್ತಿದ್ದಾರೆ. ಇಬ್ಬರು ಮಾನವರು, ಇನ್ನಿಬ್ಬರು ದೇವತೆಗಳಿದ್ದು. ಮಾನವರು ನೆಲದಲ್ಲಿ ಮಂಡಿಯೂರಿದ್ದಾರೆ. ದೇವತೆಗಳು ಗಾಳಿಯಲ್ಲಿ ತೇಲುತ್ತಲಿದ್ದಾರೆ. ಒಂದು ಕೈ ಸೊಂಟದಲ್ಲಿ, ಇನ್ನೊಂದು ಆರಾಧಿಸುತ್ತಿರುವ ಭಂಗಿಯಲ್ಲಿ ಗುಡಿಗೆ ಪ್ರವೇಶದಲ್ಲಿಯೇ ಬೃಹದಾಕಾರದ ದ್ವಾರಪಾಲಕರಿದ್ದಾರೆ. ಈ ಗುಹಾಲಯವನ್ನು ಪಲ್ಲವರ ಕಾಲದಲ್ಲಿ ಕಂಡರಿಸಿದ್ದು ಗರ್ಭಗುಡಿಯಲ್ಲಿ ಶಿಲ್ಪಕ್ಕೆ ಬದಲು ಚಿತ್ರಗಳಿದ್ದವೆಂಬುದು ವಿದ್ವಾಂಸರ ಊಹೆ.

ನಿಕನಾ

## ತಿರುವನಂತಪುರ

ಇಲ್ಲಿನ ಪದ್ಮನಾಭಸ್ವಾಮಿ ದೇವಾಲಯ ತುಂಬ ಪ್ರಸಿದ್ಧ. ಕೇರಳೀಯ ಶೈಲಿ ವಿಜಯನಗರದ ವಾಸ್ತು, ಎರಡರ ಸಂಮಿಶ್ರಣ. ಪಲ್ಲವರ ಕಾಲದಿಂದ ತಮಿಳು ದೇಶವಿಡೀ ಈ ಶೈಲಿಯು ಕಾಣಬರುವಂಥದು.

ಪೂರ್ವಕಾಲದ ಚೋಳರ ಗೋಪುರಗಳಂತೆಯೇ ಪದ್ಮನಾಭಸ್ವಾಮಿಯ ದೇವಾಲಯದ ಗೋಪುರ, ಒಂದು ಬೃಹತ್ ಪುಷ್ಕರಿಣಿಯ ಸನಿಹದಲ್ಲಿದೆ. ತಮಿಳುನಾಡಿನ ಇತರ ಸಮಕಾಲೀನ ಗೋಪುರಗಳಿಗಿಂತ, ಈ ಗೋಪುರ ಕಿರಿದು. ಉದಾಹರಣೆಗೆ: ಮಧುರೆಯ ಗಗನಚುಂಬಿ ಗೋಪುರಶೃಂಗ, ಉದ್ದನೆಯ ಮಂಟಪಮಾರ್ಗ, ಹಜಾರ ತಾರಸಿ ಛಾವಣಿಯೊಡಗೂಡಿದ ವಿಮಾನದಿಂದ ಗರ್ಭಗುಡಿತನಕ ಸ್ಥಂಭಗಳು ಉತ್ತಮ ಕೆತ್ತನೆಯವು. ತೈಲದೀಪ ಹಿಡಿದ ಕನ್ಯೆಯು ಸಹಜ ಚಿತ್ರಣ ಸೊಗಸಾದ್ದು. ಹಜಾರದಾಚೆ, ಒಂದು ಸ್ವರ್ಣ ಧ್ವಜಸ್ತಂಭ. ಮೇಲ್ಭಾಗದಲ್ಲಿ ವೈನತೇಯ. ಕುಲಶೇಖರರ ಹೆಸರಲ್ಲಿರುವ ಒಂದು ಸುಂದರ ಮಂಟಪ ಹಜಾರದ ಅನಂತರವಿದೆ. ಶಿಲ್ಪ, ಭಿತ್ತಿಚಿತ್ರ ಸುಂದರವಾದವು. ಮೂರು ಬಾಗಿಲುಗಳಿಂದ ಪದ್ಮನಾಭಸ್ವಾಮಿಯ ದರ್ಶನ. ಮುಂಭಾಗದಿಂದ, ನಾಭಿ, ವಿಷ್ಣುಪಾದ ಶೇಷಶಾಯಿ ವಿಷ್ಣು, ಪದ್ಮನಾಭನ ಪ್ರತೀಕ,ಇತರ ಕಿರುಮಂದಿರಗಳು, ಶ್ರೀಕೃಷ್ಣ ಕ್ಷೇತ್ರಪಾಲ, ಶಾಸ್ತ, ನೃಸಿಂಹ, ಶಿವ, ಗಣೇಶ, ರಾಮ, ವೇದವ್ಯಾಸರವು. ಪ್ರತ್ಯೇಕವಾಗಿರುವ ಕಲ್ಯಾಣ ಮಂಟಪದ ಕಂಬಗಳ ಮೇಲಿನ ಶಿಲ್ಪಗಳು ಅದ್ಭುತವಾದವು. ಸರಳ ಸುಂದರವಾದ ಕಂಡರಣೆ ಶಿಲ್ಪ ಕಲಾಕೃತಿಗಳಲ್ಲಿ ಉತ್ಕೃಷ್ಟ ಮಾದರಿಗಳಲ್ಲಿ ಒಂದಾಗಿದೆ. ದೇವಾಲಯದ ಹಿಂಬದಿಯಲ್ಲಿ ರವಿವರ್ಮನನ್ನು ಅನುಕರಿಸಿದ ಹಲವಾರು ಭಿತ್ತಿಚಿತ್ರಗಳಿವೆ.

ರವಿವರ್ಮನ ನೆಲವೀಡಾಗಿದ್ದ ತಿರುವನಂತಪುರದಲ್ಲಿ ಆತನ ಹೆಸರಿನಲ್ಲಿರುವ 'ಚಿತ್ರಾ ಕಲಾ ಗ್ಯಾಲರಿ'ಯಲ್ಲಿ ಆತನ ಅನೇಕ ಮೂಲಕೃತಿಗಳ ಸಂಗ್ರಹವಿದೆ. ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿ ಸಮಕಾಲೀನ ಕಲಾವಿದರ ಕೃತಿಗಳನ್ನು ನೋಡಬಹುದು.

ನಿಕನಾ

## ತ್ರಿಚೂರು

ಈಶ್ವರನ ಬೃಹತ್ ದೇವಾಲಯಕ್ಕೆ ಹೆಸರಾದ ಸ್ಥಳ- ವಡಕ್ಕುನಾಥದೇವಾಲಯವೆಂದು ಕರೆಯುತ್ತಾರೆ. ಕ್ಷೇತ್ರ ಪಾವಿತ್ರ್ಯದಿಂದಾಗಿ, ಈ ದೇವಾಲಯವನ್ನು "ತೆಂಕೈಲಾಸ"-ದಕ್ಷಿಣದ ಕೈಲಾಸ"ವೆಂದೂ ಕರೆಯುವುದಿದೆ.

ಶಿವಾಲಯ- ಶ್ರೀಕೋಯಿಲ್-ಪಡುವಣದಭಿಮುಖವಾಗಿದ್ದು ವಿಸ್ತರವಾದೊಂದು ಪೌಳಿಯೊಳಗಡೆ ಇದೆ. ಪ್ರಮುಖವಾಗಿ, ಎದ್ದು ಕಾಣುವ ಗೋಪುರಗಳು. ಮುಖ್ಯ ದೇವಾಲಯಕ್ಕೆ ಹೊಂದಿಕೊಂಡಂತೆ, ರಾಮ, ಶಂಕರನಾರಾಯಣ, ಶ್ರೀಕೃಷ್ಣ, ನಂದಿಕೇಶ್ವರ, ಪರಶುರಾಮ, ಶಾಸ್ತ (ಸ್ವಾಮಿ ಐಯ್ಯಪ್ಪನ ಗುಡಿ)ರಿಗಾಗಿ ಇರುವ ಸಣ್ಣ ಗುಡಿಗಳು.

ಇಡೀ ದೇವಾಲಯದ ಕಟ್ಟಡವು ಆಕರ್ಷಣೀಯವೆನಿಸುವುದು, ಇಲ್ಲಿನ ಅಧ್ಭುತ ದೀಪಾಲಂಕಾರ ಸೊಗಸಿಂದ. ಸೊಡರು ಬೆಳಗಿದಂತೆ, ದೀಪ ಮಾಲೆ, ಇಡಿಯ ಆವರಣವೇ ಒಂದು ದಿವ್ಯ ಕಾಂತಿಯಂತೆ ಪ್ರಕಾಶಿಸುತ್ತದೆ. ದೇವಾಲಯದೊಳಗಡೆ ಒಂದು ದೊಡ್ಡ ನಾಟ್ಯಶಾಲೆ-ರಂಗಭೂಮಿ- ಕುಟ್ಟಂಬಳ. ಇಲ್ಲಿ ಕೇರಳದ ಸಾಂಪ್ರದಾಯಿಕ ನಾಟಕಗಳಾಡುತ್ತಾರೆ. ಕುಟ್ಟಂಬಳಂ ಮಾಳಿಗೆಯ ಚಿತ್ರಾಲಂಕಣದಂತ ಕೇರಳದ ಮರಗೆಲಸದ ಕೆತ್ತನೆಕಾರರ ಪ್ರತಿಭೆಯನ್ನು ಸ್ಪಷ್ಟಪಡಿಸುತ್ತದೆ ವಡಕ್ಕುನಾಥಾಲಯ ತುಂಬ ಪುರಾತನದ್ದು. ಆದರೂ (ಅದ್ವೈತ ತತ್ವ ಬೋಧಿಸಿದ ಆದಿಶಂಕರರ ಬದುಕಿಗೂ ಸಂಬಂಧಿಸಿದುದು) ಈಗಿರುವ ಕಟ್ಟಡ ೧೧.೧೨ನೇ ಶತಮಾನದ್ದು ಎನ್ನಬಹುದು.

ಮರಗೆಲಸ, ಚಿತ್ರಗಳು, ಅಲಂಕರಣ, ಅದರಲ್ಲೂ ಮುಖ್ಯವಾದ ಎರಡು ದೊಡ್ಡಫಲಕ ಮನಸೆಳೆಯುತ್ತದೆ. ಶಿವನು ನಟರಾಜನಾಗಿ, ವಿಷ್ಣುಶೇಷನಾರಾಯಣನಾಗಿ ಒಟ್ಟಿಗೆ ತೋರಿಬರುವಂಥವು. ಒಂದು ಕ್ರಿಯಾತ್ಮಕ, ಶಕ್ತಿಯುತ, ಇನ್ನೊಂದು ಸ್ಥಿತಿಪಾಲಕ, ಸ್ಥಾಯಿಭಾವ. ಭಗವಂತ ಸೃಷ್ಟಿ-ಸ್ಥಿತಿ-ಲಯ ಕಾರಕನೆಂಬ ಮೂರು ಕಾರ್ಯಗಳನ್ನೂ ಕಲಾತ್ಮಕ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಿವೆ.

ನಿಕೃನಾ

## ತುಮಕೂರು

ತುಮಕೂರು ನಗರದ ಕೆರೆ ಕೋಡಿಯ ಬಳಿಯ (ಇಂದಿನ ಬಳಪದ ಕಾರ್ಖಾನೆ ಬಳಿ) ನರಸಿಂಹಸ್ವಾಮಿ ದೇವಾಲಯದ ಪಕ್ಕದಲ್ಲಿ ಹಲವಾರು ಅಂಕಣದ 'ಯೋಗ ಗೃಹ'ವೊಂದಿದ್ದು ಅದರಲ್ಲಿ ಒಂದು ಕಾಲದಲ್ಲಿ ಇಡಿ ಗೃಹದ ತುಂಬೆಲ್ಲಾ ಚಿತ್ರ ರಚಿಸಿದ ಕುರುಹು ಕಂಡು ಬರುತ್ತದೆ. ಇಂದು ಎರಡು ಕೋಣೆಗಳಲ್ಲಿ ಮಾತ್ರ ಅಲ್ಲಲ್ಲಿ ಚಿತ್ರಗಳು ಉಳಿದುಕೊಂಡು ಬಂದಿದೆ. ಹಲವಾರು ಭಾವ ಭಂಗಿಗಳಲ್ಲಿ ತಪಸ್ಸು ಮಾಡುತ್ತಿರುವ ಋಷಿಗಳ ಸಮೂಹ ಉದ್ದವಾದ ನದಿ, ಅದರೊಳಗೆ ಹಲವಾರು ಜಲಚರಗಳು, ದಡದ ಮೇಲೆ ಕಾಮಧೇನು, ರಥ, ಗಿಡಮರಗಳು ಇತ್ಯಾದಿಗಳನ್ನು ಗುರುತಿಸಬಹುದು. ಒಳ ಕೋಣೆಯಲ್ಲಿ ಶೃಂಗಾರ ಪರವಾದ ಹಲವಾರು ಚಿತ್ರಗಳಿವೆ. ಮೂಲತಃ ಇದು ಶಿಬಿಯ ದೇವಾಲಯ ರೂಪಿಸಿದ ನಲ್ಲಪ್ಪನ ವಾಸಗೃಹವಾಗಿದ್ದು ಶಿಬಿಯ ಚಿತ್ರಗಳಿಗಿಂತ ಮೊದಲೇ ಎಂದರೆ ಸುಮಾರು ೧೭೮೦ರ ವೇಳೆಯಲ್ಲಿ ಈ ಚಿತ್ರಗಳನ್ನು ರಚಿಸಿದ್ದಿರಬಹುದು.

ಅಲನ

## ತೈಲಚಿತ್ರ


ರಾಜ ರವಿವರ್ಮ

ತೈಲಚಿತ್ರ ರಚನೆ ಪ್ರಾರಂಭವಾದುದು ಹದಿನೈದನೇ ಶತಮಾನದ ಪ್ರಾರಂಭದಲ್ಲಿ. ಆಗ ಕ್ಯಾನ್ವಾಸ್ ಬಟ್ಟೆಯ ಮೇಲೆ ಸುಣ್ಣ ಅಥವಾ ಪ್ಲಾಸ್ಟರ್ ಆಫ್ ಪ್ಯಾರಿಸನ್ನು ಲೇಪಿಸುತ್ತಿದ್ದರು. ಮೊಟ್ಟೆಯ ಬಿಳಿಯ ಭಾಗದೊಂದಿಗೆ ಬಣ್ಣವನ್ನು ಬೆರೆಸಿ ಕಲಾಕೃತಿಯನ್ನು ರಚಿಸುತ್ತಿದ್ದು, ಇದನ್ನು ಟೆಂಪೆರಾ ಎಂದು ಕರೆಯುತ್ತಿದ್ದರು. ಇದರ ಮೇಲೆ ಮೆರುಗೆಣ್ಣೆಯನ್ನು ಲೇಪಿಸಿದರೆ ತೈಲಚಿತ್ರ ಸಿದ್ಧವಾಗುತ್ತಿತ್ತು. ೧೯ನೆಯ ಶತಮಾನದವರೆಗೂ ಚಿತ್ರವನ್ನು ಒಂದು ಬಣ್ಣದಲ್ಲಿ ರಚಿಸಿ ಅದರ ಮೇಲೆ ಪಾರದರ್ಶಕ ಹೊಳಪು ಕೊಡುವ ಬಣ್ಣವನ್ನು ಲೇಪಿಸುತ್ತಿದ್ದರು.

ತೈಲಚಿತ್ರ ರಚನೆಯ ಪ್ರಾರಂಭದಲ್ಲಿ ವರ್ಣದ್ರವ್ಯದ ಪುಡಿಯನ್ನು ಅಮೃತ ಶಿಲೆಯ ಮೇಲೆ ಅರೆದು ಅದಕ್ಕೆ ಸ್ವಲ್ಪ ತೈಲವನ್ನು ಸೇರಿಸಿ, ಬೇಕಾದ ತೈಲವರ್ಣವನ್ನು ತಯಾರಿಸಿಕೊಳ್ಳುತ್ತಿದ್ದರು. ಈಗ ತೈಲವರ್ಣ ಟ್ಯೂಬುಗಳಲ್ಲಿ ದೊರೆಯುತ್ತದೆ. ಬಣ್ಣವನ್ನು ತೆಳು ಮಾಡಿಕೊಳ್ಳಲು ಟರ್ಪೆಂಟೈನ್ ಮತ್ತು ಲಿನಿಸಿಡ್ ಆಯಿಲನ್ನು ಉಪಯೋಗಿಸುತ್ತಾರೆ. ತೈಲವರ್ಣ ಆರುವುದು ನಿಧಾನ ಹಾಗೂ ಬೇಡವಾದ ವರ್ಣವನ್ನು ತೆಗೆದು, ಬೇರೆ ಬಣ್ಣವನ್ನು ಉಪಯೋಗಿಸಬಹುದು. ಕಲಾವಿದ ತನಗೆ ಬೇಕಾದ ರೀತಿಯಲ್ಲಿ, ತೆಳುವಾಗಿ, ಪಾರದರ್ಶಕವಾಗಿ ಇಲ್ಲವೆ ಮಂದವಾಗಿಯೂ ಉಪಯೋಗಿಸಬಹುದು. ತೈಲಚಿತ್ರಗಳು ಬಹಳ ಕಾಲದವರೆಗೂ ಇರುತ್ತವೆ.

ತೈಲಚಿತ್ರಗಳ ಪರಿಚಯ ಭಾರತಕ್ಕೆ ಮಧ್ಯಯುಗದಿಂದಲೇ ಆದಂತೆ ಕಂಡುಬರುತ್ತದೆ. ಮೋಘಲರ ಕಾಲದಲ್ಲಿ ಬಂದ ವಿದೇಶೀ ಪ್ರವಾಸಿಗರು ಅಲ್ಲಿಂದ ತಂದ ಚಿತ್ರಣಗಳಲ್ಲಿ ತೈಲ

ಚಿತ್ರಗಳೂ ಇದ್ದಿರಬಹುದು. ನಂತರದ ಕಾಲದಲ್ಲಿ ಭಾರತದಲ್ಲಿದ್ದ ವಿದೇಶೀ ಕಲಾವಿದರು ತೈಲವರ್ಣದಲ್ಲಿ ಚಿತ್ರಿಸಿರುವುದನ್ನು ಗೋವಾ ಮುಂತಾದೆಡೆಗಳಲ್ಲಿ ಇಂದಿಗೂ ಕಾಣಬಹುದು. ಭಾರತೀಯ ಕಲಾವಿದರಲ್ಲಿ ರವಿವರ್ಮನಿಂದ ತೈಲಚಿತ್ರರಚನೆ ವ್ಯಾಪಕವಾಗಿ ಆರಂಭಗೊಂಡಿತೆಂದು ಹೇಳಬಹುದು.

**ಮರಿ**

## ತೊಗಲುಗೊಂಬೆ



ಜಗತ್ತಿನ ಜನಪದ ವರ್ಣಚಿತ್ರಕಲಾ ಪ್ರಪಂಚಕ್ಕೆ ಭಾರತದ ಅಮೂಲ್ಯ ಕೊಡುಗೆ ಈ ತೊಗಲುಗೊಂಬೆ ಚಿತ್ರಕಲೆ. ಇದರ ಮುಂದುವರಿದ ರೂಪವೇ ಇಂದಿನ ಚಲನಚಿತ್ರ, ದೂರದರ್ಶನಗಳೆನ್ನಬಹುದು. ತೆರೆಯ ಹಿಂದೆ ವರ್ಣರಂಜಿತ ಮಾಯಾ ಲೋಕವನ್ನು ಸೃಷ್ಟಿಸುವ ಅದ್ಭುತ ಕೈ ಚಳಕದ ಈ ಕಲೆ, ಕೇವಲ ಒಬ್ಬ ವ್ಯಕ್ತಿಗೆ, ಸೀಮಿತವಾಗಿರದೆ ಇಡೀ ಕುಟುಂಬದ ಜನರನ್ನು ತೊಡಗಿಸಿಕೊಳ್ಳುವ ಜನ ಸಮುದಾಯದ ಕಲೆಯಾಗಿದೆ. ತೊಗಲಿನಲ್ಲಿ ವಿವಿಧ ರೀತಿಯ ಚಿತ್ರಗಳನ್ನು ಕೊರೆದು, ವಿವಿಧ ರೀತಿಯ ವರ್ಣಲೇಪನಮಾಡಿ, ರಂಗದ ಮೇಲೆ ರಾತ್ರಿ ಹೊತ್ತು ದೀಪದ ಬೆಳಕಿನಲ್ಲಿ ಹಿಂದೆ ವಾದ್ಯಮೇಳದೊಂದಿಗೆ ವಿವಿಧ ಕಥಾನಕಗಳನ್ನು ಆಡಿಸುವ ಆಟವೇ ತೊಗಲುಗೊಂಬೆಯಾಟವಾಗಿದೆ.

ಕರ್ನಾಟಕದಲ್ಲಿ ಈ ತೊಗಲು ಗೊಂಬೆಯ ಚಿತ್ರಗಳನ್ನು ಉಪಯೋಗಿಸಿ ಆಟವಾಡಿಸುವ ವಿಶೇಷ ಜನಾಂಗವೊಂದಿದ್ದು ಅವರನ್ನು "ಕಿಳ್ಳೇ ಕ್ಯಾತ'ರೆಂದು ಕರೆಯುತ್ತಾರೆ. ಇವರ ಆಟವನ್ನು "ಕಟಬರಾಟ," "ಗೊಂಬೆಯಾಟ," "ಕಿಳ್ಳಿಕ್ಯಾತರಾಟ," "ಚಿತ್ರಮರಾಠಿಗರಾಟ," "ಕಥಾನಾಯಕರಾಟ," "ತೋಲು ಮೊಮ್ಮಲಾಟ"ವೆಂದು ಪ್ರಸಿದ್ಧವಾಗಿದೆ.

ಮಹಾರಾಷ್ಟ್ರದಲ್ಲಿ "ಕಟಪುತಲಿ," ತಮಿಳಿನಲ್ಲಿ "ಸೂತ್ರಬೊಮ್ಮೈ" ಮಲೆಯಾಳಂನಲ್ಲಿ "ಪಾವೈಕ್ಕೊತ್ತು", ಆಂಧ್ರದಲ್ಲಿ "ತೋಲುಬೊಮ್ಮಲಾಟ," ಕೇರಳದಲ್ಲಿ "ತೋಲುಪವಕೂತು," ಒರಿಸ್ಸಾದಲ್ಲಿ "ರಾವಣಛಾಯಾ," ಎಂದು ಕರೆದರೆ ಪ್ರಪಂಚದಾದ್ಯಂತ ಈ ಆಟವನ್ನು "ನೆರಳಾಟ"(ಶ್ಯಾಡೊಪಪೆಟ್ ಶೋ)ವೆಂದು ಕರೆಯುತ್ತಾರೆ. ಚೀನಾ, ಭಾರತ, ಥೈಲಾಂಡ್, ಮಲೇಷಿಯಾ ಇಂಡೋನೇಷಿಯಾ, ಪರ್ಶಿಯಾ, ಟರ್ಕಿ, ಇಟಲಿ, ಜರ್ಮನಿ, ಗ್ರೀಸ್, ಫ್ರಾನ್ಸ್ ದೇಶಗಳಲ್ಲಿ ಇಂಥ ನೆರಳು ರಂಗಭೂಮಿಯೂ ಕಂಡು ಬರುತ್ತದೆ.

ತೊಗಲುಗೊಂಬೆಯ ಚಿತ್ರಕಲೆಯಾಟ ಅಪ್ಪಟ ಜನಪದ ಮೂಲದಿಂದ, ಜನಪದೀಯ ಅಂಶಗಳಿಂದ ಕೂಡಿ ಬೆಳೆದು ಬಂದಿದೆ. ಮೇಕೆ, ಕುರಿ, ಎಮ್ಮೆ, ಕತ್ತೆ ಹಾಗೂ ಒಂಟೆಯ ಚರ್ಮವನ್ನು ಉಪಯೋಗಿಸಿ ಈ ತೊಗಲುಗೊಂಬೆ ಚಿತ್ರಗಳನ್ನು ರಚಿಸಲಾಗುತ್ತದೆ. ಇಲ್ಲಿ ಕೆಂಪು, ಕಪ್ಪು, ಹಳದಿ, ನೀಲಿ, ಹಸಿರು, ಮದರಂಗಿ ಬಣ್ಣವನ್ನು ಬಳಸಲಾಗುತ್ತದೆ. ಹಳ್ಳಿಗಳಲ್ಲಿ ಮಳೆಗಾಲ ಹೊರತುಪಡಿಸಿ, ಈ ಆಟವನ್ನು ರಾತ್ರಿಯಿಡಿ ದೀಪದ ಬೆಳಕಿನಲ್ಲಿ ಪ್ರದರ್ಶನ ಮಾಡುತ್ತಾರೆ.

ಕರ್ನಾಟಕದ ತೊಗಲುಗೊಂಬೆಯ ಚಿತ್ರಗಳಲ್ಲಿ ಎರಡು ರೀತಿಯ ವಿಂಗಡಣೆಯನ್ನು ಮಾಡಬಹುದಾಗಿದೆ. ಒಂದು ಉತ್ತರ ಕರ್ನಾಟಕದ 'ಬಡಗಲಪಾಯದ ತೊಗಲುಗೊಂಬೆ ಚಿತ್ರಗಳು' ಇನ್ನೊಂದು ಹಳೆಯ ಮೈಸೂರು ಭಾಗದ 'ತೆಂಕಲ ಪಾಯದ ತೊಗಲು ಗೊಂಬೆಯ ಚಿತ್ರಗಳು'. ಈ ತೊಗಲು ಗೊಂಬೆಯ ಚಿತ್ರಗಳು ಮಕ್ಕಳು, ದೊಡ್ಡವರು, (ಪುರುಷ, ಸ್ತ್ರೀ) ಪ್ರಾಣಿಗಳು, ಪಕ್ಷಿಗಳು ಹೀಗೆ ನಿಸರ್ಗದ ದೃಶ್ಯಗಳು, ಯುದ್ಧದ ದೃಶ್ಯಗಳು, ಬಿಲ್ಲು ಬಾಣದಂತಹ ವಸ್ತು ವೈವಿಧ್ಯತೆಗಳ ಚಿತ್ರಗಳು ಇವೆ. ಈ ಚಿತ್ರಗಳು ದೇವಾಧಿದೇವತೆಗಳ ದಶಾವತಾರ, ರಾಮಾಯಣ, ಮಹಾಭಾರತ, ಸಾಮಾಜಿಕ ಹಿನ್ನೆಲೆಯ ಕಥೆಗಳಿಗೆ ಅನುಸಾರವಾಗಿ ಈ ಚಿತ್ರಗಳು ರಚನೆಗೊಂಡಿವೆ.

ಪರದೆಯ ಹಿಂದಿನ ಬೆಳಕಿನಲ್ಲಿರುವ ಚಿತ್ರಗಳು, ಪರದೆಯ ಮುಂಭಾಗದ ಪಾರದರ್ಶಕ ನೆರಳಾಗಿ ಪ್ರೇಕ್ಷಕರಿಗೆ ಕಾಣಿಸಿಕೊಳ್ಳುತ್ತವೆ. ಗೊಂಬೆ ಆಡಿಸುವವರು ಪಾತ್ರಕ್ಕೆ ತಕ್ಕಂತೆ ಗೆಜ್ಜೆನಾದ ಮಾತಿನ ಚಕಮುಖಿ ಸಂಗೀತದ ಮೇಳವು ಈ ಕಲೆಗೆ ಜೀವಂತಿಕೆಯ ಸ್ವರೂಪವನ್ನು ತುಂಬಿದೆ.

**ಎಸ್. ಸಿ. ಪಾ.**

## ತೋರಣಗಳು

ತೋರಣಗಳು ಸಾಮಾನ್ಯವಾಗಿ ವಾಸ್ತುಶಿಲ್ಪದ ಅಂಗಗಳಾಗಿರದೆ ಅಲಂಕಾರ ಭಾಗಗಳಾಗಿರುತ್ತವೆ. ಭಿತ್ತಿ, ಕಂಬ, ದ್ವಾರಬಂಧ ಇತ್ಯಾದಿಗಳ ಮೇಲೆ ಕಂಡುಬರುವ ಕಮಾನು ಅಥವಾ ಪಟ್ಟಿಕೆಯ ರೀತಿಯ ಅಲಂಕರಣವೇ 'ತೋರಣ'- ವಿಶೇಷವಾಗಿ ಮಂಟಪ, ಗರ್ಭಗೃಹ ಇತ್ಯಾದಿಗಳ ಬಾಗಿಲವಾಡ ಅಥವಾ ದ್ವಾರಬಂಧಗಳನ್ನು ತೋರಣಗಳಿಂದ ಅಲಂಕರಿಸಲಾಗಿರುತ್ತದೆ. ಈಶಾನ ಶಿವಗುರು ಪದ್ಧತಿ ಹಾಗೂ ತಂತ್ರಸಮುಚ್ಚಯಗಳಲ್ಲಿ 'ಪತ್ರತೋರಣ' 'ಮಕರ ತೋರಣ' ಮತ್ತು 'ಚಿತ್ರ ತೋರಣ'ಗಳೆಂಬ ಮೂರು ಮುಖ್ಯ ವಿಧವಾದ ತೋರಣಗಳ ಬಗ್ಗೆ ವಿವರ ಬಂದಿದೆ. ಅರ್ಧಚಂದ್ರ, ಬಳ್ಳಿಯ ಸಾಲು, ಪುಷ್ಪ ಎಲೆಗಳನ್ನು ಕೆತ್ತಿದ್ದರೆ 'ಪತ್ರತೋರಣ'ವೆನಿಸಿ ಕೊಳ್ಳುತ್ತದೆ. ಪಕ್ಷಿಗಳು, ಮೊಸಳೆತಲೆ ಇತ್ಯಾದಿ ಮಿಶ್ರಾಲಂಕಾರದಿಂದ ಕೂಡಿದ್ದರೆ ಚಿತ್ರತೋರಣವೆಂದು ಕರೆಯಲಾಗುತ್ತದೆ. ಮಕರಗಳನ್ನೂ ಐದು ತಿರುವುಗಳನ್ನು ಕೆತ್ತಿದ್ದರೆ 'ಮಕರತೋರಣ'ವಾಗುತ್ತದೆ ರಾಜ್ಯತ್ವಕ್ಕೆ ಇದೊಂದು ಲಾಂಛನವೆಂದು ಭಾವಿಸಲಾಗಿದೆ. ಗರ್ಭಗೃಹ ಅಥವಾ ಅಂತರಾಳದ ಬಾಗಿಲಿನ ಎರಡೂ ಕಡೆ ದ್ವಾರಪಾಲಕರನ್ನು ಗಂಗೆ ಯಮುನೆಯರನ್ನು ಶಿಲ್ಪದಲ್ಲಿ ಕಡೆದು ನಿಲ್ಲಿಸಲಾಗುತ್ತಿತ್ತೆಂಬದನ್ನೂ, ಇದು ಒಮ್ಮೊಮ್ಮೆ ಮಕರತೋರಣದ ಅಂಗವಾಗಿತ್ತೆಂಬುದನ್ನು ಗಮನಿಸಬೇಕಾದ ಅಂಶ. ಈ ಮಕರ ತೋರಣಗಳನ್ನು ಚಿನ್ನ, ಬೆಳ್ಳಿ ಮುಂತಾದ

ಲೋಹಗಳಲ್ಲಿ ಮೂಡಿಸಿ ದೇವಾಲಯಗಳಿಗೆ ಅಲಂಕಾರ ವಸ್ತುಗಳಿಂದ ದಾನಮಾಡುತ್ತಿದ್ದುದಕ್ಕೆ ಶಾಸನಾಧಾರಗಳಿವೆ. ಮೀನುಗಳು, ಸರ್ಪಗಳು, ದೇವತೆಗಳು, ಉಪದೇವತೆಗಳು, ಋಷಿಗಳು ಇತ್ಯಾದಿಗಳ ಕಿರು ಶಿಲ್ಪಗಳನ್ನೂ ತೋರಣಗಳ ಅಲಂಕಾರಕ್ಕಾಗಿ ಬಳಕೆಯಾಗಿದ್ದು ದೇವಾಲಯದ ಭೂಷಣಕ್ಕೆ ಕಾರಣವಾಗಿವೆ.

**ಪಿ.ಎ.ಕೆ.**

## ದಖ್ಖನಿ ಚಿತ್ರಗಳು

ಗುಲ್ಬರ್ಗವನ್ನು ಕೇಂದ್ರವಾಗಿರಿಸಿಕೊಂಡು ೧೩೪೭ರಲ್ಲಿ ಮಹಮದ್ದೀಯ ಅರಸು ಮನೆತನವೊಂದು ರಾಜ್ಯಾಡಳಿತ ಆರಂಭಿಸಿತು. ಮಹಮದ್ ಶಹನ ಕಾಲದಲ್ಲಿ (೧೪೮೨-೧೫೧೮) ಈ ಸಾಮ್ರಾಜ್ಯ ಐದು ಭಾಗಗಳಾಗಿ ಒಡೆದು ಬೀದರ್, ಬಿರಾರ್, ಗೋಲ್ಕೊಂಡ,



ಅಹಮದ್‌ನಗರ, ಮತ್ತು ಬಿಜಾಪುರಗಳಲ್ಲಿ ಸ್ವತಂತ್ರವಾಗಿ ರಾಜ್ಯಭಾರ ಆರಂಭಿಸಿತು. ಇವುಗಳಲ್ಲಿ ಅಹಮದ್‌ನಗರ ಹಾಗೂ ಬಿಜಾಪುರಗಳ ಅರಸರು ಚಿತ್ರಕಲೆಗೆ ವಿಶೇಷ ಪ್ರೋತ್ಸಾಹ ನೀಡಿದರು. ಅಹಮದ್‌ನಗರದಲ್ಲಿ ೧ನೇ ಹುಸೇನ್ ನಿಜಾಮ್‌ಶಹ (೧೫೫೩-೬೫) ಕಾಲದಲ್ಲಿ 'ತಾರಿಫ್ - ಇ - ಹುಸೇನ್ ಶಾಹಿ' ಎಂಬ ಚಿತ್ರಮಯ ಗ್ರಂಥವೂ ೧೫೯೦ರ ಸುಮಾರಿಗೆ ಕೆಲವು ರಾಗಮಾಲ ಚಿತ್ರಗಳೂ ರಚಿತವಾದವು.

ಬಿಜಾಪುರದ ಆದಿಲ್‌ಶಾಹಿ ಅರಸರುಗಳಲ್ಲಿ ೧ನೇ ಅಲಿಗೆ (೧೫೫೮-೮೦) ಚಿತ್ರಕಲೆಯ ಬಗ್ಗೆ ಆಸಕ್ತಿಯಿದ್ದು ಪರ್ಷಿಯ ಮತ್ತು ತುರ್ಕಿಸ್ಥಾನಗಳೊಂದಿಗೆ ಸಾಂಸ್ಕೃತಿಕ ಸಂಬಂಧಗಳನ್ನು ಹೊಂದಿದ್ದ ಒಡೆದ ಐದು ರಾಜ್ಯಗಳೂ ಒಟ್ಟಾಗಿ ವಿಜಯನಗರದ ಅರಸರನ್ನು ಗೆದ್ದ ಬಗ್ಗೆ ೧೫೬೫ರಲ್ಲಿ 'ತಾರಿಫ್-ಇ-ಹುಸೇನ್ ಶಾಹಿ' ಗ್ರಂಥ ರಚನೆಯಾಗಿದ್ದು ಈಗ ಅದು ಪುಣೆಯ ಇತಿಹಾಸ ಸಂಶೋಧನಾ ಮಂಡಳದಲ್ಲಿದೆ. ಇದರ ನಂತರ ಈತನ ಕಾಲದಲ್ಲಿ (೧೫೭೦) 'ನುಜುಮ್-ಅಲ್-ಉಲೂಮ್' ಎಂಬ ನಕ್ಷತ್ರ ಶಾಸ್ತ್ರದ ಪುಸ್ತಕ ರಚನೆಯಾಗಿದ್ದು ೮೭೬ ಚಿತ್ರಗಳನ್ನು ಒಳಗೊಂಡಿತ್ತು. ಚಿತ್ರ ಸಂಗೀತಗಳಲ್ಲಿ ಹೆಚ್ಚಿನ ಆಸಕ್ತಿಯಿದ್ದುದು ೨ನೇ ಇಬ್ರಾಹಿಂ ಆದಿಲ್‌ಶಾಹಿಗೆ (೧೫೮೦-೧೬೨೭). ಈತ ಬರೆದ 'ಕಿತಾಬ್ ಇ ನೌರಸ್' ಎಂಬ ಸಂಗೀತ ಶಾಸ್ತ್ರಗ್ರಂಥದಲ್ಲೂ ಕೆಲವು ಚಿತ್ರಗಳಿವೆ. ಈತ ತನ್ನ ಮಗಳನ್ನು ಅಕ್ಬರ್‌ಗೆ ಮದುವೆ ಮಾಡಿಕೊಡುವ ಸಂದರ್ಭದಲ್ಲಿ ಕೊಟ್ಟ ಉಡುಗೊರೆಗಳಲ್ಲಿ ಚಿತ್ರ ಭರಿತವಾದ ಎರಡು ಸಾವಿರ ಪುಸ್ತಕಗಳೂ ಇದ್ದವೆಂದು ಹೇಳಿಕೆಯಿದೆ ಮುಂದೆ ಮಹಮದ್‌ನ ಕಾಲದಲ್ಲೂ (೧೬೨೭-೫೬) ಚಿತ್ರರಚನೆ ಮುಂದುವರಿಯಿತು.

ದಖ್ಖನಿ ಚಿತ್ರಗಳಲ್ಲಿ ಮೊದಲಿಗೆ ಪರ್ಷಿಯಾದ ಪ್ರಭಾವವನ್ನು ನಂತರದ ಕಾಲದಲ್ಲಿ ಮುಘಲ್ ಪ್ರಭಾವವನ್ನೂ ಗುರುತಿಸಲಾಗಿದೆ. ರಾಜರ ಹಾಗೂ ರಾಜ ಪರಿವಾರದವರ ಚಿತ್ರಣಗಳೇ ಅಧಿಕ. ಯುದ್ಧ ಬೇಟೆ ಇತ್ಯಾದಿಗಳು ಇಲ್ಲವೆನ್ನುವಷ್ಟು ಕಡಿಮೆ. ಪ್ರಮಾಣಬದ್ಧವಾದ ಸಪೂರಾದ ಆಕೃತಿಗಳು, ನವುರಾದ ರೇಖಾ ವಿನ್ಯಾಸ, ಸೂಕ್ತ ದೇಹ ರಚನಾ ಶಾಸ್ತ್ರ(ಅನಾಟಮಿ) ಹಿನ್ನೆಲೆ ಮುನ್ನೆಲೆಗಳಲ್ಲಿ ಸುಂದರವಾದ ಪ್ರಕೃತಿ ದೃಶ್ಯ, ಚಿತ್ರದ ಒಟ್ಟು ಸಂಯೋಜನೆಗೆ ಪೂರಕವಾಗುವ ಅರಮನೆಯ ವಾಸ್ತುಶಿಲ್ಪ, ಗಾಢವಲ್ಲದ ಹಿತಮಿತ ಬಣ್ಣಗಾರಿಕೆ ಇತ್ಯಾದಿಗಳಿಂದ ಕೂಡಿದ ದಖ್ಖನಿ ಚಿತ್ರಗಳು ವೈಭವೋಪೇತ ಶ್ರೀಮಂತಿಕೆಯನ್ನು ಮೆರೆಸುವಂತೆ ಕಾಣುತ್ತವೆ. ರಾಜ-ರಾಣಿ, ಅಧಿಕಾರಿ, ಸೇವಕ, ಯೋಗಿಣಿ, ತಪಸ್ವಿ ಇತ್ಯಾದಿ ಜನರನ್ನು ಸ್ಪಷ್ಟವಾಗಿ ಗುರುತಿಸುವಂತೆ ಅವರ ವೇಶ ಭೂಷಣಗಳು ರಚಿತವಾಗಿವೆ.

ದಖ್ಖನಿ ಚಿತ್ರದ ಹಲವಾರು ಶಾಖೆಗಳು ಮುಂದೆ ಗೋಲ್ಕೊಂಡ, ಹೈದರಾಬಾದ್, ಕರ್ನೂಲ್‌ಗಳಲ್ಲದೆ ಕರ್ನಾಟಕದ ಸುರಪುರಗಳಲ್ಲೂ ಬೆಳೆದು ಬಂದಿದ್ದು ತಂಜಾವೂರು ಹಾಗೂ ಮೈಸೂರು ಶೈಲಿಗಳ ಮೇಲೂ ತನ್ನ ಪ್ರಭಾವವನ್ನು ಬೀರಿರುವುದು ಕಾಣಬಹುದು.

ಅಐನ

## ದಾದಾ(Dada)

೧೯೧೫ರಿಂದ ೧೯೨೨ರವರೆಗೆ ಚಾಲ್ತಿಯಲ್ಲಿದ್ದ ಒಂದು ಕಲಾ ಚಳವಳಿ. ಈ

ಚಳವಳಿಯು ಅಸಮತೆ, ಅರಾಜಕತೆ ಮತ್ತು ಪ್ರಸ್ತುತವಿರುವ ಸಾಹಿತ್ಯ ಹಾಗೂ ಕಲಾಪ್ರಕಾರಗಳ ವಿರೋಧೀ ಭಾವಹೊಂದಿತ್ತು. ಮೊದಲನೇ ಪ್ರಪಂಚ ಯುದ್ಧದ ನಂತರ ಯುರೋಪಿನ ಸಂಸ್ಕೃತಿಯ ಬಗ್ಗೆ ಕಲಾವಿದರು ಹಾಗೂ ಬುದ್ಧಿಜೀವಿಗಳು ಮೂಡಿಸಿಕೊಂಡ ಹೇಸಿಗೆ ಭಾವನೆಯೇ ಈ ದಾದಾಯಿಸಂನ ಹುಟ್ಟಿಗೆ ಕಾರಣವಾಯಿತು. ಮೊದಲು ದಾದಾ ಚಳುವಳಿಯು ೧೯೧೬ರಲ್ಲಿ ಜ್ಯೂರಿಕ್(Zurich) ನಗರದಲ್ಲಿ ಪ್ರಾರಂಭವಾಗಿ, ವಾಲ್ಟೇರ್ ಕ್ಯಾಬರೆ(Cabaret Voctairc) ಎಂಬಲ್ಲಿನ ಚಟುವಟಿಕೆಯ ಸುತ್ತ ಕೇಂದ್ರೀಕರಿಸಿ, ನಂತರ ಬರ್ಲಿನ್ ನಗರ ಹಾಗೂ ಇತರ ಜರ್ಮನ್ ನಗರಗಳಿಗೆ ಹರಡಿಹೋಗಿ ತೀವ್ರ ರಾಜಕೀಯ ಗುಣ ಪಡೆದುಕೊಂಡಿತು. ವ್ಯವಸ್ಥಿತವಾಗಿ ಬೆಳೆಸಿಕೊಂಡ ಅತಾರ್ಕಿಕತೆ, ದುಃಖಾಂತ್ಯ ಹಾಗೂ ತತ್ವಗಳ ಮೂಲಕ ಪಶ್ಚಿಮದ(ದೇಶಗಳ) ನಾಗರಿಕತೆಯ ತಾರ್ಕಿಕತೆ, ಸೌಂದರ್ಯಾತ್ಮಕ ತಳಹದಿಗಳನ್ನೇ ಪ್ರಶ್ನಿಸ ಹೊರಟಿತು ಈ ದಾದಾ ಚಳುವಳಿ.

ಈ ದಾದಾ ಹೆಸರನ್ನು ರೊಮೇನಿಯನ್ ಕವಿ ತ್ರಿಸ್ತಾನ್ ಜಾರಾ(Tristaan Tzara) ನೀಡಿದ ಒಂದು ಪದಕೋಶವನ್ನು ಸಹಜವಾಗಿ ತಿರುಗಿಸಿ, ಗುಂಡುಪಿನ್ನನ್ನು ಯಾವುದೋ ಒಂದು ಪದದ ಮೇಲೆ ಚುಚ್ಚಿದ. ಈ ಪದವೇ 'ದಾದಾ' ಎಂಬುದು. (ದಾದಾ ಎಂದರೆ ಫ್ರೆಂಚ್ ಭಾಷೆಯಲ್ಲಿ ಕುದುರೆ ಮುಖವಾಡದ ಕೋಲು; ಹುಡುಗರು ಆಡಲು ಬಳಸುವಂತಹ Hobby Horse ಎಂದು)



ಪಿಕಾಬಿಯಾ

ಈ ದಾದಾಯಿಸಂನ ಪ್ರಮುಖ ಕಲಾವಿದರು ಮಾರ್ಸೆಲ್ ಡ್ಯೂಕಾಂಪ್(Marcel Duchamp), ಮಾನ್ ರೇ(Man Ray) ಹಾಗೂ ಫ್ರಾನ್ಸಿಸ್ ಪಿಕಾಬಿಯಾ(Francis Picabia) (ಇವರೆಲ್ಲರೂ ನ್ಯೂಯಾರ್ಕ್ ನಗರದವರು). ಜರ್ಮನಿಯ ಪ್ರಮುಖ ದಾದಾ ಕಲಾವಿದರು : ಮಾಕ್ಸ್ ಆರ್ನೆಸ್ಟ್ (Max Earnest) ಜಾರ್ಜ್‌ಗ್ರಾಸ್(Grosz), ಮತ್ತು ಕರ್ಟ್‌ಶ್ವಿಟ್ಟರ್ಸ್(Kurt Schwitters).

ದಾದಾ ಕಲಾವಿದರು ಹಿಂದಿನ ರೂಢಿಗತ ತರ್ಕವನ್ನು ಲೇವಡಿ ಮಾಡುವಂತಹ 'ಅಸಂಬದ್ಧತೆ'(Absurdities)ಯನ್ನು ರೂಢಿಸಿಕೊಂಡರು. ಬಿಸುಡಲಾಗಿರುವ ಕೊಲ್ಲಾಜ್‌ಗಳು, ತಯಾರಾದ ವಸ್ತುಗಳು ಮುಂತಾದುವು ಇವರಿಗೆ ಪ್ರಿಯ ಕಲಾ ವಸ್ತುಗಳಾದವು(ಮಾಧ್ಯಮಗಳಾದವು).

ಅಸಹಜತೆಯ/ಅಸಂಬದ್ಧತೆಯ ಮೂಲಕ ಸಹಜತೆ/ಸಂಬದ್ಧತೆ (Sense through non-sense) ಇವರ ಮೂಲಭೂತ ಘೋಷಣೆ ಆಯಿತು.

೧೯೧೭ರಲ್ಲಿ ಮಾರ್ಸೆಲ್ ಡ್ಯೂಕಾಂಪ್‌ನ ಒಂದು Urinal(ಶೌಚಕ್ರಿಯೆಗೆ ಉಪಯೋಗಿಸಲಾಗುವ ಬಟ್ಟಲು)ಅನ್ನು Fountain By R. Mutt ಎಂಬ ಹೆಸರಿನಲ್ಲಿ ಪ್ರದರ್ಶಿಸಿದನು. ದಾದಾಯಿಸಂ ತನ್ನ ಅತಾರ್ಕಿಕತೆ, ಅಸಹಜ ಆಯ್ಕೆ ಹಾಗೂ ಅಪ್ರಜ್ಞಾವಸ್ಥೆಯ ಕಡೆ ಗಮನ ಹರಿಸುವುದರ ಮೂಲಕ ಮುಂದೆ ಸರ್‍ರಿಯಲಿಸಂಗೆ ದಾರಿಮಾಡಿಕೊಟ್ಟಿತು.

ಎಚ್. ಎ. ಅ.

## ದಾರಾಶುರಂ

ಕುಂಭಕೋಣದಿಂದ ಮೂರು ಮೈಲಿ ದಕ್ಷಿಣದಲ್ಲಿರುವ ದಾರಾಶುರಂನ ದೇವಾಲಯ, ಇಮ್ಮಡಿ ರಾಜರಾಜ ಚೋಳನ ಕಾಲದ್ದು (೧೧೫೦-೧೧೭೩ ಕ್ರಿ.ಶ.) ಗೋಪುರದ ಪಳೆಯುಳಿಕೆ, ದಿವ್ಯತೆಯನ್ನು ಸಾರುತ್ತದೆ. ಗೋಪುರದಾಚೆಯ ಕಮಲಪುಷ್ಪ ಸಂಪುಟ ಗಮನಾರ್ಹ. ಬೃಹದಾಕಾರದನಂದಿಗೆ ಹಿಂಭಾಗದಲ್ಲಿ ಒಂದು ಕುಬ್ಜಾಕೃತಿ, ಕುತೂಹಲದಿಂದ ವೀಕ್ಷಿಸುತ್ತಿದೆ. ಉತ್ತಮ ಶಿಲ್ಪವಿದು.

ಪ್ರವೇಶದ್ವಾರದ ಅಲಂಕಾರ ಪಟ್ಟಿ, ಮೂರ್ತಿಶಿಲ್ಪ, ಶಿವಾಲಂಕಾರದಿಂದ ಕಟಕಟೆ-ಕಂಬಸಾಲು, ಶಿಲ್ಪಸಿರಿಯೆ ಮೈವೆತ್ತಂತೆ ಇದೆ. ಆನೆಯ ವಿಗ್ರಹದ ಹಿಂಬದಿ, ಕಟಾಂಜನದ ಅಲಂಕರಣದ ಒಂದು ಭಾಗ. ಮಂಟಪದ ಹೊರವಲಯದ ಎರಡು ಕಂಬಗಳು, ಅದಕ್ಕಾಧಾರ-ಅರೆಕುಳಿತಭಂಗಿಯಲ್ಲಿ ಮಿಶ್ರತಳಿಯ ಪ್ರಾಣಿರೂಪ. ಕಮಲದಳಗಳ ಬೋದಿಗೆ ಈ ಅವಧಿಯ ಶಿಲ್ಪವಿಶೇಷ.

ಕಂಬಕ್ಕಿರುವ ನಾಗರತಲೆಯ ಹೆಣಿಗೆಯ ಅಲಂಕರಣ, ಹಂಸಗಳು ಶಿಲ್ಪಮಾದರಿ. ಪೌರಾಣಿಕ ಕಥನ ಚಿತ್ರಣ, ಮನ್ಮಥನ ವಿಜೃಂಭಣೆ, ಪಾರ್ವತಿದೇವಿಯ ತಪಸ್ಸು ಕುಮಾರ ಸಂಭವ, ಗಿರಿಜಾಕಲ್ಯಾಣ, ಇತ್ಯಾದಿ ಶಿಲ್ಪಗಳು ತ್ರಿಪುರಾಂತಕ, ಕಾಲಾಂತಕ, ಕುಮರಿ, ವೀರಭದ್ರ, ಅಗ್ನಿ, ಇಂದ್ರ, ಬ್ರಹ್ಮ ವಿಷ್ಣು ವಾಯು, ಎಲ್ಲವೂ ಪರಮೇಶ್ವರನನ್ನು ನಮ್ರಭಾವದಿಂದ ಪೂಜಿಸುತ್ತಿರುವ ಶಿಲ್ಪ-ಉತ್ಕೃಷ್ಟ ತೆರನಾದ್ದು. ಕೈಮುಗಿದು ನಿಂತ ನಂದೀಶ, ದೇವಮಂದಿರಕ್ಕೊಯ್ಯುವ ಕಿರುಮೊಗಸಾಲೆ, ದ್ವಾರಪಾಲಕರು ಅವರ ಯಜ್ಞೋಪವೀತ,

ಹಾರ-ಕೇಯೂರ, ಚಾಲುಕ್ಯ ಶಿಲ್ಪವನ್ನು ನೆನಪಿಸುತ್ತವೆ. ಶಿಲ್ಪವೈವಿಧ್ಯ ಅನೇಕ ದೇವತೆಗಳು-ಋಷಿಧರ್ಮವನ್ನು ಕಂಡರಿಸುವಲ್ಲಿ ಸಫಲಗೊಂಡಿದೆ. ಅಗಸ್ತ್ಯ ಋಷಿ, ಚತುರ್ಭುಜಧಾರಿ ನಾಗರಾಜ, ದಕ್ಷಿಣಾಮೂರ್ತಿಯ ಯೋಗಭಂಗಿ, ಬ್ರಹ್ಮ-ವಿಷ್ಣು, ಅಷ್ಟಭುಜಧಾರಿಣಿ ದುರ್ಗಾ ಮಹಿಷನ ತಲೆಮೆಟ್ಟಿ ನಿಂತಿರುವುದು, ಭುವನೇಶ್ವರಿ, ಭೈರವ, ಅದರೊಂದಿಗೆ ಶೈವ ಸಂತರ, ಬದುಕಿನ ಘಟನೆಗಳ ಶಿಲ್ಪಗಳಿದ್ದು ತಮಿಳಿನಲ್ಲಿ ವಿವರಣೆಯೂ ಇದೆ.

ಪ್ರಮುಖ ಮಂದಿರಕ್ಕೆ ಹೊಂದಿಕೊಂಡಂತೆ ದೇವಿಯ ಮಂದಿರ ದೇವಾಲಯ ಸಂದರ್ಶಕನಿಗೆ ಭರತಮುನಿಯ ನಾಟ್ಯಶಾಸ್ತ್ರ ಮನವರಿಕೆಯಾಗಿಸುವ ರೀತಿಯಲ್ಲಿ ಶಿಲ್ಪದಲ್ಲಿ ಮೂಡಿರುವ ನೃತ್ಯ ಕಲೆಯರಳಿದೆ. ಈ ಎರಡೂ ದೇವಾಲಯದ ಹೊರ ಭಿತ್ತಿಯಲ್ಲಿ ಅನೇಕ ವರ್ಣಚಿತ್ರಗಳಿವೆ. ನೀಳಕಾಯ, ದೃಢವಾದ ಹೊರರೇಖೆ ಹಿತಮಿತಬಣ್ಣ, ಅಲಂಕರಣಗಳಿಂದ ಇವು ಸೊಗಸಾಗಿ ಕಂಗೊಳಿಸುತ್ತವೆ.

ನಿಕ್ಕಾ

## ದ್ವಾರ (ಬಾಗಿಲು)

ಸಾಮಾನ್ಯವಾಗಿ ಗರ್ಭಗೃಹ ಮತ್ತು ನವರಂಗವು ದ್ವಾರಯುಕ್ತವಾಗಿರುವುದು. ದ್ವಾರವು ಆಲಯದಲ್ಲಿನ ಅವಶ್ಯಕತೆ ಮತ್ತು ಅಲಂಕಾರದ ಆಶಯವನ್ನು ಪೂರೈಸುವ ಅಂಗಗಳಲ್ಲಿ ಒಂದಾಗಿದೆ. ಗರ್ಭಗೃಹದ ದ್ವಾರವನ್ನು 'ಭೀಮದ್ವಾರ' ಎನ್ನುವರು. ದ್ವಾರ ಅಥವಾ ಬಾಗಿಲಿನ ಮೇಲೆ ಇರುವ ಅಡ್ಡ ಪಟ್ಟಿಕೆಗಳಿಗೆ 'ಸ್ಕಂದ' ಎಂದೂ, ಉದ್ದ ಪಟ್ಟಿಕೆಗಳಿಗೆ 'ಯೋಗ' ಎಂದೂ ಹೆಸರು. ಇವನ್ನು ಮಧ್ಯೆ ಮಧ್ಯೆ 'ರತ್ನಪಟ್ಟ'ಗಳಿಂದ ಅಲಂಕರಿಸಿರುವುದುಂಟು. ಇದನ್ನು ಸಾಮಾನ್ಯವಾಗಿ ಮರದಿಂದ ಮಾಡಿರುತ್ತಾರೆ. ವಿಧವಿಧವಾದ ಕಾಷ್ಟಶಿಲ್ಪಗಳಿಂದ ಕೂಡಿರುತ್ತದೆ. ಅಲಂಕೃತವಾದ ಲೋಹದ ಹೊದಿಕೆಯನ್ನು ಹಾಕಿಸಿರುವುದುಂಟು. ಮಹಾದ್ವಾರ ಅಂದರೆ ಗೋಪುರದ್ವಾರದ ಬಾಗಿಲುಗಳೂ ಭವ್ಯವಾಗಿದ್ದು ಅವೂ ಸಾಲಂಕೃತಗೊಂಡಿರುವುದುಂಟು. ದೇವಾಲಯ ಕಟ್ಟಡದ ಪ್ರವೇಶ ದ್ವಾರವೂ ಅಲಂಕಾರಯುತವಾಗಿರುತ್ತವೆ. ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಈ ಕುಸುರಿ ಕೆಲಸ ಉನ್ನತ ಮಟ್ಟಕ್ಕೆ ಏರಿತ್ತು. ಹೊಯ್ಸಳರು ಬಾಗಿಲುವಾಡದ ಕಲಾತ್ಮಕತೆಯನ್ನು ಮುಂದುವರಿಸಿದರು.

ಪಿ.ವಿ.ಕೆ.

## ದೆಹಲಿ

ದೆಹಲಿಗೆ ಅಮೂಲ್ಯ ಇತಿಹಾಸವುಂಟು, ೧೯ನೇ ಶತಕದ "ಪುರಾನಾ ಕಿಲಾ" (ಹಳೆಕೋಟೆ) ಸನಿಹ ನಡೆದ ಉತ್ಖನನಗಳಿಂದ, ಕ್ರಿ.ಪೂ. ೨ನೇಯ ಶತಮಾನಕ್ಕೆ ಸೇರಿದವೆನ್ನಲಾದ ಮಾನವಾಕೃತಿಗಳು ದೊರೆತಿವೆ. ಅಶೋಕನ ಶಾಸನ ಪ್ರಕಾರ, ದೆಹಲಿಯ ನಿರ್ಮಾಣವು ಕ್ರಿ.ಪೂ ೩ನೆ ಶತಕದಷ್ಟು ಹಿಂದಕ್ಕೆ ಸರಿಯುತ್ತದೆ. ಕ್ರಿ.ಶ. ೧೩ನೆ ಶತಕದ ಸುಲ್ತಾನರ ರಾಜಧಾನಿಯಾದ ಡೆಲ್ಲಿ, ಅನಂತರ, ಮೊಗಲರ ರಾಜಧಾನಿಯೂ ಆಯಿತು. ಹೀಗಾಗಿ, ಪುರಾತನ ಹಾಗೂ ಮಧ್ಯ ಕಾಲೀನ ಯುಗದ ಅನೇಕ ಸ್ಮಾರಕ ಡೆಲ್ಲಿಯಲ್ಲಿವೆ.



ಕುತೂಬ್ ಮಿನಾರ್, ದೆಹಲಿ

ದೆಹಲಿಯಲ್ಲಿ ಎದ್ದುಕಾಣುವ ಐತಿಹಾಸಿಕ ಸ್ಮಾರಕ, ಕುತುಬ್‌ಮಿನಾರ್, ಇದು ವಿಜಯಸ್ತಂಭ ಮಾತ್ರವಲ್ಲ, ಕುಲ್ಬತ್-ಅಲ್-ಇಸ್ಲಾಂ(ಇಸ್ಲಾಂ ಶಕ್ತಿ) ಮಸೀದಿಗೆ "ಮಿನಾರ್" ಆಗಿ ನಿಂತಿದೆ. ಕುತುಬ್‌ಮಿನಾರದ ಬುನಾದಿ, ದಿಲ್ಲಿ ಸುಲ್ತಾನವಂಶ ಸ್ಥಾಪಕನಾದ ಕುತ್ಬ್-ಉದ್ದೀನ್-ಅಲ್ಬಕ್‌ನಿಂದಾದದ್ದು. ಅನಂತರ ಬಂದ ಸುಲ್ತಾನರು ಹಂತಗಳನ್ನು ಕಟ್ಟಿದರು. ಕುತುಬ್‌ವಾಸ್ತು, ಇಸ್ಲಾಂ ಮೂಲದ್ದು, ಅದರ ಮೊದಲ ಮಾದರಿ ಘಜನಿಯಲ್ಲಿ ಇಟ್ಟಿಗೆಯಿಂದ ಕಟ್ಟಿರುವ ತೆರನಾದ್ದು. ಈ ಗೋಪುರ ನಿರ್ಮಿಸಿದ ಹಿಂದೂ ಶಿಲ್ಪಿಗಳಿಗೆ ಗೌರವಾದರ ಸಲ್ಲುತ್ತದೆ.

ಕುವ್ವತ್-ಅಲ್-ಇಸ್ಲಾಂ ಮಸೀದಿ, ಸಮೀಪದಲ್ಲೇ ಇದೆ. ಭಾರತದ ಪುರಾತನ ಮಸೀದಿಯಿದು. ಕ್ರಿ.ಶ. ೧೧೯೩ರಲ್ಲಿ ಆರಂಭವಾಗಿ, ನಾಲ್ಕು ವರ್ಷದಲ್ಲಿ ಮುಗಿಯಿತು. ಅಲ್ಲಿ ಕುತ್ಬ್-ಉದ್ದೀನ್-ಅಲ್ಬಕ್ ಶಾಸನವಿದೆ. ಅದರಂತೆ ಮುಸ್ಲಿಮರು ಹಾಳುಗೆಡವಿದ ಇಪ್ಪತ್ತಕ್ಕೂ ಹೆಚ್ಚು ಹಿಂದೂ ಮಂದಿರಗಳಿಂದ ಸಾಮಗ್ರಿಗಳನ್ನು ಪಡೆದರೆಂದು ತಿಳಿಯುತ್ತದೆ. ಮಸೀದಿಯನ್ನು ವಿಸ್ತರಿಸಿದವ ಶಾಸುದ್ದೀನ್ ಇಸ್ತುಮಷ್ ಅವನ ಗೋರಿಯೂ ಅಲ್ಲೇ ನೈರುತ್ಯದಲ್ಲಿದೆ. ಕುತುಬ್ ಮಿನಾರದ ಸಮೀಪವಿರುವ ಸಣ್ಣಗುಡ್ಡದಲ್ಲಿ ವಿಷ್ಣುಪಾದವುಳ್ಳ ಮಂದಿರವಿದ್ದು, ರಾಜಾಚಂದ್ರನ

ನೆನಪಿಗಾಗಿ (ಈತನೆ ಇಮ್ಮಡಿ ಚಂದ್ರಗುಪ್ತ ಕ್ರಿ.ಶ. ೩೭೧-೪೧೫) ಒಂದು ಕಬ್ಬಿಣದ ಸ್ಥಂಬ ನಿಲ್ಲಿಸಿದ್ದಾರೆ. ಇದೊಂದು ಯಶೋಸ್ತಂಭ. ಎಂದೂ ಇದಕ್ಕೆ ತುಕ್ಕೂ ಹಿಡಿದಿಲ್ಲ. ಲೋಹ ಪರಿಶುದ್ಧತೆಗೊಂದು ಗಣನೀಯ ಆಧಾರ.

ಕೆಂಪುಕೋಟೆಯ ರಂಗ್‌ಮಹಲ್(ಬಣ್ಣದರಮನೆ) ಗೋಡೆಯ ಮಾಳಿಗೆಯ ಒಳಮೈಗಳಲ್ಲಿ ಕನ್ನಡಿ ಚೂರುಗಳ ಅಲಂಕರಣವಿದೆ. ಇದನ್ನು "ಶೀರ್ಷ್ ಮಹಲ್" ಎಂದೂ ಕರೆಯುತ್ತಾರೆ. ದಿವಾನ್-ಇ-ಖಾಸ್, ಖಾಸಗಿ ಅರಮನೆ. ಅಲ್ಲಿಯೇ ವಿಖ್ಯಾತ ಮಯೂರಾಸನವಿದ್ದುದು, ಪರ್ಷಿಯಾದ ದೊರೆ ನಾದಿರ್‌ಷಾ ಕೊಂಡೊಯ್ದುದ್ದು. ಮಥುರಾ ರಸ್ತೆಯಲ್ಲಿರುವ ಹುಮಾಯೂನ್ ಗೋರಿ, ಮೊಗಲ್ ವಾಸ್ತುಶೈಲಿಯ ಮೊದಲ ಉದಾಹರಣೆ ಎನ್ನಬಹುದು. ಕೆಮ್ಮರಳು ಶಿಲೆಯಲ್ಲಿ ನಿರ್ಮಿಸಿರುವ ಸ್ಮಾರಕ ಮಂದಿರ. ಇದಲ್ಲದೆ ಅನೇಕ ಐತಿಹಾಸಿಕ ಸ್ಮಾರಕವಿವೆ. ಸುಲ್ತಾನ್‌ಘೋರಿ ಅಶಾಖಾನ್, ಬಲ್ಬನ್, ಮುಭಾರಕ್ ಷಾ, ಮಿರ್ಜಾಘಾಲಿಬ್, ಇವರ ಸಮಾಧಿಗಳು, ಮಸೀದಿಗಳೂ ಅನೇಕ. ಜಂತರ್‌ಮಂತರ್, ಜಯಪುರದ ರಾಜ ಇಮ್ಮಡಿ ಜಯಸಿಂಗ್ ನಿರ್ಮಿಸಿದ ಬಾಹ್ಯಾಕಾಶ ನಿರೀಕ್ಷಣಾಲಯ, ಆಕರ್ಷಕ ವಿಜ್ಞಾನ ಮಂದಿರ. ದೊರೆಗಿದ್ದ ಖಗೋಳಶಾಸ್ತ್ರ ಪ್ರೀತಿಗೆ ನಿದರ್ಶನವಾಗಿದೆ.

**ನಿಕೃರಾ**

## ದೈಹಿಕ ಕಲೆ (Body Art)

ಒಂದು ಇತ್ತೀಚಿನ ಕಲಾ ಬೆಳವಣಿಗೆ ಇದು. ಹ್ಯಾಪೆನಿಂಗ್(Happening-ಸಂಘಟನೆ) ಹಾಗೂ Conceptional ಕಲೆಯ (ತತ್ವಾದರ್ಶ) ಮುಂದುವರಿದ ಭಾಗ. ಇದರಲ್ಲಿ ಕಲಾವಿದನು ತನ್ನ ದೇಹವನ್ನೇ ಮಾಧ್ಯಮವನ್ನಾಗಿ ಉಪಯೋಗಿಸುತ್ತಾನೆ. ದೇಹದ ಮೂಲಕವೇ ವ್ಯಕ್ತವಾಗುವ ಕಲಾಭಿವ್ಯಕ್ತಿ ಇಲ್ಲಿನ ಮುಖ್ಯ ಅಂಶ. ಅಕ್ಕೋನ್ಸಿ(Acconci) ಮತ್ತು ನೌಮಾನ್(Nauman) ಈ ಪ್ರಕರಾದ ಮುಖ್ಯ ಕಲಾವಿದರು.

೧೯೫೬ರಲ್ಲಿ ಯೆಸ್‌ಕ್ಲೈನ್(Yuesklien) ಎಂಬ ಫ್ರೆಂಚ್ ಕಲಾವಿದನು ನೀಲಿ ಚಿತ್ರಗಳು (Blue Paintings)ಎಂಬ ದೀರ್ಘ ಸರಣಿಯ ಕೃತಿಗಳನ್ನು ರಚಿಸಿದನು. ಇದನ್ನು ಆತ 'ಕ್ಲೈನ್‌ನ ಅಂತರಾಷ್ಟ್ರೀಯ ನೀಲಿ' (Kleins International Blue)ಎಂದು ಕರೆದು ಅದರ ಸಂಪೂರ್ಣ ಕೃತಿಸ್ವಾಮ್ಯ ಪಡೆದನು. ೧೯೬೦ರ ಸುಮಾರಿಗೆ ಈತ ನೀಲಿ ಜ್ವಾಲೆ(Blue Flames) ಹಾಗೂ ನೀಲಿ ದ್ರವ್ಯ(Blue liguids)ಗಳೊಂದಿಗೆ ಪ್ರಯೋಗ ನಡೆಸಿದ. ಈ ಪ್ರದರ್ಶನದಲ್ಲಿ (Body art) ನಗ್ನ ಹೆಂಗಸರು ಈತನ ನಿರ್ದೇಶನದಂತೆ ತಮ್ಮ ದೇಹಗಳಿಗೆ ಆತನ ನೀಲಿ ಬಣ್ಣ ಬಳಿದುಕೊಂಡು ಉದ್ದನೆಯ ಮತ್ತು ಅಗಲವಾದ ಕ್ಯಾನ್ವಾಸಿಗೆ ತಮ್ಮ ದೇಹಗಳನ್ನು ಅಂಟಿಸಿ ಒಬ್ಬರನ್ನೊಬ್ಬರು ಎಳೆದಾಡಿದರು. ಪ್ಯಾರಿಸ್ ನಗರದ ಅಂತರಾಷ್ಟ್ರೀಯ ಸಮಕಾಲೀನ ಕಲಾ ಗ್ಯಾಲರಿಯಲ್ಲಿ ಈ ದೈಹಿಕ ಕಲೆ ಪ್ರದರ್ಶನಗೊಂಡಿತ್ತು.

೧೯೫೯ರಲ್ಲಿ ಅಮೇರಿಕನ್ ಚಿತ್ರಕಾರ ಅಲನ್ ಕಾಪ್ರೋವ್(Allen Kaprow) ಜಾನ್ ಕೇಜ್ ಎಂಬ ಪ್ರಸಿದ್ಧ ಸಂಗೀತಕಾರನ ಬಳಿ ಸಂಗೀತ ಕಲಿತಿದ್ದ) 'ಆರು ಭಾಗಗಳಲ್ಲಿ ೧೮ ಘಟನೆಗಳು'(18 Happenings in 6 parts) ಎಂಬ ದೈಹಿಕ ಕಲೆ ಪ್ರದರ್ಶಿಸಿದ. ಇದಾದ ನಂತರ



ಕಾಪ್ರೋವ್, ಒಲ್ಡೆನ್‌ಬರ್ಗ್, ಮುಂತಾದ ಅನೇಕ ಅಮೇರಿಕನ್ ಕಲಾವಿದರು ನ್ಯೂಯಾರ್ಕ್ ಮುಂತಾದ ಪಟ್ಟಣಗಳಲ್ಲಿ ದೈಹಿಕ ಪ್ರದರ್ಶನಗಳನ್ನು ವಿಪುಲವಾಗಿ ನೀಡುತ್ತಾ ಬಂದರು.

ಇದೇ ಕಾಲಕ್ಕೆ ಅಮೇರಿಕದ ಕಲಾವಿದನಾದ ಜಾನ್ ಬಾಲ್ಡೆಸ್ಸಾರಿ (John Boldessari) ಎಂಬಾತ ಧೀರ್ಘವಾದ ಅನಾಕರ್ಷಕವಾದ, ನಿಧಾನಗತಿಯ ಚಲನೆಯ ವೀಡಿಯೋ ದೃಶ್ಯಾವಳಿಗಳನ್ನು ಕೈ ಸೆರೆಹಿಡಿದ. ಉದಾಹರಣೆಗೆ ಆತ ತನ್ನ ಹ್ಯಾಟನ್ನು ಏನೇನೂ ಉದ್ದೇಶವಿಲ್ಲದೆ ನಿಧಾನವಾಗಿ, ತಿರುಗಿಸುತ್ತಿರುತ್ತಾನೆ. ಅದರ ದೃಶ್ಯೀಕರಣವನ್ನು ವೀಡಿಯೋ ಕಲೆ ಎಂದೂ ಕರೆಯಬಹುದು ಹಾಗೂ ದೈಹಿಕ ಕಲೆಯ ಮುದ್ರೂ ಎಂದೂ ಹೇಳಬಹುದಾಗಿದೆ.

**ಎಚ್. ಎ. ಅ.**

## ಧವಳತ್ರಯಗಳಲ್ಲಿ ಚಿತ್ರಕಲೆ

ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆ ಜೈನರ ಪವಿತ್ರ ಯಾತ್ರಾಸ್ಥಳಗಳಲ್ಲಿ ಒಂದಾಗಿದೆ. ಇಲ್ಲಿಯ ಶ್ರೀಮಠದಲ್ಲಿರುವ ಧವಳತ್ರಯ ಗ್ರಂಥದಲ್ಲಿ (ಧವಲ, ಜಯಧವಲ, ಮಹಾಧವಲ) ಕೆಲವು ಚಿತ್ರಗಳಿವೆ. ಇವು ತಾಳೆಯೋಲೆ(?)ಯ ಮೇಲೆ ಇರುವ ವರ್ಣ ಚಿತ್ರಗಳಾಗಿದ್ದು ದಕ್ಷಿಣ ಭಾರತದಲ್ಲಿಯೇ ಅಪರೂಪವೆನಿಸಿದೆ. ಇವು ಹೊಯ್ಸಳರ ಕಾಲದಲ್ಲಿ (೧೨ನೇ ಶತಮಾನ) ಗೇರಸೊಪ್ಪೆಯಲ್ಲಿ ನಿರ್ಮಾಣವಾಯಿತೆಂದು ಶಿವರಾಮಕಾರಂತರು ಅಭಿಪ್ರಾಯ ಪಡುತ್ತಾರೆ. ಇವು ಕೊಲ್ಲಾಪುರದ ಸಿದ್ಧಾಂತ ಬಸ್ತಿಯಲ್ಲಿದ್ದು ಖಿಲ್ಜಿಯ ಧಾಳಿಯಿಂದಾಗಿ ಮೂಡಬಿದರೆಗೆ ತರಲಾಯಿತೆಂಬ ಹೇಳಿಕೆಯಿದೆ. ಇನ್ನೊಂದು ಹೇಳಿಕೆಯಂತೆ ಧಾರವಾಡ ಜಿಲ್ಲೆಯ ಬಂಕಾಪುರದಿಂದ ಇಲ್ಲಿಗೆ ತರಲಾಯಿತು. ಚಿತ್ರಿತ ಆಕಾರಗಳು ಲಿಪಿ ವಿನ್ಯಾಸ ಇತ್ಯಾದಿಗಳಿಂದ ಈ ಚಿತ್ರಗಳು ಹೊಯ್ಸಳರ ಕಾಲದ ಶಿಲ್ಪ ಹಾಗೂ ಲಿಪಿಗಳನ್ನು ಹೋಲುವುದಾಗಿ ಡಾ॥ ರಘುನಾಥ ಭಟ್ಟರು ತಿಳಿಸುತ್ತಾರೆ. ಆಕೃತಿಗಳನ್ನು ಗರಿಯ ಮೇಲೆ ಕೊರೆದು ರಚಿಸಿದ್ದಲ್ಲ, ಬದಲು ಕುಂಚದಿಂದ ಬರೆದುದು. ಉತ್ತರ ಪ್ರದೇಶದ ಪ್ರಸಿದ್ಧ ಜೈನ

ಚಿಕಣಿ ಚಿತ್ರಗಳನ್ನು ಇವು ಹೋಲುವುದಿಲ್ಲವಾದರೂ ಸರಳವಾದ ಆಕಾರಗಳು, ಹಿತ ಮಿತ ವಸ್ತ್ರಾಭರಣ, ತಂಪು ಬಣ್ಣಗಳ ಹಿನ್ನೆಲೆಯಲ್ಲಿ ರೇಖಾಪ್ರಧಾನವಾಗಿ ಚಿತ್ರಿತವಾಗಿವೆ. ಬಿಡುವಿನ ಪ್ರದೇಶದಲ್ಲಿ ತೆಳುವಾದ ರೇಖೆಗಳಲ್ಲಿ ವಿನ್ಯಾಸಗಳನ್ನು ರಚಿಸಿ ಆಕಾರ ಎದ್ದು ಕಾಣುವಂತೆ ಮಾಡಲಾಗಿದೆ. ಶಿರೋಭಾಗ ತ್ರುಟಿತವಾಗಿರುವ ಗರಿಯಲ್ಲಿ ರಚಿಸಿರುವ ದಂಪತಿಗಳ ಚಿತ್ರಣ ಶಾಂತಲೆ ವಿಷ್ಣುವರ್ಧನದರೆಂದು ನಂಬಲಾಗಿದೆ.

ಅಲಸ

## ನಕಲು (Reproduction)

ಮೂಲಪ್ರತಿಯ ನಕಲು ಮಾಡುವ ಪದ್ಧತಿಗೆ 'ರಿಪ್ರೊಡಕ್ಷನ್' ಎಂದು ಕರೆಯುತ್ತಾರೆ. ಇದು ಮೂಲ ಕಲಾವಿದನಿಂದ ಬೇರೆಯಾಗಿಯೇ ಅಂದರೆ ಮತ್ತೋರ್ವನಿಂದ ರಚಿಸಲ್ಪಟ್ಟ ಪ್ರತಿಕೃತಿಯೆನಿಸುತ್ತದೆ. ಯುರೋಪಿನ ರಿಪ್ರೊಡಕ್ಷನ್ ಇತಿಹಾಸವು ೧೫ನೆಯ ಶತಮಾನದಿಂದ ಪ್ರಾರಂಭವಾಗುತ್ತದೆ. ಈ ಕಾಲದ ಕಲಾವಿದರು ನೇರವಾಗಿ ಮೂಲಕೃತಿಯ ಪಡಿಯಚ್ಚು ತಯಾರಿಸಲು ಪರಿಶ್ರಮಿಸಿದರು. ೧೬ನೆಯ ಶತಮಾನದ ಹೊತ್ತಿಗೆ ಈ ಪದ್ಧತಿಯಲ್ಲಿ ಪರಿವರ್ತನೆಯಾಗಿ ಮೂಲಕೃತಿಯ ಕಲಾತ್ಮಕ ಪದ್ಧತಿಯು ಪ್ರಾರಂಭವಾಯಿತು ಹಾಗೂ ಇದು ೧೯ನೆಯ ಶತಮಾನದ ಅಂತ್ಯದವರೆಗೆ ಮುಂದುವರೆಯಿತು.

ಮಾರ್ಕ್ ಅಂಟೋನಿಯಾ ರೈಮಂಡ್ ರೇಖಾ ಕೆತ್ತನೆಯ ಅನ್ವೇಷಕನೆನಿಸಿದ್ದಾನೆ. ಈತನು ರೇಖಾ ವಿಭಜನೆಯ ಮೂಲಕ ಘನವಸ್ತುವಿನ ತಾಂತ್ರಿಕ ನಕಲು ಪದ್ಧತಿಯನ್ನು (ರಿಪ್ರೊಡಕ್ಷನ್) ಜಾರಿಗೆ ತಂದನು.

ಭಾರತದಲ್ಲಿ ಈಚೆಗೆ ರಾಜಸ್ಥಾನಿ ಚಿಕಣಿ ಚಿತ್ರಗಳು, ಪಲ್ಲವ ಶಿಲ್ಪಗಳು, ಚೋಳರ ಕಾಂಸ್ಯಶಿಲ್ಪಗಳು ಅಧಿಕ ಸಂಖ್ಯೆಯಲ್ಲಿ ನಕಲು ರಚನೆಗೆ ಒಳಗಾಗುತ್ತಿವೆ. ಇವುಗಳ ಕಲಾವಿದ ಅವು ನಕಲು ಎಂದು ಹೇಳುವನಾದರೂ ಮರು ಮಾರಾಟಗಾರ 'ಮೂಲದ ಪ್ರಾಚೀನ ಕೃತಿಗಳು' ಎಂದು ಹೇಳಿ ಗ್ರಾಹಕರನ್ನು ವಂಚಿಸುವ ಅಪಾಯವಿದೆ.

ಪ್ರಸಿದ್ಧ ಕಲಾವಿದರ ಕೃತಿಗಳಲ್ಲಿಯ ಬಣ್ಣಗಾರಿಕೆ ಕುಂಚದ ಓಟ. ರಚನಾಶೈಲಿ ಇತ್ಯಾದಿಗಳನ್ನು ಅಭ್ಯಸಿಸಲು ವಿದ್ಯಾರ್ಥಿಗಳು ಮೂಲಕೃತಿಗಳನ್ನು ನಕಲು ಮಾಡುವ ಪರಿಪಾಠವುಂಟು

ಎಸ್. ಎಂ. ಮಿ.

## ನಕ್ಷಾಚಿತ್ರಗಳು

ಹಸ್ತಪ್ರತಿ ನಕ್ಷಾಚಿತ್ರಗಳು ಹಸ್ತಪ್ರತಿಗಳ ಅಂದ-ಚೆಂದಗಳನ್ನು ಹೆಚ್ಚಿಸುವ ಉದ್ದೇಶದಿಂದಲೇ ರಚಿತವಾದವುಗಳು. ತಾಳೆಗರಿ ಕಾಗದಗಳಲ್ಲಿ ಖಾಲಿಯಾಗಿರುವ ಜಾಗವನ್ನು ಮಂಗಲ ಚಿನ್ಹೆಗಳನ್ನು ರಚಿಸಿ ತುಂಬಿಸುವುದು ಒಂದು ರೀತಿ. ಹಾಗೆಯೇ ಹಸ್ತಪ್ರತಿಗಳನ್ನು ಸುಂದರವಾಗಿ ಆಕರ್ಷಕವಾಗಿ ಕಾಣುವಂತೆ ಅಲಂಕರಿಸುವುದು ಇನ್ನೊಂದು ರೀತಿ. ಅನಂತರದ ಈ ಉದ್ದೇಶದಿಂದಲೇ ನಕ್ಷಾಚಿತ್ರಗಳು ಹಸ್ತಪ್ರತಿಗಳಲ್ಲಿ ಬಳಕೆಗೊಂಡಿವೆ.

ಸುಂದರವಾಗಿ ಬರೆಯಲಾದ ಬರವಣಿಗೆ ಇನ್ನಷ್ಟು ಸುಂದರವಾಗಿ ಕಾಣಬೇಕೆಂಬ ಉದ್ದೇಶದಿಂದ ತಾಳೆಗರಿ ಕಾಗದದ ಮಧ್ಯಭಾಗದಲ್ಲಿ ಬರಹ, ಬರಹದ ಎರಡೂ ತುದಿಗಳಲ್ಲಿ ನಕ್ಷೆಗಳು ಇಲ್ಲವೆ ಸುತ್ತಲೂ ಚೌಕಟ್ಟಿನಂತೆ ನಕ್ಷೆಗಳನ್ನು ರಚಿಸಿರುತ್ತಾರೆ.

ಸಾಮಾನ್ಯವಾದ ಅಂಚುಗೆರೆ(Border lines)ಗಳನ್ನು ಮೊದಲ್ಗೊಂಡು ಕಲಾತ್ಮಕವಾದ ನಕ್ಷಾಚಿತ್ರಗಳನ್ನು ಅತ್ಯಂತ ಕುಶಲತೆಯಿಂದ ಮಾಡಿರುತ್ತಾರೆ. ಇಂಥ ನಕ್ಷೆಗಳಲ್ಲಿ ಹೂ-ಬಳ್ಳಿ-ಪಕ್ಷಿ-ಪ್ರಾಣಿ ಮುಂತಾದ ನೈಸರ್ಗಿಕ(Natural) ಅಲಂಕಾರಿಕ(Decorative) ಸಾಂಪ್ರದಾಯಿಕ(Conventional) ಮತ್ತು ಜ್ಯಾಮಿತಿ(Geometrical) ಈ ಯಾವುದೇ ಆಕೃತಿ(Forms)ಗಳನ್ನು ಬಳಸಿಕೊಂಡು ನಕ್ಷಾಚಿತ್ರಗಳನ್ನು ರಚಿಸಿದ್ದಾರೆ.

ಇಂಥ ನಕ್ಷಾಚಿತ್ರಗಳ ರಚನೆಗಳಲ್ಲಿ ಆವರ್ತನ(Repitation), ಸಮತೋಲನ(Balance), ತರಂಗಿತತೆ(Rythem), ಬಿಂದು ವಿಕಸಿತ(Rediation from the Point) ಮತ್ತು ಪೀಠ ವಿಕಸಿತ (Rediation from the Base) ಈ ಯಾವುದಾದರೊಂದು ನಕ್ಷಾಸೂತ್ರ(Principles of Design)ಕ್ಕೆ ಅನುಗುಣವಾಗಿ ರಚಿಸಿದ್ದು ಕಂಡುಬರುತ್ತದೆ.

ನಕ್ಷಾಚಿತ್ರಗಳನ್ನು ತಾಳೆಗರಿಯ ಮೇಲೆ ಕಂಟದಿಂದ ಗೀರಿಯೂ, ಕಾಗದಗಳ ಮೇಲೆ ಲೆಕ್ಕಣಿಕೆ ಇಲ್ಲವೆ ಕುಂಚದಿಂದ ಮಸಿ ಇಲ್ಲವೆ ವರ್ಣಗಳಿಂದ ರಚಿಸಿರುತ್ತಾರೆ. ನಕ್ಷಾ ಚಿತ್ರಗಳು ತಾಳೆಗರಿ ಇಲ್ಲವೆ ಕಾಗದಗಳ ಮೇಲೆ ಚಿತ್ರಿಸಿದಂತೆ ಹಸ್ತಪ್ರತಿಗಳ ಆವರಣದಂತಿರುವ ಫಲಕಗಳ ಒಳಮಗ್ಗಲಲ್ಲಿ ವಿಶೇಷವಾಗಿಯೂ, ಹೊರಮಗ್ಗಲಲ್ಲಿಯೂ ಮಾಡಿರುತ್ತಾರೆ. ಇಂಥ ನಕ್ಷಾ ಚಿತ್ರಗಳು ಪ್ರಾಚೀನ ಭಿತ್ತಿಚಿತ್ರಗಳಲ್ಲಿನ ಅಂಚು ನಕ್ಷೆಗಳನ್ನು ವಿಶೇಷವಾಗಿ ಹೋಲುತ್ತವೆ. ಇಂಥ ನಕ್ಷಾಚಿತ್ರ ರಚನೆಗಳು ಕೂಡ ಕಲಾಭಿರುಚಿ ಹಾಗೂ ಕಲಾ ಚರಿತ್ರೆಯ ದೃಷ್ಟಿಯಿಂದ ಮಹತ್ವದವಾಗಿವೆ.

**ಬಿ. ಕೆ. ಹಿ.**

## ನಕ್ಷಾಚಿತ್ರಲೇಖನ ಮತ್ತು ಮಾದರಿ ಚಿತ್ರಲೇಖನ(Design and Pattern Drawing)

ಚಿತ್ರಲೇಖನ ಕಲೆಯಲ್ಲಿ ನಕ್ಷಾಚಿತ್ರ ಹಾಗೂ ನಕ್ಷಾಮಾದರಿ ಚಿತ್ರಲೇಖನಗಳು ವಿಶಿಷ್ಟ ಸ್ಥಾನವುಳ್ಳವುಗಳಾಗಿದ್ದು ಚಿತ್ರಕಾರನ ಬುದ್ಧಿ ಚಾತುರ್ಯ ಕೃತಿಗಳೆಂದು ಕರೆಯಬಹುದು.

ನಕ್ಷೆ ಹಾಗೂ ಪಡಿಕಟ್ಟಿನ ಮಾದರಿಗಳನ್ನು ಬಾಗಿಲು, ಕಿಟಕಿ, ಬಟ್ಟೆ, ನೆಲಗಟ್ಟು ಮುಂತಾದವುಗಳ ಮೇಲೆ ಚಿತ್ರಿಸಿರುವುದನ್ನೋ ಕೆತ್ತನೆ ಮಾಡಿರುವುದನ್ನೋ ನೋಡುತ್ತೇವೆ. ಬಾಗಿಲು ಪರದೆಗಳ ಮೇಲೆ, ಚೀಟುಬಟ್ಟೆಯ ಮೇಲೆ ಅಂದವಾಗಿ ಅಚ್ಚುಹಾಕಿದ ಹೂ ಬಳ್ಳಿಗಳು, ಮೊಗ್ಗು, ನೆಲಗಟ್ಟಿನ ಮೇಲೆ ಅಚ್ಚಾದ ಜಾಮಿತಿಕ ಆಕೃತಿಗಳಲ್ಲಿ ಬಣ್ಣ ತುಂಬಿ ಅಂದವಾಗಿ ಕಾಣಿಸುವಂತೆ ಅಲಂಕರಿಸಿದ ಆಕೃತಿಗಳು, ರತ್ನಗಂಬಳಿಗಳ ಮೇಲಿನ ಅಲಂಕಾರಗಳು ಅಲಂಕಾರಯುಕ್ತ ಗೋಡೆ, ಕಟ್ಟಿಗೆ, ಕಲ್ಲು, ತಾಮ್ರ , ಹಿತ್ತಾಳೆ, ಚಿನ್ನ, ಬೆಳ್ಳಿ ಮೊದಲಾದವುಗಳ ಮೇಲಿನ ಅಲಂಕಾರಗಳೆಲ್ಲವೂ ನಕ್ಷೆಗಳಾಗಿವೆ.

ನಕ್ಷಾ ಚಿತ್ರಲೇಖನದಲ್ಲಿ ಸಾಮಾನ್ಯವಾಗಿ ಸಂಪೂರ್ಣ ಸ್ಥಳವ್ಯಾಪಕ(All over pattern),

ವಿಶಿಷ್ಟಸ್ಥಳ ವ್ಯಾಪಕ(Panels) ಮತ್ತು ಅಂಚುಗಳು(Border) ಎಂದು ಮೂರು ವರ್ಗಗಳನ್ನು ವಿಂಗಡಿಸಲಾಗಿದೆ.

ಜಾಮಿತಿಕ ಆಕೃತಿಗಳಲ್ಲಿ ಜಾಳಿಗೆಯನ್ನು ಹೆಣೆದಂತೆ ಅಡ್ಡ ಉದ್ದ ರೇಖೆಗಳನ್ನೆಳೆದು ಅಲಂಕರಿಸುವ ನಕ್ಷೆಗಳ ಚಿತ್ರಣವು ಪ್ರಾರಂಭಿಕ ಅಭ್ಯಾಸಕ್ಕೆ ಅತ್ಯುತ್ತಮ ಮಾದರಿಯಾಗಿದೆ. ಚೌಕ(Square), ಚೌಕವಜ್ರಾಕೃತಿ(Square diamond) ಹಾಗೂ ಸಮಭುಜ ತ್ರಿಭುಜ (Equilateral triangle)ಮುಂತಾದ ಆಕೃತಿಗಳನ್ನು ಜಾಳಿಗೆಯನ್ನು ಹೆಣೆಯಲು ಉಪಯೋಗಿಸಬಹುದು.

ನಕ್ಷಾ ಚಿತ್ರಲೇಖನಕ್ಕೆ ತೊಡಗುವದಕ್ಕೆ ಮೊದಲು ನಕ್ಷಾಚಿತ್ರಲೇಖನದ ಮೂಲ ತತ್ವಗಳನ್ನು ತಿಳಿದುಕೊಂಡಿರಬೇಕಾಗುತ್ತದೆ.

ಸಮವಿಂಗಡಣೆ(Even distribution), ಪುನರಾವರ್ತನೆ(Repetation), ಸಮದರ್ಶನ (Symmetry), ಸಮತೋಲನ(Balance), ಛಂದೋಬದ್ಧತೆ(Rhythm) ವಿಷಮ(Contrast), ಕಿರಣ ವಿಸ್ತಾರ(Radiation), ಅದಲು-ಬದಲು(Alternation), ತಿರುವು-ಮುರುವು (Counterchange), ಅಂತರಭೇದ(Interchange) ಅಂಶಾಚ್ಛಾದನ (Over lapping), ತಳಕು(Inter lacing), ಸರಪಳಿ(Chain) ವೈವಿಧ್ಯತೆ(Variety), ಸ್ಥಬ್ಧಚಾಲನೆ (Repose), ದೃಢತೆ(Stability) ಮೇಚ್ಛಾದನೆ(Superposition) ಹಾಗೂ ಸ್ಪರ್ಶಮಿಲನ (Tangential Junction)ಮುಂತಾಗಿ ನಕ್ಷಾಚಿತ್ರಲೇಖನ ಮೂಲತತ್ವಗಳಿದ್ದು ಅವುಗಳ ವಿವರಣಾತ್ಮಕ ಅಭ್ಯಾಸ ಅವಶ್ಯವಾಗಿದೆ. ನಕ್ಷೆಗಳಲ್ಲಿ ನೈಸರ್ಗಿಕ ವಸ್ತುಗಳನ್ನು ಚಿತ್ರಿಸುವದಕ್ಕೆ ಸಾಂಪ್ರದಾಯಕ ರೀತಿ(Conventional Treatment) ಎಂದು ಕರೆಯುತ್ತಾರೆ. ಸಾಂಪ್ರದಾಯಕ ರೀತಿಯಲ್ಲಿ 'ಬಹಿರ್ವಕ್ರ' ಮತ್ತು 'ಅಂತರ್ವಕ್ರ'ಗಳೆಂದು ರೇಖಾ ಸಂಕೇತಗಳುಂಟು.

ವಿ. ಟಿ. ಕಾ.

## ನಗೆಚಿತ್ರ ಪಟ್ಟಿಕೆ (Comic Strip Art)

ಇದು ದೃಶ್ಯಮಾಧ್ಯಮದ ಜನಪ್ರಿಯ ರೂಪ. ಬ್ರಿಟನ್ನಿನ ಹೋಗಾರ್ಥ ಮತ್ತು ಫ್ರಾನ್ಸಿನ ಡೋಮಿಯರ್ ಈ ನಿಟ್ಟಿನಲ್ಲಿ ಮೊದಲಿಗರೆನಿಸಿದರೂ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಅಮೆರಿಕೆಯಲ್ಲಿ ಈ ಕಲೆ ನಿಚ್ಚಳವಾಗಿ ಮೈದಾಳಿತು. ೧೯೫೦ರ ದಶಕದಲ್ಲಿ ಈ ಕಲಾ ಮಾಧ್ಯಮವು ಚಿತ್ರಕಾರರಿಂದ ಅಂಗೀಕರಿಸಲ್ಪಟ್ಟಿತು. ಅವರು ಆಧುನಿಕ ಜೀವನವನ್ನು ಚಿತ್ರಪಟ್ಟಿಕೆಗಳ ಶ್ರೇಣಿಗಳಲ್ಲಿ ಬಿಂಬಿಸಿದರು. ಈ ಚಿತ್ರ ಪಟ್ಟಿಕೆಗಳ ಶ್ರೇಣಿಯು ಕತೆ, ಜನಪ್ರಿಯವಾದ ವ್ಯಂಗ್ಯಚಿತ್ರ ಇಲ್ಲವೆ ಅಸಂಗತ ವಿಕೃತಿಗಳಿಂದ ಕೂಡಿರುತ್ತಿತ್ತು. ಇತ್ತೀಚೆಗೆ ರಾಜಕೀಯ ಉದ್ದೇಶಗಳಿಗಾಗಿ ಈ ದೃಶ್ಯಮಾಧ್ಯಮವನ್ನು ಬಳಸಲಾಗುತ್ತದೆ. ಅನೇಕ ಸಮಕಾಲೀನ ಚಿತ್ರಕಾರರು ನಗೆಚಿತ್ರ ಪಟ್ಟಿಕೆಗಳ ವಿನ್ಯಾಸಗಳನ್ನು ತಮ್ಮ ಕಲೆಯಲ್ಲಿ ಅಳವಡಿಸಿದ್ದಾರೆ. ಕೆಲವು ಖ್ಯಾತ ಕಲಾವಿದರು ತಮ್ಮ ಶ್ರೇಷ್ಠ ಕಲಾಕೃತಿಗಳಿಗೂ ಈ ವಿನ್ಯಾಸವನ್ನು ಬಳಸಿದ್ದಾರೆ. ಈಚೆಗೆ ಇಂಥ ಚಿತ್ರ ಪಟ್ಟಿಕೆಗಳು ದಿನಪತ್ರಿಕೆ, ನಿಯತ ಕಾಲಿಕೆಗಳಲ್ಲಿ ತುಂಬಾ ಜನಪ್ರಿಯತೆ ಪಡೆದಿವೆ. ಇಂಥ ಪಟ್ಟಿಕೆಗಳನ್ನು ಸಿದ್ಧಪಡಿಸಿಕೊಡುವ ಸಂಘ, ಸಿಂಡಿಕೇಟ್‌ಗಳಿವೆ.

ಶಿ.ಹ.

## ನರಗುಂದ

ಧಾರವಾಡ ಜಿಲ್ಲೆಯ ತಾಲೂಕು ಕೇಂದ್ರಗಳಲ್ಲಿ ಒಂದಾದ ನರಗುಂದದ ಅರಮನೆಯನ್ನು ಬಾಬಾಸಾಹೇಬನೇ ಕಟ್ಟಿಸಿದಂತೆ ತೋರುತ್ತದೆ. ಅದರ ಒಂದು ಕೋಣೆಯಲ್ಲಿ ಭಿತ್ತಿ ಚಿತ್ರಗಳಿವೆ. ದಶಾವತಾರ ಹಾಗೂ ಕೃಷ್ಣ ಲೀಲೆಗೆ ಸಂಬಂಧಿಸಿದ ಚಿತ್ರಗಳು ಕೆಲವು ಪೌರಾಣಿಕ ವ್ಯಕ್ತಿಗಳ ಚಿತ್ರಣವೂ ಇವೆ. ದೊಡ್ಡದಾದ ಹರಹಿನಲ್ಲಿ ಯುದ್ಧವೊಂದರ ಚಿತ್ರಣವನ್ನು ವಿವರವಾಗಿ ಚಿತ್ರಿಸಿದೆ. ಎರಡು ಅಂಕಣಗಳಲ್ಲಿ ಹರಡಿರುವ ಈ ಸಂದರ್ಭದ ಚಿತ್ರಣದಲ್ಲಿ ಹಲವಾರು ಸೈನಿಕರು, ಮುಸ್ಲಿಂ ಹಾಗೂ ಬ್ರಿಟಿಷ್ ಉಡುಗೆ ಧರಿಸಿದವರು ಶಸ್ತ್ರಾಸ್ತ್ರ ಸಹಿತ ಹೋಗುತ್ತಿರುವುದು ಕೈ ತೋಪುಗಳು ಇವೆ. ಕೆಳ ಅಂಕಣದಲ್ಲಿ ಯುದ್ಧದ ದೃಶ್ಯವಿದೆ. ರಣಾಂಗದ ಮಧ್ಯೆ ಹನುಮಂತ ದೇವರ ಪುಟ್ಟದಾದ ಗುಡಿಯಿದೆ. ಪ್ರಾಯಶಃ ಈ ಯುದ್ಧ ನರಗುಂದ ಬಾಬಾಸಾಹೇಬ ಬೆಳಗಾವಿಯ ಸುರೇಬಾನದಲ್ಲಿ ಬ್ರಿಟಿಷರೊಂದಿಗೆ ಹೋರಾಡಿದ ದೃಶ್ಯವೂ ಮಧ್ಯದ ಹನುಮಂತನ ಗುಡಿಯಲ್ಲಿ ಬಾಬಾಸಾಹೇಬ ಕರ್ನಲ್‌ನನ್ನು ಸಾಯಿಸಿದ್ದರ ಕುರುಹಾಗಿಯೂ ಚಿತ್ರಿತವಾಗಿದ್ದಿರಬಹುದು. ಅರಮನೆಯ ಮುಂದಿರುವ ವೆಂಕಟೇಶ್ವರ ದೇವಾಲಯದಲ್ಲೂ ಕೆಲವು ಭಿತ್ತಿ ಚಿತ್ರಗಳಿದ್ದುವಾಗಿ ತಿಳಿದು ಬರುತ್ತದೆ. ಊರಲ್ಲಿರುವ ಗುಂಡಪ್ಪ ಹಸಬಿ ಎಂಬುವರ ಮನೆಯಲ್ಲಿ ಚಿತ್ರಗಳು ಇರುವುದಾಗಿ ಶಿವರಾಮಕಾರಂತರು ತಿಳಿಸುತ್ತಾರೆ.

ಅಂಚ

## ನಾಗರಸೆ ಎಣ್ಣೆ (Linsed Oil)

ತೈಲಚಿತ್ರ ರಚಿಸಲು ಮುಖ್ಯವಾಗಿ ಲಿನ್ಸಿಡನ್ನು ಬಳಸುತ್ತಾರೆ. ನಾಗರಸೆ ಎಂಬ ರೀತಿಯ ಸಸ್ಯದ ಬೀಜಗಳಿಂದ ಇದನ್ನು ತಯಾರಿಸುತ್ತಾರೆ. ಬಣ್ಣಗಳನ್ನು ತೆಳುವಾಗಿ ಮಾಡಿಕೊಳ್ಳಲು ಲಿನ್ಸಿಡ್ ಆಯಿಲ್ ಒಂದು ಮಾಧ್ಯಮ ಆಗಿರುತ್ತದೆ. ತೈಲ ಚಿತ್ರಗಳನ್ನು ಸುರುಳಿ ಸುತ್ತಿಡುವಲ್ಲಿ ಲಿನ್ಸಿಡ್ ಆಯಿಲ್‌ನ ಬಳಕೆ ಒಂದು ರೀತಿಯಲ್ಲಿ ಸಹಾಯಕಾರಿಯಾಗಿರುತ್ತದೆ. ಕ್ರಮಬದ್ಧವಾಗಿ ಇದನ್ನು ಉಪಯೋಗಿಸಿದಲ್ಲಿ ಚಿತ್ರ ಒಣಗಿದ ನಂತರ ಸೀಳುವಿಕೆಯಾಗಲಿ, ಪಕಳೆಗಳಂತೆ ಎದ್ದು ಬರುವುದಾಗಲೀ ಆಗುವುದಿಲ್ಲ.

ರೇ.ಮಾ.

## ನಾಗಮಂಡಲ

ನಾಗಮಂಡಲ ದಕ್ಷಿಣ ಕನ್ನಡ ಜಿಲ್ಲೆಯ ನೃತ್ಯಾಚರಣೆ. ನಾಗಮಂಡಲದ ಸ್ವರೂಪಕ್ಕನುಸರಿಸಿ ವೈದ್ಯರು ಬಾಳೆದಿಂಡಿನ ಹೊರಕವಚವನ್ನು ಅಳತೆ ಪಟ್ಟಿಯಿಂದ ಮಂಡಲಕ್ಕೆ ಹೊರ ಚೌಕಟ್ಟನ್ನು ಹಳದಿ ಬಣ್ಣದ ಹುಡಿಯಿಂದ ರೇಖಿಸುತ್ತಾರೆ. ಮೊದಲಿಗೆ ಮಂಡಳದ ಮಧ್ಯಭಾಗದಲ್ಲಿ ಗಣಪತಿಯನ್ನು ಬರೆದು, ಪೂರ್ಣ ಮಂಡಲಕ್ಕೆ ರಂಗೋಲಿ ಚಿತ್ತಾರ ಬರೆಯಲು ಆರು ಮಂದಿಗೆ ಸುಮಾರು ಆರು ಗಂಟೆಗಳ ಕಾಲ ತಗಲುತ್ತದೆ. ಏಳು ಹೆಡೆಯ ಸರ್ಪದ ಭೀಮಕಮನೀಯ ಆಕೃತಿಯನ್ನು ಸುರುಳಿ ಸುರುಳಿಯಾಗಿ ಪವಿತ್ರಗಂಟುಗಳೊಂದಿಗೆ ಬರೆವ

ಅಜಂತ





ಅಮೂರ್ತಕಲೆ - ಪಾಲ್‌ಕ್ಲೇ

ಆಧುನಿಕ ಚಿತ್ರಕಲೆ - ರಿನೋಯರ್



ಗೌಗಿನ್





ವ್ಯಾನ್‌ಗೋ



ಮೋನೆ

ಇಂಪ್ರೆಷನಿಸಂ - ಮಾನೆ





ಎಕ್ಸ್‌ಪ್ರೆಶನಿಸಂ - ಗ್ರಾಸೋಜಾರ್ಜ್



ಕರ್ನಾಟಕದ ಚಿತ್ರಕಲೆ - ವೈ. ಸುಬ್ರಮಣ್ಯರಾಜು



ಎಸ್. ಎಂ. ಪಂಡಿತ್



ಕರ್ನಾಟಕದ ಚಿತ್ರಕಲೆ - ಕೆ. ಕೆ. ಹೆಬ್ಬಾರ್



ಆರ್. ಎಂ. ಹಡಪದ್

ಕ್ಯೂಬಿಸಂ - ಪಿಕಾಸೋ



ವರ್ಣ - ಆಂಡ್ರೆ ಡಿರೈನ್



ಅವಕಾಶ - ವ್ಯಾನ್‌ಗೋ



ಜಲವರ್ಣ - ಪಿ. ಆರ್. ತಿಪ್ಪೇಸ್ವಾಮಿ

ಪಾಪಕಲೆ - ಜಿಮ್‌ಡೈನ್





ಬರೋಕ್ - ನಿಕೋಲಸ್ ಪೊಸಿನ್

ಫಾವಿಸಂ - ಹೆನ್ರಿಮತೀಸ್





ನವ ಎಕ್ಸ್‌ಪ್ರೆಶನಿಸಂ - ಹೌವಾಡ್ ಹೊಜ್ಕೀ

ಭಾರತೀಯ ಚಿತ್ರಕಲೆ - ನಂದಲಾಲ್ ಬೋಸ್



ಭೂದೃಶ್ಯ - ಎನ್. ಹನುಮಯ್ಯ

ಭಿತ್ತಿಚಿತ್ರ - ಮೈಕೆಲ್ ಏಂಜಲೋ





ರಜಪೂತ ಕಲೆ


ಸರ್‍ರಿಯಲಿಸಂ - ಸಾಲ್ವಿಡಾರ್ ಡಾಲಿ


ಸಂಯೋಜನೆ - ರವಿವರ್ಮ

ಪುನರುಜ್ಜೀವನ ಕಲೆ - ಮನಿಕೋ ಚಿರಿಲಾಂಡಿಯೋ





ರೋಮನ್‌ಶಿಲ್ಪ

ಶಿಲ್ಪ (ಸಾಂಪ್ರದಾಯಿಕ) ಅಶೋಕ ಗುಡಿಗಾರ





ಶಿಲ್ಪ (ಆಧುನಿಕ) - ಹೆನ್ರಿಮೂರ್



ಮಧ್ಯಯುಗೀನ ಯುರೋಪ್ ಕಲೆ



ಮ್ಯಾನರಿಸಂ - ಎಲ್‌ಗ್ರೆಕೋ

ಮೊದಲಿಗೆ ಜೀವರೇಖೆ ಹದಿಮೂರು ಅಥವಾ ಆಧಾರ ರೇಖೆಯನ್ನು ಎಳೆಯುತ್ತಾರೆ. ಜೀವ ರೇಖೆಯ ಇಕ್ಕೆಲಗಳಲ್ಲಿ ಹಳದಿ ಬಣ್ಣದಲ್ಲಿ ಹಾವಿನ ನಕ್ಷೆ ಬಿಡಿಸುತ್ತಾರೆ. ಹಾವಿನ ಕಣ್ಣಿಗೆ ಕೆಂಪು ಬಣ್ಣವನ್ನು ಬಳಸುತ್ತಾರೆ. ಪವಿತ್ರದೊಳಗಿನ ಹೊಗ್ಗು ಹೊರಡುವಿಕೆಯನ್ನೂ ಕಪ್ಪು ಬಣ್ಣದಲ್ಲಿ ರೇಖಿಸುತ್ತಾರೆ. ಬಿಳಿ ಹುಡಿಯನ್ನು ಬಳಸಿ ಚುಕ್ಕೆ ಚುಕ್ಕಿಯಾಕಾರದಲ್ಲಿ ನಾಗನಿಗೆ ಕಾಲು ಬಿಡಿಸುತ್ತಾರೆ. ನಾಗನ ಆಕೃತಿಯ ನಡು ನಡುವೆ 'ಮರಿಮಟ್ಟೆ'ಗಳನ್ನು ಬಿಳಿ ಹುಡಿಯಿಂದ ರೂಪಿಸುತ್ತಾರೆ. ಮೊದಲು ಹಸರು ಬಣ್ಣದ ಹುಡಿ. ಮೇಲೆ ಬಿಳಿ, ಅರಸಿನ, ಕೆಂಪು, ಕಪ್ಪು ಹೀಗೆ ಐದು ಬಣ್ಣಗಳನ್ನು ಬಳಸಿ ಹೆಡೆಯ ಉಬ್ಬನ್ನು ರಚಿಸುತ್ತಾರೆ. ಹೆಡೆಯ ಕೆಳಭಾಗದಲ್ಲಿ ವಿಷ್ಣು ಪಾದವನ್ನು ಆಕಾರದಲ್ಲಿ ರೇಖಿಸುತ್ತಾರೆ. (ಇದು ಕೃಷ್ಣ ಕಾಳಿಂಗನ ಹೆಡೆ ಮುಟ್ಟಿದುದರ ಸಂಕೇತ) ಹೆಡೆಯ ಮೇಲೆ ದೊಡ್ಡ ಪ್ರಭಾವಳಿಯೊಂದನ್ನು ಬಿಡಿಸಿ ಅದರ ಒಳಗೆ ಬ್ರಹ್ಮನ ಮುಖ, ದ್ರಾಕ್ಷಿ, ಬಳ್ಳಿ, ಎಲೆಗಳನ್ನು ಕಪ್ಪು ಬಣ್ಣದಲ್ಲಿ ಬಿಡಿಸುತ್ತಾರೆ. ಜಂಗಮನ ಸೊಪ್ಪಿನ ಹಸುರು ಹುಡಿಯಿಂದ ದಂಡೆ ಕಟ್ಟಿ ಅದರ ಮೇಲೆ ಸ್ವಸ್ತಿಕವನ್ನು ಇಡುತ್ತಾರೆ. ನಾಗಮಂಡಲದಲ್ಲಿ ಕಲೆಯ ಅಂಶವನ್ನು ಸಂವೇದನೆ, ಚಿತ್ರ, ರೇಖೆ, ವರ್ಣಗಳಿಂದ ಗುರ್ತಿಸಬಹುದು.

**ಮರಿ**

## ನಾಗಾರ್ಜುನ ಕೊಂಡ

ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಪಲ್ನಾಡು ತಾಲ್ಲೂಕಿನಲ್ಲಿದೆ. ಕ್ರಿ. ಶ. ಆರಂಭದ ಕಾಲದಲ್ಲಿ ಜೀವಿಸಿದ್ದ ವಿಶ್ವವಿಖ್ಯಾತ ಬೌದ್ಧ ವಿದ್ವಾಂಸ, ಮಾಧ್ಯಮಿಕ ಶಾಖೆಯ ಪ್ರವರ್ತಕ ನಾಗಾರ್ಜುನಾಚಾರ್ಯ ಇಲ್ಲಿ ವಾಸಮಾಡಿ ಸಮಾಧಿ ಹೊಂದಿದುದರಿಂದ ಈ ಪ್ರದೇಶಕ್ಕೆ ನಾಗಾರ್ಜುನ ಕೊಂಡ ಎಂಬ ಹೆಸರು ಬಂದಿದೆ. ಈ ಕಣಿವೆಯಲ್ಲಿ ಇಕ್ಷ್ವಾಕು ದೊರೆಗಳ ಕಾಲದ ಹಲವಾರು ಅವಶೇಷಗಳು ಈ ಕಣಿವೆಯಲ್ಲಿ ದೊರಕಿರುವುದರಿಂದ ಈ ಕಣಿವೆ ಐತಿಹಾಸಿಕ ಪ್ರಾಮುಖ್ಯ ಪಡೆದಿದೆ. ಮತ್ತು ಅಸಂಖ್ಯಾತ ಬೌದ್ಧ ವಾಸ್ತು ನಿರ್ಮಾಣಗಳ ಅವಶೇಷಗಳನ್ನು ಇಲ್ಲಿ ಕಾಣಬಹುದು.

ನಾಗಾರ್ಜುನ ಸಾಗರದ ಪ್ರದೇಶವು ಶಿಲಾಯುಗದ ಸಂಸ್ಕೃತಿಯ ನೆಲೆಯಾಗಿತ್ತು ಎಂಬುದು ಇಲ್ಲಿ ಸಿಕ್ಕಿರುವ ಶಿಲಾಯುಗದ ಪಳೆಯುಳಿಕೆಗಳಿಂದ ಗೊತ್ತಾಗುತ್ತದೆ. ಬೃಹತ್ ಶಿಲಾಯುಗದ ಶಿಲಾಸಮಾಧಿಗಳು ಹೆಚ್ಚಾಗಿವೆ.

ಐತಿಹಾಸಿಕವಾಗಿ ಈ ಪ್ರದೇಶವನ್ನು ನಂದರು ವಶಪಡಿಸಿಕೊಂಡಿದ್ದರು. ನಂತರ ನಂದರನ್ನು ಸೋಲಿಸಿ ಅಧಿಕಾರಕ್ಕೆ ಬಂದ ಚಂದ್ರಗುಪ್ತಮೌರ್ಯನ ವಶದಲ್ಲಿತ್ತು. ಅಶೋಕನ ನಂತರ ಅವರ ಸಾಮಂತರಾಗಿದ್ದ ಶಾತವಾಹನರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ. ಶಾತವಾಹನರು ಬೌದ್ಧಧರ್ಮಕ್ಕೆ ನೀಡಿದ ಆಶ್ರಯದಿಂದಾಗಿ ಈ ಪರಿಸರದಲ್ಲಿ ಹಲವಾರು ಬೌದ್ಧಸ್ತೂಪಗಳು, ಚೈತ್ಯಾಲಯಗಳು ಮತ್ತು ಸಂಘಾರಾಮಗಳನ್ನು ಇಲ್ಲಿ ಕಾಣಬಹುದಾಗಿದೆ. ಈವರೆಗೆ ಇಲ್ಲಿ ೬೦ ಕ್ಕೂ ಹೆಚ್ಚು ಬೌದ್ಧಸ್ತೂಪ, ಚೈತ್ಯಾಗಾರ ಮತ್ತು ವಿಹಾರ ಸಮುದಾಯಗಳು, ಹಿಂದೂ ದೇವಾಲಯ ಹಾಗೂ ಇತರ ಕಟ್ಟಡಗಳೂ ಅಸಂಖ್ಯಾತ ಶಿಲ್ಪಗಳೂ ನಾಣ್ಯಗಳೂ, ಶಾಸನಗಳು ಬೆಳಕಿಗೆ ಬಂದಿವೆ. ಈ ಅವಶೇಷಗಳು ಈ ಕಣಿವೆಯಲ್ಲಿ ಕ್ರಿಸ್ತಶಕದ ಮೊದಲ ಶತಮಾನಗಳಲ್ಲಿ ಬೆಳೆದು ಬಂದ ಸಂಸ್ಕೃತಿಯ ಹಲವು ಮುಖಗಳ

ಪರಿಚಯ ಮಾಡಿಕೊಡುತ್ತವೆ. ಸುಟ್ಟಇಟ್ಟಿಗೆಗಳನ್ನು ಉಪಯೋಗಿಸಿ ಗೋಡೆಗಳನ್ನು ಕಟ್ಟಲಾಗಿದೆ. ಈ ಗೋಡೆಗಳಿಗೆ ಸುಣ್ಣದ ಗಾರೆಯನ್ನು ಬಳಸಿರುವುದಲ್ಲದೆ ಗೋಡೆಗಳ ಮೇಲೆ ವಿವಿಧ ಅಲಂಕಾರಗಳನ್ನು ಗಾರೆ ಗಚ್ಚುಗಳಿಂದ ಮಾಡಲಾಗಿದೆ.

ಅಲ್ಲದೆ ೨೮ ವಿಹಾರಗಳು, ೧೦ ಸ್ತೂಪಗಳು, ಬೌದ್ಧ ಸ್ತ್ರೀ ದೇವತೆಗಳಲ್ಲಿ ಒಬ್ಬನಾದ ಹಾರೀತಿಯ ಮಂದಿರ, ಕಂದಕ ಗೋಡೆಗಳಿಂದ ಪರಿವೃತವಾದ ವಿಜಯಪುರಿ ಪ್ರದೇಶ ಅದರೊಳಗೆ ಅಶ್ವಮೇದಯಾಗ ವೇದಿಕೆಗಳು, ಅರಮನೆಯಿಂದ ನದೀತೀರಕ್ಕೆ ಹೋಗುವ ಸೋಪಾನಗಳು ಮತ್ತು ಸ್ನಾನಘಟ್ಟ, ಸಾರ್ವಜನಿಕ ಕಾರ್ಯಗಳಿಗೆ ಉಪಯೋಗಿಸುತ್ತಿದ್ದ ರಂಗಮಂದಿರ, ಪುಷ್ಪಭದ್ರಸ್ವಾಮಿ, ಸರ್ವದೇವಸ್ವಾಮಿ, ಕಾರ್ತಿಕೇಯಸ್ವಾಮಿ ಮತ್ತು ನವಗ್ರಹ ದೇವತೆಗಳ ಮಂದಿರಗಳಿವೆ.

ಅಣೆಕಟ್ಟಿನಿಂದಾಗಿ ಜಲಾವೃತವಾದ ಮೂಲಸ್ಥಳವನ್ನು ಬದಿಯ ದ್ವೀಪವೊಂದರಲ್ಲಿ ಪುನರ್‌ರೂಪಿಸಿದ್ದು, ಅಲ್ಲಿಯ ವಸ್ತು ಸಂಗ್ರಹಾಲಯದಲ್ಲಿ ಬೃಹದಾಕಾರದ ಲಜ್ಜಾಗೌರಿಯ ಶಿಲ್ಪವೂ ಸೇರಿದಂತೆ ಜಾತಕ ಕಥೆಯ ಫಲಕಗಳು, ಬಿಡಿ ಶಿಲ್ಪಗಳು ಹಾಗೂ ಶಾಸನಗಳನ್ನು ಕಾಣಬಹುದು.

**ಜಿ.ಟಿ.ಜ.**

## ನಾರ್ತಾಮಲೈ

ಪುದುಕೋಟೆಯಿಂದ ಎರಡು ಮೈಲಿ ದೂರದಲ್ಲಿರುವ ನಾರ್ತಾಮಲೈ ಅದರ ಅಪೂರ್ವಶಿಲ್ಪ ಕಟ್ಟಡಗಳ ವೈವಿಧ್ಯದಿಂದ ಪ್ರಾಮುಖ್ಯತೆ ಪಡೆದಿದೆ. ಇಲ್ಲಿ ಪ್ರಸಿದ್ಧ ಗುಹಾಲಯವಿದೆ, ಈ ಸ್ಥಳವು ಒಂದು ಕಾಲಕ್ಕೆ ಜೈನ ಧರ್ಮೀಯವಾಗಿತ್ತು. ಈಗ ವೈಧಿಕ ಧರ್ಮ ನೆಲೆಯೆನಿಸಿದೆ. ಮಂದಿರ, ಮಂಟಪ, ವಿಷ್ಣು ಮೂರ್ತಿಗಳು, ಎಲ್ಲ ಆರಡಿಎತ್ತರ. ನಡುವಿನ ಅಂಕಣದಲ್ಲಿ ಪ್ರವೇಶ ಮಾರ್ಗದ ಎಂಟು ದಿಸೆಗಳಲ್ಲೂ ಮೂರ್ತಿಶಿಲ್ಪದಲಂಕರಣ. ಇಲ್ಲಿಯ ಕೆತ್ತನೆ, ಸರಳ ಅಂದವಾದದ್ದು. ಶಂಕ- ಚಕ್ರ ಲಾಂಛನ.

ಈ ಗುಹಾಲಯದಿಂದ ತೆಂಕಣ ದಿಸೆಯಲ್ಲಿ ಇನ್ನೊಂದು ಗುಹೆಯಿದೆ. ೯ನೆಯ ಶತಕದಲ್ಲಿದ್ದ ಪಲ್ಲವ ದೊರೆ ನೃಪತುಂಗನ ಕಾಲದ ಈ ದೇವಾಲಯವನ್ನು ದಳಪತಿಯ ಮಗಳೊಬ್ಬಳು ವಿಸ್ತರಗೊಳಿಸಿದಳು. ಕಿರು ಕಂಬಶಾಲೆಯ ಅಂಕಣವನ್ನು, ನಂದಿ ಮಂಟಪವನ್ನು ಸೇರಿಸಿದಳು. ಗುಹೆಯೆದುರಲ್ಲಿ ಶಿವಾಲಯ ಸಂಕೀರ್ಣದ ಕಲ್ಲು ಕಟ್ಟಡಗಳಿವೆ. ಮುಖ್ಯ ಅಧಿದೈವ, ಎಂಟು ಉಪದೇವತೆಗಳಿಂದ ಸುತ್ತುವರಿಯಲ್ಪಟ್ಟಿದ್ದಾನೆ. ಚೋಳ ಶಿಲ್ಪದ ಮೊದಲ ಹಂತದಿಂದಾರಂಭವಾದ ಶೈಲಿ ಎನ್ನಿಸುತ್ತದೆ.

ಚೋಳರ ಮೂಲಪುರುಷ ವಿಜಯಾಲಯನ ಸೃಜನೆಯಿದು. ಇಲ್ಲಿನ ಒಂದು ಶಾಸನ, “ವಿಜಯಾಲಯ ಚೋಳೇಶ್ವರಂ” ಎಂಬ ಮುಖ್ಯ ದೈವವನ್ನು ಉದ್ಧರಿಸುತ್ತದೆ. ಕೆಲವು ಮೂರ್ತಿಶಿಲ್ಪ ಅವಲೋಕಿಸಿದಾಗ, ವಿಮಾನದ ಮುಂದುಗಡೆಯಿರುವ, ನರ್ತಕಿಯರು, ವಿದ್ಯಾಧರ, ಉಮಾದೇವಿ ಸಹಿತನಾದ ದಕ್ಷಿಣಾಮೂರ್ತಿ ಎಲ್ಲವೂ ಅಂದವಾದ ಶಿಲ್ಪಗಳು

ಎನ್ನಿಸುತ್ತದೆ. ಒಟ್ಟಾರೆ ೯ನೇ ಶತಕದ ಪ್ರಮುಖ ಹಂತದಲ್ಲಿ 'ಚೋಳ ವಾಸ್ತುಶಿಲ್ಪ'ದ ಉತ್ತಮ ಉದಾಹರಣೆ ಇದು. ಇದೇ ಕಾಲದ ಈಗ ತೀರಾ ತ್ರುಟಿತವಾಗಿರುವ ಕೆಲವು ವರ್ಣ ಚಿತ್ರಗಳನ್ನು ಇಲ್ಲಿ ಕಾಣಬಹುದು.

ವಿಶ್ವನಾಥ

## ನಾಬಿಸ್

ನಾಬಿಸ್ ಸಿದ್ಧಾಂತವು ಮನ್ನೆಸ್ ಡೇವಿಸ್ ತತ್ವದ ಪ್ರಕಾರ ಸಂಕ್ಷಿಪ್ತಗೊಂಡಿರುತ್ತದೆ. ತತ್ವದ ಎರಡು ರೂಪಗಳೆಂದರೆ ೧) ವಸ್ತುನಿಷ್ಠ ವಿಕೃತರೂಪ. ಇದು ಪೂರ್ಣವಾದ ಸೌಂದರ್ಯ ಮತ್ತು ಅಲಂಕಾರಿಕೆಯ ವಿಷಯಗಳನ್ನೊಳಗೊಂಡಿರುತ್ತದೆ. ಅಲ್ಲದೆ ತಾಂತ್ರಿಕ ವರ್ಣ ಮತ್ತು ಸಂಯೋಜನೆಯಿಂದ ಕೂಡಿರುತ್ತದೆ. ೨) ವಿಷಯ ವಿಕೃತರೂಪ, ಕಲಾವಿದನ ಸ್ವಂತ ಆಲೋಚನೆಯಿಂದ ಕೂಡಿರುತ್ತದೆ.

ನಾಬಿಸ್ ಕಲೆಯ ತತ್ವ ಈಸಲ್ ಪೇಯಿಂಟಿಂಗ್‌ಗಷ್ಟೇ ಅನ್ವಯವಾಗದೆ, ಅಲಂಕಾರಿಕ ತಂತ್ರಗಳಲ್ಲೂ ಬಳಸಲ್ಪಡುತ್ತದೆ. ಇದರ ಸ್ಫೂರ್ತಿಯಿಂದ ಕಾರ್ಡ್‌ಬೋರ್ಡ್, ಟೆಂಪೆರಾ, ಗಾಜು, ಲಿಥೋಗ್ರಾಫ್, ಪೋಸ್ಟರ್‌ಗಳು ಮುಂತಾದವುಗಳ ಮೇಲೂ ಚಿತ್ರಗಳನ್ನು ರಚಿಸಿದ್ದಾರೆ.

ಮರಿ

## ನಾರದ ಶಿಲ್ಪ

ಮದ್ರಾಸ್‌ನ ಅಡೆಯಾರ್ ಗ್ರಂಥಾಲಯದಲ್ಲಿರುವ 'ನಾರದ ಶಿಲ್ಪ' ಹಸ್ತಪ್ರತಿಯ ರೂಪದಲ್ಲಿದ್ದು ಇನ್ನೂ ಪ್ರಕಟವಾದಂತೆ ಕಂಡು ಬರುವುದಿಲ್ಲ. ವಿ. ರಾಘವನ್ ಅವರು ೧೯೩೩ರಲ್ಲಿ ಈ ಹಸ್ತಪ್ರತಿಯಲ್ಲಿಯ ಚಿತ್ರಕಲೆಯ ಭಾಗವನ್ನು ಪ್ರಕಟಿಸಿದ್ದಾರೆ (ದಿ ಇಂಡಿಯನ್ ಹಿಸ್ಟಾರಿಕಲ್ ಕ್ವಾರ್ಟರ್ಲಿ, ಸಂಪುಟ ೯) ಭಿತ್ತಿಯ ಸಿದ್ಧತೆ, ಸುಣ್ಣದ ಕಾರಣೆ, ಚಿತ್ರರಚನೆಯ ನಂತರದ ರಕ್ಷಣೆ ಇತ್ಯಾದಿಗಳನ್ನು ಪ್ರಾಸಂಗಿಕವಾಗಿ ತಿಳಿಸಿ ಚಿತ್ರ ಪ್ರದರ್ಶನ ಶಾಲೆಯ ಬಗ್ಗೆ ವಿಸ್ತಾರವಾಗಿ ಹೇಳುತ್ತಾನೆ. ಚಿತ್ರಶಾಲೆ ಊರಿನ ಮಧ್ಯೆ ನಾಲ್ಕು ಹಾದಿ ಸೇರುವಲ್ಲಿ ರಾಜವೀಧಿಯಲ್ಲಿರಬೇಕು. ಮದ್ದಲೆ ಅಥವಾ ವೃತ್ತಾಕಾರ(ಮಂಡಲ)ದಲ್ಲಿ ಅಥವಾ ಗದೆಯ ಆಕಾರದಲ್ಲಿ ಹಲವಾರು ದೊಡ್ಡ ಮತ್ತು ಚಿಕ್ಕ ಬಾಗಿಲುಗಳಿಂದ ಕೂಡಿದಂತೆ ರಚಿಸಬೇಕು. ಒಳಾಂಗಣವನ್ನು ಚಿತ್ರತೂಗಲು ಹಾಗೂ ಇನ್ನೊಂದು ಭಾಗದಲ್ಲಿ ಪ್ರೇಕ್ಷಕರಿರುವಂತೆ ಎರಡು ಭಾಗಗಳಾಗಿ ವಿಭಜಿಸಬೇಕು. ಒಳಕೋಣೆಗಳಿದ್ದು ೩೨ ಅಥವಾ ೧೬ ಕಂಭಗಳಿಂದ ಕೂಡಿದ ಮಹಡಿಯ ಮೆಟ್ಟಿಲುಗಳಿರಬೇಕು. ಚಿತ್ರಗಳಿಗೆ ವಿಶಾಲವಾದ ಹಜಾರವಿದ್ದು ಮಧ್ಯದಲ್ಲಿ ಸ್ವಲ್ಪ ಎತ್ತರದಲ್ಲಿ ಇನ್ನೊಂದು ಕೋಣೆಯಿದ್ದು ಹತ್ತಲು ಕೆಲವು ಮೆಟ್ಟಿಲುಗಳಿರಬೇಕು. ಮುಂದೆ ಅಥವಾ ಪೂರ್ವಕ್ಕೆ ವಿಶೇಷವಾದ ಕೋಣೆಯೂ, ಕಿಟಕಿಗಳಿಗೆ ಮುಂಚಾಚುಗಳೂ(Conopics) ಶಾಲೆಯ ಒಳಗೆ ಹಲವಾರು ಆಸನಗಳೂ, ಹೊರಮನೆಯನ್ನು(Out house) ಹೋಲುವ ಉಪಶಾಲೆಗಳೂ ಇರಬೇಕು. ಶಾಲೆಯ ಮುಂಭಾಗದಲ್ಲಿ ಚಿಕ್ಕದಾದ ಗೋಪುರ ಇರಬಹುದು. ಶಾಲೆಯಲ್ಲಿ ದೇವ, ಗಂಧರ್ವ, ಕಿನ್ನರ, ಕ್ರೀಡಾನಿರತರು, ದೊಡ್ಡಮನುಷ್ಯರ ಚಿತ್ರ ಪ್ರದರ್ಶಿಸಬೇಕು.

ಎಂಬಿತ್ಯಾದಿಯಾಗಿ ವಿವರಿಸುತ್ತದೆ. ನೈಷದೀಯ, ಮಾಳವಿಕಾಗ್ನಿ ಮಿತ್ರ, ಕಾದಂಬರಿ, ಭರತೇಶ ವೈಭವ ಇತ್ಯಾದಿಗಳಲ್ಲಿ ರಾಜಗೃಹದಲ್ಲಿಯ ಚಿತ್ರಶಾಲೆಯ ಬಗ್ಗೆ ಪ್ರಸ್ತಾಪವಿದ್ದು ನಾರದ ಶಿಲ್ಪದಲ್ಲಿ ಇದು ವಿವರವಾಗಿ ಬರುತ್ತದೆ. ಇದಲ್ಲದೆ ಚಿತ್ರಗಳು ಇರುವ ಜಾಗ ಅನುಸರಿಸಿ ಭೌಮ(ನೆಲ), ಗೋಡೆ(ಕುಡ್ಯ) ಮತ್ತು ಒಳಮಾಳಿಗೆ(ಊರ್ಧ್ವಕ) ಎಂಬ ವಿಭಾಗ ಮಾಡಿ ಯಾವ ಜಾಗದಲ್ಲಿ ಯಾವ ಬಗೆಯ ಚಿತ್ರಗಳು ಇರಬೇಕು ಎಂದೂ ಹೇಳುತ್ತಾನೆ ಅವುಗಳಲ್ಲೂ ಶಾಶ್ವತ, ತತ್ಕಾಲಿಕ ಎಂದೂ ಧೂಳೀಚಿತ್ರ, ರಸಚಿತ್ರ ಎಂದೂ ಹಲವು ಬಗೆಗಳನ್ನು ತಿಳಿಸುತ್ತಾನೆ.

ಅಲನ

## ನಿಪ್ಪಾಣಿ

ಬೆಳಗಾವಿ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ನಿಪ್ಪಾಣಿಯ ದೇಸಾಯಿಯವರ ವಾಡೆ ವಿಶಾಲವಾದ ಎರಡಂತಸ್ತಿನ ಕಟ್ಟಡವಾಗಿದ್ದು ಮಹಡಿಯ ಹಜಾರದ ಗೂಡುಗಳಲ್ಲಿ ಹಾಗೂ



ಒಳಕೋಣೆಯೊಂದರಲ್ಲಿ ಕಳೆದ ಶತಮಾನದಲ್ಲಿ ರಚಿಸಿರಬಹುದಾದ ಭಿತ್ತಿ ಚಿತ್ರಗಳಿವೆ. ಇಲ್ಲಿನ ಚಿತ್ರಿತವಸ್ತು ಕೃಷ್ಣ ಹಾಗೂ ಆತನ ಪ್ರೇಯಸಿಯರಿಗೆ ಸಂಬಂಧಿಸಿದ ಶೃಂಗಾರ ಪರ ಚಿತ್ರಣಗಳೇ ಆಗಿದ್ದರೂ ಎಲ್ಲಿಯೂ ಸಭ್ಯತೆ ಮೀರಿ ಅಶ್ಲೀಲತೆಗೆ ಎಡೆ ನೀಡಿಲ್ಲದಿರುವುದು ಕಲಾವಿದನ ಸಂಯಮಕ್ಕೆ ಸಾಕ್ಷಿಯಾಗಿದೆ.

ಕೋಣೆಯೊಳಗಿನ ಚಿತ್ರಗಳು ನಾಲ್ಕಾರು ವಿಶಾಲವಾದ ಅಂಕಣದಲ್ಲಿ ಸಂಯೋಜಿತಗೊಂಡಿದೆ. ಪ್ರತಿಯೊಂದು ಅಂಕಣವೂ ಅರಮನೆಯನ್ನು ಹೋಲುವಂತಹ ಕಟ್ಟಡದಂತಿದ್ದು ಅವುಗಳ ಎಲ್ಲ ಕೋಣೆಗಳಲ್ಲೂ ಕೃಷ್ಣ ತನ್ನ ಪರಿವಾರದೊಂದಿಗೆ ವಾದ್ಯ, ನೃತ್ಯ ಗೋಷ್ಠಿಯಲ್ಲಿ ನಿರತನಾಗಿರುವಂತೆ ರೂಪಿಸಿದೆ ಎಂದರೆ ಹಲವಾರು ಚಿಕಣಿ ಚಿತ್ರಗಳನ್ನು ಒಟ್ಟಾಗಿ ಹೊಂದಿಸಿರುವಂತಹ ಅನುಭವವಾಗುತ್ತದೆ. ಆಕಾರಗಳಲ್ಲಿ ಕಿರಿದಾದರೂ ಕಾಗದದ ಮೇಲಿನ ಚಿಕಣಿ ಚಿತ್ರಗಳಂತೆ, ದೃಢವಾದ ಗೆರೆಗಳಿಂದ ಕೂಡಿ ಛಾಯಾಂಕನ ಮಾಡಿದಷ್ಟೇ ಪರಿಪೂರ್ಣವಾಗಿ ಭಿತ್ತಿಯಲ್ಲಿ ಮೂಡಿಸಿದೆ. ಆದರೆ ಶೈಲಿಯ ದೃಷ್ಟಿಯಿಂದ ಮರಾಠರ ಜನಪದ ಶೈಲಿಯನ್ನು ಬಹಳವಾಗಿ ಹೋಲುತ್ತದೆ. ಉಡುಗೆ-ತೊಡುಗೆಗಳೂ ಆ ಕಡೆಯವೇ ಆಗಿದೆ. ಕಾಲಮಾನದಿಂದಾಗಿ ಮೂಲದ ನೀಲಿ, ಹಸಿರು,ಬಣ್ಣಗಳು ಕಪ್ಪು ಬಣ್ಣಕ್ಕೆ ತಿರುಗಿದಂತಿದ್ದರೂ ಮೊದಲಿಗೆ ಅವು ಪ್ರಖರವಾಗಿದ್ದಿರಬಹುದು. ಕೆಂಪುಬಣ್ಣ ಒಳಗಿನ ಚಿತ್ರಗಳಿಗೆ ಮಿತಿಯಿಂದ ಬಳಸಿದೆ. ಹೊರ ಹಜಾರದ ಗೂಡುಗಳಲ್ಲಿ ನೃತ್ಯಗಾತಿಯರು, ಗೋವಳರು, ಕೃಷ್ಣನ ಬಾಲ ಲೀಲೆಗಳು ಚಿತ್ರಿಸಲಾಗಿದ್ದು, ಇಲ್ಲಿ ಕೆಂಪು ಬಣ್ಣ ಎದ್ದು ಕಾಣುವಂತಿದೆ. ಗೂಡುಗಳ ಸುತ್ತಲೂ ಗಾರೆಯಿಂದಲೇ ಹಲವಾರು ವಿನ್ಯಾಸಗಳನ್ನು ಮಾಡಿ ಅವುಗಳಿಗೂ ಬಣ್ಣ ಹಚ್ಚಿದ್ದಾರೆ. ಇವುಗಳನ್ನೂ ಮೊದಲಿಗೆ ಬೆಳಕಿಗೆ ತಂದ ಶಿವರಾಮ ಕಾರಂತರು "ಈ ವಾಡೆಯ ಶಯ್ಯಾಗಾರವೆಂಬುದು ಸ್ವಪೂರ್ಣವಾದೊಂದು ಚಿತ್ರಶಾಲೆಯಾಗಿದೆ. ಅಲ್ಲಿನ ಚಿತ್ರಗಳನ್ನು ಶುಚಿಗೊಳಿಸಿ, ದುರಸ್ತಿಮಾಡಿ ಕಾಯಲು ಬರುತ್ತಿದ್ದರೆ ನಮ್ಮ ನಾಡಿನ ಒಂದು ಅಮೂಲ್ಯ ಸಂಪತ್ತನ್ನೇ ಉಳಿಸಿಕೊಂಡಂತಾಗುತ್ತಿತ್ತು" ಎಂದು ನೋವಿನಿಂದ ಹೇಳಿದ್ದಾರೆ.

ಅಲನ

## ನಿರೂಪಣಾಚಿತ್ರಗಳು (Continuous representation)

ಒಂದು ಸ್ಥಳಾವಕಾಶ ಅಥವಾ ಸ್ಥಳದಲ್ಲಿ ಕ್ರಮವಾಗಿ ಚಿತ್ರಿಸಲಾದ ಕಥಾಸನ್ನಿವೇಶಗಳ ಸರಣಿಗೆ Continuous representation ಎನ್ನುತ್ತಾರೆ. ಇದು ಮಧ್ಯಕಾಲೀನ ಮತ್ತು ಪುನರುಜ್ಜೀವನ ಕಾಲದ ಒಂದು ಪ್ರವೃತ್ತಿಯಾಗಿದೆ. Nativity ಮತ್ತು Adoration ಚಿತ್ರಗಳಲ್ಲಿ ಮೇಗಸ್ಸುಗಳ (ಪೂರ್ವದೇಶದ ಮೂವರು ಜ್ಞಾನಿಗಳು) ಸಂಚಾರದ ಚಿತ್ರವನ್ನು ಹಿನ್ನೆಲೆಯಲ್ಲೂ, ಶಿಶುಕ್ರಿಸ್ತನ ಪೂಜೆಯನ್ನು ಮುನ್ನೆಲೆಯಲ್ಲೂ ತಪ್ಪದೇ ಚಿತ್ರಿಸಿರುವುದು ಕಂಡು ಬರುತ್ತದೆ. ಈ ದೃಶ್ಯಗಳು ತಿರುವು-ಮುರುವಾಗಿ ಚಿತ್ರಿತವಾಗಿವೆಯಾದರೂ ವಿರಳವಾಗಿವೆ. ಕಲಾವಿದ ಮಾಸೆ ಡಿ ಬ್ಯಾಂಕೊ(೧೩೩೦) ಫ್ಲಾರೆನ್ಸನಲ್ಲಿರುವ ಭಿತ್ತಿಚಿತ್ರ, ಸಾಂತಾಕ್ರೂಸ್‌ನಲ್ಲಿ ಸಂತ ಸೆಲ್ವಿಸ್ಟರ್ ಇವು ಉದಾಹರಣೆಯಾಗಿವೆ. ಇದರಲ್ಲಿ ದೈತ್ಯಪ್ರಾಣಿ ಡ್ರಾಗನ್‌ನಿಂದ ಹತರಾದ ಮತ್ತು ಸಂತನಿಂದ ಬದುಕಿಸಲ್ಪಟ್ಟ ಚಿತ್ರಗಳನ್ನು ಕ್ರಮವಾಗಿ ಚಿತ್ರಿತವಾದುದನ್ನು ಕಾಣಬಹುದು.

[illegible] ಭಿತ್ತಿಚಿತ್ರಗಳಲ್ಲಿ ಚಿಕ್ಕ ಚಿಕ್ಕ ಅಂಗಗಳನ್ನು ಮಾಡಿಕೊಂಡು [illegible] ಕಥೆಯ ಬೇರೆಬೇರೆ ಸಂದರ್ಭಗಳನ್ನು ಘಟಕಗಳಾಗಿ ಚಿತ್ರಿಸುವ ಪದ್ಧತಿ ವಿಜಯನಗರ ಕಾಲದಿಂದ ಈಚೆಗೆ ಬಳಕೆಗೆ ಬಂದಿತು.

ಅ.ಜಾ.

## ನ್ಯೂ ರಿಯಲಿಸಂ (ಫೋಟೋ ರಿಯಲಿಸಂ) (New realism)

ಪಾಪ್ ಚಿತ್ರಕಲೆ ಎಷ್ಟು ವೈವಿಧ್ಯಪೂರ್ಣವಾಗಿತ್ತೆಂದರೆ ಅದರ ವಿವಿಧ ಶಾಖೆಗಳು ಕವಲೊಡೆದು ತಮ್ಮದೇ ಆದ ವ್ಯಕ್ತಿತ್ವವನ್ನು ಪಡೆದುಕೊಂಡವು. ಹೆಚ್ಚಿನ ಪಾಪ್ ಕಲ್ಪನೆಗಳು ಛಾಯಾಗ್ರಹಣದ ಪರಾಕಾಷ್ಠೆ ಹಾಗೂ ಸರಿಗ್ರಫಿಯ ತಂತ್ರಗಳನ್ನು ಉಪಯೋಗಿಸಿಕೊಂಡು ಅತ್ಯಂತ ಸ್ವಾಭಾವಿಕ ಚಿತ್ರಗಳನ್ನು ರಚಿಸುತ್ತಿದ್ದುದರಿಂದ 'ನ್ಯೂರಿಯಲಿಸಂ' ಎನ್ನುವ ಅನ್ವರ್ಥ ನಾಮ ಆ-ಕಲೆಗೆ ಬಂದಿತು. ಎಡ್ ರಷ್ಕಾ ಪೆರ್ಸ್ಪೆಕ್ಟಿವ್‌ನ್ನು ಬಳಸಿ ವಾಸ್ತು ವಿಷಯಗಳನ್ನು ರಚಿಸಿದ್ದರೆ, ರಿಚರ್ಡ್ ಎಸ್ಟೆಸ್ ಬಾಜಾರಿನ ತೋರು ಕಿಟಕಿಗಳ, ನವ ನಿರ್ಮಾಣಗಳ ಯಥಾವತ್ ಚಿತ್ರೀಕರಣ ನಡೆಸಿದ್ದ. ಹೆಚ್ಚಿನ ಚಿತ್ರಕಾರರು ತಮ್ಮ ಚಿತ್ರದ ತಳಪಾಯವಾಗಿ ಛಾಯಾಚಿತ್ರಗಳನ್ನು ಬಳಸಿದ್ದರು. ವಿಷಯಗಳು ನವಜೀವನದ ವಸ್ತುಗಳಾಗಿದ್ದರೂ ಅವು ಈ ಶತಮಾನದ ಆದಿ ಭಾಗದಲ್ಲಿ ಖ್ಯಾತರಾಗಿದ್ದ ಷೀಲರ್, ಡಿಮತ್‌ರಂತಹವರನ್ನು ಜ್ಞಾಪಿಸದೇ ಬಿಡುತ್ತಿರಲಿಲ್ಲ.



ರಿಚರ್ಡ್ ಈಸ್ಟ್ಸ್

ಮಾನವ ಚಿತ್ರಣ ಹಾಗೂ ಶಿಲ್ಪದಲ್ಲೂ ಅತಿ ಸಹಜತೆಯನ್ನು ಹೊರಡಿಸುವ ಕುಸುರಿ ಕೆಲಸ ನಡೆದಿತ್ತು. ಅಲೆಕ್ಸ್ ಕಾಟ್ಸ್‌ನ ಚಿತ್ರಗಳು, ಡ್ಯುಯೇನ್ ಹಾನ್ಸನ್‌ನನ್ನು ಖ್ಯಾತ ಫೈಬರ್ ಗ್ಲಾಸ್ ಶಿಲ್ಪ 'ಪ್ರವಾಸಿಗರು' ಇದಕ್ಕೆ ನಿದರ್ಶನ. ಸಹಜ ಚಿತ್ರಣದ ಹೊಸ ಪರಿ ನಗ್ನ ಚಿತ್ರ ಹಾಗೂ ಶಿಲ್ಪಗಳ ಮೇಲೆ ಹೊಸ ಪ್ರಭಾವ ಬೀರಿದವು. ಫಿಲಿಪ್ ಪರ್ಲ್‌ಸ್ಟೀನ್ ಚಿತ್ರದಲ್ಲಿ ಹಾಗೂ ಡಿ ಆಂಡ್ರಿಯಾನ ಶಿಲ್ಪಗಳು, ಚಕ್ ಕ್ಲೋಸ್‌ನ ಮಿಶ್ರಮಾಧ್ಯಮಗಳು ಇದಕ್ಕೆ ಉದಾಹರಣೆಗಳು.

ರ.ಕಾ.

## ನೇಯ್ಗೆಯಲ್ಲಿ ಚಿತ್ರಕಲೆ

ಹೊಲಿಗೆಯ ಕಲೆ ಹೆಣಿಗೆ ಕಲೆಗೆ ಮೂಲವಾದಂತೆ ಹೆಣಿಗೆ ಕಲೆ ನೆಯ್ಗೆಯ ಕಲೆಗೆ ಮೂಲವಾಗಿದೆ. ಹೊಲಿಗೆ, ಹೆಣಿಗೆ, ನೆಯ್ಗೆ ಈ ಮೂರು ದಾರದ ಸಾಧನದಿಂದ ಪೂರ್ಣಗೊಂಡ ಕಲೆಗಳು.

ಆದಿಮಾನವ ಬೇಟೆಗಾಗಿ ಮಾಡಿದ ಬಲೆಯಂತಹ ವಿಧಾನಗಳು ಬಟ್ಟೆಯಲ್ಲಿ ಕಲಾತ್ಮಕ ನೇಯ್ಗೆಯನ್ನು ಮಾಡಲು ಪ್ರೇರಣೆಯನ್ನು ಒದಗಿಸಿರಬೇಕು. ಪ್ರಾಚೀನ ಕಾಲದಿಂದಲೂ, ನಾರು, ಉಣ್ಣೆ, ಹತ್ತಿ, ರೇಶ್ಮೆಯ ಬಟ್ಟೆಗಳಲ್ಲಿ ನೆಯ್ಗೆಯ ಕಲಾವಿನ್ಯಾಸಗಳು ಕಂಡುಬರುತ್ತವೆ.

ಕ್ರಿ.ಶ.ಪೂ. ಸುಮಾರು ಐದು ಸಾವಿರ ವರ್ಷಗಳ ಹಿಂದೆ ಇಜಿಪ್ತ ನಾಗರಿಕತೆಯಲ್ಲಿ ಜನರು ನಾರಿನ ಬಟ್ಟೆಗಳನ್ನು ಉಪಯೋಗಿಸಿದ್ದುದು ಮತ್ತು ಸ್ವೀಜರ್ಲಂಡಿನ ಜಲಾಶಯದ ನಿವಾಸಿಗಳು ನಾರನ್ನು ನೂತು ಬಟ್ಟೆನೇಯುತ್ತಿದ್ದರು. ಕ್ರಿ.ಪೂ.ಸು. ನಾಲ್ಕುಸಾವಿರ ವರ್ಷಗಳ ಹಿಂದೆ ಮೆಸೇಪೊಟೆಮಿಯಾದ ಯುಫ್ರೆಟೀಸ್‌ನ ಜನರು ಅಸ್ಸೀರಿಯನ್ನರು, ಬ್ಯಾಬಿಲೋನಿಯನ್ನರು ಉಣ್ಣೆಯ ವಸ್ತುಗಳನ್ನು ಕ್ರಿ. ಪೂ. ೩೫೦೦ ವರ್ಷಗಳಷ್ಟು ಹಿಂದೆಯೇ ತೊಡುತ್ತಿದ್ದುದು ತಿಳಿದು ಬರುತ್ತದೆ.

ಭಾರತದಲ್ಲಿ ರಾಮಾಯಣ, ಮಹಾಭಾರತದ ಕಾಲದಲ್ಲಿ ನಾರು ಬಟ್ಟೆಯ ಉಲ್ಲೇಖಗಳು ಇವೆ. ಬಳ್ಳಾರಿ ಜಿಲ್ಲೆಯ ತೆಕ್ಕಲುಕೋಟೆಯ ಉತ್ಖನನದಲ್ಲಿ ನೂಲು ತೆಗೆಯುವ, ತಕಲಿಯಂತಹ ಸಾಮಾಗ್ರಿಗಳು ಸಿಕ್ಕಿವೆ. ಹೀಗೆ ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ನೆಯ್ಗೆಯೂ ಮುಂದೆ ಕಲಾತ್ಮಕತೆಯನ್ನು ಅದರಲ್ಲಿ ಅಳವಡಿಸಿಕೊಂಡು ಬಂದಿರುವುದು ಸೌಂದರ್ಯಪ್ರಜ್ಞೆಯ ಪ್ರತೀಕವೆನ್ನಬಹುದು.

ನೆಯ್ಗೆಯೂ ಹೊದಿಕೆ ಮತ್ತು ಹಾಸಿಗೆಗಳಲ್ಲಿ ಕಂಡುಬರುತ್ತದೆ. ಹೊದಿಕೆಯಲ್ಲಿ ಕಂಬಳಿಗಳು, ಜಾದರಗಳನ್ನು ಹೆಸರಿಸಬಹುದು. ಇಲ್ಲಿ ಕರಿಯ ಕಂಬಳಿಯಲ್ಲಿ ಅಚ್ಚಬಿಳಿಯ ಪಟ್ಟಿಕೆಗಳು ಕಲಾತ್ಮಕವಾಗಿ ವಿನ್ಯಾಸಗೊಂಡಿರುತ್ತವೆ. ಕಂಬಳಿಯಲ್ಲಿ ಹುರಿಗಂಬಳಿ ಮತ್ತು ಉಜ್ಜುಗಂಬಳಿಗಳೆಂದು ಎರಡು ವಿಧಗಳಿದ್ದು ಉಜ್ಜುಗಂಬಳಿ ಹೆಚ್ಚು ಕಲಾತ್ಮಕವಾಗಿರುತ್ತದೆ. ಬಣ್ಣಬಣ್ಣದ ಉಣ್ಣೆಯನ್ನು ಉಪಯೋಗಿಸಿ ಚೌಕ, ಆಯತದಂತಹ ಭೂಮಿತಿ ಆಕೃತಿಯ ಚಿತ್ರವಿನ್ಯಾಸಗಳು ಕಂಡುಬರುತ್ತವೆ.

ನೆಯ್ಗೆಯಿಂದ ತಯಾರಿಸುವ ಹಾಸಿಗೆಗಳಲ್ಲಿಯಂತು ಸುಂದರವಾದ ಚಿತ್ರವಿನ್ಯಾಸಗಳು ಹೆಚ್ಚು ಕಲಾತ್ಮಕವಾಗಿ ಇರುವುದನ್ನು ಕಾಣಬಹುದು. ಧಾರವಾಡ ಜಿಲ್ಲೆಯ ನವಲಗುಂದ ಜಮಖಾನೆಗಳು ತುಂಬಾ ಪ್ರಸಿದ್ಧವಾಗಿವೆ. ಇದರಲ್ಲಿ ಪಗಡಿ, ಅಟ್ಟೆ, ಚೌಪಟ ಶತರಾಜ, ಎಂಬ ವಿವಿಧ ರೀತಿಯ ಚಿತ್ರವಿನ್ಯಾಸಗಳ ಪ್ರಕಾರಗಳಿವೆ. ಜಮಖಾನೆಗಳಲ್ಲಿ ಪಗಡೆಯಾಟ, ಹೂಗಳು, ನವಿಲುಗಳು, ಹೀಗೆ ಹಲವಾರು ವಿನ್ಯಾಸಗಳು ಕಂಡುಬರುತ್ತವೆ. ಹಾಗೆಯೇ ಸೀರೆಗಳಲ್ಲಿ ಕೂಡ. ಎಲೆ, ಹೂ ಬಳ್ಳಿಗಳೂ ಕಲಾತ್ಮಕ ವಿನ್ಯಾಸಗಳಿಗೆ ಕೊರತೆಯಿಲ್ಲ. ವಿವಿಧ ಬಣ್ಣಗಳ ಸೀರೆಗಳಲ್ಲಿ ನೈಸರ್ಗಿಕ ವಿನ್ಯಾಸದ ಚಿತ್ರಗಳು ಭೂಮಿತಿ ಆಕೃತಿ ವಿನ್ಯಾಸಗಳು ಪ್ರಮುಖವಾಗಿ ಕಂಡುಬರುತ್ತವೆ.

**ಎಸ್. ಸಿ. ಪಾ.**

## ನೇಯ್ಗೆ ಚಿತ್ರಪಟ್ಟ (Tapestrey)

ಅಲಂಕಾರಿಕ ಚಿತ್ರರಚನೆಗಳನ್ನು ಅಂತರ್ಯದಲ್ಲಿ ಒಳಗೊಳ್ಳುವಂತೆ ನೆಯ್ಯುವುದನ್ನು ಚಿತ್ರಪಟ್ಟನೆಯ್ಗೆ ಅಥವಾ ಟೇಪಸ್ಟ್ರೀ ಎನ್ನುತ್ತಾರೆ. ವೈವಿಧ್ಯಮಯ ಬಣ್ಣದ ಎಳೆಗಳಲ್ಲಿ ಉಣ್ಣೆಯ ಅಥವಾ ರೇಶ್ಮೆಯ, ಕೆಲವೊಮ್ಮೆ ಬೆಳ್ಳಿಯ ಅಥವಾ ಬಂಗಾರದ ಅಡ್ಡ ಎಳೆಗಳನ್ನು ಒಂದಾದ ನಂತರ ಒಂದರಂತೆ ಹಾಸಿನ ಮೇಲೆ ಮಾದರಿಯ ಚಿತ್ರಕ್ಕನುಗುಣವಾಗಿ ನೆಯ್ದು ತಯಾರಿಸಲಾಗುತ್ತದೆ.

ಯುರೋಪಿನಲ್ಲಿ, ಮಧ್ಯಕಾಲೀನ ಉತ್ತರಾರ್ಧದಲ್ಲಿ ಈ ಚಿತ್ರಪಟ್ಟಿಕೆಗಳ ಉದ್ಯಮವು ಹೆಚ್ಚು ಅಭಿವೃದ್ಧಿ ಹೊಂದಿತು. ಅದರ ಪರಿಣಾಮವಾಗಿ ಗೋಡೆಯ ತೂಗು ಚಿತ್ರಪಟ್ಟಿಕೆ, ಪೀಠೋಪಕರಣಗಳ ಕಲಾತ್ಮಕ ಹೊದಿಕೆ ವಿಭಿನ್ನ ಪ್ರಕಾರದ ಮೇಜು ಹೊದಿಕೆಗಳನ್ನು ಉತ್ಪಾದಿಸಲಾಯಿತು. ಮಧ್ಯಯುಗದ ಫ್ರೆಂಚ್ ಕಾರ್ಯಾಗಾರಗಳು ೧೭ನೆಯ ಶತಮಾನದವರೆಗೂ ಪ್ರತಿಸ್ಪರ್ಧಿಯಿಲ್ಲದಂತೆ ಉತ್ಕೃಷ್ಟ ಮಟ್ಟದ ಚಿತ್ರಪಟ್ಟಿಕೆಗಳ ಉತ್ಪಾದನೆಗಳಿಗೆ ಪ್ರಖ್ಯಾತಿಯನ್ನು ಪಡೆದಿದ್ದವು.

ಭಾರತದಾದ್ಯಂತವೂ ಹಲವಾರು ಸ್ಥಳಗಳಲ್ಲಿ ಪರಂಪರಾಗತವಾಗಿ ಈ ಕಲೆಯನ್ನು ಉಳಿಸಿ ಬೆಳೆಯಿಸಿಕೊಂಡು ಬಂದಿರುವುದನ್ನು ಕಾಣಬಹುದು. ಹುಸೇನ್ ಮತ್ತಿತರ ಕಲಾವಿದರು ಪ್ರಯೋಗಿಸಿದಂತೆ ಈ ಮಾಧ್ಯಮದಲ್ಲಿ ಈಚೆಗೆ ಎಸ್.ಜಿ. ವಾಸುದೇವ್ ಪ್ರಯೋಗ ನಡೆಸುತ್ತಿದ್ದಾರೆ.

**ಶಂ. ಮೂ.**

## ಪಂಚದಶೀ

ವಿದ್ಯಾರಣ್ಯರಿಂದ ಹದಿನಾಲ್ಕನೇ ಶತಮಾನದ ಮಧ್ಯಭಾಗದಲ್ಲಿ 'ಪಂಚದಶೀ' ರಚನೆಯಾಯಿತು. ಇದು ಅದ್ವೈತ ಮತವನ್ನು ಕುರಿತ ಆಧ್ಯಾತ್ಮಿಕ ಚಿಂತನೆಯ ವ್ಯಾಖ್ಯಾನ ಗ್ರಂಥವಾಗಿದೆ. ಇದರ ಆರನೆಯ ಅಧ್ಯಾಯ 'ಚಿತ್ರದೀಪ ವಿವೇಕ ಪ್ರಕರಣ'ವಾಗಿದ್ದು ಪರಮಾತ್ಮನ ನಾಲ್ಕು ಅವಸ್ಥೆಗಳನ್ನು ಚಿತ್ರ ರಚನೆಯ ನಾಲ್ಕು ಅವಸ್ಥೆಗಳೊಂದಿಗೆ ಹೋಲಿಸಲಾಗಿದೆ. "ಹೇಗೆ ಚಿತ್ರ ಪಟವು ಧೌತ, ಘಟ್ಟಿತ, ಲಾಂಛಿತ, ರಂಜಿತ, ಎಂಬ ನಾಲ್ಕು ಅವಸ್ಥೆಗಳನ್ನು ಹೊಂದುವುದೋ

ಹಾಗೆಯೇ ಪರಮಾತ್ಮನು ಚಿತ್, ಅಂತರ್ಯಾಮಿ, ಸೂತ್ರಾತ್ಮ ವಿರಾಟ್ ಎಂಬ ನಾಲ್ಕು ಅವಸ್ಥೆಗಳನ್ನು ಹೊಂದುತ್ತಾನೆ. ಸ್ವತಃ ಶುಭ್ರವಾದ ವಸ್ತ್ರವು ಧೌತವಾಗುವುದು. ಗಂಜಿಯನ್ನು ಲೇಪಿಸುವುದರಿಂದ ಅದು ಘಟ್ಟಿತವಾಗುವುದು. ಮಸಿಯಿಂದ ಆಕಾರ ರೇಖೆಗಳನ್ನು ಬರೆದಾಗ ಲಾಂಛಿತವಾಗುವುದು, ಅದನ್ನು ಬಣ್ಣದಿಂದ ತುಂಬಿಸಿದಾಗ ರಂಜಿತವಾಗುವುದು ಎಂದು ಹೇಳಿ ಮುಂದೆ ಪರಮಾತ್ಮನಲ್ಲಿ ಬ್ರಹ್ಮನಿಂದ ಆರಂಭಿಸಿ ಹುಲ್ಲಿನವರೆಗೆ ಚೇತನಾಚೇತನಗಳು ಉತ್ತಮ ಅಧಮ ಭಾವದಿಂದ ಚಿತ್ರಪಟದಲ್ಲಿ ಇರುವಂತೆ ಇರುವುದೆಂದೂ, ಚಿತ್ರಕ್ಕೆ ಆಧಾರವಾದ ವಸ್ತ್ರದ ಹಾಗೆಯೇ ನಾನಾ ಬಣ್ಣದ ವಸ್ತ್ರಾಭಾಸಗಳು ಚಿತ್ರದಲ್ಲಿ ಬರೆಯಲ್ಪಟ್ಟ ಮನುಷ್ಯಾಕೃತಿಗಳಿಗೆ ಬೇರೆಬೇರೆಯಾಗಿ ಕಲ್ಪಿಸಿವೆಯೆಂದೂ, ಮೂಢರಾದವರು ವಸ್ತ್ರಾಭಾಸದಲ್ಲಿರುವ ಬಣ್ಣಗಳನ್ನು ಚಿತ್ರಕ್ಕೆ ಆಧಾರವಾದ ವಸ್ತ್ರಕ್ಕೆ ಆರೋಪಿಸುವಂತೆ ಜೀವನ ಸಂಸಾರವನ್ನು ಪರಬ್ರಹ್ಮನಿಗೆ ಆರೋಪಿಸುತ್ತಾರೆ ಎಂದೂ ವ್ಯಾಖ್ಯಾನಿಸಲಾಗಿದೆ. ಮುಂದೆ ಪರಮಾತ್ಮ ಬ್ರಹ್ಮಗಳ ಬಗ್ಗೆ ಚರ್ಚೆ ಮುಂದುವರಿಯುತ್ತದೆ. ಪ್ರಕರಣದ ಅಂತ್ಯದಲ್ಲಿ ಬಟ್ಟೆಯ ಮೇಲೆ ಚಿತ್ರವನ್ನು ಬರೆದಂತೆ ಪರಬ್ರಹ್ಮನಲ್ಲಿ ಮಾಯೆಯಿಂದ ಚಿತ್ರರೂಪವಾದ ಜಗತ್ತು ಕಲ್ಪಿಸಲ್ಪಟ್ಟಿದೆ. ಮಿಥ್ಯೆಯಾದ ಈ ಜಗತ್ತನ್ನು ಉಪೇಕ್ಷಿಸಿದರೆ ಉಳಿಯುವುದು ಚೈತನ್ಯವೇ, ಎಂಬ ತಾತ್ಪರ್ಯವಿದೆ. ಧಾರ್ಮಿಕ ಮತೀಯ ಚರ್ಚೆಯೊಂದಕ್ಕೂ ಚಿತ್ರಕಲೆಯ ಪ್ರಕಾರವೊಂದು ಬಳಕೆಯಾಗಿರುವುದಷ್ಟೇ ಇಲ್ಲಿಯ ವಿಶೇಷತೆ. ಚಿತ್ರಕಲೆಯನ್ನು ಆಧರಿಸಿರುವ ಗಾದೆಗಳಲ್ಲಿ ಚಿತ್ರದೀಪ ನ್ಯಾಯ ಎಂಬುದೂ ಒಂದಾಗಿದ್ದು ಚಿತ್ರಿತ ದೀಪ ಎಷ್ಟೇ ನೈಜವಾಗಿದ್ದರೂ ಬೆಳಕು ನೀಡಲಾರದೇ ಹೋಗುವುದರಿಂದ ಅದು ಮಿಥ್ಯೆ. ನಿಷ್ಪ್ರಯೋಜಕ ಎಂದು ಧ್ವನಿಸುತ್ತದೆ. ಸಾಕ್ರತೀಸನಲ್ಲಿ ಈ ಮಿಥ್ಯಾವಾದವು ಇನ್ನಷ್ಟು ವಿಸ್ತಾರವಾಗಿ ಬರುತ್ತದೆ.

ಆಲಸ

## ಪಟವಾಸ, ಪಟ್ಟ, ಪಟ್ಟೆ

'ಪಟ'ಕ್ಕೆ ಚಿತ್ರಬರೆಯುವ ಬಟ್ಟೆಯೆಂದೂ (ಪ್ರಾಯಶಃ ಹತ್ತಿಯ) ಪಟ್ಟವೆಂದರೆ ರೇಶ್ಮೆವಸ್ತ್ರ ಎಂದೂ ಅರ್ಥವಿದೆ (ಸಂಸ್ಕೃತ ನಿಘಂಟು). 'ಪಟವಾಸ' ಎಂದು ಬಟ್ಟೆಯ ಮೇಲಿನ ಚಿತ್ರಗಳಿಗೆ ಕಾವ್ಯಗಳಲ್ಲಿ ಕರೆದಿದೆ(ಪಾರ್ಶ್ವನಾಥ ಪುರಾಣ) ಬಟ್ಟೆಯ ಮೇಲೆ ಯಾವುದೇ ಲೇಪನ ಮಾಡದೆ ಚಿತ್ರಿಸುವ ಹಾಗೂ ಹಲವು ವಸ್ತುಗಳನ್ನು ಲೇಪಿಸಿ ಚಿತ್ರಿಸುವ ಬಗ್ಗೆ ಸಮರಾಂಗಣ ಸೂತ್ರಧಾರದಲ್ಲಿ ಕೆಲವು ವಿವರಗಳಿವೆ. ಅದರಂತೆ ನಿಂಬೆಬೀಜ, ಸಾಮೆ ಅಕ್ಕಿಗಳನ್ನು ಅರೆದು ಬೇಯಿಸಿ ಬಟ್ಟೆಗಳ ಮೇಲೆ ಲೇಪಿಸಬೇಕು. ನಂತರ ಗಟ್ಟಿಯಾದ ನುಣುಪಾದ ಮರಳನ್ನು(ಕಟಶರ್ಕರ) ಲೇಪಿಸುವುದರಿಂದ ಚಿತ್ರಕ್ಕೆ ಹೇಳಿಸಿದಂತಹ ಪಟವಾಗುತ್ತದೆ.

ಒರಿಸ್ಸಾದ 'ಪಟ'ಚಿತ್ರಗಾರರು ಇಂದಿಗೂ 'ಪಟ'ಗಳನ್ನು ಮಾಡಿಕೊಳ್ಳುವ ಪದ್ಧತಿ ಈ ರೀತಿಯಿದೆ. ಹುಣಸೇ ಬೀಜದ ಅಂಟಿನಲ್ಲಿ ಸುಣ್ಣದ ಮಿಶ್ರಣ ಮಾಡಿ ಲೇಪಿಸಿ ಒಣಗಿಸುತ್ತಾರೆ. ಅದು ಒಣಗಿದ ಮೇಲೆ ಹಪ್ಪಳದಂತೆ ಉಡುಗಿರುತ್ತದೆಯಾದುದರಿಂದ ಕಟ್ಟಿಗೆಯ ಉರುಳೆಯಿಂದ ತೀಡಿ ಸರಿಪಡಿಸುತ್ತಾರೆ. ಮರದ ಅಂಟಿನೊಂದಿಗೆ ಸೀಮೆಸುಣ್ಣದ ಪುಡಿ ಸೇರಿಸಿ ಲೇಪಿಸಿ ಒಣಗಿದ ಮೇಲೆ ನುಣುಪಾದ ಕಲ್ಲಿನಿಂದ ತೀಡಿ ಹದಮಾಡಿಕೊಳ್ಳುವುದೂ ಉಂಟು.

ಆಲಸ

## ಪದ್ಮನಾಭಪುರಂ

ಭಾರತದಲ್ಲಿನ ವ್ಯಾವಹಾರಿಕ, ಧಾರ್ಮಿಕ, ಮತೀಯ ಸಂಬಂಧದ ಕಟ್ಟಡಗಳನ್ನು (ಅರಮನೆ, ಮನೆ, ಮಠ, ಗುಡಿ ಇತ್ಯಾದಿ) ಮೊದಲಲ್ಲಿ ನಿರ್ಮಿಸುತ್ತಿದ್ದುದು ಮರದಲ್ಲಿಯೇ ಎಂಬುದು ಸುವಿದಿತ. ಈ ಸಂಪ್ರದಾಯವು, ಕೇರಳದ ಅನೇಕ ಕಡೆಗಳಲ್ಲಿ ಮುಂದುವರಿಯಿತು. ಪದ್ಮನಾಭಪುರದ ಅರಮನೆಯು ೧೪ನೇ ಶತಮಾನಕ್ಕೆ ಸೇರಿದಂತೆ, ಸ್ಥಳೀಯ ವಾಸ್ತುಶಿಲ್ಪದ ಲಕ್ಷಣಗಳು ಪ್ರತಿನಿಧಿಸಿವೆ, ಎನ್ನಿಸುತ್ತದೆ (ಇಪ್ಪಾರು ಛಾವಣಿ, ತುದಿಯಲ್ಲಿರುವ ಗೋಡೆಯ ತ್ರಿಕೋನಾಕಾರದ ಭಾಗ), ಚಂದಾಯದ ಗೋಡೆ, ಇಳಿಜಾರು ಚಾವಣಿಗಳಲ್ಲಿ ಮುಂಚಾಚಿ ನೆಟ್ಟಗೆ ನಿಂತಿರುವಕಿಟಕಿಗಳು, ಉದ್ದವಾದ ಹಜಾರಗಳು,ಇವೆಲ್ಲವೂ ಸ್ಥಳೀಯ ವಾಸ್ತು, ಅಷ್ಟೇ ಮನೋಜ್ಞ. ಅರಮನೆಯ ಮೇಲಂತಸ್ತಿನಲ್ಲಿ ೧೮ನೆಯ ಶತಮಾನದ ಭಿತ್ತಿಚಿತ್ರಗಳಿವೆ. ಮಧ್ಯಕಾಲೀನ ಯುಗದ ತೈಲ ಚಿತ್ರಗಳ ಸಂಪ್ರದಾಯ ಕಾಣುತ್ತದೆ. ಹಾಗೂ ೧೮ನೆ ಶತಮಾನದ ಭಿತ್ತಿಚಿತ್ರಗಳೂ ಮೇಲಂತಸ್ತಿನಲ್ಲಿವೆ. ಮೂರ್ತಿಗಳ ಮುಖ ಸ್ವಲ್ಪ ಉದ್ದ, ಹಾಗೂ ಕುಶಲ ಕಲೆಗಾರಿಕೆಯು, ವರ್ಣದೊಂದಿಗೆ ಮೇಳವಿಸಿದೆ. ಪದ್ಮನಾಭ, ಸರ್ಪಶಯನ, ನಾಭಿಯಿಂದುದಿಸುವ ಕಮಲನಾಭ, ಕಮಲಪೀಠದಲ್ಲಿ ಆಸೀನನಾದ ಬ್ರಹ್ಮ ಗೋಪೀಲೋಲ ವೇಣುಗೋಪಾಲ, ಅನೇಕ ಭುಜಗಳುಳ್ಳ ಶಿವ, ನಟರಾಜನಾಗಿ ನರ್ತಿಸುತ್ತಿದ್ದಾನೆ. ಆನೆಗಳು ಮೀಯಿಸುತ್ತಿರುವ ಗಜಲಕ್ಷ್ಮಿ, ಶ್ರೀರಾಮಪಟ್ಟಾಭಿಷೇಕ ಇನ್ನೂ ಅನೇಕ ಘಟನಾವಳಿ ಚಿತ್ರಣಗೊಂಡಿದೆ.

ಗಣಪತಿಯ ಪೂಜೆಯುಳ್ಳ ಚಿತ್ರಫಲಕದಲ್ಲಿ ಇಂದಿನ ಬದುಕಿನ ವಿವಿಧ ದೃಶ್ಯ ಅಂದೂ ಕೇರಳದಲ್ಲಿದ್ದುವೆಂಬುದರ ಚಿತ್ರಣ, ಕೌತುಕವೆನಿಸುತ್ತದೆ. ಸಾಂಸಾರಿಕ, ಧಾರ್ಮಿಕ, ಬದುಕಿನ ಚಟುವಟಿಕೆಗಳು, ಉಡುಪಿನ ವೈವಿಧ್ಯ, ಪ್ರಕೃತಿ ಸಹಜ ಚಿತ್ರಣಗಳನ್ನು ಕಾಣಬಹುದು.

ಅರಮನೆಯ ಶಿಲ್ಪ-ಕೆತ್ತನೆ, ಗಮನೀಯ, ರಾಜರ ಶಯನಗೃಹದಲ್ಲಿನ ಮರದ ಮಂಚದಲ್ಲಿರುವ ಗಹನವಾದ ಶಿಲ್ಪಗಳಲ್ಲಿ ಕಂಬ-ಬೋಧಿಗೆಗಳು, ಬಾಳೆ ಹೂ ಮಾದರಿಯಲ್ಲಿದೆ ನೇರಪುರ ಮರದಲ್ಲಿ ಕಟ್ಟಿರುವ ಅರಮನೆಗೆ ಹೊಂದಿಕೊಂಡಂತಿರುವ ವಿಸ್ತಾರವಾದ ಮನೆಯಲ್ಲಿ ಶಿಲ್ಪದಲಂಕರಣವಿದೆ. ಸಂಜೆಯ ದೀಪಮಾಲೆ- ಬೆಳಕಿನ ಪುಂಜ,ಅರಮನೆಯನ್ನೇ ಬೆಳಕಿನ ಸ್ವರ್ಗವಾಗಿಸುತ್ತದೆ.

ನಿಕ್ಸಾ

## ಪರಿಸರ ಕಲೆ

ಈ ಶತಮಾನದ ೭ನೇ ದಶಕದಲ್ಲಿ ಕನಿಷ್ಠ ಕಲೆ ರಚಿಸುತ್ತಿದ್ದ ಬೃಹದಾಕಾರದ ಶಿಲ್ಪಗಳಿಂದಾಗಿ, ಪ್ರಕೃತ ಸ್ಥಳಕ್ಕೇ ಮೀಸಲಾದ ಕಲೆ ಎಂಬ ಹೊಸ ಸಿದ್ಧಾಂತದ ಉಗಮವಾಗತೊಡಗಿತು. ಇದರಿಂದ ಗ್ಯಾಲರಿಯ ಸ್ಥಳವನ್ನೇ ಕ್ಯಾನ್ವಾಸ್‌ನಂತೆ ಬಳಸಬಹುದೆಂಬ ಹೊಸ ಯೋಚನೆಯೂ ಹುಟ್ಟಿಕೊಂಡಿತು. ೧೯೬೪ರಲ್ಲಿ ನಡೆದ ರಾಬರ್ಟ್ ಮೋರೀಸನ ಪ್ರದರ್ಶನ ಇದರ ಪ್ರಥಮ ಪ್ರಯತ್ನವೆಂದು ಹೇಳಲಾಗುತ್ತದೆ. ಸೋಲ್ ಲೆ ವಿಟ್‌ನ 'ಕ್ಯೂಬ್‌ಗಳು' ಸಹ ಇದರ ಉದಾಹರಣೆಗಳೇ. ಈ ಶಿಲ್ಪದಲ್ಲಿ ಬೇರೆ ಬೇರೆ ಗಾತ್ರದ ಘನಾಕೃತಿಗಳನ್ನು ತುಂಬುತ್ತಾ ಕೊನೆಗೆ

ಇಡೀ ಗ್ಯಾಲರಿಯನ್ನೇ ಆಕ್ರಮಿಸುವಂತೆ ಮಾಡಿದ್ದ. ೧೯೭೦ರಲ್ಲಿ ಲೆ ವಿಟ್ ಗ್ಯಾಲರಿಯ ಗೋಡೆಗಳ ಮೇಲೆ ನೇರವಾಗಿ ಬರೆಯುವುದರ ಮೂಲಕ ಹೊಸ ದಾರಿ ತೋರಿಸಿದ. ಲೆಸ್ ಲೆವಿನ್‌ನ ವೀಕ್ಷಕರನ್ನೂ ಒಳಗೊಂಡಂತಹ ವಿಡಿಯೋ, ಕಾರ್ಲ್ ಆಂದ್ರೆನ ಮನೆ, ಕಟ್ಟಡ ಸಾಮಗ್ರಿಗಳಿಂದ ನಿರ್ಮಿತಶಿಲ್ಪಗಳು ನಂತರದ ಸೃಷ್ಟಿಗಳು.

ಮೋರಿಸ್-ರಾಬರ್ಟ್ ರಾಷನ್‌ಬರ್ಗ್‌ನ ಮಾದರಿಯಲ್ಲಿ, ನೃತ್ಯ, ನಾಟಕ, ಚಿತ್ರ ಹಾಗೂ ಶಿಲ್ಪಗಳ ನಡುವಣ ಮೂಲಭೂತ ವ್ಯತ್ಯಾಸಗಳನ್ನು ಅರ್ಥೈಸುತ್ತಾ, ತನ್ನ ಕ್ರಿಯೆಗಳನ್ನು ಛಾಯಾಗ್ರಹಣದ ಮುಖಾಂತರ ದಾಖಲಿಸುತ್ತಾನೆ. ಶಿಲ್ಪವನ್ನು ವಾಸ್ತುವಿನ ಅವಿಭಾಜ್ಯ ಅಂಗದಂತೆ ಪರಿಗಣಿಸಬೇಕೆಂಬ ಅವರ ವಾದ ಭಾರತಕ್ಕಂತೂ ಹೊಸ ವಿಷಯವೇನಲ್ಲ. ವಾಸ್ತು-ಶಿಲ್ಪ ನಮ್ಮಲ್ಲಿ ಇದೇ ಅರ್ಥದಲ್ಲಿ ಉಪಯೋಗಿಸುವಷ್ಟು ಬೆಳೆದು ಬಂದಿತ್ತು.

ರಾಬರ್ಟ್ ಸ್ಮಿತ್ಸನ್ ಮೊದಲಿಗೆ ಪ್ರಕೃತಿಯ ನಡುವೆ ಕನ್ನಡಿಗಳನ್ನು ಇಟ್ಟು ದಾಖಲಿಸಿದ. ಬಂಡೆಗಳ ಮಾದರಿಯನ್ನು ಪ್ರದರ್ಶಿಸುವುದರ ಮೂಲಕ ತನ್ನ ಹಾದಿ ಬೆಳೆಸಿದ. ೧೯೭೦ ಉಥಾಹ್ ದ ಸಾಲ್ಟ್ ಲೇಕ್‌ನ ಮಧ್ಯೆ ವೃತ್ತಾಕಾರದ ರಸ್ತೆಯಂತೆ ರಚಿಸಿದ. ಇದು the spiral Jetty-ಈಗ ಆತನ ಪ್ರಸಿದ್ಧ ಕೃತಿ ಎಂದು ಪರಿಗಣಿಸಲಾಗಿದೆ.

ರಕಾ

## ಪ್ರತಿಫಲನ

ಬೆಳಕಿನ ಇನ್ನೊಂದು ಆಕರ್ಷಕ ಅಂಶ-ಪ್ರತಿಫಲನ. ಯಾವುದೇ ನಯವಾದ ಮೇಲ್ಮೈನಲ್ಲಿ ಅಥವಾ ನೀರಿನಲ್ಲಿ ಕಾಣುವ ಪ್ರತಿಬಿಂಬ ಚಿತ್ರ, ಛಾಯಾಚಿತ್ರಕಾರರನ್ನು ಯಾವತ್ತೂ ಆಕರ್ಷಿಸಿದೆ. ಸಮುದ್ರದ ದಡದಲ್ಲಿ ಸೂರ್ಯಾಸ್ತ ಅಥವಾ ಚಂದ್ರೋದಯ ಸಾಮಾನ್ಯ ವಿಷಯಗಳೇ. ಟರ್ನರ್‌ನ ಸೂರ್ಯಾಸ್ತಗಳು, ವರ್ಮೀರ್ ಹಾಗೂ ವಾನ್‌ಡೈಕ್‌ರ ಚಿತ್ರಗಳಲ್ಲಿ ಕಾಣುವ ಪ್ರತಿಫಲನಗಳು ಇದಕ್ಕೆ ಉದಾಹರಣೆಗಳು. ಛಾಯಾಚಿತ್ರಕಾರರು ಸತತವಾಗಿ ಪ್ರತಿಫಲಿಸುವ ವಸ್ತುಗಳನ್ನು ಉಪಯೋಗಿಸಿ ಅಥವಾ ಕತ್ತಲಕೋಣೆಯ ತಂತ್ರಗಳಿಂದ ಕೆಲೆಡಿಯೊಸ್ಕೋಪ್ ಚಿತ್ರಗಳನ್ನು ತಯಾರಿಸುತ್ತಾರೆ.

ರ. ಕಾ.

## ಪ್ರತಿಮಾ ಲಕ್ಷಣ ವಿಜ್ಞಾನ (Iconography)

ಮೂಲತಃ ಗ್ರೀಕ್ ಶಬ್ದವಾದ ಆಯಕೋನೋಗ್ರಾಫಿ ಪ್ರತಿಮೆಗಳ ವಿವರಣಾತ್ಮಕ ಅಧ್ಯಯನವಾಗಿದೆ. ಇಲ್ಲಿ ವಿವರಣೆಯನ್ನು ಬಹಳ ಶಿಸ್ತಿನಿಂದ ವ್ಯವಸ್ಥಿತವಾಗಿ ಮಾಡಲಾಗುತ್ತದೆ. ಪರಂಪರೆ, ಧಾರ್ಮಿಕ, ಕಾಲ್ಪನಿಕ ಅಥವಾ ಸಾಮಾಜಿಕ ಸ್ಫೂರ್ತಿಯಿಂದ ಬಂದ ವಿಷಯಗಳನ್ನೊಳಗೊಂಡವುಗಳಾಗಿರಬಹುದು. ಇತ್ತೀಚೆಗೆ ಒಲವುಗಳನ್ನು ಪರಿಗಣಿಸುತ್ತ ಮೂಲ ಹಾಗೂ ಮಹತ್ವದ ಪ್ರತಿಮೆಗಳನ್ನು ಸುಂದರವಾಗಿ ಅಭಿವ್ಯಕ್ತಗೊಳಿಸಬಹುದಾಗಿದೆ.

ಇತಿಹಾಸ ಅಧ್ಯಯನದಲ್ಲಿ ಪ್ರತಿಮಾ ಶಾಸ್ತ್ರವೆಂದರೆ ವಸ್ತುವಿನ ಸಾರ್ಥಕ ರೂಪದ ಪ್ರತಿಮಾಲಕ್ಷಣ ವಿಜ್ಞಾನದ ಮೌಲ್ಯಮಾಪನವಾಗಿದೆ. ಆಧುನಿಕ, ಐತಿಹಾಸಿಕ ಹಾಗೂ ಇಂದಿನ ಘಟನೆಗಳನ್ನೆಲ್ಲ ಯಥಾವತ್ತಾಗಿ ಹಿಡಿದಿಡುವ ದಾಖಲೆಯೇ ಪ್ರತಿಮಾ ಲಕ್ಷಣ ವಿಜ್ಞಾನ. ಇದು ಐತಿಹಾಸಿಕ ಸತ್ಯವನ್ನು ಹಿಡಿದಿಡುವ ಕಲಾವಿಜ್ಞಾನ.

ಕಲಾಲೋಕದ ಇತಿಹಾಸದಲ್ಲಿ ಪ್ರತಿಮಾ ಲಕ್ಷಣ ವಿಜ್ಞಾನವನ್ನು ವಿವರಣಾತ್ಮಕವಾದ ಹಾಗೂ ಪ್ರತಿಮಾ ಅಧ್ಯಯನದ ವ್ಯವಸ್ಥಿತ ವರ್ಗೀಕರಣವೆನ್ನಬಹುದಾಗಿದೆ. ಪ್ರತಿಮಾ ಲಕ್ಷಣ ವಿಜ್ಞಾನ ೧೯ನೇ ಶತಮಾನದಿಂದೀಚೆಗೆ, ಹೆಚ್ಚಾಗಿ ಬೆಳೆದು ಬಂದಿತು. ಕಲೆಯ ಪರಿಶುದ್ಧ ಸೌಂದರ್ಯವನ್ನು ಹಾಗೂ ಸತ್ಯ ಪ್ರಜ್ಞೆಯನ್ನು ಈ ಶತಮಾನದ ಕಲಾ ವಿಮರ್ಶೆಗೆ ಇದು ನೀಡಿತು. ಪ್ರತಿಮಾ ಲಕ್ಷಣ ವಿಜ್ಞಾನದ ಅಭ್ಯಾಸವು ವಸ್ತುವಿನ ಇರುವಿಕೆಯನ್ನು ಖಚಿತವಾಗಿ ವೈಜ್ಞಾನಿಕ ಸತ್ಯವನ್ನು ಜಾಗೃತಗೊಳಿಸುವುದರೊಂದಿಗೆ ಆಯಾ ಕಾಲದ ಕಲಾ ಇತಿಹಾಸವನ್ನು ಇದು ದಾಖಲಾಗಿಡುತ್ತದೆ.

೧೯ನೇ ಶತಮಾನದಲ್ಲಿ ಪ್ರಾಚೀನ ಪ್ರತಿಮಾಶಾಸ್ತ್ರದ ಅಭ್ಯಾಸವು ಕಲಾ ಇತಿಹಾಸದಲ್ಲಿ ಪ್ರಾಚ್ಯಶಾಸ್ತ್ರದಿಂದ ಪ್ರತ್ಯೇಕಿಸಲ್ಪಟ್ಟಿತು. ಮೊದಲು ಕ್ರಿಶ್ಚಿಯನ್ ಕಲೆ ಹಾಗೂ ಅದರ ಧಾರ್ಮಿಕ ಜ್ಞಾನವನ್ನು ಪ್ರತಿಮಾ ಶಾಸ್ತ್ರದ ಕಾರ್ಡಿನಲ್ಲಿ ಪ್ರಿನ್ಸ್‌ಟಾನ್ ವಿಶ್ವವಿದ್ಯಾಲಯದಲ್ಲಿ ಚಾರ್ಲ್ಸ್ ರುಫೆಸ್ ಮೊರೆಯವರಿಂದ ಪ್ರಾರಂಭಗೊಂಡಿದ್ದುದಾಗಿ ತಿಳಿದು ಬಂದಿದೆ. ಭಾರತದ ಧಾರ್ಮಿಕ ಪರಂಪರೆಯಲ್ಲಿ ಪ್ರತಿಮಾ ಲಕ್ಷಣ ವಿಜ್ಞಾನ ಸಂಶೋಧನೆಗೆ ಹೆಚ್ಚು ಸಹಾಯಕವಾಗಿದೆ.

ಅ.ಹಿ.

## ಪ್ರತಿಮಾ ಶಾಸ್ತ್ರ (Iconology)

ಪ್ರತಿಮಾ ಲಕ್ಷಣ ವಿಜ್ಞಾನ (ಆಯಕೋನಾಗ್ರಾಫಿ)ದಲ್ಲಿ ಪ್ರತಿಮೆಯ ವಿವರಣೆ ಹಾಗೂ ವರ್ಗೀಕರಣವನ್ನು ಮಾತ್ರ ಮಾಡುತ್ತೇವೆ. ಆದರೆ ಪ್ರತಿಮಾಶಾಸ್ತ್ರ ಹಿಂದಿರುವ ಮಹತ್ವದ ಗೂಡಾರ್ಥದ ಬಗೆಗೆ ಹೆಚ್ಚಿನ ತಿಳುವಳಿಕೆಯನ್ನು ಮಾಡಿಕೊಳ್ಳುವದಾಗಿದೆ. ಪ್ರತಿಮಾ ಲಕ್ಷಣ ವಿಜ್ಞಾನದ ವಿಶಾಲವ್ಯಾಪ್ತಿಯ ವಿಶ್ಲೇಷಣಾತ್ಮಕ ವಿವೇಚನೆಯೇ ಪ್ರತಿಮಾಶಾಸ್ತ್ರ. ಹಳೆಯದನ್ನು ಉಪಯೋಗಿಸಿಕೊಂಡು ಹೊಸ ರೀತಿಯ ಹೊಸ ಪ್ರಜ್ಞೆಯನ್ನುಂಟು ಮಾಡುವುದೇ ಪ್ರತಿಮಾ ಶಾಸ್ತ್ರದ ಪ್ರಮುಖ ಬದಲಾವಣೆ. ಪನೋಫಸ್ಕ್ಯನ ಪ್ರಕಾರ ಪ್ರತಿಮಾಶಾಸ್ತ್ರವು "ಪ್ರತಿಮಾ ಕಲೆಯ ಬಗೆಗಿನ ಪರಿಪೂರ್ಣ ಐತಿಹಾಸಿಕ ಸಂದರ್ಭವನ್ನು ಒದಗಿಸುವದರೊಂದಿಗೆ ಅದರ ಸರಿಯಾದ ವಿಶ್ಲೇಷಣೆಯನ್ನು ಮಹತ್ವಪೂರ್ಣವಾದ ಅರ್ಥ ವಿವರಣೆಯೊಂದಿಗೆ ನೀಡುತ್ತದೆ."

ಪ್ರತಿಮಾ ಲಕ್ಷಣ ವಿಜ್ಞಾನ ಹಾಗೂ ಪ್ರತಿಮಾ ಶಾಸ್ತ್ರದ ವಿಭಿನ್ನತೆಯೆಂದರೆ ಅದು ವಿಶ್ಲೇಷಿಸಿ ನೋಡುತ್ತದೆ. ಇದು ಸಂಯೋಜಿಸಿ ನೋಡುತ್ತದೆ. ಅದು, ಗುರುತಿಸಿ ಪ್ರತಿಮೆಯನ್ನು ವಿಶ್ಲೇಷಿಸುವ ಉದ್ದೇಶ ಹೊಂದಿದ್ದರೆ ಇದು ಕಥೆ, ರೂಪಕ ವಸ್ತುವಿನ ಪ್ರತಿಮೆಯ ಸರಿಯಾದ ಸಂಯೋಜನೆ ಮಾಡುವದಾಗಿದೆ.

ಪ್ರತಿಮಾ ಶಾಸ್ತ್ರಕ್ಕೆ ಪನೋಫಸ್ಕ್ಯ ಹೇಳುವ ಹಾಗೆ- ಕಲಾ ಇತಿಹಾಸಕಾರ ಅದನ್ನು

ಪರೀಕ್ಷಿಸಿ, ಅಂತರಂಗದಲ್ಲಿ ಹೊಕ್ಕು ನೋಡುವದು. ಅದಕ್ಕೆ ತನ್ನನ್ನೇ ಅರ್ಪಿಸಿಕೊಂಡು ಅಂದಿನ ನಾಗರೀಕತೆಯನ್ನು ಪರಿಶೀಲಿಸಿ ಐತಿಹಾಸಿಕ ಸಂಬಂಧವನ್ನು ಬೆಳೆಸಿಕೊಂಡು ಸಾಕ್ಷಿ ಸಮೇತ ದಾಖಲೆಗೊಳಿಸುವುದು. ಆಯಾ ವ್ಯಕ್ತಿಯ, ಕಾಲದ, ಪ್ರದೇಶದ ರಾಜಕೀಯ, ಧಾರ್ಮಿಕ, ತಾತ್ವಿಕ, ಸಾಮಾಜಿಕ ಹಾಗೂ ಕಲಾತ್ಮಕ ಒಲವುಗಳನ್ನು ಗುರುತಿಸಿ ಸಂಶೋಧಿಸುವದಾಗಿದೆ.

ಪುರಾಣ, ಹಿಂದಿನ ಮಹಾಕಾವ್ಯಗಳಿಂದ ಎತ್ತಿಕೊಂಡ ಆ ಅಂಶಗಳಿಂದಲೂ ಕಲಾವಿದನು ತನ್ನ ಪ್ರತಿಮೆಗೆ ಹೆಚ್ಚು ಅರ್ಥ ಬರುವಂತೆ ರಚಿಸಬಹುದು. ಕಲೆಯಲ್ಲಿ ಅನೇಕ ಸಂಕೇತಗಳನ್ನು ಬಳಸಿಕೊಂಡು ಅಪೂರ್ವವಾದ, ಗಹನವಾದ ಹಾಗೂ ಮಹತ್ವದ ಹೋಲಿಕೆಗಳನ್ನು ವೀಕ್ಷಕನಿಗೆ ಕೊಡುವುದೇ ಪ್ರತಿಮಾವಿಧಾನ ಅಥವಾ ಪ್ರತಿಮಾ ಶಾಸ್ತ್ರದ ಮುಖ್ಯ ಉದ್ದೇಶ.

ಅ.ಹಿ.

## ಪ್ರತಿಮೆ (Icon)

ಯಾವುದೇ ಒಂದು ಮಾಧ್ಯಮದಲ್ಲಿ ಸಿದ್ಧಗೊಳಿಸಿದ ಮನುಷ್ಯನ ಅಥವಾ ವಸ್ತುಗಳ ಪ್ರತಿಕೃತಿಗಳೇ ಪ್ರತಿಮೆಗಳು. ಪ್ರತಿಮೆಗಳು ಪ್ಲಾಸ್ಟರ ಆಫ್ ಪ್ಯಾರಿಸ್, ಸಿಮೆಂಟು, ಕಟ್ಟಿಗೆ, ಕಲ್ಲು, ಆನೆ ದಂತ, ಬಟ್ಟೆ, ಚರ್ಮ ಅಥವಾ ವಿವಿಧ ಲೋಹಗಳಿಂದ ಮಾಡಲ್ಪಟ್ಟ ಮೂರ್ತಿ



ಅಥವಾ ವಿಗ್ರಹಗಳಾಗಿರಬಹುದು. (ವಿವಿಧ ಲೋಹಗಳನ್ನು ಮಿಶ್ರಮಾಡಿ ಕೆಲವು ಸಂಕೇತಗಳ ಮೂಲಕ ಪ್ರತಿಮೆಗಳನ್ನು ನಿರ್ಮಿಸಬಹುದಾಗಿದೆ.) ಸಾಹಿತ್ಯದಲ್ಲಿ 'ಪ್ರತಿಮೆ' ಇನ್ನೊಂದು ಅರ್ಥದಲ್ಲಿ ಅನೇಕ ಸಂಕೇತಗಳನ್ನು ಒಳಗೊಂಡ ಅಪೂರ್ವವಾದ ಒಂದು ಮಹತ್ವದ ಹೋಲಿಕೆ ಎಂದಾಗುತ್ತದೆ.

ಅ.ಹ.

## ಪ್ರತಿಷ್ಠಾಪನ ಕಲೆ (Installation)

ಈ ಶತಮಾನದ ಒಂದು ಪ್ರಮುಖ ಕಲಾಪ್ರಕಾರವಿದು. ಮಾರ್ಸೆಲ್ ಡ್ಯೂಕಾಂಪ್‌ನು 'ಕಲೆ'ಯ ಅಸ್ತಿತ್ವವನ್ನೇ ಪ್ರಶ್ನಿಸಿ, ಬಾಟೆಲ್ ರ್‍ಯಾಕ್ ಹಾಗೂ Toilet Pan ಅನ್ನು ಲೇವಡಿ ಮಾಡುವಂತೆ, ಗ್ಯಾಲರಿಗಳಲ್ಲಿ ಇರಿಸಿದ್ದ. ಆದರೆ ಇಷ್ಟು ತೀವ್ರವಾಗಲ್ಲದೆ Installation ಎಂಬ ಪ್ರಕಾರವು ಮುಂದೆ ರೂಢಿಗೆಬಂದವು.

ಸಾಮಾನ್ಯವಾಗಿ ಪ್ರತಿಷ್ಠಾಪನಾ ಕಲೆಯಲ್ಲಿನ ವಸ್ತುಗಳು ಗ್ಯಾಲರಿಯ ಒಳಾಂಗಣ ಅಥವಾ ಹೊರಾಂಗಣದೊಂದಿಗೆ ಏಕೈಕವಾದ(Unique) ಸಂಬಂಧ ಹೊಂದಿರುತ್ತದೆ. ಅಂದರೆ ಒಂದು ಚಿತ್ರ-ಶಿಲ್ಪವನ್ನು ಬೇಕಾದ ಊರಲ್ಲಿ ಬೇಕಾದ ಗ್ಯಾಲರಿಯಲ್ಲಿ ಇರಿಸುವಂತಲ್ಲದೆ ಇನ್‌ಸ್ಟಲ್ಲೇಷನ್ ಕಲೆಯನ್ನು ಸ್ಥಳಾಂತರಿಸಿದರೆ ಅದರ ತಾತ್ವಿಕ ಅರ್ಥವೇ ಬದಲಾಗುತ್ತ ಹೋಗುತ್ತದೆ.

ಇಂತಹ ಪ್ರತಿಯೊಂದು ಕೃತಿಯ ಅರ್ಥವಿವರಣೆಯನ್ನು ನೋಡುಗ/ವೀಕ್ಷಕನೇ



ಫೆಡ್ರಿಕ್ ಈಸಲರ್

ಭಾವಿಸಬೇಕಾಗಿದ್ದು, ಇನ್‌ಸ್ಟಲ್ಲೇಷನ್ನಿನ ಮಹತ್ವವೇ ಇದು. ನಮ್ಮ ನಮ್ಮ ತಿಳಿವಳಿಕೆಯ ಆಧಾರದ ಮೇಲೆ ಆಕೃತಿಗಳು ನಮಗೆ ಅನುಭವ ನೀಡುತ್ತ ಸಾಗುತ್ತವೆ. ೧೯೭೦ರ ದಶಕದ ವಿಶೇಷತೆ ಈ ಕಲೆ ಆದರೆ ೬೦ರ ದಶಕದಲ್ಲಿ ಅಮೇರಿಕ ಮತ್ತು ಇಂಗ್ಲೆಂಡಿನಲ್ಲಿ ಪ್ರಮುಖವಾಗಿ ಮೂಡಿಬಂದಂತಹ Minimal Art ಕೂಡ ಒಂದರ್ಥದಲ್ಲಿ ಇನ್‌ಸ್ಟಲ್ಲೇಷನ್ ಎನ್ನಿಸುತ್ತದೆ. ಏಕೆಂದರೆ ಈ ಕೃತಿಗಳು ತಮ್ಮ ಸುತ್ತಲಿನ ಸ್ಥಳಾವಕಾಶವನ್ನು ತಮ್ಮ ಕೃತಿಯ ಭಾಗವಾಗಿಯೇ ಪರಿಗಣಿಸುತ್ತವೆ.

ಇವಾ ಹೆಸ್ಸೇ(Eva Hesse), ಡಾನ್ ಫ್ಲಾವಿನ್(Dan Flavien), ಟೋನಿಸ್ಮಿತ್ ಮುಂತಾದವರು ಈ ಪ್ರಕಾರದ ಪ್ರಮುಖರು.

ಸಾಮಾನ್ಯವಾಗಿ ಇನ್‌ಸ್ಟಲ್ಲೇಷನ್‌ಗಳಲ್ಲಿ ಆಧುನಿಕ ಯಂತ್ರಗಳ, ಟ್ಯೂಬ್‌ಲೈಟ್ ವೈರ್‌ಗಳು ಇತ್ಯಾದಿಗಳನ್ನು ಒಳಗೊಳಿಸಲಾಗುತ್ತದೆ. ಇನ್‌ಸ್ಟಲ್ಲೇಷನ್ ಮತ್ತು ಅಸಂಬ್ಲೇಜ್‌ಗಳ ನಡುವಿನ ಮುಖ್ಯ ವ್ಯತ್ಯಾಸ ಹೀಗಿದೆ: ಅಸಂಬ್ಲೇಜ್ ಪದವೇ ಸೂಚಿಸುವಂತೆ ಅನೇಕ ವಸ್ತುಗಳ ಸಂಗ್ರಹ ರೂಪದಲ್ಲಿರಿಸಿ ಅವುಗಳ ನಡುವಿನ "ಸಂಬಂಧಗಳನ್ನು' (inter relations)ಕುರಿತು ಚಿಂತಿಸುವಂತೆ ನೋಡುಗನನ್ನು ತೊಡಗಿಸುತ್ತದೆ. ಆದರೆ ಇನ್‌ಸ್ಟಲ್ಲೇಷನ್ನಿನಲ್ಲಿ ವಸ್ತುಗಳ ನಡುವಿನ ಅಂತರ್ ಸಂಬಂಧ ಮೊದಲೇ ನಿರ್ದಿಷ್ಟವಾಗಿ ಸ್ಥಾಪಿತವಾಗಿರುತ್ತದೆ. ಅದನ್ನು ಹೇಗೆ ನೋಡಬೇಕೆನ್ನುವುದು (ಹೇಗೆ ಅನುಭವಿಸಬೇಕೆನ್ನುವುದು) ವೀಕ್ಷಕನ ಮುಖ್ಯ ಸಮಸ್ಯೆಯಾಗಿರುತ್ತದೆ.

ಇತ್ತೀಚಿನ ಟ್ರಿನಾಲೆಯಲ್ಲಿ (ದೆಹಲಿಯಲ್ಲಿ) ಗೋಗಿ ಸರೋಜ್‌ಪಾಲ್ ಹಾಗೂ ವೇದ್ ನಾಯರರ ಕೃತಿಗಳು, ವಿವಾನ್ ಸುಂದರರಂರ ಕೆಲವು ಪ್ರದರ್ಶನಗಳು ಇನ್‌ಸ್ಟಲ್ಲೇಷನ್‌ಗಳಿಗೆ ಕೆಲವು ಭಾರತೀಯ ಉದಾಹರಣೆಗಳಾಗಿವೆ.

ಎಚ್. ಎ. ಅ.

## ಪ್ರಸ್ತರ

ಪ್ರಸ್ತರವೆಂದರೆ ಸ್ತಂಭಗಳ ಮೇಲೆ ಇಡುವ ತೊಲೆಗಳು. ಈ ಪ್ರಸ್ತರಗಳೆಲ್ಲವೂ ಸ್ತಂಭಗಳನ್ನು ಸೇರಿಸುವ ಮೇಲ್ಭಾವಣಿಗೆ ಆಧಾರವಾಗಿರುತ್ತದೆ. ಶಿಲ್ಪಶಾಸ್ತ್ರದಲ್ಲಿ ಪ್ರಸ್ತರಗಳ ಎತ್ತರವನ್ನು ಅವಲಂಬಿಸಿ ಕೆಲವು ವಿಧಗಳಾಗಿ ವಿಂಗಡಿಸಿರುತ್ತಾರೆ. ಚಾತುರ್ವರ್ಣಗಳವರ ಮನೆಗಳಿಗೆ ಪ್ರತ್ಯೇಕವಾಗಿ ಬಳಸಬೇಕಾದ ಈ ಪ್ರಸ್ತರಗಳು ಬೇರೆ ಬೇರೆಯಾಗಿವೆ. ಇವು ಮುಖ್ಯವಾಗಿ ಮೂರು ವಿಧವಾಗಿವೆ.

೧) ಮುಖ ಪ್ರಸ್ತರ:- ವ್ಯಾಳಿಗಳಾಗಲೀ, ಇತರ ರೂಪಗಳಾಗಲೀ ಮುಖ ಭಾಗದಲ್ಲಿ ಕೆತ್ತಿದ್ದು, ಕೆಳಗೆ ಇರುವ ಸ್ಥಂಭಗಳಲ್ಲೂ ಕೂಡ ಅಂತಹ ರೂಪಗಳನ್ನು ಕೆತ್ತಿದಲ್ಲಿ ಅದನ್ನು ಮುಖ ಪ್ರಸ್ತರವೆನ್ನುವರು.

೨) ಮಂಚ ಪ್ರಸ್ತರ :- ಸಾಧಾರಣ ಸ್ತಂಭದೊಡನೆ ಕೂಡಿದ್ದು ಯಾವುದೇ ರೀತಿಯ ಶಿಲ್ಪವಿಲ್ಲದಿರುವುದು ಮಂಚ ಪ್ರಸ್ತರವೆನ್ನುವರು

೩) ಕಪೋತ ಪ್ರಸ್ತರ:- ಶಿಲ್ಪವನ್ನು ಕೆತ್ತಿದ ಸ್ತಂಭಗಳಿಗೆ ಅನುಗುಣವಾಗಿರುವ ಪಾರಿವಾಳಗಳನ್ನು ಕೆತ್ತಲಾಗಿದ್ದರೆ ಅದು ಕಪೋತ ಪ್ರಸ್ತರವೆನ್ನಿಸಿಕೊಳ್ಳುತ್ತದೆ.

ಈ ಪ್ರಸ್ತರಗಳಿಗೆ ಕಲ್ಲು, ಮರವನ್ನು ಉಪಯೋಗಿಸಬಹುದು. ಸಾಧಾರಣವಾಗಿ ಮನೆಗಳಿಗೆ ಮರದಿಂದ ಮಾಡಿದ ತೊಲೆಯನ್ನು ಬಳಸುತ್ತಾರೆ. ದೊಡ್ಡ ಕಟ್ಟಡಗಳು, ನಾಟ್ಯಶಾಲೆ, ಸಭಾಮಂಟಪ, ಛತ್ರ, ಮಠ ಮುಂತಾದವುಗಳಿಗೆ ಕಲ್ಲ ಪ್ರಸ್ತರವನ್ನು ಬಳಸುತ್ತಾರೆ.

**ದೇಕೊರೆ**

## ಪಾಂಪೆಯ ಭಿತ್ತಿಚಿತ್ರಗಳು

ಇಟಲಿಯ ವಸೂವಿಯಸ್ ಪರ್ವತ ಸಮೀಪದ ಭೂಮಿಯಿಂದ ಪ್ರಾಚೀನವಾದ ಪಾಂಪೆನಗರ ಸಂಸ್ಕೃತಿಯನ್ನು ಬೆಳಕಿಗೆ ತಂದಾಗ, ಆ ನಗರದ ಭಿತ್ತಿಚಿತ್ರಕಲೆಯ ಪರಿಚಯ ವಿಶ್ವಕಲಾರಂಗಕ್ಕಾಯಿತು. ಆ ನಗರಕ್ಕೆ ಸಮೀಪವಿರುವ ವಸೂವಿಯಸ್ ಅಗ್ನಿಪರ್ವತ ಕ್ರಿ. ಶ. ೭೯ರಲ್ಲಿ ಸ್ಫೋಟಗೊಂಡದ್ದರಿಂದ ಆ ನಗರ ಭೂಗತವಾಗಿತ್ತು. ವಿಶ್ವಕಲಾರಂಗ ಆ ಚಿತ್ರಕಲೆಯ ತಾಂತ್ರಿಕ ಪಾರಮ್ಯಕ್ಕೆ ಅಚ್ಚರಿಗೊಂಡಿತು. ಈ ಭಿತ್ತಿಚಿತ್ರಗಳು fresco, secco ಅಥವಾ wax process ನಲ್ಲಿ ಚಿತ್ರಿಸಿರಬಹುದೆಂಬ ಊಹೆಗಳಿದ್ದು, ಅಂತಿಮವಾಗಿ ಈ ಭಿತ್ತಿಚಿತ್ರಗಳು stucco lustro ತಂತ್ರದಲ್ಲಿ ಚಿತ್ರಿಸಲ್ಪಟ್ಟಿವೆಯೆಂದು ಒಪ್ಪಿಕೊಳ್ಳಲಾಯಿತು.

ರೋಮನರ ವೈಭವದ ಕಟ್ಟಡಗಳ ಭಿತ್ತಿಗಳಲ್ಲಿ ಅತ್ಯಂತ ಬೆಲೆಬಾಳುವ ವಸ್ತುಗಳ ಮೇಲ್ಮೈಯನ್ನು ಅತ್ಯಂತ ಸರಳ ವಿಧಾನ ಮತ್ತು ಚತುರತೆಯ ರಚನಾ ತಂತ್ರಗಳಿಂದ ಅನುಕರಿಸಲಾಗಿದೆ; stucco lustro ತಂತ್ರವನ್ನು ಯಶಸ್ವಿಯಾಗಿ ದುಡಿಸಿಕೊಳ್ಳಲಾಗಿದೆ. ಗ್ರೀಕರು ಅನುಸರಿಸುತ್ತಿದ್ದ ದ್ವಿಮಾನ ಚಿತ್ರರಚನಾ ವಿಧಾನದಿಂದ ದೂರ ನಡೆದ ಈ ನಗರದ ಭಿತ್ತಿಚಿತ್ರಕಲಾವಿದರು ತ್ರಿಮಾನದ ಭ್ರಾಂತಿಯನ್ನು, ಪರಿಣಾಮಗಳನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಆದರೂ ಗ್ರೀಕರ ಚಿತ್ರರಚನೆಯ ತಂತ್ರಗಳನ್ನು ಅಧ್ಯಯನ ಮಾಡಲು ಈ ಚಿತ್ರಗಳು ಉಪಯುಕ್ತವಾಗಿವೆ. ರೋಮ್ ಕಲಾವಿದರು ಚಿತ್ರರಚನೆಯ ಹಲವು ತಂತ್ರಗಳನ್ನು ಗ್ರೀಕರಿಂದ ಗ್ರಹಿಸಿದರು. ಗ್ರೀಕರದೆಂದು ಹೇಳಬಹುದಾದ ಚಿತ್ರಕಲೆ ಉಳಿದಿಲ್ಲವಾದರೂ ಅವರ ತಾಂತ್ರಿಕ ರೀತಿನೀತಿಗಳನ್ನು ಅರಿಯಲು ಪಾಂಪೆಯ ಭಿತ್ತಿಚಿತ್ರಗಳು ನೆರವಾಗುತ್ತವೆ.

**ಕೆ.ವಿ.ಸು.**

## ಪಾಪ್ ಕಲೆ

ಉಪಭೋಗ ಸಂಸ್ಕೃತಿ, ಮತ್ತು ಸಮುದಾಯ ಸಂಸ್ಕೃತಿಯ ಪ್ರತಿಮೆಗಳನ್ನು (ಕಾಮಿಕ್ ಕಥಾಚಿತ್ರಗಳು, ಪ್ಯಾಕೇಜಿಂಗ್, ಹೊರಾಂಗಣ ಜಾಹಿರಾತು ಚಿತ್ರಗಳು, ಟೆಲಿವಿಷನ್, ಸಿನಿಮಾ ತಾರೆಯರು ಇತ್ಯಾದಿ) ವ್ಯಂಗ್ಯ ಮತ್ತು ವೈಭವೀಕರಣದ ಅತ್ಯುತ್ತಮ ಸಮತೋಲನದಿಂದ ಬಳಸಿಕೊಂಡು ಸೃಷ್ಟಿಯಾದ ಕಲೆ. ೧೯೫೦ರಲ್ಲಿ ಇನ್ಸ್‌ಟಿಟ್ಯೂಟ್ ಆಫ್ ಕಾಂಟೆಂಪೊರರಿ ಆರ್ಟ್ಸ್‌ನ ಸದಸ್ಯರುಗಳಿಂದ ಲಂಡನ್‌ನಲ್ಲಿ ನಗರದ ಜನಪ್ರಿಯ ಸಂಸ್ಕೃತಿಯನ್ನು ಕುರಿತಂತೆ ಆರಂಭವಾದ ಶೋಧ ೧೯೬೦ರಲ್ಲಿ ಒಂದು ಪ್ರಮುಖ ಶೈಲಿಯಾಗಿ ರೂಪುಗೊಂಡಿತು. ತನ್ನ ಬೆಳವಣಿಗೆಯಲ್ಲಿ ದಾದಾ ಪಂಥದ ಅನೇಕ ವಿಚಾರಗಳನ್ನು (ಮುಖ್ಯವಾಗಿ ರೆಡಿಮೇಡ್) ಒಗ್ಗೂಡಿಸಿಕೊಂಡಿತು. ಬ್ರಿಟನ್‌ನಲ್ಲಿ ರಿಚರ್ಡ್ ಹ್ಯಾಮಿಲ್ಟನ್, ಅಲೆನ್ ಜೋನ್ಸ್, ಪೀಟರ್



ರಾಯ್ ಲಿಚೆನ್‌ಸ್ಟನ್

ಫಿಲಿಪ್ಸ್; ಅಮೆರಿಕದಲ್ಲಿ ಜೇಮ್ಸ್ ರೋಸೆನ್, ಕ್ರಿಸ್ಟ್‌ಕ್ಲಾಯ್ಸ್, ಓಲ್ಡೆನ್‌ಬರ್ಗ್, ರಾಯ್ ಲಿಚ್‌ಟನ್‌ಸ್ಟೀನ್, ಆಂಡಿವರೋಲ್, ಮುಂತಾದವರು ಪಾಪ್ ಕಲಾವಿದರು. ಗ್ರಾಫಿಕ್ ಮಾಧ್ಯಮವನ್ನು, ಅದರ ಪುನರ್ ಸೃಷ್ಟಿಯ ಸಾಧ್ಯತೆಗಳನ್ನು ಬಹು ಚೆನ್ನಾಗಿ ದುಡಿಸಿಕೊಂಡಿದ್ದಾರೆ. ಭಾರತದಲ್ಲಿ ಭೂಪೇನ್ ಕಕ್ಕರ್ ಮತ್ತು ಜ್ಯೋತಿಭಟ್‌ರವರು ತಮ್ಮ ಅನೇಕ ಕೃತಿಗಳಲ್ಲಿ ಪಾಪ್ ಪ್ರತಿಮೆಗಳನ್ನು ತಮ್ಮದಾಗಿಸಿಕೊಂಡಿದ್ದಾರೆ.

ರ.ಶಾ.

## ಪಾಲೆಟ್ (Palette)

ಕಲಾವಿದನು ಬಣ್ಣಗಳನ್ನು ಇಡಲು ಹಾಗೂ ಮಿಶ್ರಣಗೊಳಿಸಲು ಬಳಸುವ ಕಟ್ಟಿಗೆಯ ಸಣ್ಣ ಫಲಕಕ್ಕೆ ಪಾಲೆಟ್ ಎನ್ನುತ್ತಾರೆ. ಹಾಗೂ ವ್ಯಾಪಕ ಅರ್ಥದಲ್ಲಿ ಒಂದು ಕಲಾಕೃತಿಯನ್ನು ಚಿತ್ರಿಸಲು ಕಲಾವಿದನು ಬಳಸಿಕೊಂಡ ವರ್ಣಶ್ರೇಣಿಗೂ ಕೂಡ ಪಾಲೆಟ್ ಎನ್ನುತ್ತಾರೆ.

ವಿಶಿಷ್ಟಪ್ರಕಾರದ ಪಿಂಗಾಣಿ ಪಾತ್ರೆಗಾಗಿ ಬಳಸುವ ಬಣ್ಣಗಳ ಗುಂಪಿಗೂ ಪಾಲೆಟ್ ಎನ್ನುತ್ತಾರೆ. ಇವುಗಳಲ್ಲಿ ಜಲವರ್ಣ ರಚನೆಗೆ ಕುಳಿಗಳಿಂದ ಕೂಡಿದ ಕಲಸುತಟ್ಟೆಗಳಿದ್ದರೆ ತೈಲವರ್ಣಕ್ಕೆ ಸಪಾಟಾದ ಬಾದಾಮಿಯಾಕಾರದ ತಟ್ಟೆಗಳಿರುತ್ತವೆ. ಒಂದು ಬದಿಯಲ್ಲಿ ರಂಧ್ರವಿದ್ದು ಎಡಗೈಯ ಹೆಬ್ಬೆಟ್ಟಿನಲ್ಲಿ ಭದ್ರವಾಗಿ ಹಿಡಿಯುವಂತಿರುತ್ತವೆ.

ಅ.ಚಿ.

## ಪಾಲೆಟ್ ನೈಫ್ (Palette Knife)

ಮಣಿಯಬಹುದಾದ, ಭಿನ್ನ ಭಿನ್ನ ಅಳತೆಯುಳ್ಳ, ಅಗಲವಾದ, ದುಂಡಗಿನ, ತೈಲಚಿತ್ರ ರಚನೆಯಲ್ಲಿ ಉಪಯೋಗಿಸುವ ಅಲಗಿಗೆ 'ಪಾಲೆಟ್ ನೈಫ್' ಎನ್ನುತ್ತಾರೆ. ಇದನ್ನು ಪಾಲೆಟ್ ಮೇಲೆ ಬಣ್ಣಗಳನ್ನು ಮಿಶ್ರಣಗೊಳಿಸಲು ಉಪಯೋಗಿಸುತ್ತಾರೆ ಮತ್ತು ಪಾಲೆಟ್‌ನ್ನು ಸ್ವಚ್ಛಗೊಳಿಸಲೂ ಬಳಸುತ್ತಾರೆ.

ವಿವಿಧ ಅಳತೆ, ಆಕಾರಗಳಲ್ಲಿ ದೊರೆಯಬಹುದಾದ ಇವುಗಳ ರೂಪ ಉಪ್ಪಾರರು ಮನೆಕಟ್ಟಲು ಬಳಸುವ ಕರಣೆಯಂತೆ ತೀರಾ ಕಿರು ಆಕಾರದಲ್ಲಿರುತ್ತವೆಂದು ಹೇಳಬಹುದು. ಸಾಮಾನ್ಯವಾಗಿ ಬಣ್ಣಗಳನ್ನು ಕ್ಯಾನ್‌ವಾಸ್ ಮೇಲೆ ನೇರವಾಗಿ ಸಪಾಟಾಗಿ(ಗಾರೆ ಹಚ್ಚುವಂತೆಯೇ) ಹಚ್ಚಲು ಬಳಕೆಯಾಗುತ್ತದೆ.

ಅ.ಜಾ.

## ಪಾಶ್ಚಾತ್ಯ ಚಿತ್ರಕಲೆ

ಪಾಶ್ಚಾತ್ಯ ಚಿತ್ರಕಲೆಯ ಇತಿಹಾಸದಲ್ಲಿ ಗ್ರೀಕ್ ಮತ್ತು ರೋಮನ್ ಚಿತ್ರಕಲೆಗಳು ಮುಖ್ಯವಾದವು. ಗ್ರೀಕರು ಮತ್ತು ರೋಮನ್ನರು, ಸೌಧಗಳನ್ನು ಮತ್ತು ಗೋರಿಗಳನ್ನು ಚಿತ್ರಗಳಿಂದ ಅಲಂಕರಿಸುತ್ತಿದ್ದರು. ವಿವಿಧ ಬಣ್ಣದ ಸಣ್ಣ ಸಣ್ಣ ಗಾಜು ಅಥವಾ ಕಲ್ಲಿನ ಚೂರುಗಳನ್ನು ಉಪಯೋಗಿಸಿದ ಚಿತ್ರಗಳು ಗ್ರೀಕರ ವೈಶಿಷ್ಟವಾಗಿತ್ತು ಹಾಗೂ ವ್ಯಕ್ತಿ ಚಿತ್ರಣದಲ್ಲಿ ಚತುರರಾಗಿದ್ದರು. ನಾಲ್ಕನೆಯ ಶತಮಾನದಲ್ಲಿ ರೂಪುಗೊಂಡ ರೋಮನ್ ಬೈಜಾಂಟಾಯಿನ್ ಕಲೆ ಸಂಸ್ಕೃತಿ ಕೇಂದ್ರವಾಗಿ ವಿಕಾಸಗೊಂಡಿತು. ಇಲ್ಲಿ ಗ್ರೀಕ್, ರೋಮನ್ ಮತ್ತು ಪರ್ಶಿಯನ್ ಕಲಾ ಪ್ರಭಾವವನ್ನು ಈ ಕಲೆಗಳ ಸಮ್ಮಿಶ್ರಣವನ್ನು ಕಾಣಬಹುದು. ಹದಿನೈದನೆ ಶತಮಾನದಲ್ಲಿ ಯೂರೋಪಿನಲ್ಲಿ ಕಲೆ 'ನವೋದಯ'ಕ್ಕೆ ಕಾರಣವಾಗಿ ಕಲೆಗಳು ಪುನರುಜ್ಜೀವನಗೊಂಡವು.

ನವೋದಯ ಕಾಲದ ಪಾಶ್ಚಾತ್ಯ ಚಿತ್ರಕಲೆಯ ಎರಡು ಪ್ರಮುಖ ಲಕ್ಷಣಗಳು, ತೈಲಚಿತ್ರಗಳ ರಚನೆ ಮತ್ತು ರಾಷ್ಟ್ರೀಯ ಚಿತ್ರಕಲಾ ಶೈಲಿಗಳ ಬೆಳವಣಿಗೆ ಹಾಗೂ ೧೭-೧೮ನೆಯ ಶತಮಾನಗಳಲ್ಲಿ ಬಾರೋಕ್ ಮತ್ತು ರೋಕೋಕೋ ಕಲಾಶೈಲಿಗಳು ವಿಕಾಸಗೊಂಡವು. ಇಟಲಿಯ ನವೋದಯ ಕಲೆಯ ಪ್ರಮುಖ ವಿಕಾಸ ಕ್ಷೇತ್ರ, ಯುರೋಪಿನ ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್ ಮುಂತಾದ ಪ್ರದೇಶಗಳಲ್ಲಿ ಉಂಟಾಯಿತು. ಅನಂತರ ಇಟಲಿಯ ಕಲಾವಿದರು ಫ್ರಾನ್ಸ್‌ಗೆ ಆಹ್ವಾನಿತರಾಗಿ, ಅವರ ಕೃತಿಗಳು ಫ್ರೆಂಚ್‌ಕಲಾವಿದರ ಮೇಲೆ ಪರಿಣಾಮ ಬೀರಿದವು. ಹದಿನೆಂಟನೆಯ ಶತಮಾನದಲ್ಲಿ ರೂಪಚಿತ್ರಣಕಲೆ ಎಂಬ ವಿಶಿಷ್ಟ ಪ್ರಕಾರ ಬೆಳೆಯಿತು.

೧೯ನೆಯ ಶತಮಾನದಲ್ಲಿ ಕ್ಯಾಮರಾ ಸಂಶೋಧನೆಯಿಂದಾಗಿ ಚಿತ್ರಕಲೆಯ ಉದ್ದೇಶವನ್ನು ಕುರಿತು ಕಲಾವಿದರು ತೀವ್ರವಾಗಿ ಚಿಂತಿಸಿದರು ಮತ್ತು ವೈಜ್ಞಾನಿಕ ಸಂಶೋಧನೆಗಳಿಂದ ವಿವಿಧ

ಬಗೆಯ ಬಣ್ಣಗಳು ತಯಾರಾದವು. ಇವು ಚಿತ್ರಕಲೆಯ ರಚನಾ ತಂತ್ರಗಳ ಮೇಲೆ ಪರಿಣಾಮ ಬೀರಿದವು. 'ಆಧುನಿಕ' ಎಂಬುದು ಪ್ರಾರಂಭವಾದುದು ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಎಡ್ವರ್ಡ್‌ಮಾನೆ ಪ್ರಥಮ ನವ್ಯಕಲಾವಿದ. ಅನಂತರ ಇಂಪ್ರೆಷನಿಸಂ, ಎಕ್ಸ್‌ಪ್ರೆಷನಿಸಂ, ಫಾವಿಸಂ, ಕ್ಯೂಬಿಸಂ, ಫ್ಯೂಚರಿಸಂ, ದಾದಾಯಿಸಂ, ಸರ್ರಿಯಲಿಸಂ, ಆಫ್ ಆರ್ಟ್, ಮುಂತಾದ ಪಂಥಗಳು ಪ್ರಾರಂಭವಾಗಿ ಹೊಸ ಚಿಂತನೆ ಪ್ರಯೋಗಗಳು ಯೂರೋಪ್ ಖಂಡದಲ್ಲಿ ನಡೆದರೂ, ಇದರ ಪ್ರಭಾವ ಪ್ರಪಂಚದ ಇತರ ಭಾಗಗಳಿಗೂ ವ್ಯಾಪಿಸಿತು. ೨೦ನೇ ಶತಮಾನದಲ್ಲಿ ಕಲಾಕ್ಷೇತ್ರದಲ್ಲಿ ತ್ವರಿತಗತಿಯಲ್ಲಿ ಬದಲಾವಣೆಗಳಾಗಿವೆ. ಕನ್‌ಸೆಪ್‌ಚುಯಲ್ ಆರ್ಟ್, ಮಿನಿಮಲ್ ಆರ್ಟ್, ಪ್ರೋಸೆಸ್ ಆರ್ಟ್, ಇಕೋಲಾಜಿಕಲ್ ಆರ್ಟ್, ಬಾಡಿ ಆರ್ಟ್, ಇನ್‌ಸ್ಟಲ್ಲೇಷನ್, ಅಸಂಬಲೇಜ್ ಮುಂತಾದವು ಹೊಸ ಚಿಂತನೆಗಳಿಂದ ಪ್ರಾರಂಭವಾದವು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಲೆಯಲ್ಲಿ ಆದ ಬದಲಾವಣೆಗೆ ಮುಖ್ಯವಾಗಿ ಸ್ವತಂತ್ರ ಚಿಂತನೆ, ತನ್ನದೆ ಆದ ನಿಲುವು, ಹೊಸತನ ಕಂಡು ಹಿಡಿದ ಹಾಗೂ ಇದರ ಫಲವಾಗಿ, ವಸ್ತುವಿನಲ್ಲಿ ಹೊಸ ಚಿಂತನೆಗಳನ್ನು ಕಾಣಬಹುದು.

ಮರಿ

## ಪ್ರಾಕಾರ

ಆಲಯದ ಸುತ್ತಲು ನಿರ್ಮಿತವಾಗಿರುವ ಗೋಡೆಗೆ 'ಪ್ರಾಕಾರ' ಎಂದು ಹೆಸರು. ಈ ಗೋಡೆಯ ಅಥವಾ ಆವರಣದ ಒಳಗೆ ಮೂಲ ದೇವಾಲಯವಲ್ಲದೆ ಪರಿವಾರಾಲಯಗಳೂ, ಪುಷ್ಕರಣಿ ಹಾಗೂ ಉಪವನವೂ ಅಂತರ್ಗತವಾಗಿರುತ್ತವೆ. 'ಪ್ರಾಕಾರ' ಎಂಬುದಕ್ಕೆ ನಗರವನ್ನು ಸುತ್ತುವರಿದ ಗೋಡೆ ಎಂಬ ಅರ್ಥವಿದ್ದು, ಅಗ್ನಿಪುರಾಣ, ರಾಮಾಯಣ, ಮಹಾಭಾರತಗಳಲ್ಲಿ ಅದೇ ಅರ್ಥದಲ್ಲಿ ಪ್ರಯುಕ್ತವಾಗಿದೆ. ಪ್ರಾಕಾರವನ್ನು 'ಕೋಶ' ಅಥವಾ 'ಆವರಣ' ಎಂದು ಕರೆಯುವರು. ಸಾಮಾನ್ಯವಾಗಿ ಆಲಯವು ಒಂದು ಅಥವಾ ಮೂರು 'ಪ್ರಾಕಾರಗಳನ್ನು ಹೊಂದಿರುವುದುಂಟು. ಅಪರೂಪವಾಗಿ ಐದು, ಏಳು, ಪ್ರಾಕಾರಗಳನ್ನು ಪಡೆದಿರುವುದೂ ಉಂಟು. ಇವುಗಳಲ್ಲಿ ಎಲ್ಲದಕ್ಕೂ ಒಳಗಿನ ಅಂಗಳವನ್ನು 'ಅಂತರ್ಮಂಡಲ' ಎರಡನೆಯದು 'ಅಂತರ್ನಿಹಾರ', ಮೂರನೆಯದು 'ಮಧ್ಯಮಹಾರ', ನಾಲ್ಕನೆಯದು 'ಪ್ರಾಕಾರ', ಐದು ಅಥವಾ ಕೊನೆಯದನ್ನು 'ಮಹಾಮರ್ಯಾದ' ಎಂದು ಕರೆಯಲಾಗುತ್ತದೆ. ಪ್ರತಿ ಪ್ರಾಕಾರದ ನಾಲ್ಕು ದಿಕ್ಕುಗಳಲ್ಲು ದ್ವಾರಗಳನ್ನು ಅವಕ್ಕೆ ಶೋಭೆತರಲು ಗೋಪುರಗಳನ್ನೂ ನಿರ್ಮಿಸಬೇಕೆಂದು ಶಾಸ್ತ್ರಗ್ರಂಥಗಳಲ್ಲಿ ಹೇಳಿದೆ. ಈ ಪ್ರಕಾರ ಗೋಡೆಗಳಿಗೆ ಸಾಲು ಮಂಟಪಗಳನ್ನು ಅಳವಡಿಸಿ ಹಲವಾರು ದೇವತೆಗಳ ಸನ್ನಿಧಿಗಳು, ಸಾಮಾನು ಸರಂಜಾಮುಗಳನ್ನು ಇರಿಸುವ ಕೋಣೆಗಳು, ಪಾಕಶಾಲೆ, ವಾಹನ ಮಂಟಪಗಳು ಇತ್ಯಾದಿ ಹತ್ತಾರು ಪ್ರಯೋಜನಗಳಿಗೆ ನೆರವಾಗುವಂತೆ ಮಾಡಿರುವುದೂ ಉಂಟು. ಪ್ರಾಕಾರಗಳ ಮುಖ್ಯೋದ್ದೇಶ ಗುಡಿಯನ್ನು, ಗುಡಿಯಸ್ಥಿರ ಚರಸ್ವತ್ತನ್ನೂ ಕಾದಿಟ್ಟುಕೊಳ್ಳುವುದಾದರೂ ಅವನ್ನು ಕಲಾತ್ಮಕವಾಗಿ ಭವ್ಯವಾಗಿ ನಿರ್ಮಿಸುವ ಪದ್ಧತಿ ಇದೆ. ತಮಿಳುನಾಡಿನಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳಲ್ಲಿ ವಿಶಾಲವಾದ ಪ್ರಕಾರಗಳನ್ನು ಕಾಣಬಹುದು.

ಪಿ.ವಿ.ಕೆ.

## ಪ್ರಾಚ್ಛಾದನ

ಪ್ರಾಚ್ಛಾದನವೆಂದರೆ ವಾಸ್ತುವಿನ ಮೇಲ್ಛಾವಣಿ. ಇವು ಗರಿ, ಎಲೆ. ಅಥವಾ ಹುಲ್ಲು; ಮರ, ಗಾರೆ, ಕಲ್ಲುಗಳಿಂದ ರಚಿತವಾಗಿರುತ್ತವೆ. ಇವುಗಳನ್ನು ಬಳಸಿ ಕಟ್ಟುವ ಕಟ್ಟಡಗಳಲ್ಲಿ ಆರು ವಿಧಗಳಿವೆ. ಭವನ, ಸೌಧ, ಸಾಮಾನ್ಯ ಮನೆ, ಹರ್ಮ್ಯ, ರಾಜಪ್ರಸಾದ, ಮತ್ತು ದೇವಾಲಯ ಅನುಕೂಲ ಹಾಗೂ ವಾತಾವರಣಕ್ಕೆ ತಕ್ಕಂತೆ ಮೇಲ್ಛಾವಣಿಗಳು ಚಪ್ಪಟೆಯಾಗಿ, ಇಳಿಜಾರಾಗಿ ಇಲ್ಲವೆ ಅರ್ಧ ವರ್ತುಲಾಕಾರವಾಗಿರುತ್ತವೆ.

**ದೇಕೊರೆ**

## ಪಿಚ್ಚುರಾ - ಮೆಟಾಫಿಸಿಕಾ

ಮೆಟಾಫಿಸಿಕಲ್ ಚಿತ್ರಗಳು ಒಂದು ಕಲಾ ಪ್ರಕಾರವಾಗಲೀ, ಕಲಾಚಳುವಳಿಯಾಗಲೀ ಅಲ್ಲವೆಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ೧೯೧೦ ರಿಂದ ೧೯೧೫ರವರೆಗೆ ಡಿ ಚಿರಿಕೋ, ಕಾರ್ಲೋ ಕಾರ್‍ರಾ ಮುಂತಾದವರು ರಚಿಸುತ್ತಿದ್ದ ಚಿತ್ರಗಳು ಈ ಗುಂಪಿಗೆ ಸೇರುತ್ತವೆ. ೧೯೧೮ರಲ್ಲಿ ಕಾರ್‍ರಾ, ಪಿಚ್ಚುರಾ ಮೆಟಾಫಿಸಿಕಾ ಎಂಬ ಹೊತ್ತಿಗೆ ಪ್ರಕಟಿಸಿದ. ಅದರಲ್ಲಿ ಈ ಪಂಥದ ಪ್ರಣಾಳಿಕೆಗಳು, ವಿಶೇಷಗಳು ಇತ್ಯಾದಿಗಳು ವಿವರಿಸಲ್ಪಟ್ಟಿದ್ದವು. ಆದರೆ ತನಗೆ ಅದರಲ್ಲಿ ಸಾಕಷ್ಟು ಪ್ರಾಮುಖ್ಯತೆ ದೊರೆಯಲಿಲ್ಲ ಎಂಬ ಕ್ಷುಲ್ಲಕ ಕಾರಣಕ್ಕಾಗಿ ಡಿಚಿರಿಕೋ ತನ್ನ ಸಂಬಂಧವನ್ನು ಕಳಚಿಕೊಂಡ. ಇವರು ನವಯುಗ(ರಿನೇಸೆನ್ಸ್) ಪಂಥದ ವಾಸ್ತವಿಕತೆಯನ್ನು, ಪರಿಧಿಯಿರದ ಕಲ್ಪನೆಯನ್ನು, ಪರಿಚಿತ ವಾತಾವರಣವನ್ನು, ಶಿಲ್ಪದಂತೆ ಕಾಣುವ ವಸ್ತುಗಳನ್ನು ರಚಿಸುವ ತಂತ್ರ ಅಳವಡಿಸಿಕೊಳ್ಳುತ್ತಿದ್ದರು. ಆ ಚಿತ್ರಗಳು ವಿಚಿತ್ರ ಭಾವನೆಗಳನ್ನು, ಕೆಲವೊಮ್ಮೆ ಹೆದರಿಕೆಯನ್ನು ಹುಟ್ಟಿಸುತ್ತಿದ್ದವು. ಆಲ್ಬರ್ಟೋ‌ಸಾವಿನಿಯೋ, ಫಿಲಿಪ್ಪೋಡಿಪ್ಯೆಸಿಸ್, ಮಾರಿಯೋ ಸಿರೋನಿ, ಜಿಯಾರ್ಜಿಯೋ ಮೊರಾಂಡಿ ಮುಂತಾದವರು ಇತರ ಸದಸ್ಯರು.

**ರಚಾ**

## ಪುನರಾವೃತ್ತಿ (Repetition)

ಚಿತ್ರವನ್ನು ಸ್ವಾರಸ್ಯವಾಗಿಸುವ ಪ್ರಯತ್ನದಲ್ಲಿ ಕಲಾವಿದರು ಕೆಲವೊಮ್ಮೆ ಪುನರಾವೃತ್ತಿಯ ಬಳಕೆ ಮಾಡುತ್ತಾರೆ. ಮೇಲ್ಮೈ. ಆಕಾರ, ರೂಪ, ರೇಖೆ, ಬಣ್ಣ ಹೀಗೆ ಯಾವುದಾದರೂ ಅಂಶವನ್ನು ಪುನರಾವೃತ್ತಿಸುತ್ತಾ ಇರುತ್ತಾರೆ. ಹೀಗೆ ಒಂದೇ ಬಗೆಯ, ನಿಕಟ ಸಂಬಂಧ ಹೊಂದಿದ ವಸ್ತುಗಳನ್ನು ಮೆದುಳು ಶೀಘ್ರವಾಗಿ ಪರಿಗ್ರಹಿಸುವುದರಿಂದ ಚಿತ್ರದಲ್ಲಿ ಒಟ್ಟಾರೆ ಸಾಮರಸ್ಯ ಕಂಡುಬರುತ್ತದೆ ಎಂದು ಸೌಂದರ್ಯಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಶಿಲ್ಪದಲ್ಲಿ ಒಂದೇ ವಿನ್ಯಾಸದ ಪುನರಾವೃತ್ತಿ ಸ್ವಾರಸ್ಯಕರ ಪರಿಣಾಮ ಬೀರುತ್ತದೆ. ಉದಾ: ಅಬಾಕನೋವಿಕ್ಷನ 'ಬ್ಯಾಕ್ಸ್'. ಇದರಲ್ಲಿ ಈ ಒಂದು ಆಘಾತಕಾರೀ ಅನುಭವ ಉಂಟಾಗುವುದಕ್ಕೆ ಕಾರಣ ರುಂಡ, ಕೈ ಕಾಲುಗಳಿಲ್ಲದ ಕಂಬದಾಕೃತಿಗಳು ಮಾತ್ರವಲ್ಲದೇ ಅಲ್ಲಿರುವ ನೂರಾರು ಸಮನಾದ ಆಕೃತಿಗಳು ಪುನರಾವರ್ತನೆಯೂ ಕಾರಣ. ಇದಕ್ಕೆ ವಿರುದ್ಧವಾದ ಪ್ರತಿಕ್ರಿಯೆ ಒರಾಜ್ಕೋನ

ಜಪಾಟಿಸ್ಟಾಸ್(Zapatistas)ನಲ್ಲಿ ಕಾಣುತ್ತವೆ. ಬಂಡುಕೋರ ರೈತರ ಒಂದೇ ಬಗೆಯ ಉಡುಪಿನ, ಒಂದೇ ರೀತಿಯ ಚಿತ್ರಣ ಚಿತ್ರವನ್ನು ಬಲವಾಗಿಸಲು ಸಹಾಯಕವಾಗಿದೆ. ಮೇಲಿನ ಭಾಗದ ದೊಡ್ಡ ಟೊಪ್ಪಿಗೆಗಳನ್ನು ಹಾಗೂ ಕೆಳಭಾಗದ ಬಾಗಿದ ಶರೀರ ಹಾಗೂ ಸಣ್ಣ ಟೊಪ್ಪಿಗೆಗಳೂ ಒಂದೇ ತಾಳದ ಬೇರೆ ಬೇರೆ ಆವೃತ್ತ್ಯಗಳಂತಿರುತ್ತವೆ. ಸೆಝಾನ್ ಸ್ಯೆಂಟ್ ವಿಕ್ಟರಿ ಪರ್ವತದ ಚಿತ್ರಣವೂ ಒಂದೇ ಬಗೆಯ ಕುಂಚದೆಳೆತಗಳನ್ನು ಸೃಷ್ಟಿಸಿದುದೂ ಇದೇ ಬಗೆಯ ಒಮ್ಮತ್ರಕ್ಕಾಗಿ. ವ್ಯಾಪಾರೀ ಕಲೆ/ವಿನ್ಯಾಸಗಳಲ್ಲಿ ಈ ಬಗೆಯ ಪುನರಾವೃತ್ತಿಯ ಬಳಕೆ ಅನೂಚಾನವಾಗಿ ನಡೆದು ಬಂದಿದೆ. ವಾಲ್ ಪೇಪರ್‌ಗಳು, ತಟ್ಟೆ, ಲೋಟ, ಗೋಡೆ, ಪರದೆಗಳ ಮೇಲಿನ ವಿನ್ಯಾಸಗಳು ಇವುಗಳಲ್ಲಿ ಇದನ್ನು ಗಮನಿಸಬಹುದು.

ರಶಾ

## ಫ್ಯೂಚರಿಸಂ

ಫ್ಯೂಚರಿಸಂ ಅಥವಾ ಭವಿಷ್ಯವಾದ, ಕೇವಲ ಚಿತ್ರಕಲೆಗೆ ಸೀಮಿತವಾಗಿಲ್ಲ. ಈ ಪಂಥ ಪ್ರಾರಂಭವಾದುದು ಇಟಲಿಯಲ್ಲಿ. ಸುಮಾರು ೮೮ ವರ್ಷಗಳ ಹಿಂದೆ, ಈ ತತ್ವವನ್ನು ಪ್ರಚಾರ ಮಾಡಿದ ಕವಿ-ಮಾರಿನೆಟ್ಟಿ, ಈ ಫ್ಯೂಚರಿಸಂ ತತ್ತ್ವ ಸ್ಥೂಲವಾಗಿ ಇಷ್ಟೇ. ಸೃಜನಶೀಲ ಕ್ಷೇತ್ರಗಳು (ಸಾಹಿತ್ಯ ಕಲೆ ಇತ್ಯಾದಿ) ಕೇವಲ ಹಳೆಯ ಜಾಡನ್ನೇ ಹಿಡಿಯದೆ ೨೦ನೆಯ ಶತಮಾನದ ಭಾವವನ್ನು ಗ್ರಹಿಸಿ ಅದು ಅವರ ಕೃತಿಗಳಲ್ಲಿ ಪ್ರತಿಧ್ವನಿತವಾಗಬೇಕು. ೨೦ನೇ ಶತಮಾನ ಕೈಗಾರಿಕಾ ಯುಗವಾದುದರಿಂದ ಈ ಫ್ಯೂಚರಿಸಂ ಕೃತಿಗಳಲ್ಲಿ ಯಂತ್ರಗಳಿಗೆ ಗಣನೀಯ ಸ್ಥಾನ ಅದರಲ್ಲಿ ಚಲನೆ ಗತಿ ಅನುಭವವಾಗಬೇಕು.



ಜಿಯಾ ಕೋಮೋ ಬಲ್ಲಾ

ಈ ಪಂಥದ ಪ್ರತಿಪಾದಕರಲ್ಲಿ ಎಂಬರ್ಟೋ ಬೊಚ್ಚಿಯೋನಿ, ಕಾರ್ಲೊಕಾರ್ರಾ, ಜಿಯಾಕೋಮೋ ಬಲ್ಲಾ, ಗಿನೋ ಸೆವರ್ನಿನಿ ಮುಂತಾದವರು ಮುಖ್ಯರಾದವರು ಇವರ ಚಿತ್ರಗಳಲ್ಲಿ ವಸ್ತುವಿನ ಚಲನೆ ಮತ್ತು ಅದರ ಸತ್ವವನ್ನು ಪ್ರತಿಬಿಂಬಿಸಲು ಯತ್ನಿಸುತ್ತಿದ್ದರು. ಬಲ್ಲಾ ರಚಿಸಿದ ಚಿತ್ರ 'ಡಾಗ್ ಆನ್ ದಿ ಲೀಷ್' ಎಂಬ ಚಿತ್ರ ಜಗತ್ಪ್ರಸಿದ್ಧವಾದುದು. ಅದರಲ್ಲಿ ನಾಯಿ, ಅದರ ಕತ್ತಿಗೆ ಹಾಕಿದ ಸರಪಣಿ ಹಿಡಿದ ಮಹಿಳೆ-ಇವರುಗಳ ಚಲನೆಯನ್ನು ಗ್ರಹಿಸಿದ್ದಾನೆ. ಈ ಪಂಥವು ಚಿತ್ರದಂತೆ ಸಂಗೀತಕ್ಕೂ ಪ್ರವೇಶಿಸಿತು. ಮಿಲಾನ್ ನಗರದಲ್ಲಿ ಏರ್ಪಾಡಾದ ಒಂದು ಫ್ಯೂಚರಿಸ್ಟ್ ಸಂಗೀತ ಕಛೇರಿಯಲ್ಲಿ ನಮಗೆ ಪರಿಚಿತವಾದ ವಾದ್ಯಗಳನ್ನು ಬಿಟ್ಟು ಸೈರನ್ ಯಂತ್ರಗಳ ಧ್ವನಿ ಮೋಟಾರ್ ಹಾರ್ನ್ ಮುಂತಾದ ವಸ್ತುಗಳಿಂದ ಉತ್ಪನ್ನವಾದ ನಾದದ ಆಧಾರದ ಮೇಲೆ ರಚಿತವಾದ ಸಂಗೀತ ಕೃತಿಗಳನ್ನು ನಿರೂಪಿಸಲಾಯಿತು. ಈ ಧ್ವನಿ ೨೦ನೆಯ ಶತಮಾನದ ಮತ್ತು ಮುಂದಿನ ಯುಗದ ಸಂಕೇತವೆಂದು ಸಾರಲಾಯಿತು. ಈ ವಿಚಿತ್ರ ಅನುಭವದಿಂದ ಸಭೆಯಲ್ಲಿ ಕೋಲಾಹಲವಾಯಿತು. ಸಂಗೀತಗಾರರಿಗೂ ಪ್ರೇಕ್ಷಕರಿಗೂ ಕೈ ಕೈ ಮಿಲಾಯಿತು.

ಬಿ.ವಿ.ಕೆ.

## ಪೂರಕ ವರ್ಣಗಳು (Complimentory Colours)

ಯಾವುದಾದರೊಂದು ಪ್ರತಿಕೂಲ ವರ್ಣಕ್ಕೆ ದ್ವಿತೀಯ ವರ್ಗದ ಬಣ್ಣವು ಪೂರಕವಾಗುತ್ತದೆ.

ಉದಾಹರಣೆಯಾಗಿ

ನೀಲಿ ಬಣ್ಣಕ್ಕೆ ಕೇಸರಿ ಬಣ್ಣವು ಪೂರಕ.

ಕೆಂಪು ಬಣ್ಣಕ್ಕೆ ಹಸಿರು ಬಣ್ಣವು ಪೂರಕ.

ಹಳದಿ ಬಣ್ಣಕ್ಕೆ ಜಾಂಬಳಿ ಬಣ್ಣವು ಪೂರಕ.

ವರ್ಣಚಕ್ರದಲ್ಲಿ ಮೂಲವರ್ಣದ ವಿರುದ್ಧ ದಿಸೆಯಲ್ಲಿರುವ ಮಿಶ್ರವರ್ಣವು 'ಪೂರಕ'ವರ್ಣ ಎಂದೆನ್ನಿಸಿಕೊಳ್ಳುತ್ತದೆ. ಭಾವಮುದ್ರಾ ಪಂಥದವರು ಈ ತತ್ವವನ್ನು ಅನುಸರಿಸಿ ಚಿತ್ರದಲ್ಲಿ ನೆರಳು ಬೆಳಕಿನ ಪ್ರದೇಶಗಳನ್ನು ಪೂರೈಸತೊಡಗಿದರು. ಎಂದರೆ ಮೂಲ ವರ್ಣದಿಂದ ಕೂಡಿದ ವಸ್ತುವಿನ ಮೇಲೆ ಬಿದ್ದ ನೆರಳಿನ ಭಾಗದಲ್ಲಿ ಆಯಾ ಮೂಲವಸ್ತುವಿನ ವಿರುದ್ಧ ದಿಸೆಯಲ್ಲಿರುವ ಬಣ್ಣವಿರುತ್ತದೆ ಎಂಬ ತತ್ವ ಅನುಸರಿಸಿದರು. ಉದಾಹರಣೆಗೆ ಕೆಂಪು ಬಣ್ಣದ ಬಟ್ಟೆಯ ಮೇಲಿನ ನೆರಳಿನ ಪ್ರದೇಶ ಹಸಿರು ಬಣ್ಣದಿಂದ ಕೂಡಿರುತ್ತದೆ. ಇತ್ಯಾದಿ

ಅ.ಟಿ.ಅ.

## ಪೇಸ್ಟಲ್ (Pastel)

ಇದು ಚಿತ್ರರಚನೆಗೆ ಬಳಸುವ ಸಾಮಗ್ರಿ. ಇದನ್ನು ಮೇಣದ ವರ್ಣಕಡ್ಡಿ ಎನ್ನಬಹುದು. ಬಣ್ಣದ ಸೀಮೆಸುಣ್ಣದ ಹುಡಿಗೆ ಮೇಣ ಮುಂತಾದ ಬಂಧಕ ಬಳಸಿ ಮಾಡಲಾಗುತ್ತದೆ. ಇದ್ದಲು ಕಡ್ಡಿಯಿಂದ ಬರೆದ ಚಿತ್ರಗಳನ್ನು ಸ್ಥಾಪಕ (fixative) ಬಳಸಿ ಅಥವಾ ಗಾಜು ಹಾಕಿ ರಕ್ಷಿಸುವಂತೆಯೇ, ಮೇಣದ ವರ್ಣಚಿತ್ರಗಳನ್ನೂ ಕೂಡ ಹಾಗೆಯೇ ರಕ್ಷಿಸಬೇಕಾಗುತ್ತದೆ.

ಇವುಗಳು ಗಡುಸಾದ, ಮೃದುವಾದ ಮೇಣ ಸೇರಿಸಿದ ಇತ್ಯಾದಿ ಹಲವಾರು ಬಗೆಯಲ್ಲಿ ಹಲವಾರು ವರ್ಣಛಾಯೆಗಳಲ್ಲಿ ದೊರೆಯುತ್ತವೆ.

ಎಸ್. ಎಂ.ಮಿ.

## ಪೇಸ್ಟಲ್ ಕಾಗದ (Pastel Paper)

ಸೀಮೆಸುಣ್ಣದ ಕಡ್ಡಿ, ಕ್ರೇಯಾನ್ ಬಣ್ಣದ ಕಡ್ಡಿ ಮತ್ತು ಮೇಣವರ್ಣ(pastel)ಗಳಿಂದ ಚಿತ್ರಬರೆಯಲು ಬಳಸಲಾಗುವ ವಿವಿಧ ಬಗೆಯ ಕಾಗದಗಳಿಗೆ ಪೇಸ್ಟಲ್ ಪೇಪರ್ ಎನ್ನುತ್ತಾರೆ. ಇದು ನುಣುಪಿಲ್ಲದ ಹುರುಬರುಕು ಮೇಲ್ಮೈಯನ್ನು ಹೊಂದಿರುತ್ತದೆ. ಇದರ ತಯಾರಿಕೆಯಲ್ಲಿ ಚಿಂದಿ ತಿರುಳು ಬಳಸುವುದರಿಂದ ಇದು ಸದೃಢವೂ, ಹೀರಿಕೊಳ್ಳುವ ಗುಣವುಳ್ಳದ್ದೂ ಆಗಿರುತ್ತದೆ.

ಎಸ್.ಎಂ.ಮಿ.

## ಫೋಲಿಯೇಜ್ ಸ್ಕಲ್ಪಚರ್(Foliage Sculpture)

ಫೋಲಿಯೇಜ್ ಅಂದರೆ ಎಲೆಗಳು ಅಥವಾ ಎಲೆಗುಂಪಲು ಎಂದು ಅರ್ಥ. ಅಂದರೆ ಎಲೆ ಬಳ್ಳಿ ಮುಂತಾದ ಸಸ್ಯಾಕೃತಿಗಳನ್ನು ಒಳಗೊಂಡ ಅಲಂಕಾರಿಕ ಶಿಲ್ಪಕಲೆ. ಮುಖ್ಯವಾಗಿ ಇದು ಇಮಾರತುಗಳ ಗೋಡೆ ಹಾಗೂ ಕಮಾನುಗಳ ಮೇಲೆ ರಚಿಸಲ್ಪಡುತ್ತದಲ್ಲದೆ ಕಟ್ಟಿಗೆ, ಲೋಹ ಮತ್ತು ಹಸ್ತಿದಂತಗಳ ಮೇಲೂ ಈ ಕಲೆಯನ್ನು ಕಾಣಬಹುದು. ಇದನ್ನು ಫೋಲಿಯೇಜ್' ಶಿಲ್ಪ ಎಂತಲೂ ಕರೆಯುತ್ತಾರೆ. ಭಾರತೀಯ ಶಾಸ್ತ್ರಗ್ರಂಥಗಳಲ್ಲಿ 'ಪತ್ರಾವಳಿ' ಎಂಬ ಪ್ರಯೋಗವಿದೆ.

ಅ.ಜಾ.

## ಪೋಸ್ಟರ್ ವರ್ಣಗಳು (Poster Colour)

ಸಾಮಾನ್ಯ ಮಟ್ಟದ ಬಣ್ಣದ ಹುಡಿಗೆ ಹೆಚ್ಚು ಪ್ರಮಾಣದಲ್ಲಿ ನೀರು ಇತ್ಯಾದಿ ದ್ರವ ಸೇರಿಸಿ ಬಂಧಕವಾಗಿ ಗೋಂದನ್ನು ಕೂಡಿಸಿ ಮಾಡಿದ ವರ್ಣವನ್ನು ಭಿತ್ತಿಚಿತ್ರವರ್ಣ (Poster Colour) ಎನ್ನುತ್ತಾರೆ. ಈ ವರ್ಣವು ದಟ್ಟವೂ ಅಪಾರದರ್ಶಕವೂ ಆಗಿರುತ್ತದೆ. ಇದನ್ನು ಭಿತ್ತಿ ಪತ್ರ ಹಾಗೂ ಅರಿವೆಯ ಮೇಲೆ ಚಿತ್ರಬರೆಯಲು ಉಪಯೋಗಿಸುವರು. ರಂಗಭೂಮಿ, ಚಲನಚಿತ್ರ ಹಾಗೂ ದೂರದರ್ಶನ ಸ್ಟುಡಿಯೋಗಳಲ್ಲಿ ಸೆಟಿಂಗ್‌ಗಳನ್ನು ತಯಾರಿಸುವಾಗಲೂ ಈ ವರ್ಣಗಳನ್ನು ಬಳಸಲಾಗುತ್ತದೆ. ಎಲ್ಲ ಬಣ್ಣಗಳಿಗೂ ಅಲ್ಪ ಪ್ರಮಾಣದಲ್ಲಿ ಬಿಳಿ ಬಣ್ಣ ಸೇರಿಸುವುದರಿಂದ ಅಪಾರದರ್ಶಕ ಗುಣವನ್ನು ಪಡೆಯುತ್ತದೆ.

ಶಂ.ಮೂ.

## ಫತೇಪುರ್ ಸಿಕ್ರಿ

ಆಗ್ರದಿಂದ ೩೮ ಕಿ.ಮಿ. ದೂರದಲ್ಲಿರುವ ಸಿಕ್ರಿಯನ್ನು ಅಕ್ಬರ್ ಗುಜರಾತನ್ನು ಗೆದ್ದ ನೆನಪಿಗಾಗಿ ೧೬೫೨ರಲ್ಲಿ ನಿರ್ಮಿಸಿದನು. ಅದಕ್ಕೂ ಮೊದಲು ಈ ಜಾಗ ರಜಪೂತರಿಗೆ ಸೇರಿದ್ದು ೧೫೨೭ರಲ್ಲಿ ಬಾಬರ್‌ನೊಡನೆ ರಾಣಸಂಗ್ರಾಮ ಸಿಂಹ ಇಲ್ಲಿ ಹೋರಾಡಿದ್ದ. ಈಗ ಉಳಿದಿರುವ ಕಟ್ಟಡಗಳು ಎರಡು ವಿಶಾಲವಾದ ಪ್ರಾಂಗಣದಲ್ಲಿ ಚದುರಿದಂತಿವೆ. ಮುಖ್ಯದ್ವಾರ 'ಬುಲಂದ್‌ದರ್ವಾಜ್' ಹಲವಾರು ಮೆಟ್ಟಲುಗಳ ಮೇಲೆ ೧೭೬ರಷ್ಟು ಎತ್ತರವಾಗಿ ಭವ್ಯವಾಗಿದೆ. ಅಕ್ಬರನ ನೆಚ್ಚಿನ ಗುರುಗಳಾದ ಸಂತ ಸಲೀಂ ಶೇಖರ ಸಮಾಧಿಯಲ್ಲದೆ ಇತರ ಸಾಧುಸಂತರ ಸಮಾಧಿಗಳು ಇಲ್ಲಿವೆ. ವಿಶಾಲವಾದ ಬಯಲು ಇಂದಿಗೂ ಪ್ರಾರ್ಥನಾ ಮಂದಿರವಾಗಿದೆ.

ಸಿಕ್ರಿಯ ಇನ್ನೊಂದು ಭಾಗದಲ್ಲಿ ಅರಮನೆಯ ಪ್ರದೇಶ, ಅಂತಃಪುರ, ಅಕ್ಬರನು ದೀನ್-ಇ-ಲಾಹಿ ಎಂಬ ಗ್ರಂಥ ಬರೆದ 'ಮಕ್ತಾಬ್ ಖಾನ್' ಎಂಬ ಕೊಠಡಿ. ಬೌದ್ಧ ವಾಸ್ತುಶಿಲ್ಪದಂತಿರುವ 'ಪಂಚಮಹಲ್' ಎಂಬ ಐದಂತಸ್ತಿನ ವೀಕ್ಷಣಾಗೋಪುರ. ಸೇತುವೆಯಿಂದ ಕೂಡಿದ, ತಾನಸೇನ್ ಕುಳಿತು ಹಾಡುತ್ತಿದ್ದ ಸುಂದರವಾದ ಕೊಳ. ಮನುಷ್ಯರನ್ನೇ ಕಾಯಿಗಳಂತೆ ಬಳಸುತ್ತಿದ್ದ ವಿಶಾಲವಾದ ಚದುರಂಗದ ಮನೆಗಳು ಇತ್ಯಾದಿ ಹಲವಾರು ಪ್ರಮುಖ ಆಕರ್ಷಣೆಯ ಸ್ಥಳಗಳಿವೆ. ಇವುಗಳಿಗಿಂತ ಮೊದಲೇ ಸಿಕ್ಕುವ 'ಟರ್ಕಿಶ್ ಮಹಲ್' ಅಥವಾ 'ರಂಗೀನ್ ಮಹಲ್'ನ ಭಿತ್ತಿಯ ಮೇಲೆ, ಒಳ-ಹೊರಗಿನ ಗೂಡುಗಳಲ್ಲಿ ಕಂಬಗಳ ಮೇಲೆಲ್ಲಾ ವರ್ಣಚಿತ್ರಗಳಿದ್ದ ಗುರುತುಗಳಿವೆ. ಅಂದಿನ ಚಿಕಣಿ ಚಿತ್ರಗಳನ್ನು ಇವು ಬಹಳವಾಗಿ ಹೋಲುತ್ತವೆ. ಸಿಕ್ರಿಯ ವಿವಿಧ ಕಟ್ಟಡಗಳಲ್ಲಿ ಹಿಂದೂ ಮತೀಯ ಸಂಕೇತಗಳೂ ಬಹಳಷ್ಟಿದೆ.

ಜೆ. ಟಿ. ಡ.

## ಫಲಕಗಳು

ಹಸ್ತಪ್ರತಿಗಳಲ್ಲಿನ ಬರೆದ ಚಿತ್ರಿಸಿದ ಗರಿ ಕಾಗದಗಳು ಹರಿದು, ತೊಯ್ದು ಕೆಡಬಾರದೆಂಬ ಉದ್ದೇಶದಿಂದ ಅವುಗಳ ಎರಡೂ ಬದಿಗೆ ಆವರಣದಂತೆ ನಿರ್ಮಿಸಲಾದುವನ್ನು 'ಫಲಕ' ಎನ್ನುತ್ತಾರೆ. ಫಲಕಗಳನ್ನು ದಪ್ಪ ರಟ್ಟಿನಿಂದಲೂ, ಹಗುರವಾದ ಕಟ್ಟಿಗೆ ಪಳಿಗಳಿಂದಲೂ ತಯಾರಿಸುತ್ತಾರೆ. ಇವು ಈಗಿನ ಪುಸ್ತಕಗಳ ಮುಖಪುಟ ಹಾಗೂ ಬೆನ್ನುಪುಟಗಳಿಂತಿರುತ್ತವೆ. ಆದರೆ ಈಗಿನಂತೆ ಅವುಗಳು ಒಂದಕ್ಕೊಂದು ಬೆಸೆದುಕೊಂಡಿರುವುದಿಲ್ಲ. ಎರಡೂ ಫಲಕಗಳು ಪ್ರತ್ಯೇಕವಾಗಿಯೇ ಇರುತ್ತಿದ್ದವು.

ಮೊದಲಲ್ಲಿ ಈ ಫಲಕಗಳನ್ನು ಗ್ರಂಥ ರಕ್ಷಣಾದೃಷ್ಟಿಯಿಂದ ತಯಾರಿಸುತ್ತಿರಬೇಕು. ಕಾಲಾಂತರದಲ್ಲಿ ಗ್ರಂಥದ ಮಾಲಿಕ, ಗ್ರಂಥ ಕರ್ತೃ ಅಥವಾ ಪ್ರತಿಮಾಡುವವನ ಕಲಾಭಿರುಚಿಯ ಅಭಿವ್ಯಕ್ತಿಗೆ ಸಾಧನವಾದುವು. ಈ ಕಾರಣಕ್ಕಾಗಿಯೇ ಹಸ್ತಪ್ರತಿ ಫಲಕಗಳು ಕಲಾವಸ್ತುಗಳೆನಿಸುತ್ತವೆ.

ದೇವಾನುದೇವತೆಗಳು, ಕಥಾನಾಯಕರು, ಕಥಾಸನ್ನಿವೇಶಗಳು ಈ ಫಲಕದ ಮೇಲಿನ ಚಿತ್ರರಚನೆಗಳ ವಸ್ತುವಾಗಿವೆ. ಚಿತ್ರಗಳನ್ನು ನೇರವಾಗಿ ಫಲಕದ ಕಟ್ಟಿಗೆಯ ಮೇಲೆಯೂ, ಕಟ್ಟಿಗೆಗೆ ಬಟ್ಟೆ ಮತ್ತು ಗಾರೆ ಮಿಶ್ರಣವನ್ನು ಲೇಪಿಸಿಯೂ ಚಿತ್ರ ಬರೆದಿರುವುದು ಕಂಡು

ಬರುತ್ತದೆ. ಹಾಗೆಯೇ, ಕಟ್ಟಿಗೆಯಲ್ಲಿ ಸ್ವಲ್ಪ ಆಳಕ್ಕೆ ಕೊರೆದು ಅದರಲ್ಲಿ ಸೀಸ, ಬೆಳ್ಳಿ ಮುಂತಾದ ಲೋಹಗಳನ್ನು ತುಂಬಿದ್ದು ತಿಳಿದು ಬರುತ್ತದೆ.

ಫಲಕಗಳ ಮೇಲೆ ಚಿತ್ರಿಸಲಾದ ಚಿತ್ರಗಳಿಂದಲೇ ಹಸ್ತಪ್ರತಿಗಳು ಯಾವ ಯಾವ ಮತಕ್ಕೆ ಸೇರಿದವು ಎಂಬುದನ್ನು ಕಂಡುಕೊಳ್ಳಬಹುದು. ಶಿವ-ಶಿವಶರಣರ ಚಿತ್ರಗಳು ವೀರಶೈವ ಹಸ್ತಪ್ರತಿಗಳ ಮೇಲೂ, ಜಿನ, ತೀರ್ಥಂಕರ ಯಕ್ಷಾದಿಗಳ ಚಿತ್ರಗಳು ಜೈನ, ವಿಷ್ಣು ದಶಾವತಾರ, ಕೃಷ್ಣಲೀಲೆಗಳು ವೈಷ್ಣವ ಹಸ್ತಪ್ರತಿ ಫಲಕಗಳಲ್ಲಿಯೂ ಕಾಣಸಿಗುತ್ತವೆ. ಫಲಕಗಳ ಅಂಚು ಹಾಗೂ ಒಳಮೈಗಳಲ್ಲಿ ರಕ್ಷಾ ಚಿತ್ರಗಳನ್ನು ಬಿಡಿಸಿರುವುದು ಸಾಮಾನ್ಯವಾಗಿ ಕಂಡುಬರುವ ಅಂಶವಾಗಿದೆ. ಇಂಥ ಫಲಕಗಳ ಒಳಮೈ ಹಾಗೂ ಹೊರಮೈ ಚಿತ್ರಗಳು ಕಲಾದೃಷ್ಟಿಯಿಂದ ಗಮನಾರ್ಹವಾಗಿರುತ್ತವೆ. ಅವು ದೇಶದ ಕಲಾ ಪರಂಪರೆ, ಪ್ರಾದೇಶಿಕ ಕಲಾಶೈಲಿ, ಶಿಷ್ಟ ಹಾಗೂ ಜಾನಪದ ಕಲಾಶೈಲಿ ಇತ್ಯಾದಿ ಮಹತ್ವದ ಸಂಗತಿಗಳನ್ನು ತಿಳಿಯಪಡಿಸುತ್ತವೆ.

ಬಿ. ಕೆ. ಹಿ.

## ಫಾವಿಸಂ

ಆಧುನಿಕ ಕಲಾ ಪ್ರವಾಹಕ್ಕೆ ಒಂದು ನಿಜವಾದ ತಿರುವು ನೀಡಿದ್ದು ಫಾವಿಸಂ. ೧೯೦೫ರಲ್ಲಿ ಕಾಣಿಸಿಕೊಳ್ಳುವ ಮೊದಲೇ ಕೆಲವು 'ಇಸಂ' ಅಥವಾ ತತ್ವಗಳು ಇದ್ದರೂ ಫಾವಿಸಂನ ಅನ್ವೇಷಣೆಯಾಯಿತು. ಅಲ್ಲದೆ ಮುಂದಿನ ಹಲವಾರು ಪಂಥಗಳ ಹುಟ್ಟಿಗೆ ಬೆಳವಣಿಗೆಗೆ ತಳಹದಿಯಾಯಿತು. ಒಂದು ಚಿತ್ರ ಚಪ್ಪಟೆಯಾದ ಕ್ಷೇತ್ರವಾಗಿದ್ದು, ಅಲ್ಲಿ ನಿಯುಕ್ತ



ಹೆನ್ರಿ ಮತೀಸ್

ರೀತಿಯಲ್ಲಿ ಬಣ್ಣಗಳನ್ನು ಉಪಯೋಗಿಸಿದ್ದಾರೆ. ಈ ಚಿಂತನೆಯಿಂದ ಪ್ರಭಾವಿತರಾದ ಕಲಾವಿದರು ಪ್ಯಾರಿಸಿನಲ್ಲಿ ಕಲಾಪ್ರದರ್ಶನ ಏರ್ಪಡಿಸಿದ್ದು, ಈ ಕಲಾ ಪ್ರದರ್ಶನದಲ್ಲಿ ಹೆನ್ರಿಮತೀಸ್, ಅಂದ್ರೆಡಿರಾ, ವ್ಲಾಮಿಕ್, ರಾವುಲ್‌ರೂಫಿ ಮುಂತಾದವರ ಕೃತಿಗಳನ್ನು ನೋಡಿದ, ಒಬ್ಬ ಕಲಾವಿಮರ್ಶಕ "ಕೇಜ್ ಆಫ್ ಫಾವ್ಸ್" ಎಂದು ಕರೆದ. (ಇದರ ಅರ್ಥ ಕಾಡು ಪ್ರಾಣಿಗಳ ಪಂಜರ) ಅನಂತರ ಫಾವಿಸಂ ಶೈಲಿ ಎಂದೇ ಹೆಸರಾಯಿತು. ಈ ಶೈಲಿಯಲ್ಲಿ ರಚಿಸಿದ ಕೃತಿಗಳಲ್ಲಿ ಕಾಣುವುದು ಕಾಡು ಮೃಗಗಳ ಸ್ವಚ್ಛಂದತೆ.

ಈ ಪಂಥದ ಪ್ರವರ್ತಕನೆಂದು ಹೆನ್ರಿ ಮತೀಸ್‌ನನ್ನು ಎಲ್ಲರೂ ಒಕ್ಕೊರಲಿನಿಂದ ಕರೆದರು. ಅಂತೆಯೇ ಆತ ಮುಂದಿನ ಎರಡು ವರ್ಷಗಳಲ್ಲಿ ಎಂದರೆ ೧೯೦೭ರಲ್ಲಿ ತನ್ನ ಶೈಲಿ ಬದಲಾಯಿಸಿ. 'ಹರಳು ಗಟುವಿಕೆ'ಯತ್ತ ವಾಲಿದಾಗ ಈ ಶೈಲಿ ಅಂತ್ಯ ಕಂಡು ಕ್ಯೂಬಿಸಂನಲ್ಲಿ ಪರ್ಯಾವಸನ ಕಂಡುಕೊಂಡಿತು. ಯಾವ ಬೇರೆ ಬೇರೆ ಆಕೃತಿಗಳಿಗೂ ಆವರಣ ರೇಖೆಗಳು ಪ್ರಕೃತಿಯಲ್ಲಿ ಇರುವುದಿಲ್ಲ. ಆದುದರಿಂದ ಚಿತ್ರದಲ್ಲಿಯೂ ಆಕೃತಿಗಳಿಗೆ ಆವರಿಸಿದ ರೇಖೆಯಾಗಲಿ ನಿಶ್ಚಿತ ಆವರಣವಾಗಲಿ ಇರಬಾರದೆಂದು ಈ ಪಂಥದ ಕಲಾವಿದರು ಬಯಸಿದ್ದರು. ಅಂತೆಯೇ ಮತೀಸನ ಬಾಂಧವ್ಯದ ನೃತ್ಯ, ಹ್ಯಾಟ್ ಧರಿಸಿರುವ ಮಹಿಳೆ ಹಾಗೂ ಹಲವಾರು ನಗ್ನ ಸ್ತ್ರೀಯರ ಚಿತ್ರಗಳಲ್ಲಿ ಈ ಗುಣಗಳನ್ನು ಕಾಣಬಹುದು. ಬಣ್ಣದ ವಿನ್ಯಾಸಗಳು, ಉದ್ದೇಶ ಪೂರ್ವಕವಾದ ಒರಟುತನ ಬಿರುಸಾದ ಹೊರ ರೇಖೆಗಳು ಈ ಪಂಥದ ಶೈಲಿಯಾಗಿದ್ದು ಮೊದಲ ನೋಟಕ್ಕೆ ಆಕರ್ಷಣೆಗಿಂತ ಕುರೂಪವಾಗಿಯೇ ಕಂಡಿತು. ಹಳದಿ ಬಣ್ಣದ ಆಕಾಶ, ಕೆಂಪು ಬಣ್ಣದ ಮರ, ಕಿತ್ತಲೆ ಬಣ್ಣದ ಬಂಡೆಗಳು, ಹಸಿರು ಬಣ್ಣ ರಸ್ತೆಗಳು ಫಾವಿಸಂ ಕಲಾವಿದರಲ್ಲಿ ಕಾಣಬಹುದು. ಅಂದ್ರೆಡಿರಾ ಎಂಬಾತ ೧೯೦೭ರಲ್ಲಿ ಬರೆದ 'ಲಂಡನ್ನಿನ ಕೊಳ' ಚಿತ್ರದಲ್ಲಿ ಹಳದಿ, ಹಸಿರು ವರ್ಣದ ನೀರು, ಕೆಂಪು- ನೀಲಿ ಬಣ್ಣದ ಹಡಗುಗಳನ್ನು ಚಿತ್ರಿಸಿದ್ದಾನೆ. ಈ ಪಂಥ ಬದುಕಿದ್ದು ಎರಡೇ ವರ್ಷಗಳಾದರೂ, ಅದು ಹೆಚ್ಚಿಗೆ ಆನಂದವನ್ನು ನೀಡಲು ರೂಪಗೊಂಡಿತ್ತು.

ಫಾವಿಸಂ ಕಲಾವಿದರಲ್ಲಿ ಆಲ್ಬರ್ಟ್ ಮಾರ್ಕ್ವೆ, ಜೀನ್ ಪೆ ಅಂದ್ರೆಡಿರಾ, ವಾಲ್ಮಿನಿಕ್, ಎಲಿಚ್ ಹಕಲ್, ಲುಡ್‌ವಿಗ್ ಕ್ರಿಚನರ್, ಎಮಿಲಿ ಸೋಡ್ಲೆ, ಡ್ಯೂಸಿ ಹಾಗೂ ಕ್ಯಾಂಡಿನಸ್ಕಿ ಅವರು ಪ್ರಮುಖರು. ಉಳಿದ ಇಸಂಗಳಂತೆ ಫಾವಿಸಂ ಭಾರತಕ್ಕೆ ಬರುವ ವೇಳೆಗೆ, ಅರ್ಧ ಶತಮಾನವೇ ಕಳೆಯಿತು. ಬಣ್ಣಗಳ ಹಾಗೂ ಆಕಾರಗಳ ಬಳಕೆಯಲ್ಲಿ ಶೈಲಜ್ ಮುಖರ್ಜಿ, ಶಿವಾಕ್ಸ್ ಚಾವ್ಡ, ಕೆ.ಸಿ.ಎಸ್. ಫಣಿಕ್ಕರ್ ಅವರ ಚಿತ್ರಗಳಲ್ಲಿ ಈ ಅಂಶಗಳನ್ನು ಕಾಣಬಹುದು.

ಎಸ್. ಎ.

## ಬಂಗಾಳ ಕಲಾ ಶೈಲಿ

ಬ್ರಿಟಿಷರ ಆಳ್ವಿಕೆಯ ಹಿನ್ನೆಲೆಯಲ್ಲಿ ಅವರು ೧೮೫೦-೧೮೫೭ರ ನಡುವೆ ಪ್ರಾರಂಭಿಸಿದ ಕಲಾಶಾಲೆಗಳಿಂದ ಯುರೋಪಿನ ಅತ್ಯಂತ ಕೆಳದರ್ಜೆಯ ಕೃತಿಗಳ ನಕಲು ಮಾಡಿದ ಕಲೆಯ ಪ್ರಭಾವ ನಮ್ಮಲ್ಲಿ ಹೆಚ್ಚುತ್ತಿದ್ದ ಸಂದರ್ಭ. ಸ್ವದೇಶಿ ಚಳವಳಿಯ ಬೆನ್ನಲ್ಲೇ ಬಂಗಾಳದಲ್ಲಿ ಕಲೆಯ ಪುನರುಜ್ಜೀವನ ಚಿಂತನೆಯೂ ಹುಟ್ಟುಹಾಕಲ್ಪಟ್ಟಿತು. ಭಾರತೀಯ ಕಲೆಗೆ ಬ್ರಿಟಿಷರ ಅಸಡ್ಡೆ ಹಲವರ ಅಸಮಾಧಾನಕ್ಕೆ ಕಾರಣವಾಯಿತು. ಕಲ್ಕತೆಯ ಕಲಾಶಾಲೆಗೆ ಪ್ರಿನ್ಸಿಪಾಲರಾಗಿ ಬಂದ



ಅಬನೀಂದ್ರನಾಥ ಟಾಗೂರ್



ಕೆ. ವೆಂಕಟಪ್ಪ

ಇ.ಬಿ. ಹ್ಯಾವೆಲ್ ಅವರಲ್ಲೊಬ್ಬರು. ಅವರೆಗೆ ಚಾಲನೆಯಲ್ಲಿದ್ದ ಪಶ್ಚಿಮದ ವಿಕ್ಟೋರಿಯನ್ ಶೈಲಿಯ ಕಲಿಕೆಯ ಪದ್ಧತಿಗಳನ್ನು ಹ್ಯಾವೆಲ್ ಬದಲಿಸಿದರು. ಪರ್ಷಿಯನ್ ಬಣ್ಣಗಳ ಛಾಯೆಗಳು, ಭಾರತೀಯ ರೂಪ ಮತ್ತು ಜಪಾನಿನ ರೇಖೆಗಳನ್ನು ಅಳವಡಿಸಿಕೊಂಡರು. ನೈಜ ಭಾರತೀಯ ಕಲೆಯು ಧಾರ್ಮಿಕ, ಪೌರಾಣಿಕ ಅಂಶಗಳ ಜೊತೆ ಕಾವ್ಯಮಯ ರೇಖೆ ಸಾಂಕೇತಿಕತೆ ಇತ್ಯಾದಿಗಳನ್ನು ಹೊಂದಿರಬೇಕೆಂಬ ಕಟ್ಟುಪಾಡುಗಳನ್ನು ಹಾಕಿಕೊಂಡರು. ಈ ಹಾದಿಯಲ್ಲಿ ಸೃಷ್ಟಿಯಾದ ಕೃತಿಗಳು ಅಂದಿನ ಸಮಕಾಲೀನ ಬದುಕಿಗೆ ತೀವ್ರವಾಗಿ ಸ್ಪಂದಿಸಲೇ ಇಲ್ಲ, ಅವನೀಂದ್ರನಾಥ ಠಾಕೂರ್, ನಂದಲಾಲ್‌ಬೋಸ್ ಮೊದಲಾದವರು ಈ ಹಾದಿಯಲ್ಲೇ ನಡೆದರು. ಕೆ.ಜಿ. ಸುಬ್ರಮಣಿಯನ್‌ರ ಮಾತುಗಳಲ್ಲಿ ದಾಖಲಿಸುವುದಾದಲ್ಲಿ “.........ಠಾಗೂರ್ ಮನೆತನದವರು ಹುಟ್ಟುಹಾಕಿದ ‘ಚಳವಳಿ’ ಎಂಬುದು ಕ್ಷುಲ್ಲಕ ಉದ್ದೇಶಗಳನ್ನು ಮುಂದಿಟ್ಟುಕೊಂಡ ‘ಪಂಥ’ಗಳಾಗಿ ಸಂಕುಚಿತಗೊಂಡಿತು. ಭೂತಕಾಲದ ಓಜಸ್ಸನ್ನಾಗಲೀ (vitality) ವರ್ತಮಾನದ ಮೌಲಿಕತೆಯನ್ನಾಗಲೀ ಪಡೆಯದ ಸಿದ್ಧಶೈಲಿಯ ಮತ್ತು ರೂಪಣಗಳ ಕಲಸುಮೇಲೋಗರವಾಯಿತು”. ಎಂದು ಹೇಳಿದ್ದಾರಾದರೂ ಇಂದಿಗೂ ಈ ಶೈಲಿ ಅಲ್ಲಿ-ಇಲ್ಲಿ ಕಾಣಸಿಕೊಳ್ಳುತ್ತಲೇ ಇದೆ.

ಕೆ.ವಿ.ಸು.

## ಬಣ್ಣದ ಬಳಪ (Chalk)

ಚಿತ್ರರಚನೆಗೆ ಕ್ರೇಯಾನ್ಸ್ (ಬಣ್ಣದ ಬಳಪಗಳು) ಬಳಕೆಗೆ ಬರುವದಕ್ಕಿಂತ ಮೊದಲು ಅಂದರೆ ಕ್ರಿ.ಶ. ೧೫ನೆಯ ಶತಮಾನದ ಪೂರ್ವದಲ್ಲಿ ಚಿತ್ರದ ಕರಡು ಪ್ರತಿಗಳನ್ನು

ತಯಾರಿಸಿಕೊಳ್ಳಲು ವಿವಿಧ ವರ್ಣಗಳ ಸೀಮೆಸುಣ್ಣದ ಬಳಪಗಳನ್ನು ಉಪಯೋಗಿಸುತ್ತಿದ್ದ ಉಲ್ಲೇಖಗಳಿವೆ. ಚಾಕ್(Chalk) ಎಂಬುದು ಕ್ರೇಯಾನ್(Crayon)ದ ಇನ್ನೊಂದು ರೂಪವಾಗಿದೆ. ಕ್ರೇಯಿ(Craie) ಎಂಬ ಫ್ರೆಂಚ್‌ಪದದಿಂದ ಕ್ರೇಯಾನ್ ಪದದ ವ್ಯುತ್ಪತ್ತಿಯಾಗಿದೆ. ಸೀಸುಕಡ್ಡಿ ಅಥವಾ ಪೆನ್ಸಿಲ್ ಎಂಬ ಅರ್ಥವನ್ನು ಕೊಡುತ್ತದೆ.

ಇದ್ದಿಲು ಕಡ್ಡಿ ಅಥವಾ ಚಾರಕೋಲ್‌ನ ಗುಣವನ್ನೇ ಈ ಚಾಕ್ ಹೊಂದಿದೆ. ಲೆನಾರ್ಡೊ ಎಂಬ ಕಲಾವಿದನು ಕಬ್ಬಿಣದ ಅದಿರನಿಂದ ತಯಾರಿಸಿದ ಕೆಂಪು ಬಣ್ಣದ ಬಳಪವನ್ನು ಬಳಸುತ್ತಿದ್ದನು. ೧೬ನೆಯ ಶತಮಾನದಲ್ಲಿ 'ಟೆರಾಕೊಟ್ಟಾ'ದಿಂದ ತಯಾರಿಸಲಾದ ಕೆಂಪು, ಬಿಳಿ, ಕಪ್ಪು ಹಾಗೂ ಕಂದು ಬಣ್ಣದ ಬಳಪಗಳನ್ನು ಬಳಸಿ ಚಿತ್ರಗಳನ್ನು ರಚಿಸುತ್ತಿದ್ದರು. ಇತ್ತೀಚೆಗೆ "ಕಾಂಟೆ" ಎಂಬ ಕಲಾಕಾರನು ವಿವಿಧ ವರ್ಣಗಳ ಗಟ್ಟಿಯಾದ ಹಾಗೂ ಮೃದುವಾದ ಬಣ್ಣದ ಬಳಪಗಳನ್ನು ಪರಿಚಯಿಸಿರುವನು.

ಅ.ಟಿ.ಅ.

## ಬರೊಕ್ ಕಲೆ (Baroc)

೧೭ ಮತ್ತು ೧೮ನೆಯ ಶತಮಾನಗಳಲ್ಲಿ ಇಟಲಿ ದೇಶದಲ್ಲಿ ವಿಕಾಸಗೊಂಡು ಬೇರೆ ಪ್ರದೇಶಗಳಿಗೂ ಹರಡಿದ ಒಂದು ವಿಶಿಷ್ಟ ರೀತಿಯ ಕಲಾಪ್ರಕಾರವನ್ನು ಬರೊಕ್ ಕಲೆ ಎಂದು ಕರೆಯಲಾಗುತ್ತದೆ. ಇಟಲಿಯ ವಿಶ್ವವಿಖ್ಯಾತ ಕಲಾವಿದ ಮೈಕೆಲೆಂಜಲೋನನ್ನು ಬರೊಕ್ ಕಲೆಯ ಜನಕನೆಂದು ಪರಿಗಣಿಸಲಾಗುತ್ತದೆ. ಮೈಕೆಲೆಂಜಲೋ ೧೫ನೆಯ ಶತಮಾನದ ಕೊನೆಯಲ್ಲಿ ಬದುಕಿದ್ದ ಘನವಂತ ಕಲಾವಿದ. ಮೈಕೆಲೆಂಜಲೋನಿಂದ ಫ್ಲಾರೆನ್ಸ್‌ನಲ್ಲಿ ನಿರ್ಮಿಸಲ್ಪಟ್ಟ ಮೆಡಿಸಿ ವಂಶದ ಗುಲಿಯಾನೋ ಎಂಬ ದೊರೆಯ ಸಮಾಧಿ ಮತ್ತು ಲೋರೆಂಟಿಯನ್ ಗ್ರಂಥಾಲಯದ ಪ್ರವೇಶಾಂಗಣಗಳ ರಚನೆಯಲ್ಲಿ ಬರೊಕ್ ಕಲೆಯ ಮೂಲಗಳನ್ನು ಸುಲಭವಾಗಿ ಗ್ರಹಿಸಬಹುದು. ಮೈಕೆಲೆಂಜಲೋ ಮಾತ್ರವಲ್ಲದೇ ರಾಫೇಲ್, ಟಿಷಿಯನ್ ಮೊದಲಾದವರ ಕಲಾಕೃತಿಗಳಲ್ಲಿ ಬರೊಕ್ ಪ್ರಯತ್ನವನ್ನು ಕಾಣಬಹುದಾದರೂ ಮೈಕೆಲೆಂಜಲೋನ ನಂತರವೇ ಈ ಶೈಲಿಯು ಪ್ರಸಿದ್ಧಿಗೆ ಬಂದಿತು. ಗಿಯೋವನಿ ಬರ್ನಿನಿ, ಎಲ್ ಗ್ರೆಕೋ, ರೆಂಬ್ರಾಂಡ್ಟ್ ಮುಂತಾದವರು ಬರೊಕ್ ಕಲೆಯ ಪ್ರಖ್ಯಾತ ಕಲಾವಿದರಾಗಿದ್ದರು. ರೋಮನ್ ಕ್ಯಾಥೋಲಿಕ್ ಧರ್ಮಾಧಿಕಾರಿಗಳ ಪೋಷಣೆಯಲ್ಲಿ ಧಾರ್ಮಿಕ ಪ್ರಚಾರಾರ್ಥವಾಗಿ ಬರೊಕ್ ಕಲೆ ಬಳಕೆಯಲ್ಲಿ ಬಂದಿತು. ವಾಸ್ತುಶಿಲ್ಪ, ಶಿಲ್ಪ, ವರ್ಣಚಿತ್ರಗಳು ಬೇರೆ ಬೇರೆ ಕಲಾಪ್ರಕಾರಗಳೆಂಬ ಭಾವನೆ ಬರದಂತೆ ಮೂರೂ ಕಲೆಗಳೂ ಒಟ್ಟುಗೂಡಿ ಸಮರಸವನ್ನು ಮೂಡಿಸುವುದೇ ಬರೊಕ್ ಕಲೆಯ ವೈಶಿಷ್ಟ್ಯವಾಗಿದೆ. ಬರೊಕ್ ಕಲೆಯ ಮುಂದುವರಿದ ರೂಪವೇ "ರೊಕೋಕೊ"(Rococo) ಕಲೆಯಾಗಿದೆ.

ಇಟಾಲಿಯನ್ ಕಲಾವಿದರಲ್ಲದೇ ಫ್ಲ್ಯಾಂಡರ್ಸ್‌ನಲ್ಲಿ ರೂಬೆನ್ಸನೂ ಇಂಗ್ಲಂಡ್‌ನಲ್ಲಿ ವ್ಯಾನ್‌ಡೈಕ್‌ನೂ ಸ್ಪೇನದಲ್ಲಿ ವೆಲಾಸ್ಕಿಯೂ ಹಾಲಂಡ್‌ನಲ್ಲಿ ರೆಂಬ್ರಾಂಡ್ಟ್‌ನೂ ಫ್ರಾನ್ಸ್‌ನಲ್ಲಿ ಲೆಬ್ರೂನ್‌ನೂ ಫ್ರೆಂಚ್ ಮೂಲದವರಾಗಿದ್ದು ಇಟಲಿಯಲ್ಲಿ ನೆಲೆಸಿದ್ದ ಪೌಸಿನ್ ಮತ್ತು ಕ್ಲಾಡ್ ಅವರು ಬರೊಕ್ ಕಲೆಯ ಪ್ರವರ್ತಕರೆನ್ನಿಸಿಕೊಂಡ ವಿಶ್ವವಿಖ್ಯಾತ ಕಲಾವಿದರಾಗಿದ್ದರು.



ಪೀಟರ್ ಪಾಲ್‌ರುಬೆನ್ಸ್

ಭವ್ಯತೆ ಮತ್ತು ಆಡಂಬರದ ಅಲಂಕರಣವು ಬರೊಕ್ ಕಲೆಯ ವೈಶಿಷ್ಟ್ಯ. ಆಕೃತಿಗಳು ತಮ್ಮ ಸೀಮೆಯನ್ನು ಮೀರಿ ಹೊರಕ್ಕೆ ತೂರಿ ಬರುವವೇನೋ ಎಂಬ ಭ್ರಮೆಯನ್ನು ಹುಟ್ಟಿಸುತ್ತವೆ. ಅನಿರ್ದಿಷ್ಟ ಆಕಾರದ ಮುತ್ತು ಎಂಬ ಅರ್ಥಬರುವ ಬರೋಕೋ ಎಂಬ ಸ್ಪ್ಯಾನಿಷ್ ಪದದಿಂದ ಬರೊಕ್ ಶಬ್ದೋತ್ಪತ್ತಿಯಾಗಿದೆ. ಪ್ರಾರಂಭದಲ್ಲಿ ಇಗರ್ಜಿಗಳಿಗೆ ಮಾತ್ರವೇ ಸೀಮಿತವಾಗಿದ್ದ ಈ ಶೈಲಿಯನ್ನು ಭವ್ಯವಾದ ಅರಮನೆಗಳು ಮತ್ತು ಕಟ್ಟಡಗಳ ರಚನೆಯಲ್ಲಿ ಅಳವಡಿಸಿಕೊಳ್ಳಲಾಯಿತು.

**ಮೃಹೊ**

## ಬಲಿಪೀಠ

ಆಗಮ ಶಾಸ್ತ್ರಗಳು, ತಂತ್ರಗಳು ಬೆಳೆದ ಬಳಿಕ ದೇವಾಲಯಗಳ ಮುಂದೆ ಬಲಿಪೀಠಗಳನ್ನು ಸ್ಥಾಪಿಸುವ ಪದ್ಧತಿ ಪ್ರಾರಂಭವಾಯಿತು. ಇದರ ಉತ್ತರ ಗರ್ಭಗುಡಿಯಲ್ಲಿನ ದೇವರನ್ನು ಸ್ಥಾಪಿಸಿರುವ ಪೀಠದ ಎತ್ತರದಷ್ಟಿರಬೇಕೆಂದು ಶಾಸ್ತ್ರಗ್ರಂಥಗಳಲ್ಲಿ ಹೇಳಿದೆ. ಒಂದರ ಮೇಲೊಂದು ಕಿರಿದಾಗುತ್ತಾ ಹೋಗುವ ಕಲ್ಲುಗಳಿಂದ ಈ ಬಲಿಪೀಠವನ್ನು ಎತ್ತರಿಸಲಾಗಿರುತ್ತದೆ. ಒಮ್ಮೊಮ್ಮೆ ಬಲಿಪೀಠ ಒಂದೇ ಕಲ್ಲಿನಿಂದ ಕಡೆದದ್ದು ಆಗಿರಬಹುದು. ಹೊಯ್ಸಳರ ಕಾಲದ ಶಾಸನವೊಂದರಲ್ಲಿ ಬಲಿಪೀಠವನ್ನು ಸೌಂದರ ಪಂಚರಾತ್ರ ವಿಧಿಯಿಂದ ನಿರ್ಮಾಣ ಮಾಡಿಸಿರುವಂತೆ ಹೇಳಿದೆ. ಇದನ್ನು ಗರ್ಭಗೃಹ ಮತ್ತು ಅದರ ಮುಂದಿನ ಧ್ವಜಸ್ತಂಭದ ಮಧ್ಯೆ ಸ್ಥಾಪಿಸಲಾಗಿರುತ್ತದೆ. ಆಲಯವು ಬಲಿ ಪೀಠದವರೆಗೆ ಎಂದು ಶಾಸ್ತ್ರಗ್ರಂಥಗಳು ವಿಧಿಸಿವೆ. ಬಲಿಪೀಠವು ದೇವರಿಗೆ

ನೈವೇದ್ಯವನ್ನು ಅರ್ಪಿಸುವ ಸ್ಥಾನವಾಗಿರುತ್ತದೆ. ಒಂದು ದೇವಾಲಯದಲ್ಲಿ ಪ್ರಧಾನ ದೇವರಿಗಲ್ಲದ ಪರಿವಾರ ದೇವತೆಗಳಿಗೂ ನಿಶ್ಚಿತ ಸ್ಥಾನಗಳಲ್ಲಿ ಚಿಕ್ಕ ಚಿಕ್ಕ ಬಲಿಪೀಠಗಳನ್ನು ಸ್ಥಾಪಿಸಿರುವುದುಂಟು. ಆಲಯದಲ್ಲಿ ಶಿಖರದಷ್ಟೇ ಪ್ರಮುಖ ಭಾಗ ಬಲಿಪೀಠ. ಇವೆರಡೂ ದೇವಾದಿ ದೇವತೆಗಳು ಸೇರುವ ಸ್ಥಾನವೆಂದು ಹೇಳಲಾಗಿದೆ.

ಓ.ವಿ.ಕೆ

## ಬಸೋಲಿ

ಬಸೋಲಿ ಚಿತ್ರಸಂಪ್ರದಾಯವೂ ಕಾಂಗ್ರಾದಂತೆ ೧೭-೧೮ನೆಯ ಶತಮಾನಗಳಲ್ಲಿ ಹಿಮಾಲಯದ ತಪ್ಪಲುಗಳಲ್ಲಿ ಮೂಡಿ ಅರಳಿತು. ಔರಂಗಜೇಬನ ಕಾಲದಲ್ಲಿ ರಾಜದರ್ಬಾರದಲ್ಲಿ ಆಶ್ರಯಹೀನರಾದ ಕಲಾವಿದರಲ್ಲಿ ಕೆಲವರು ಹಿಮಾಲಯದತ್ತ ಸಾಗಿದರು. ಅಲ್ಲಿ ರಾಜ್ಯ ಕಟ್ಟಿಕೊಂಡಿದ್ದ ರಜಪೂತ ಶೂರರ ರಾಜ್ಯಗಳಲ್ಲಿ ವಿಶ್ವಸ್ಥಲಿ ಅಥವಾ ಬಸೋಲಿ ರಾಜ್ಯವೂ ಒಂದಾಗಿತ್ತು. ಹಿಂದೆ ಅಲ್ಲಿ ಜಾನಪದ ಶೈಲಿಯ ಚಿತ್ರಕಲೆ ಇತ್ತು. ಆ ರಾಜ್ಯದಲ್ಲಿ ಆಶ್ರಯ ಪಡೆದ ಮೊಗಲ ಮತ್ತು ರಜಪೂತ ಕಲಾವಿದರು ಅದಕ್ಕೆ ನವಜೀವನವನ್ನು ತುಂಬಿದರು.

ಬಸೋಲಿ ಕಲೆಯ ಸ್ಫೂರ್ತಿಯ ಮೂಲವು ವೈಷ್ಣವ ಧರ್ಮವಾಗಿತ್ತು. ಕೃಷ್ಣಲೀಲೆಯ ಚಿತ್ರಗಳು, ಗೀತಗೋವಿಂದ ಕಾವ್ಯದ ಸನ್ನಿವೇಶ, ರಾಮಾಯಣ, ಭಾಗವತ ಪುರಾಣಗಳ ಚಿತ್ರಗಳು ಹೆಚ್ಚಾಗಿ ಇವೆ. ಇವಲ್ಲದೆ ಕಲಾವಿದರಿಗೆ ಆಶ್ರಯ ನೀಡಿದ ರಾಜರ ಶ್ರೀಮಂತರ



ವ್ಯಕ್ತಿಚಿತ್ರಗಳೂ ಸಾಕಷ್ಟು ನಿರ್ಮಾಣವಾಗಿವೆ. ಕಾಂಗ್ರಾ ಚಿತ್ರದ ಲಾವಣ್ಯವು ಲಲಿತ ಗೆರೆಗಳ ಚಲನೆಯಲ್ಲಿದೆಯಾದರೆ ಬಸೋಲಿ ಚಿತ್ರಗಳ ಸೌಂದರ್ಯವು ಅದರ ವರ್ಣಶೋಭೆಯಲ್ಲಿದೆ. ಆ ಚಿತ್ರಗಳಲ್ಲಿ ಮೂಲವರ್ಣಗಳಾದ ಕೆಂಪು, ಹಳದಿ, ನೀಲವರ್ಣಗಳನ್ನು ಹೆಚ್ಚಾಗಿ ಉಪಯೋಗಿಸಿದುದನ್ನು ಕಾಣಬಹುದು. ವರ್ಣಗಳನ್ನು ಸಂಕೇತಗಳಾಗಿ ಬಳಸಿದ್ದಾರೆ. ಕೆಂಪು ಪ್ರೇಮದೇವತೆಯ ವರ್ಣ, ಹಳದಿ ವಸಂತ ಋತುವಿನ ಬಿಸಿಲಿನ ಚಿಹ್ನೆ, ವಿಶಾಲವಾದ ಪ್ರದೇಶದಲ್ಲಿ ವಿಶೇಷವಾಗಿ ಬಿಸಿಲು ಬಿದ್ದಂತೆ ತೋರಿಸಲು ಹಳದಿ ಬಣ್ಣವನ್ನು ಹೆಚ್ಚಾಗಿ ಬಳಸಿದ್ದಾರೆ. ನೀಲವು ಕೃಷ್ಣನ ಬಣ್ಣ, ಮತ್ತು ಭೂಮಿಯನ್ನು ಸಂಪನ್ನವಾಗಿ ಮಾಡುವ ಮೋಡಗಳ ಬಣ್ಣವಾಗಿದೆ. ಪಾತ್ರವು ದೈವಿಕವಾದರೂ ಧರಿಸಿದ್ದು ಆ ಕಾಲದ ಮೊಗಲ ಪ್ರಭಾವ ಬಿದ್ದ ವೇಷಭೂಷಣಗಳಾಗಿವೆ. ಸ್ತ್ರೀ ಪುರುಷ ರೂಪಗಳಲ್ಲಿ ಗುಡ್ಡಗಾಡಿನಲ್ಲಿ ಬೆಳೆದ ಜನರ ದಾರ್ಢ್ಯತೆ ಎದ್ದು ಕಾಣುತ್ತದೆ.

ಬಸೋಲಿ ಚಿತ್ರಕಲೆಯು ಭಾರತದ ಕಿರುರೂಪ ಚಿತ್ರದ ವೈಭವವನ್ನು ಸಾರುತ್ತದೆ.

ಬಿಪಿಬಾ

## ಬಳಪದ ಕಲ್ಲು

ಸಾಬೂನಿನ ಮೈವಳಿಕೆಯುಳ್ಳ ಹಾಗೂ ಅಮೃತ ಶಿಲೆಯಂತೆ ಕಾಣುವ ಕಲ್ಲಿಗೆ ಸೋಪ್‌ಸ್ಟೋನ್ ಅಥವಾ ಬಳಪದ ಕಲ್ಲು ಎನ್ನುತ್ತಾರೆ. ಇದು ಚೆನ್ನಾಗಿ ನುಣುಪುಗುಣವುಳ್ಳ ಮತ್ತು ಸುಲಭವಾಗಿ ಕುಸುರಿ ಕೆಲಸವನ್ನು ಮಾಡಬಹುದಾದ ಮೃದುಶಿಲೆಯಾಗಿದೆ. ಉದುರಿಹೋಗುವ ಗುಣಧರ್ಮವು ಇದರದಾಗಿರುವುದರಿಂದ ಕೇವಲ ಒಳಾಂಗಣದ ಶಿಲ್ಪಾಕೃತಿಗೆ ಹಾಗೂ ರತ್ನಾಭರಣಗಳ ತಯಾರಿಕೆಯಲ್ಲಿ ಮಾತ್ರ ಇದನ್ನು ಬಳಸುತ್ತಾರೆ. ೧೭೫೦ರ ಸುಮಾರಿಗೆ ಬ್ರಿಸ್ಟೋಲ್(Bristol) ವರ್ಸ್‌ಸ್ಟರ್(Worcester); ಇಂಗ್ಲೆಂಡ್(England)ಗಳಲ್ಲಿ ಸೋಪಸ್ಟೋನ್‌ವು ಪಿಂಗಾಣಿ ತಯಾರಿಕೆಯಲ್ಲಿ ಮೃದು ಲೇಹ್ಯದೊಡನೆ ಒಂದು ಘಟಕಾಂಶವಾಗಿ ಬಳಸಲ್ಪಡುತ್ತಿತ್ತು.

ದಕ್ಷಿಣ ಭಾರತದ ಬಳಪದ ಕಲ್ಲುಗಳು ವಾತಾವರಣದಲ್ಲಿ ಗಡಸಾಗುವುದರಿಂದ, ಅತ್ಯಂತ ಸೂಕ್ಷ್ಮವಾದ ಕುಸುರಿ ಕೆಲಸದಿಂದ ಕೂಡಿದ ಕಿರು ಆಕಾರದ ಶಿಲ್ಪ ರಚನೆಗಳು ಸಾಧ್ಯವಾಗಿರುವುದನ್ನು ಹೊಯ್ಸಳರ ಶಿಲ್ಪಗಳಲ್ಲಿ ಕಂಡುಬರುವುದು ಪ್ರಸಿದ್ಧವಾದ ವಿಷಯವಾಗಿದೆ.

ಅ.ಜಾ.

## ಬ್ರಷ್ ಮತ್ತು ವಾಷ್‌ತಂತ್ರ

ಬಾರೋಕ್ ಕಾಲದಿಂದ ಯುರೋಪಿನ ಕುಂಚ ಮತ್ತು ವಾಷ್‌ತಂತ್ರವನ್ನು ದುಡಿಸಿಕೊಳ್ಳಲಾಗಿದೆ. ಈ ತಂತ್ರದ ಚಿತ್ರಗಳು ಚೀನಾ ಜಪಾನ್‌ಗಳ ಶಾಯಿಯ ಚಿತ್ರಗಳಲ್ಲಿನ ತಂತ್ರದ ಪ್ರಾಮುಖ್ಯತೆ, ಪಾರಮ್ಯಗಳನ್ನು ಗಳಿಸಿಕೊಳ್ಳಲಿಲ್ಲ. ಈ ತಂತ್ರದಲ್ಲಿ ಚಿತ್ರಿಸುವುದು ೧೭ನೆಯ ಶತಮಾನದಲ್ಲಿ ಹೆಚ್ಚು ಜನಪ್ರಿಯವಾಗಿತ್ತು. ಅಂದಿನ ಕಲಾವಿದರಿಗೆ ನೆರಳು ಬೆಳಕು ಮತ್ತು ಪ್ರತಿಫಲಿತ

ಬೆಳಕುಗಳ ಸ್ವಭಾವಗಳ ಬಗೆಗಿನ ಮುನ್ನೋಟವು, ಚಿತ್ರಿಸುವಲ್ಲಿ ಉಂಟುಮಾಡುತ್ತಿದ್ದ ಸಮಸ್ಯೆಗಳಿಗೆ ಪರಿಹಾರೋಪಾಯದಂತೆ ಈ ತಂತ್ರ ಕಂಡುಬಂದದ್ದು ಈ ತಂತ್ರದ ಜನಪ್ರಿಯತೆಗೆ ಕಾರಣ. ಆದರೂ ಪೂರ್ವದ ಇಂಕ್ ಚಿತ್ರಗಳಿಗಿಂತ ಭಿನ್ನವಾಗಿ ತಂತ್ರವನ್ನು ಯುರೋಪಿನ ಕಲಾವಿದರು ದುಡಿಸಿಕೊಂಡರು. ಕಾಗದದ ಬಿಳುಪನ್ನೇ ಬೆಳಕಿನ ವಿವಿಧ ಛಾಯಾಂತರಗಳಾಗುವಂತೆ ಕುಂಚದಿಂದ ವಾಷ್ ಮಾಡಲಾಗುತ್ತಿತ್ತು. ನಡುನಡುವೆ ಪೆನ್ ಮತ್ತು ಕುಂಚಗಳನ್ನು ಬಳಸಲಾಗುತ್ತಿತ್ತು ಈ ರೀತಿಯ ಚಿತ್ರಣದಲ್ಲಿ ಕಪ್ಪು ಅಥವಾ ಬಹುತೇಕ ಕೆಂಗಂದು ಬಣ್ಣದ ಮಾಧ್ಯಮವನ್ನು ಬಳಸಲಾಗಿದೆ. ಈ ಶತಮಾನದ ಆರಂಭದಲ್ಲಿ ಮ್ಯೂನಿಚ್‌ನ 'ಡ್ಯೆಜುಗೆಂಡ' ಪತ್ರಿಕೆಯ ಕಾಲಕ್ಕೆ ಈ ತಂತ್ರವನ್ನು ಪುನರಾರಂಭಿಸಲಾಯಿತು.

ಕೆ.ವಿ.ಸು.

## ಬಾಗ್

ಉತ್ತರ ಭಾರತದಲ್ಲಿ ಗುಪ್ತ ಸಾಮ್ರಾಜ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಎಂದರೆ ೪-೬ನೇ ಶತಮಾನದಲ್ಲಿ ಗ್ವಾಲಿಯರ್ ಬಳಿಯ ಬಾಗ್‌ನಲ್ಲಿ ಗುಹಾಲಯಗಳು ರಚನೆಯಾದವು. ವಿಂಧ್ಯ ಪರ್ವತಾವಳಿಗಳಲ್ಲಿ ಬಾಗ್‌ನದಿ ತೀರದಲ್ಲಿರುವ ಈ ಪ್ರದೇಶದ ಒಂಭತ್ತು ಗುಹೆಗಳಲ್ಲಿ ಚಿತ್ರಕಲೆ ಇರುವುದು ಗುರುತಿಸಲಾಗಿದೆಯಾದರೂ, ಹೆಚ್ಚಿನ ಅಂಶಗಳು ನಾಶವಾಗಿವೆ. ಅಳಿದುಳಿದಿರುವುದನ್ನು ನಂದಲಾಲ ಬಸು ಹಾಗೂ ಅಜಿತ್ ಕುಮಾರ್ ಹಲ್ದಾರ್ ಅವರು ಹಿಂದೆಯೇ ನಕಲು ಮಾಡಿದ್ದಾರೆ. ಇಡೀ ಗುಹೆಯ ಬೌದ್ಧಧರ್ಮೀಯವಾಗಿದ್ದು, ಚಿತ್ರಿತ ವಸ್ತು ಬುದ್ಧನಿಗೆ ಸಂಬಂಧಿಸಿದ ಜಾತಕ ಅಥವಾ ಅವಧಾನಗಳ ಕುರಿತಾದರೂ ಕಥಾ ಸಂದರ್ಭ ಗುರುತಿಸಲು ಇನ್ನೂ ಸಾಧ್ಯವಾಗಿಲ್ಲ. ಒಂದೆಡೆಯಲ್ಲಿ ರಾಜಕುವರಿಯೊಬ್ಬಳು ತನ್ನ ಸಖಿಯರೊಂದಿಗೆ ಇರುವುದು, ರಾಜ ಮನೆತನದವರಿಬ್ಬರು ಸಂಭಾಷಿಸುತ್ತಿರುವುದು. ಕೆಲವು ಯತಿಗಳು ಮತ್ತು ಸನ್ಯಾಸಿನಿಯರು ಸಂಗೀತ ವಾದ್ಯಗಳೊಂದಿಗೆ ಬರುತ್ತಿರುವುದು, ಖಂಜೀರದಂತಹ ವಾದ್ಯದೊಂದಿಗೆ ನರ್ತಿಸುತ್ತಿರುವುದು, ಚಿಕ್ಕ ಆಕಾರದ ತಬಲ ಹಾಗೂ ತಾಳವಾದ್ಯ ನುಡಿಸುತ್ತಿರುವವರು ಇತ್ಯಾದಿಗಳನ್ನು ಕಾಣಬಹುದು. ಕೆಲವರ ಉಡುಗೆಗಳು ಚಿತ್ರವಿಚಿತ್ರ ವಿನ್ಯಾಸಗಳಿಂದ ಕೂಡಿವೆ. ಉದ್ದನೆಯ ನಿಲುವಂಗಿಯಂತಹ ಉಡುಪು ಕೆಲವರಿಗಿದೆ. ಇನ್ನೊಂದೆಡೆಯಲ್ಲಿ ರಾಜ ಪರಿವಾರದವರು ಆನೆ ಇತ್ಯಾದಿಗಳ ಮೇಲೆ ಛತ್ರಿ ಚಾಮರಗಳಿಂದ ಮೆರವಣಿಗೆಯಲ್ಲಿ ಬರುತ್ತಿದ್ದಾರೆ. ಈ ಎಲ್ಲ ದೃಶ್ಯಗಳಲ್ಲಿಯ ಆಕಾರಗಳು ಅಜಂತಾದ ಸಮಕಾಲೀನ ಚಿತ್ರಗಳನ್ನು ನೆನಪಿಸುವಂತಿದ್ದು ಆ ಕಾಲದ ಸಾಮಾಜಿಕ ಅಧ್ಯಯನಕ್ಕೆ ಸಹಾಯಕವಾಗಿದೆ.

ಮಾ.ಮಂ.

## ಬಾಗಿಲವಾಡ (ದ್ವಾರಬಂಧ)

ಬಾಗಿಲಿನ ಚೌಕಟ್ಟನ್ನು 'ದ್ವಾರಬಂಧ' ಅಥವಾ ಬಾಗಿಲವಾಡ ಎನ್ನುವರು. ದ್ವಾರಬಂಧದ ಮೇಲಿನ ಭಾಗದಲ್ಲಿ 'ಶಾಲಾ'- 'ಕೂಟ' ರೀತಿಯ ಇಲ್ಲವೆ 'ತೋರಣ' ಅಲಂಕರಣವನ್ನೂ ಇಬ್ಬದಿಯ ನಿಲುವುಗಳ ಕೆಳಭಾಗದಲ್ಲಿ ದ್ವಾರಪಾಲಕರು, ಗಂಗೆಯಮುನೆ, ಕಲಶ, ಪದ್ಮನಿಧಿ,

ಶಂಖನಿಧಿ ಇತ್ಯಾದಿ ಶಿಲ್ಪಗಳನ್ನೂ ಹೊಂದಿರುವುದುಂಟು. ದ್ವಾರಬಂಧದ ಮೇಲೆ ಮಧ್ಯಭಾಗದಲ್ಲಿ ಆಯತ ಇಲ್ಲವೆ ಚೌರಸ, ಫಲಕವಿರುವುದು. ಇದಕ್ಕೆ 'ಮಂಗಲಫಲಕ' ಎಂದು ಹೆಸರು.ಇದರ ಮೇಲೆ ದೇವಾಲಯಕ್ಕೆ ಸಂಬಂಧಿಸಿದಂತ ಅಥವಾ ಸ್ಥಳೀಯ ಪದ್ಧತಿಗೆ ಅನುಸಾರವಾಗಿ ಬಿಂಬವಿರುವುದು. ಇದಕ್ಕೆ 'ಲಲಾಟ ಬಿಂಬ' ಎಂದು ಹೆಸರು. ಸಾಮಾನ್ಯವಾಗಿ ಗಣೇಶ, ಗಜಲಕ್ಷ್ಮಿ, ಗರುಡ ಇತ್ಯಾದಿ ಬಿಂಬಗಳಿರುತ್ತವೆ. ದ್ವಾರಬಂಧದ ಇಬ್ಬದಿಯ ನಿಲುವುಗಳ ಮೇಲೆ ದ್ವಾರಕ್ಕೆ ಅಲಂಕಾರಪ್ರಾಯವಾಗಿರುವಂತೆ ಶಾಖಾ ಅಲಂಕಾರಗಳನ್ನು ಮಾಡಿರುತ್ತಾರೆ. ಇದನ್ನು ದ್ವಾರಶಾಖಾ ಎನ್ನುತ್ತಾರೆ. ದ್ವಾರವು ಒಂದರಿಂದ ಐದು ಅಥವಾ ಏಳು ಶಾಖೆಗಳವರೆಗೆ ಅಲಂಕರಿಸಲ್ಪಟ್ಟಿರುತ್ತದೆ. ಇವುಗಳಲ್ಲಿ ನಾಗ-ಶಾಖಾ, ರತ್ನಶಾಖಾ ಪತ್ರಶಾಖಾ, ಸ್ತಂಭಶಾಖಾ ಪುಷ್ಪಶಾಖಾ ಮತ್ತು ಪದ್ಮಶಾಖಾ ಎಂಬುವು ಮುಖ್ಯವಾದವು.

ಹಿ.ವಿ.ಕೆ.

## ಬಾಟಿಕ್

ಬಾಟಿಕ್ ಕಲೆಯಲ್ಲಿ ಮೇಣ ಮತ್ತು ವಿವಿಧ ಬಣ್ಣಗಳನ್ನು ಬಟ್ಟೆಯ ಮೇಲೆ ಉಪಯೋಗಿಸಿ, ನಮಗೆ ಬೇಕಾದ ಚಿತ್ರಗಳನ್ನು ರಚಿಸುವುದು, ಬಟ್ಟೆಯ ಮೇಲೆ ಎಲ್ಲಿ ಬಣ್ಣ ಮೂಡಬೇಕಾಗಿಲ್ಲವೋ, ಆ ಭಾಗಗಳಿಗೆ ಪ್ಯಾರಫಿನ್ ಮೇಣವನ್ನು ಬಳಸಿ, ನಮಗೆ ಬೇಕಾದ ವಿನ್ಯಾಸವನ್ನು ರೂಪಿಸಬೇಕು. ಮೇಣ ಆರಿ, ಗಟ್ಟಿಯಾದ ಮೇಲೆ ಬಟ್ಟೆಯನ್ನು ನಮಗೆ ಬೇಕಾದ ಬಣ್ಣದಲ್ಲಿ ಅದ್ದಿ ಒಣಗಿಸಿದ ನಂತರ, ಬಿಸಿ ನೀರಿನಲ್ಲಿ ಬಟ್ಟೆಯನ್ನು ನೆನೆಸಿದರೆ ಮೇಣ ಕರಗಿ ಹೋಗುತ್ತದೆ. ವಿವಿಧ ಬಣ್ಣಗಳನ್ನು ಉಪಯೋಗಿಸಬೇಕಾದರೆ, ಎಷ್ಟು ಬೇರೆಯ ಬಣ್ಣ ಬೇಕೋ ಅಷ್ಟು ಸಲ ಪುನರಾವರ್ತನೆ ಮಾಡಬೇಕು. ಮೊದಲು ಸಸ್ಯಗಳಿಂದ ತಯಾರಿಸಿದ ಬಣ್ಣಗಳನ್ನು ಉಪಯೋಗಿಸುತ್ತಿದ್ದರು. ಈಗ ರಾಸಾಯನಿಕಗಳಿಂದ ತಯಾರಿಸಿದ ಬಣ್ಣಗಳು ಬಳಕೆಯಲ್ಲಿವೆ. ಬಾಟಿಕ್ ವಿಧಾನದಿಂದ ಬಟ್ಟೆಯ ಮೇಲೆ ವಿನ್ಯಾಸಗಳನ್ನು ರಚಿಸಲು ಕೌಶಲ ಮತ್ತು ಸಂಯೋಜನೆಯ ತಿಳುವಳಿಕೆ ಮತ್ತು ಬಣ್ಣಗಳ ಬಗ್ಗೆ ಅರಿವು ಇರಬೇಕು. ಬಾಟಿಕ್ ವಿಧಾನದಿಂದ ಅನೇಕ ಕಲಾವಿದರು ಚಿತ್ರಗಳನ್ನು ರಚಿಸಿದ್ದು, ಬಾಟಿಕ್ ಚಿತ್ರಕಲೆ ಎಂದು ಹೆಸರು ಪಡೆದಿದೆ. ಇದರಲ್ಲಿ ಕಲಾವಿದ ಸೃಜನಶೀಲತೆಯಿಂದ ಕೂಡಿದ ಉತ್ತಮ ಚಿತ್ರಗಳು ನಿರ್ಮಾಣಗೊಂಡು ಜನಪ್ರಿಯವಾಗಿವೆ. ಬಾಟಿಕ್ ಶೈಲಿಯ ಚಿತ್ರಗಳನ್ನು ಚರ್ಮದ ಮೇಲೆಯೂ ಮಾಡುವುದುಂಟು ಇದಕ್ಕೆ ಲೆದರ್ ಬಾಟಿಕ್ ಎಂದು ಕರೆಯುತ್ತಾರೆ.

ಮರಿ

## ಬಾದಾಮಿ (ಚಿತ್ರಕಲೆ)

ಬಾದಾಮಿ ಚಾಲುಕ್ಯರ ಅರಸ ಕೀರ್ತಿವರ್ಮನ ಸಹೋದರ ಮಂಗಳೀಶನ ಕಾಲದಲ್ಲಿ ಬಾದಾಮಿಯ ಗುಹಾಂತರ ದೇವಾಲಯಗಳು ನಿರ್ಮಿತವಾಗಿದ್ದು (ಸು.ಕ್ರಿ.ಶ.೬೦೦)ಅಲ್ಲಿಯ ಮೂರನೆಯ ವೈಷ್ಣವ ಗುಹೆಯ ಮುಂಚಾಚಿನ ಒಳಭಾಗದಲ್ಲಿ ವರ್ಣಚಿತ್ರಗಳಿವೆ. ರಾಜ-ರಾಣಿಯಂತಿರುವ ಇಬ್ಬರು ಪರಿವಾರ ಸಮೇತ ನೃತ್ಯವೊಂದನ್ನು ಈಕ್ಷಿಸುತ್ತಿರುವುದು.



ವಾದ್ಯಗಾರರು, ಜನಸಾಮಾನ್ಯರು ಇತ್ಯಾದಿಗಳು ಚಿತ್ರಿಸಿದ್ದು ಅಜಂತೆಯ ಇದೇ ಕಾಲದ ಚಿತ್ರಗಳನ್ನು ಬಹಳವಾಗಿ ಹೋಲುತ್ತವೆ. ಸ್ತ್ರೀಪುರುಷರ ಶಿರೋಭೂಷಣಗಳು, ಆಭರಣಗಳು, ಉಡುಗೆ ಅಭ್ಯಾಸ ಯೋಗ್ಯವಾಗಿದೆ. ಲಾಲಿತ್ಯಪೂರ್ಣ ಹೊರರೇಖೆಗಳು, ಭಾವನಾತ್ಮಕ ಮನೋಭಾವನೆಗಳನ್ನು ಕಲಾವಿದ ಯಶಸ್ವಿಯಾಗಿ ತಂದಿದ್ದಾನೆ. ಒಟ್ಟು ದೃಶ್ಯ ಶಿವನ ಇಲ್ಲವೆ ಇಂದ್ರನ ಅಥವಾ ಕೀರ್ತಿವರ್ಮನ ಸಭೆಯೆಂದು ಹಲವಾರು ಪಂಡಿತರು ಊಹಿಸಿದ್ದಾರೆ. ನೃತ್ಯಗಾತಿಯ ಹಿನ್ನೆಲೆಯಲ್ಲಿರುವ ತೆರೆ ಹಾಗೂ ಅವುಗಳನ್ನು 'ಕ್ಲಿಪ್'ನಂತಹ ಸಾಧನದಿಂದ ತೂಗುಹಾಕಿರುವುದರತ್ತ ಗಮನ ಸೆಳೆಯುವ ಅ. ಸುಂದರ ಅವರು ಇಲ್ಲಿ ಚಿತ್ರರಚಿಸಲು ಪೂರ್ವಭಾವಿಯಾಗಿ ಬಾದಾಮಿಯ ಇನ್ನೊಂದೆಡೆಯಲ್ಲಿ ವರ್ಣದಿಂದ ರಚಿಸಿದ ಕೆಲವು ಕರಡು ಚಿತ್ರಗಳನ್ನು ಶೋಧಿಸಿದ್ದಾರೆ. ಗುಹಾಂತರ ದೇವಾಲಯದ ಚಿತ್ರಗಳು ಇಂದು ಸಂಪೂರ್ಣವಾಗಿ ಅಸ್ತಿತ್ವ ಕಳೆದುಕೊಂಡಿದೆಯಾದರೂ ಕಲಾವಿದರಾದ ಅಹಿವಾಸಿ ಹಾಗೂ ಮಿಣಜಗಿ ಅವರು ರಚಿಸಿದ ನಕಲು ಪ್ರತಿಯಿಂದಾಗಿ ಮೂಲವನ್ನು ಊಹಿಸಬಹುದಾಗಿದೆ.

ಅಲಸ

## ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪ

ಬಾದಾಮಿಯ ಚಾಲುಕ್ಯರ ಕಾಲದ ವಾಸ್ತುಶೈಲಿಯ ಪ್ರಥಮ ಹಂತವನ್ನು ಐಹೊಳೆಯಲ್ಲಿ ನಂತರ ಪಟ್ಟದಕಲ್ಲು ಮತ್ತು ಬಾದಾಮಿಯಲ್ಲಿ ಕಾಣಬಹುದಾಗಿದೆ. ಐಹೊಳೆಯನ್ನು ವಾಸ್ತುಶಿಲ್ಪದ ಪ್ರಯೋಗಶಾಲೆಯೆಂದು ಕರೆಯಲಾಗಿದೆ. ಇದಕ್ಕೆ ಕಾರಣ ಉತ್ತರಭಾರತ, ದಕ್ಷಿಣಭಾರತ ಮತ್ತು



ಕರ್ನಾಟಕದ ಖ್ಯಾತ ಶಿಲ್ಪಿಗಳು ಇಲ್ಲಿ ಪ್ರಯೋಗಗಳನ್ನು ನಡೆಸಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಈ ಪ್ರಯೋಗಗಳ ಫಲವಾಗಿ ವಿವಿಧ ರೀತಿಯ ವಾಸ್ತುಶಿಲ್ಪ ಕೃತಿಗಳು ಹಲವಾರು ರೀತಿಯಲ್ಲಿ ಅನೇಕ ಶಿಲ್ಪಿಗಳಿಂದ ನಿರ್ಮಿಸಲ್ಪಟ್ಟವು. ವೇಸರ (ಚಾಳುಕ್ಯ) ಶೈಲಿಯು ಇವರಿಂದಲೇ ಪ್ರಾರಂಭವಾಯಿತೆನ್ನಬಹುದಾಗಿದೆ. ಇದರಿಂದಾಗಿ ಭಾರತೀಯ ವಾಸ್ತುಶೈಲಿಗಳಲ್ಲಿ ಒಂದನ್ನು ಕಂಡುಹಿಡಿದು ಮತ್ತು ಅದನ್ನು ಬೆಳೆಸಿದ ಕೀರ್ತಿಯು ಇವರಿಗೆ ಸಲ್ಲುತ್ತದೆ. ಇವರ ರಚನೆಗಳು ತಿಳಿಹಳದಿ ಅಥವಾ ನಸುಗೆಂಪು ವರ್ಣದ ಮರಳುಗಲ್ಲಿನಿಂದ ನಿರ್ಮಿತವಾದವುಗಳು. ಈ ಕಲ್ಲು ಇವರ ಶಿಲ್ಪಗಳಿಗೆ ವಿಶೇಷ ರೀತಿಯ ಸೊಬಗನ್ನು ನೀಡಿವೆ.

ಇವರ ಕಾಲದ ಕಲಾಸಂಸ್ಕೃತಿಯನ್ನು ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನಲ್ಲಿ ಕಾಣಬಹುದಾಗಿದೆ. ಇವರಿಗೆ ಮುಂಚೆ ಕರ್ನಾಟಕದಲ್ಲಿ ಶಿಲಾಕಟ್ಟಡಗಳ ರಚನೆಗೆ ಅಷ್ಟೇನು ಪ್ರಚಲಿತವಿರಲಿಲ್ಲ, ಗುಹಾಶಿಲ್ಪ ಮತ್ತು ಇಟ್ಟಿಗೆ ಕಟ್ಟಡಗಳೇ ರೂಢಿಯಲ್ಲಿದ್ದವು. ಅನೇಕ ಪ್ರಯೋಗಗಳನ್ನು ಮಾಡಿದ ಇವರು ಮುಂದಿನ ವಾಸ್ತುಶೈಲಿಗೆ ಮಾದರಿ ಹಾಕಿಕೊಟ್ಟರು.

೫ನೆಯ ಶತಮಾನದಲ್ಲಿ ಇವರು ಕಟ್ಟಿದ ಗೌಡರಗುಡಿ, ಲಾಡ್ಖಾನ್ ಕೊಂತಿಗುಡಿ ಮೊದಲಾದವು ಪ್ರಯೋಗಾತ್ಮಕ ದೇವಾಲಯಗಳು. ಈ ದೇವಾಲಯಗಳಲ್ಲಿ ಒಂದು ದೊಡ್ಡ ಮಂಟಪ ಮಾತ್ರವಿರುತ್ತದೆ. ದೀರ್ಘ ಚತುರಸ್ರಾಕಾರದ ಮಂಟಪದ ನಡುವಣ ಅಂಕಣವನ್ನು ಗೋಡೆಗಳಿಂದ ಮುಚ್ಚಿ ದೇವಕಟ್ಟಡವಾಗಿ ಪರಿವರ್ತಿಸಿದ ಗೌಡರ ಗುಡಿಗೆ ಮುಖಮಂಟಪವಿಲ್ಲ ಕೊಂತಿಗುಡಿಯು ಕುಳ್ಳ ಮತ್ತು ದಪ್ಪ ಚೌಕ ಕಂಬಗಳ ಮೇಲೆ ನಿರ್ಮಿತವಾದ ದೇವಾಲಯ. ಲಾಡಖಾನ್ ಸ್ಥೂಲವಾದ ರಚನೆಯನ್ನು ಹೊಂದಿರುವ ಎರಡು ಸಾಲು ದಪ್ಪ ಕಂಬಗಳಿರುವ ಸುಮಾರು ೫೦ ಅಡಿ ಚದರದ ದೊಡ್ಡ ಹಜಾರ. ಇದರ ಹಿಂದಿನ ಮಧ್ಯದ ಅಂಕಣವನ್ನು

ಗರ್ಭಗುಡಿಯಾಗಿ ಪರಿವರ್ತಿಸಿದೆ. ಮುಂದೆ ಮೂರು ಅಂಕಣದ ಮುಖಮಂಟಪವಿದೆ. ಹಜಾರದ ನಡುವಿನ ಅಂಕಣದ ಮೇಲೆ ಮೇಲಂತಸ್ತಿನ ಗುಡಿಯೂ ಇದೆ. ಇವುಗಳ ರಚನೆಯಲ್ಲಿ ನಿಶ್ಚಿತ ವಿನ್ಯಾಸವಿಲ್ಲ. ಸ್ಥೂಲ ಮತ್ತು ಕುಳ್ಳಾಗಿವೆ. ರಚನೆಯಲ್ಲಿ ಒರಟುತನವಿದೆ. ಇದರಿಂದಾಗಿ ಇವುಗಳ ನಿರ್ಮಾಣದ ಮೊದಲ ಪ್ರಯತ್ನವೆಂಬುದು ಸ್ಪಷ್ಟವಾಗುತ್ತದೆ.

ಐಹೊಳೆಯ ದುರ್ಗಗುಡಿ ಹೊಸ ರೀತಿಯ ಪ್ರಯೋಗಕ್ಕೆ ಒಳಗಾಗಿದೆ. ಬೇರೆ ಬೇರೆ ಕಡೆ ಪ್ರಚಲಿತವಿದ್ದ ಶೈಲಿಗಳನ್ನು ಇದರಲ್ಲಿ ಅಳವಡಿಸುವ ಪ್ರಯತ್ನ ನಡೆದಿದೆ. ಬೌದ್ಧರ ಚೈತ್ಯಾಲಯಗಳಂತೆ ಅರ್ಧವರ್ತುಲಾಕಾರದ ಗರ್ಭಗುಡಿ ಅದಕ್ಕೆ ಸೇರಿದಂತೆ ಆಯಾತಾಕಾರದ ಮಂಟಪ. ಇವೆರಡಕ್ಕೂ ಹೊಂದಿಕೊಂಡಂತಿರುವ ಮುಂಭಾಗದಲ್ಲಿ ಮುಖಭದ್ರ ಎತ್ತರವಾದ ಜಗಲಿಯ ಮೇಲೆ ನಿರ್ಮಿತವಾದ ಈ ಗುಡಿಯ ಕೈ ಸಾಲೆಗಳ ಚಾವಣಿ ಸ್ವಲ್ಪಮಟ್ಟಿಗೆ ಇಳಿಜಾರಾಗಿದೆ. ಗರ್ಭಗುಡಿಯ ಮೇಲೆ ಔತ್ತರೇಯ ಪದ್ಧತಿಯ ಶಿಖರವಿದೆ. ಹೀಗೆ ಗುಹಾಶೈಲಿ, ಔತ್ತರೆಯ ನಗರಗಳು ಮತ್ತು ಬೌದ್ಧ ಚೈತ್ಯಾಶೈಲಿಗಳನ್ನು ಇಲ್ಲಿಯೇ ಹುಟ್ಟಿ ಬೆಳೆದ ಶಿಲಾಕಟ್ಟಡಗಳ ಶೈಲಿಯೊಂದಿಗೆ ಮೇಳವಿಸಿ ವಿನೂತನ ಮಾದರಿಯನ್ನು ಇಲ್ಲಿ ಕಾಣಬಹುದಾಗಿದೆ.

ಐಹೊಳೆಯಲ್ಲಿ ಎರಡು, ಬಾದಾಮಿಯಲ್ಲಿ ನಾಲ್ಕು ಗುಹಾದೇವಾಲಯಗಳನ್ನು ಕೊರೆಯಲಾಗಿದೆ. ಇವುಗಳ ವಿನ್ಯಾಸ ಒಂದೇ ಬಗೆಯದಾಗಿದೆ. ಒಂದೊಂದರಲ್ಲಿಯೂ ಕಂಭದ ಸಾಲುಗಳಿಂದ ಕೂಡಿದ ಮೊಗಸಾಲೆ, ದೊಡ್ಡದಾದ ಹಜಾರ, ಹಿಂದೆ ಚಿಕ್ಕದೊಂದು ಗರ್ಭಗುಡಿ, ಇವುಗಳ ಗೋಡೆಗಳ ಮೇಲೆ ಹೆಚ್ಚು ಉಬ್ಬಿನಿಂತಿರುವ ಬೃಹತ್ ಪ್ರಮಾಣದ ಮೂರ್ತಿ ಶಿಲ್ಪಗಳಿಗೆ ಪ್ರಸಿದ್ಧವಾಗಿವೆ. ೭ನೆಯ ಶತಮಾನದಲ್ಲಿ ಇಲ್ಲಿ ದ್ರಾವಿಡ ವಾಸ್ತುಶೈಲಿಯನ್ನು ಅಳವಡಿಸಿಕಟ್ಟಿರುವ ಗುಡಿಗಳನ್ನು ಕಾಣುತ್ತೇವೆ. ಮೇಗುಟಿ ದೇವಾಲಯ, ಮಾಲೆಗಿತ್ತಿ ಶಿವದೇವಾಲಯ, ಮಹಾಕೋಟೇಶ್ವರ ದೇವಾಲಯ ಈ ಶೈಲಿಗೆ ಸೇರಿವೆ. ಮಾಲೆಗಿತ್ತಿ ಶಿವದೇವಾಲಯವು ದ್ರಾವಿಡ ಸಂಪ್ರದಾಯದ ಎಲ್ಲ ಅಂಶಗಳನ್ನು ಒಳಗೊಂಡಿದೆ. ಆದರೂ ದಪ್ಪ ಏಕ ಶಿಲಾಸ್ತಂಭಗಳು ದಪ್ಪ ಬೋದಿಗೆಗಳು, ಕಿರುಲೋವೆಗಳು ಮುಂತಾದವು ಇದರಲ್ಲಿ ಗುಹಾಶಿಲ್ಪದ ಕುರುಹು ಉಳಿದಿರುವುದು ಕಂಡುಬರುತ್ತದೆ.

ಪಲ್ಲವರ ವಾಸ್ತುವಿನ ಪ್ರಭಾವವೂ ಅಲ್ಲಲ್ಲಿ ಕಾಣಬಹುದು. ಇದೇ ಕಾಲದಲ್ಲಿಯೇ ಔತ್ತರೇಯ ನಾಗರಶೈಲಿಯ ಕಟ್ಟಡಗಳನ್ನು ಇಲ್ಲಿ ಕಟ್ಟಿರುವುದು ಕಂಡುಬರುತ್ತದೆ. ಪಟ್ಟದಕಲ್ಲಿನಲ್ಲಿ ಈ ಎರಡು ಶೈಲಿಗಳ ದೇವಾಲಯಗಳನ್ನು ಜೊತೆಜೊತೆಯಾಗಿ ಕಟ್ಟಿರುವುದನ್ನು ಕಾಣಬಹುದು. ಚಾಳುಕ್ಯ ಶಿಲ್ಪದ ಉನ್ನತಿಯನ್ನು ಕಾಣುವುದು ಇಲ್ಲಿಯೇ. ಹೆಚ್ಚು ಬೆಳವಣಿಗೆ ಹೊಂದದ ಪಾಪನಾಥ, ಜಂಬುಲಿಂಗ, ಕರಿಸಿದ್ದೇಶ್ವರ ಮತ್ತು ಕಾಶಿನಾಥ ದೇವಾಲಯಗಳು ಔತ್ತರೇಯ ರೀತಿಯಲ್ಲಿ ನೇರವಾಗಿ ಮೇಲೆದ್ದು ಕೊನೆಯಲ್ಲಿ ಒಳಕ್ಕೆ ಬಾಗುವ, ಮೇಲೆ ಅಮಲಕವನ್ನು ಹೊಂದಿದ ಶಿಖರಗಳನ್ನು ಹೊಂದಿದ್ದರೆ. ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ ಮತ್ತು ಗಳಗನಾಥ ದೇವಾಲಯಗಳ ಅಂತಸ್ತುಗಳಾಗಿ ಮೇಲೇಳುವ ದ್ರಾವಿಡ ಶಿಖರಗಳನ್ನು ಹೊಂದಿವೆ.ಇವು ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಿದ ದೇವಾಲಯಗಳ ಎಲ್ಲ ಭಾಗಗಳನ್ನು ಒಳಗೊಂಡ ದೇವಾಲಯಗಳು. ಈ ಎಲ್ಲ ರೀತಿಯ ವಾಸ್ತುಶೈಲಿಗಳಿಗೂ ಅವರು ಉಪಯೋಗಿಸಿರುವುದು ಕೆಂಪುಮರಳು ಶಿಲೆಯಕಲ್ಲು. ಈ ಕಲ್ಲುಗಳು ಸೂರ್ಯೋದಯ ಮತ್ತು ಸೂರ್ಯಾಸ್ತ ಸಮಯದಲ್ಲಿ ಬೆಳಕಿನ ಪ್ರತಿಫಲನದಿಂದ ಅವುಗಳ ಸೌಂದರ್ಯವು ಹೆಚ್ಚುತ್ತದೆ.

ಜಿ. ಬಿ. ಡ.

## ಬಾರಮಾಸ

ಬಾರಮಾಸ ಎಂದರೆ ಹನ್ನೆರಡು ತಿಂಗಳು. ಒಂದು ವರ್ಷದ ಋತು ವರ್ಣನೆ ಇಲ್ಲಿ ಬರುತ್ತದೆ. ಕಾರಣಾಂತರದಿಂದ ಪ್ರಿಯನು ಅಗಲಿದ್ದಾನೆ. ಪ್ರಿಯಳ ವಿರಹ ಆರಂಭವಾಗುತ್ತದೆ. ಒಂದು ವರ್ಷ ಕಳೆದು ಆತ ಬರುತ್ತಾನೆ. ತನ್ನ ವಿರಹ ವೇದನೆಯನ್ನು ಮತ್ತೊಮ್ಮೆ ಆತನಲ್ಲಿ ಹೇಳಿಕೊಳ್ಳುತ್ತಾಳೆ. ಇದು ಕಾವ್ಯಕ್ಕೇ ಮುಖ್ಯವಾದ ವಸ್ತು. ಅನೇಕರು ಇದನ್ನು ವಸ್ತುವಾಗಿರಿಸಿ ಕಾವ್ಯವಾಗಿ, ಹಾಡುಗಬ್ಬವಾಗಿ ಸಾಹಿತ್ಯ ರಚಿಸಿದ್ದಾರೆ. ಕನ್ನಡದಲ್ಲಿಯೂ ಈ ಬಗೆಯ ರಚನೆಗಳಿವೆ. ಈ ಕಾವ್ಯಕ್ಕೆ ಪೂರಕವಾಗಿ ಇಲ್ಲವೆ ಪ್ರತ್ಯೇಕವಾಗಿ ರಾಜಸ್ಥಾನಿ ಕಲಾವಿದರು ಚಿತ್ರ ರಚಿಸಿದ್ದಾರೆ. ರಾಜಸ್ಥಾನಿ ಹಾಗೂ ಮುಘಲ್‌ಗಳ ಉಪಶೈಲಿಗಳಲ್ಲೂ ಈ ಚಿತ್ರಣ ಕಂಡುಬರುತ್ತದೆ. ಕೆಲವೊಮ್ಮೆ ಈ ಚಿತ್ರ ಸರಣಿ ಮಳೆಗಾಲದಿಂದ ಆರಂಭವಾಗುತ್ತದೆ. ಆದರೆ ಭಾರತೀಯರಿಗೆ ವರ್ಷಾರಂಭ ಚೈತ್ರವೇ ಆಗಿದ್ದು ಇಲ್ಲಿಂದಲೇ ಆರಂಭವಾಗುವುದು ಸೂಕ್ತ ಎಂಬುದು ಕೆಲವು ಕಲಾವಿದರ ಮನೋಭಾವ.

ಯಥೇಚ್ಛವಾಗಿ ಪ್ರಕೃತಿ ಕಾಣುವಂತೆ ಮನೆಯ ಅಂಗಳದಲ್ಲೊ ಮಾಳಿಗೆಯ ಮೇಲೆಯೋ ನಾಯಕಿ ಕುಳಿತು, ಎದುರಿಗೆ ಕುಳಿತ ಪ್ರಿಯನಿಗೆ 'ಋತು ವೈಭವ' ಹೇಳುತ್ತಿದ್ದಾಳೆ. ಹಿನ್ನೆಲೆಗೆ ಆಕೆ ಹೇಳುತ್ತಿರುವ 'ಕಾಲ'ದ ಪ್ರಕೃತಿ ಚಿತ್ರಣವಿರುತ್ತದೆ. ಆಕೆ ವಿವರವಾಗಿ ಹೇಳುತ್ತಿರುವುದು ಆತ ಮುಗ್ಧವಾಗಿ ಕೇಳುತ್ತಿರುವುದರ ವಿನಾ ಹೆಚ್ಚಿನ ಕ್ರಿಯೆ ಕಂಡು ಬರುವುದಿಲ್ಲ. ಆದರೂ ಚಳಿಗಾಲದಲ್ಲಿ ಚಳಿಗೆ, ಮಳೆಗಾಲದಲ್ಲಿ ಗುಡುಗು ಸಿಡಿಲಿಗೆ ಪರಸ್ಪರ ಆಲಂಗಿಸಿಕೊಂಡ ಚಿತ್ರಗಳೂ ಉಂಟು. ಕವಿಗೆ ದೀರ್ಘವಾಗಿ ಪ್ರಕೃತಿ ವರ್ಣನೆಗೆ ಅವಕಾಶವಿರುವಂತೆ



ಕಲಾವಿದನಿಗೆ ಇಲ್ಲ. ಆದರೂ ಇರುವ ಅವಕಾಶದಲ್ಲಿ ಕಿರು ಆಕಾರದ ಚಿಕಣಿ ಚಿತ್ರಗಳಲ್ಲಿ ಆಯಾ ಋತುಗಳ ಸಮಸ್ತ ವಿದ್ಯಮಾನಗಳನ್ನು ಯಶಸ್ವಿಯಾಗಿ ತಂದಿದ್ದಾನೆ ಕಲಾವಿದ. ಆತ ತನ್ನ ಸುತ್ತಮುತ್ತಲಿನ ಪ್ರಕೃತಿಯನ್ನು ಗಮನಿಸಿರುವ ರೀತಿ ಅನನ್ಯವಾದುದು. ಕಾಲದೊಂದಿಗೆ ಬದಲಾಗುವ ಪ್ರಕೃತಿಯಲ್ಲಿಯ ಗಿಡ, ಮರಗಳು, ಹೂ ಹಣ್ಣುಗಳು, ಪಶು ಪಕ್ಷಿಗಳು ಕೆರೆ ನದಿಗಳು, ಆಕಾಶ ಮೋಡಗಳು, ಬೆಟ್ಟ-ಗುಡ್ಡಗಳು ಮನೆ-ಮಾರುತಗಳು- ಸಮಸ್ತವೂ ಪರಸ್ಪರ ಪೂರಕವಾಗುವಂತೆ ಕಲಾವಿದರು ಸಂಯೋಜಿಸಿದ್ದಾರೆ. ಇದೇ ಪ್ರಕೃತಿ ನಾಯಕನಿಲ್ಲದ ಒಂದು ವರ್ಷದಲ್ಲಿ ನೀಡಿದ ವಿರಹ ವೇದನೆ ಇಂದು ನಾಯಕನೊಂದಿಗೆ ಇರುವಾಗಿನ ಸುಖ ಹಂಚಿಕೊಂಡಂತೆ ಕಾಣಬರುತ್ತದೆ. ಬಾರಮಾಸ ಭಾರತೀಯ ಚತಿತ್ರಕಲೆಯ ಒಂದು ಅಪೂರ್ವ ಕಾಣಿಕೆ. ಕನ್ನಡದಲ್ಲಿಯೂ ಬಾರಾಮಾಸ ಕುರಿತ ಕಾವ್ಯಗಳು ರಚಿತವಾಗಿವೆ.

ಅಲಸ

## ಬ್ಯಾಬಿಲೋನಿಯ

ಯುಫ್ರೆಟಿಸ್ ಮತ್ತು ಟೈಗ್ರಿಸ್ ನದಿಯ ದಂಡೆಗಳ ಪ್ರದೇಶಗಳಲ್ಲಿ ಸುಮಾರು ಕ್ರಿ.ಪೂ. ೫೦೦೦ ವರ್ಷಗಳಷ್ಟು ಹಿಂದೆ ಕೆಲವು ಪ್ರಸಿದ್ಧ ಪಟ್ಟಣಗಳು ಬೆಳೆದು ಬಂದವು. ಇವುಗಳಲ್ಲಿ ಬಹುಪಾಲು ಪಟ್ಟಣಗಳು ನಾಶವಾಗಿ ಒಂದರಮೇಲೆ ಒಂದು ಪುನಃ ಕಟ್ಟಲ್ಪಟ್ಟಂತಹುಗಳಾಗಿವೆ. ಅವುಗಳಲ್ಲಿ ಬ್ಯಾಬಿಲೋನಿಯನ್ ನಾಗರಿಕತೆ ತುಂಬ ಪ್ರಸಿದ್ಧವಾದ ನಾಗರಿಕತೆಯಾಗಿದೆ.

ಸಿರಿಯಾ ಪ್ರದೇಶದ ಹತ್ತಿರ ಯುಫ್ರೆಟಿಸ್ ನದಿಯ ದಂಡೆಯ ಮೇಲೆ ವಾಸಿಸುವ ಸೆಮಿಟಿಕ್ ಜನಾಂದವರಿಗೆ ಬ್ಯಾಬಿಲೋನಿಯನ್ನರೆಂದು ಕರೆಯುತ್ತಾರೆ. ಇವರ ಕಾಲ ಸುಮಾರು ಕ್ರಿ.ಪೂ. ೩೦೦೦ ವರ್ಷವೆಂದು ಹೇಳಲಾಗುತ್ತಿದೆ. ಯುಫ್ರೆಟಿಸ್ ನದಿಯ ಹತ್ತಿರದ ಪ್ರದೇಶವೇ ಬ್ಯಾಬಿಲೋನಿಯಾ ಪಟ್ಟಣ. ಹಮ್ಮುರಾಬಿ ಈ ಪ್ರದೇಶವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಸುಪ್ರಸಿದ್ಧ ದೊರೆ. ಈತ ಲಲಿತಕಲೆಗಳಿಗೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟಿದ್ದನು.

ಬ್ಯಾಬಿಲೋನಿಯನ್ನರು ಧಾರ್ಮಿಕ ಹಿನ್ನೆಲೆಯಲ್ಲಿ ತಮ್ಮ ಬದುಕನ್ನು ನಡೆಸಿದ ಅವರಲ್ಲಿ ವಾಸ್ತುಶಿಲ್ಪ, ಶಿಲ್ಪ, ಚಿತ್ರಕಲೆ ಶ್ರೇಷ್ಠ ಮಟ್ಟದಲ್ಲಿ ರಚನೆಗೊಂಡಿವೆ. ಇವರು ವೈದ್ಯಶಾಸ್ತ್ರ ಕಾಲಗಣನೆ, ಸಾಹಿತ್ಯ , ಖಗೋಲಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಅವರ ಕಲೆ ಈ ತಾತ್ವಿಕ ಹಿನ್ನೆಲೆಯಲ್ಲಿ ಸಿದ್ಧಗೊಂಡಿದೆ.

ಇವರ ಕಾಲದಲ್ಲಿ ನಿರ್ಮಿಸಿದ ದೇವಾಲಯ, ಮನೆಗಳು, ಅರಮನೆಗಳ ವಾಸ್ತುಶಿಲ್ಪ ಅದ್ಭುತವಾಗಿತ್ತು. ಎರಡನೆಯ ಸಾರ್ಗಾನ್ ಎಂಬಾತ ಕಟ್ಟಿಸಿದ ಅರಮನೆಯೊಂದರಲ್ಲಿ ೭೦೦ರಷ್ಟು ಕೊಠಡಿಗಳಿದ್ದವು. ಒಂದು ಕೋಣೆಯ ಉದ್ದವಂತು ೧೭೦ ಅಡಿ ಇದ್ದಿರುವುದು ಕಂಡು ಬಂದಿದೆ. ವಾಸ್ತುಶಿಲ್ಪದಲ್ಲಿ ಭವ್ಯತೆ, ಕಲಾತ್ಮಕತೆಯನ್ನು ಇವರು ರೂಢಿಸಿಕೊಂಡಿದ್ದರು.

ಬ್ಯಾಬಿಲೋನಿಯನ್ನರು ಕಲ್ಲಿನ ಕೆತ್ತನೆಯಲ್ಲಿ ಸಿದ್ಧಹಸ್ತರಾಗಿದ್ದರು. ನೂರಾರು ಸುಂದರ ಕೆತ್ತನೆಶಿಲ್ಪಗಳು ರಚನೆಯಾಗಿವೆ. ಉದಾ, ರಥಗಳ ಮೇಲೆ ನಿಂತು ಯುದ್ಧಮಾಡುವವರು, ಕೈದಿಗಳನ್ನು ಸೆರಿಹಿಡಿಯುವವರು, ಸಿಂಹ ಕಾಡು ಕತ್ತೆಗಳನ್ನು ಬೇಟೆಯಾಡುವರು, ಅರಸರು

ಶ್ರೀಮಂತರು ನಡೆಸುವ ಜೀವನದ ವಿವಿಧ ಭಂಗಿಯ ಕೆತ್ತನೆಗಳು, ಸೈನಿಕರು ನದಿಗಳನ್ನು ದಾಟುವ ದೃಶ್ಯಗಳಂತೂ ಹೇರಳವಾಗಿವೆ. ಇಲ್ಲಿಯ ಕಸುಬುದಾರರು ಇಟ್ಟಿಗೆಗಳಿಗೆ ಬಣ್ಣ ಬಣ್ಣದ ಗಾಜು ಪಿಂಗಾಣಿಗಳ ಲೇಪನಗಳನ್ನು ಸವರಿ ಬೇಯಿಸಿ ಅವುಗಳಿಗೆ ಹೊಳಪು ಬರುವಂತೆ ಮಾಡುವ ತಂತ್ರವನ್ನು ಚೆನ್ನಾಗಿ ಕಲಿತಿದ್ದರು. ಈ ರೀತಿಯ ಅವರ ಜೀವನದ ನೂರಾರು ದೃಶ್ಯಗಳನ್ನು ಕಾಣಬಹುದು.

ಬ್ಯಾಬಿಲೋನಿಯನ್ನರು ಮೂರ್ತಿಶಿಲ್ಪದ ರೇಖೆ, ಉಡುಪುಗಳ ನಿರಿಗೆಯನ್ನು ನೈಜರೂಪದಲ್ಲಿ ವಿನ್ಯಾಸಗೊಳಿಸುತ್ತಿದ್ದರು. ಇದು ಬ್ಯಾಬಿಲೋನಿಯನ್ ಶೈಲಿಯ ವೈಶಿಷ್ಟ್ಯವಾಗಿದೆ. ಇದು ಅಲ್ಲದೆ ಇವರ ಸಂಕೇತಪ್ರಧಾನವಾದ ಚಿತ್ರಲಿಪಿಯ ಮುದ್ರೆಗಳು ಗಮನಾರ್ಹವಾಗಿವೆ. ಮರಣಾಂತ ಹಾಗೂ ಭಯಾನಕ ರೋಗಗಳ ನಿವಾರಕ 'ನರಗಲ್' ಎಂಬ ದೇವರನ್ನು ಕುರಿತು ಇವು ರಚನೆಗೊಂಡಿವೆ. ಈ ಸಂಸ್ಕೃತಿಯ ಕಲಾವಿದರು ಕುಶಲ ಕಲೆಗಳಲ್ಲಿಯೂ ಪರಿಣತಿ ಹೊಂದಿದ್ದರು.

ಎಸ್. ಸಿ. ಪಾ.

## ಬಿದ್ರಿ ಕಲೆ

ಬಿದ್ರಿ ಕಲೆ ಬೀದರನಲ್ಲಿ ತಯಾರಾಗುವ ಹಾಗೂ ಇಡೀ ವಿಶ್ವದಲ್ಲಿ ಮಾರಾಟವಾಗುವ ಜೊತೆಗೆ ಮನ್ನಣೆಗೆ ಪಾತ್ರವಾಗಿರುವ ವಿಶಿಷ್ಟ ಕಲೆ ಆಗಿದೆ.

ಬಿದ್ರಿ ಶಬ್ದ ಉತ್ಪತ್ತಿ: ಬೀದರಿನಲ್ಲಿ ತಯಾರಾಗುವ ಕಲೆ ಇರುವುದರಿಂದ ಇದಕ್ಕೆ ಬಿದ್ರಿ ಕಲೆ ಎಂಬ ಹೆಸರು ಬಂದಿದೆ; ಎಂದು ಅನೇಕರು ಹೇಳಿದರೆ ಶ್ರೀ ಕುಯವೀರಾ (ರಾಜೇಂದ್ರ ಯರನಾಳೆ) ಅವರು 'ವಿಶ್ವವಿಖ್ಯಾತ ಬಿದ್ರಿಕಲೆ' ಎಂಬ ಪುಸ್ತಕದಲ್ಲಿ ಬಿದ್ರಿ ಕಲೆಯಿಂದಲೇ ಬಿದ್ರಿ, ಬಿದಿರಿ, ಬಿದರ, ಬೀದರ ಎಂದು ಇಲ್ಲಿಯ ಪಟ್ಟಣಕ್ಕೆ ಹೆಸರು ಬಂದಿದೆ. ಬೀದರಕ್ಕೆ ಹಲವಾರು ಶತಮಾನದ ಹಿಂದಿನಿಂದ ಏನೆಂದು ಕರೆಯುತ್ತಿದ್ದರೆಂಬುದಕ್ಕೆ 'ಕ್ವಾಟಿ' ಎಂದು ಬಳಸುವುದು ಆಗಿದೆ. ಎಂದು ಹೇಳುತ್ತ ವಿದಿ ಅಥವಾ ಬಿದಿ ಇವುಗಳಲ್ಲೊಂದರ ಅಪಭ್ರಂಶವೇ ಬಿದ್ರಿ ಆಗಿದೆ ಎಂಬ ಉಲ್ಲೇಖವಿದೆ.

ಉಗಮ: ಸುಮಾರು ೨೦,೩೦, ಸಾವಿರ ವರ್ಷಗಳ ಹಿಂದೆ ಶಿಲಾಯುಗದ ಮಾನವ ಚಿತ್ರಬರೆಯಲು ಅರಿತಿದ್ದ. ನಂತರ ಬೆಳ್ಳಿ-ಬಂಗಾರ-ತಾಮ್ರ ಮುಂತಾದವುಗಳ ಮೇಲೆ ಚಿತ್ರ ತೆಗೆಯುತ್ತಿದ್ದ. ಹೀಗೆ ೧೨ನೇ ಶತಮಾನದಲ್ಲಿ ಬಸವಕಲ್ಯಾಣದಲ್ಲಿ ತೋಪುಗಳ ಮೇಲೆ ಚಿತ್ರಕೆತ್ತಿ ಬೆಳ್ಳಿ ಮುಂತಾಗಿ ಕೂಡಿಸುತ್ತಿದ್ದರು. ಹೀಗೆ ೫-೬ ನೂರು ವರ್ಷದ ಹಿಂದೆ ಅಹಮದ್ ಶಹಾವಲಿ ಬಹಮನಿ ರಾಜ ಇವನಿರುವಾಗಲೂ ಚಿತ್ರ ಕೆತ್ತುವ ಕಲೆ ಇಲ್ಲಿತ್ತು. ಆವಾಗ ಅಬ್ದುಲ್ಲಾ ಬಿನ್ ಬೈಸರ್ ಎಂಬ ಕಲಾಕಾರ ಜಿಂಕ ಮೆಟಲ್ ಮೇಲೆ ಚಿತ್ರ ಕೆತ್ತಲು ಸರಳವೆಂದು ಪ್ರಯೋಗಿಸಿ ಯಶಸ್ವಿ ಆದ. ಇದೇ ಮುಂದೆ ಬಿದ್ರಿ ಕಲೆಯಾಗಿ ಬೆಳೆಯಿತು.

ಇತಿಹಾಸ(ವಿಕಾಸ): ಅಬ್ದುಲ್ಲಾಬಿನ್ ಟೈಸರ್ ಬಿದ್ರಿ ಕಲೆ ಕಂಡುಕೊಂಡ ನಂತರ ಮಹಮ್ಮದ್ ಗವಾನ ಮದರಸಾದಲ್ಲಿ ಶಿಕ್ಷಕರಾಗಿದ್ದಂಥ ರಾಮಣ್ಣ ಎನ್ನುವ ಶಿಕ್ಷಕರು ಇದನ್ನು ಒಂದು ಒಳ್ಳೆಯ ಆಕರ್ಷಕ ರೂಪದಲ್ಲಿ ಬೆಳೆಸಿದರು. ನಂತರ ಇದಕ್ಕೆ ವಿವಿಧ ರಾಜರುಗಳ

ಮನ್ನಣೆ ದೊರೆಯಿತು. ವಜೀರ ಆದಂಥ ಮಹಮ್ಮದ ಗವಾನ ಹಾಗೂ ಅಹಮದ್‌ಶಹಾವಲಿ ರಾಜ ಇದನ್ನು ಬೆಳೆಸಲು ಹೆಚ್ಚಿನ ಗಮನ ಹರಿಸಿದರು. ನಂತರ ಹೈದ್ರಾಬಾದಿನ ನಿಜಾಮ ಸಹ ತನ್ನ ಆಡಳಿತದಲ್ಲಿ ಈ ಕಲೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ. ಆಮೇಲೆ ಭಾರತ ಸ್ವಾತಂತ್ರ್ಯ ಆದನಂತರ ಕರ್ನಾಟಕ ರಾಜ್ಯ ೧೯೬೦ರಲ್ಲಿ ಕಲಾ ತರಬೇತಿ ಸಂಸ್ಥೆ ತೆರೆಯಿತು. ಅನಂತರ ಕೇಂದ್ರ ಸರಕಾರದಿಂದ ಇಂದಿರಾಗಾಂಧಿಯವರು ಇದನ್ನು ಬೆಳೆಸಲು ಇನ್ನಷ್ಟು ಅವಕಾಶ ನೀಡಿದರು. ಹೀಗೆ ಇಂದು ಬಿದ್ರಿ ಕಲೆ ಸ್ವತಂತ್ರವಾಗಿಯೂ ಇಡೀ ವಿಶ್ವವಿಖ್ಯಾತವಾಗಿದೆ.

ಬಿದ್ರಿ ಕಲೆಗಳು: ಬಿದ್ರಿಕಲೆಗಳು ಉಳಿದ ಕೆಲವು ಕಲೆಗಳಂತೆ ಕೇವಲ ಸೌಂದರ್ಯ, ಅಲಂಕಾರಕ್ಕಾಗಿ ಅಷ್ಟೇ ಇರದೆ, ನಿತ್ಯ ಜೀವನದಲ್ಲಿ ಉಪಯೋಗಿಸಲು ಬರುವಂಥವುಗಳಾಗಿವೆ. ಉದಾ: ಅಂಗಿಯ ಗುಂಡಿಗಳಾದರೆ ಗುಂಡಿಯಾಗಿ ಉಪಯೋಗಿಸಲು ಬರುತ್ತವೆ: ಬೆಡ್ ಲ್ಯಾಂಪು ಆದರೆ ದೀಪವಾಗಿ ಉಪಯೋಗಿಸಲು ಬರುತ್ತದೆ. ಉಮರ್ ಖಯಾಮ ಆದರೆ (ರಾಜರು ಶ್ರೀಮಂತರು ಮದಿರೆ) ನೀರು ಹಾಕಿ ಕುಡಿಯಲು ಬಳಸುತ್ತಾರೆ. ಹೀಗೆ ವಿವಿಧ ರೀತಿಯ ಡಬ್ಬಿಗಳು, ಹೂದಾನಿಗಳು, ಪೇಪರ್ ಕಟರ್‌ಗಳು, ಸಿಗರೇಟಿನ ಟ್ರೇಗಳು, ಬಳೆಗಳು, ಆಭರಣಗಳು, ಕನ್ನಡಿಗಳು ಮುಂತಾದ ಹಲವಾರು ರೀತಿಯಲ್ಲಿ ಬಿದ್ರಿಕಲೆಗಳನ್ನು ಕಾಣಬಹುದು.

ಹೀಗೆ ವಿವಿಧ ರೀತಿಯಲ್ಲಿರುವ ಬಿದ್ರಿ ಕಲೆಯ ಬೆಲೆ ತುಸು ತುಟ್ಟಿ. ಏಕೆಂದರೆ ಜಿಂಕ ಮತ್ತು ಕಾಪರ್(ತಾಮ್ರ)ದಿಂದ ತಯಾರಿಸುವ ಇದರಲ್ಲಿ ಚಿತ್ರ ಕೆತ್ತಿ ಬೆಳ್ಳಿ ಕೂಡಿಸುತ್ತಾರೆ. ಹೀಗೆ ಕೂಡಿಸುವ ಬೆಳ್ಳಿ ಸಹ ಅಚ್ಚು ಶುದ್ಧವಾಗಿರುತ್ತದೆ. ಹಾಗೂ ಕಲೆ ತಯಾರಿಸಲು ಕಲಾಕಾರನ ಶ್ರಮವೂ ಬಹಳ ಬೇಕಾಗುತ್ತದೆ. ಹೀಗೆ ತಯಾರಾಗುವ ಈ ಕಲೆ ಕೇವಲ ಬೀದರನಲ್ಲಿಯೇ ಉತ್ಪಾದನೆಗೊಳ್ಳಲು ಕಾರಣವೆಂದರೆ: ಬಿದ್ರಿಕಲೆ ತಯಾರಾದ ಮೇಲೆ ಅದಕ್ಕೆ ಬಣ್ಣ ಬರಬೇಕಾದರೆ ಬೀದರ ಕೋಟೆಯಲ್ಲಿರುವ ಮಣ್ಣು ಆವಶ್ಯಕವಾಗಿದೆ. ಹೀಗಾಗಿ ಇದು ಬೀದರಿನ ವಿಶಿಷ್ಟ ಕಲೆ ಎನಿಸಿಕೊಂಡಿದೆ.

**ಕುಯುವೀರಾ**

## ಬೀದಿಕಲೆ (Street Art)

ಗೋಡೆಗಳ ಮೇಲೆ, ಕಟ್ಟಡ, ಉದ್ಯಾನ, ರೈಲು, ಜಾಹೀರಾ‌ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ನಿರ್ಮಿಸಿದ ಚಿತ್ರಕಲೆ. ನಗರಗಳಿಗೆ ವಿಶಿಷ್ಟವಾದ ಕಲಾರೂಪ ಇದಾಗಿದ್ದು ಅನೇಕ ಸಲ ವಿಶೇಷತೆಯಿಲ್ಲದ ನವ್ಯವಾಸ್ತುಶಿಲ್ಪವನ್ನು ಪ್ರತಿಭಟಿಸುತ್ತದೆ. ಅಂತೆಯೇ ಈ ಕಲೆಯು ರಾಜಕೀಯ ಪ್ರಚಾರ ಮಾಧ್ಯಮವಾಗಿಯೂ ಬಳಸಲ್ಪಡುತ್ತದೆ. ಸಾಮಾನ್ಯವಾಗಿ, ಕಲೆಯನ್ನು ವಿರೂಪಗೊಳಿಸುವುದಕ್ಕಾಗಿಯೇ ಈ ಕಲೆಯು ಬಳಕೆಗೊಳ್ಳುತ್ತಿದ್ದರೂ ಒಮ್ಮೊಮ್ಮೆ ಇವುಗಳಲ್ಲಿ ಒಳ್ಳೇ ಕಲಾಕೃತಿಯನ್ನು ಕಾಣಬಹುದು.

ಇವನ್ನು ಗೋಡೆ ಬರಹ ಎಂದೂ ಕರೆಯಬಹುದು. ಪ್ರಚಾರಕರು ಈಚೆಗೆ ತಮ್ಮ ಧ್ಯೇಯವಾಕ್ಯ(ಸ್ಲೋಗನ್)ದೊಂದಿಗೆ, ಚಿತ್ರಗಳನ್ನು ರಚಿಸುವುದುಂಟು.

**ಅ.ಶಾ.**

## ಬುಂದಿ ಚಿತ್ರಕಲೆ

ಹರೋಟಿಯು ಹರರಜಪೂತರ ದೇಶವಾಗಿದ್ದು ಬುಂದಿ ಮತ್ತು ಕೋಟಾ ಎಂಬ ಎರಡು ಆಡಳಿತ ರಾಜ್ಯಗಳನ್ನು ಒಳಗೊಂಡಿತ್ತು. ರಾವ್ ಚತ್ತಾಲ್‌ಸಾಲ್‌ನು (೧೬೩೧-೫೮) 'ಬುಂದಿಯ ಅತ್ಯಂತ ಪ್ರಭಾವಶಾಲಿ ಆಡಳಿತಗಾರ. ಶಹಜಹಾನನು ಅವನನ್ನು ದೆಹಲಿಯ ಗೌರ್ನರನ್ನಾಗಿ ಮಾಡಿದನು ಹಾಗೂ ನಂತರ ಅವನು ಡೆಕ್ಕನ್ ವಿಚಾರಣೆಯಲ್ಲಿ ಪ್ರಮುಖ ಪಾತ್ರ ವಹಿಸಿದನು. ಅವನ ಉತ್ತರಾಧಿಕಾರಿ ಭಾವೋಸಿಂಗ್‌ನ (೧೬೫೮-೮೨) ಕಾಲದಲ್ಲಿ ಬುಂದಿ ಚಿತ್ರಕಲೆಯು ಅತಿ ಶೀಘ್ರವಾಗಿ ಅಭಿವೃದ್ಧಿ ಹೊಂದಿತು. ಆ ಕಾಲದಲ್ಲಿ ಚಿತ್ರಗಳ ಮೇಲೆ ಇದ್ದ ಹೆಣ್ಣುಮುಖಗಳಿಗೂ ಮೇವಾರ್‌ದ ರಾಜಸಿಂಗ್‌ನ ಕಾಲದಲ್ಲಿ ಇದ್ದ ಚಿತ್ರಗಳಿಗೂ ಪರಸ್ಪರ ಸಂಬಂಧವಿದ್ದಿತು. ನೀರು, ಪಕ್ಷಿಗಳು, ತಾವರೆಹೂ ಮತ್ತು ಗಿಡಗಳು ಇರುವ ಈ ಚಿತ್ರಗಳು ಬುಂದಿಯ ಸುತ್ತಮುತ್ತಲೂ ಇರುವ ಪ್ರಕೃತಿ ದೃಶ್ಯವನ್ನು ನೆನಪಿಸುತ್ತವೆ. ಮರಗಳನ್ನು ಚಿತ್ರಿಸಿರುವ ರೀತಿ ಹಾಗೂ ನವಿಲುಗಳು ಮತ್ತು ಬಾತುಕೋಳಿಗಳನ್ನು ಹೇರಳವಾಗಿ ಗುರುತಿಸಿರುವುದು ಈ ಚಿತ್ರಕಲೆಯ ವಿಶೇಷ ಗುಣವಾಗಿದೆ. ಉಮ್ಮೆದ್‌ಸಿಂಗ್‌ನ(೧೭೪೯-೭೧) ಆಳ್ವಿಕೆಯ ಕಾಲದಲ್ಲಿ ಬುಂದಿ ಚಿತ್ರಕಲೆ ಅತ್ಯಂತ ಪ್ರಖ್ಯಾತ ಸ್ಥಾನವನ್ನು ಪಡೆದುಕೊಂಡಿತು. ಇತರ ರಾಜಸ್ಥಾನಿ ಚಿತ್ರಕಲೆಗಳಲ್ಲಿಯ ಭಾವದ ಸೂಕ್ಷ್ಮತೆ ಮತ್ತು ಭಾವೋದ್ರಿಕ್ತ ಭಾವನೆಯನ್ನು ತನ್ನ ಕಡೆ ಸೆಳೆದುಕೊಂಡಿತು. ಈ ಶೈಲಿಗೆ ಸದಾ ಹೊಳೆಯುವ ಸೌಂದರ್ಯವಿದ್ದು ಅದು ಪ್ರಕೃತಿಯ ವೈಭವದಲ್ಲಿ ಮೆರೆದಾಡುತ್ತದೆ. ಸಾಮಾನ್ಯವಾಗಿ ಈ ಚಿತ್ರಕಲೆಯ ಮುಖ್ಯ ವಸ್ತು(ವಿಷಯ) ಪ್ರೇಮ ಸನ್ನಿವೇಶದ ದೃಶ್ಯಗಳಾಗಿದ್ದು, ಅನೇಕ ಗಿಡಗಳು ಇದ್ದು, ತಾಳೆಯಮರದಲ್ಲಿ ನವಿಲುಗಳು ತಮ್ಮ ಇಂಪಾದ ಕೂಗುವಿಕೆಯಿಂದ ಈ ದೃಶ್ಯಕ್ಕೆ ವಿಶೇಷ ಜೀವಕಳೆಯನ್ನು ತುಂಬುತ್ತಿರುತ್ತವೆ. ಬುಂದಿ ಚಿತ್ರಕಲೆಯಲ್ಲಿ ಅನೇಕ ಪ್ರಸಿದ್ಧ ಪ್ರೇಮಿಗಳ ಪ್ರೇಮ ಪ್ರಕರಣದ ದೃಶ್ಯವನ್ನು ನಿರೂಪಿಸಲಾಗಿದೆ.

ಸುಮ

## ಬುದ್ಧಗಯೆ

ಬುದ್ಧನೊಂದಿಗೆ ನಿಕರ ಸಂಪರ್ಕವಿರಿಸಿಕೊಂಡ ಯಾತ್ರಾಸ್ಥಳ, ಶಾಂತಪರಿಸರ. ನಿರಂಜನಾ ನದಿ(ಈಗ 'ಫಲ್ಗು')ಯ ನಡುಗಡ್ಡೆಯಲ್ಲಿರುವ ಪವಿತ್ರ ತಾಣ, ಉರುವಿಲ್ವ-ಅದೇ ಬುದ್ಧಗಯೆ. ಇಲ್ಲಿರುವ ಪ್ರಾಚೀನ ವೃಕ್ಷದಡಿಯಲ್ಲಿ ಕುಳಿತು ತಪಸ್ಯೆಯ ಸಾಧನೆಯನ್ನು ನಡೆಸಿದ ಬುದ್ಧನಿಗೆ ಜ್ಞಾನೋದಯವಾದ ತಾಣವಿದು. ಆದರಿಂದ ಬೋಧಿಗಯಾದ ಹಿರಿಮೆ ಹೆಚ್ಚಿನದು. ಈ ವೃಕ್ಷವನ್ನು ಸುಮಾರು ೨೬೦೦ ವರ್ಷ ಪರ್ಯಂತ ಪೋಷಿಸುತ್ತಿದ್ದಾರೆ. ಇದರ ಒಂದು ಸಸಿಯನ್ನು ಅಶೋಕ ಸಿಲೋನಿಗೆ ಕಳಿಸಿದ.

ಶುಂಗರ ಕಾಲದಲ್ಲಿ ಭೋಧಿವೃಕ್ಷದ ಸುತ್ತ ಒಂದು ಶಿಲಾ ಕಟಾಂಚನವನ್ನು ನೆಟ್ಟಿದ್ದರು. ಹಾಗೂ ಭಾರ್ಹೂತ್‌ನಲ್ಲಿರುವ ಒಂದು ಶಿಲ್ಪವು, ಈ ಕಲ್ಲಿನ ಅಡ್ಡಕಂಬಿಯನ್ನು ಪ್ರತಿನಿಧಿಸುವುದೆಂದು ಊಹಿಸಲಾಗಿದೆ. ಬೋಧಿಗಯಾದಲ್ಲಿರುವ ಶಿಲಾಕಟಾಂಚನದ ಕೆಲವುಭಾಗಗಳು ಹಾಗೂ

ಕಲ್ಕತ್ತೆಯ ಭಾರತೀಯ ವಸ್ತು ಸಂಗ್ರಹಾಲಯದಲ್ಲಿರುವ ಕೆಲವು ತುಣುಕುಗಳು ಭಾರ್ಹುತ್‌ನಲ್ಲಿನ ಕಟಾಂಜನಕ್ಕಿಂತ ಇತ್ತೀಚಿನವು, ಈ ಅಡ್ಡಕಂಬಿಯ ಸಾಲುಕಂಬಗಳನ್ನು ನಿರ್ಮಿಸುವ ತಂತ್ರಕೂಡ ತುಂಬಾ ಮುಂದುವರಿದಿರುವ ಪರಿಯದೆಂದು ತಿಳಿಯಬರುತ್ತದೆ.

ನೇರವಾಗಿ ನಿಲ್ಲಿಸಿದ ದೊಡ್ಡಕಂಬಸಾಲು. ತಲದಲ್ಲಿ ಅರ್ಧಕಮಲದಾಕಾರವನ್ನು ನಡುವಣ ಭಾಗದಲ್ಲಿ ಕಮಲದ ಅಲಂಕಾರ ಫಲಕವನ್ನೂ ಹಾಗೂ ತುದಿಯಲ್ಲಿ ಒಂದು ಅರ್ಧ ವೃತ್ತಾಕಾರದ ಉಬ್ಬು ಶಿಲ್ಪವನ್ನೂ ಹೊಂದಿದೆ. ಅದರಲ್ಲಿ ಬೋಧಿವೃಕ್ಷದ ಆರಾಧನೆಯನ್ನು ವಿವರಿಸುವುದಲ್ಲದೆ, ಬುದ್ಧನ ಜೀವನದ ದೃಶ್ಯಗಳನ್ನೂ ಕಂಡರಿಸಿದೆ. ಉದ್ದವಾದ ಕೊಂಬೆಯನ್ನು ಚೂರುಚೂರುಗಳಲ್ಲಿ ಮಾಡಲಾಗಿದ್ದು ಎಲ್ಲವೂ ಅಲಂಕಾರಪಟ್ಟಿಗಳಿಂದ ಸಿಂಗರಿಸಿಕೊಂಡಿವೆ. ಪಕ್ಷಿಧಾಮ, ವನದೃಶ್ಯ, ಅರಮನೆಗಳು, ಧರ್ಮ ಚಕ್ರದ ಪೂಜೆಯ ದೃಶ್ಯಾವಳಿ, ಬುದ್ಧನ ಜನನ, ಸ್ತೂಪದ ಚಿತ್ರಣ. ಬುದ್ಧನಿರ್ಮಾಣದ ಸಂಕೇತ, ಗಜಲಕ್ಷ್ಮಿ ಸಪ್ತಾಶ್ವರಥಾ ರೂಢನಾದ ಸೂರ್ಯ, ಹೀಗೆ ಅನೇಕ ಚಿತ್ರಣಗಳಿವೆ.

ನಿಕ್ಸಾ

## ಬೆಳಕು ಮತ್ತು ಬಣ್ಣದ ತೀವ್ರತೆ

ಇವೆರಡನ್ನೂ ವಿವರಿಸುವುದಕ್ಕಿಂತ ಸುಲಭವಾಗಿ ಅನುಭವಿಸಬಹುದಾಗಿದೆ. ಬಣ್ಣದ ತೀವ್ರತೆಯ ಬಗೆಗಿನ ಕಾಳಜಿ ಕಪ್ಪು ಮತ್ತು ಬಿಳುಪು ಛಾಯಾಗ್ರಹಣದ ಅವಿಷ್ಕಾರದ ನಂತರ ಹೆಚ್ಚಾಗತೊಡಗಿತು. ಕಾರಣ ಇದರ ಸಂವೇದನೆ ಬಣ್ಣದಲ್ಲಿ ಅಷ್ಟು ತೀವ್ರವಾಗಿ ಆಗುವುದಿಲ್ಲ. ಕಪ್ಪು ಬಿಳುಪಿನಲ್ಲಿ ಎಲ್ಲಾ ಬಣ್ಣಗಳೂ ಬೇರೆ ಬೇರೆ ಸ್ತರದ ಬೂದಿಬಣ್ಣಗಳಾಗಿ ಕಾಣುತ್ತವೆ. ಯಾವುದೇ ಅರೆ ಅಮೂರ್ತ ಚಿತ್ರವನ್ನೇ ಗಮನಿಸಿ. ಕಪ್ಪು ಬಿಳುಪಿನಲ್ಲಿ ಅದರ ಅಂದ ಹೆಚ್ಚದಿದ್ದರೂ ಚಿತ್ರದಲ್ಲಿ ವೇದ್ಯವಾಗಿರುವ ದೂರದ ಕಲ್ಪನೆ, ಹಾಗೂ ನೆರಳು ಬೆಳಕಿನ ವ್ಯವಸ್ಥೆ ಸೊಗಸಾಗಿ ನಿರೂಪಿಸಲ್ಪಡುತ್ತದೆ. ಬಣ್ಣದ ತೀವ್ರತೆ ದೂರದ ಕಲ್ಪನೆಯನ್ನು ತರುತ್ತದೆ. ಇದ್ದಿಲ ಕಪ್ಪು ಬಣ್ಣದಿಂದ ದಂತದ ಬಿಳಿಯವರೆಗಿನ ಎಲ್ಲಾ ಸ್ತರಗಳನ್ನೂ ಗಮನಿಸಬಹುದಾದಂತಹ ಒಂದು ಗ್ರೇ ಪಟ್ಟಿ ಛಾಯಾಗ್ರಾಹಕರ ಸಂಗಾತಿಯೇ ಆಗಿದೆ.

ಇನ್ನು ನೆರಳು ಬೆಳಕಿನ ಸಂಯೋಜನೆ. ಛಾಯಾಗ್ರಹಣದಲ್ಲಿ ಉತ್ತಮ ಪ್ರಿಂಟ್ ಎಂದು ಕರೆಯುವುದಕ್ಕೆ ಮಾನದಂಡವಾಗಿ ನೆರಳಿನಲ್ಲಿ ಸಾಧ್ಯವಾದಷ್ಟೂ ವಿವರಗಳು ಮತ್ತು ಬಿಳಿಚಿಕೊಳ್ಳದ ಹೈಲೈಟ್‌ಗಳೂ ಇರಬೇಕೆನ್ನುತ್ತಾರೆ. ಚಿತ್ರಗಳಲ್ಲೂ ದುಂಡನೆಯ ಕಲ್ಪನೆ ತರಿಸುವಲ್ಲಿ ನೆರಳು ಬೆಳಕಿನ ಸ್ಥಾನ ದೊಡ್ಡದು. ಬೆಳಕು ನೇರವಾಗಿ ತಟ್ಟುವ ಸ್ಥಾನಗಳಲ್ಲಿ ಬಣ್ಣ ಬಹಳ ತೆಳುವಾಗಿರುತ್ತದೆ. ಇದನ್ನೇ ಹೈಲೈಟ್ ಎನ್ನುತ್ತಾರೆ. ನಂತರ ವಸ್ತುವಿನ ಉಬ್ಬು ತಗ್ಗುಗಳು ವ್ಯತ್ಯಾಸವಾದಂತೆಲ್ಲಾ ಬಣ್ಣವೂ ಗಾಢವಾಗುತ್ತಾ ಹೋಗುತ್ತದೆ. ನೆರಳಿನಲ್ಲಿರುವ ಭಾಗಗಳು ಅತ್ಯಂತ ಕಪ್ಪಾಗಿರುತ್ತವೆ. ಶಿಲ್ಪಗಳಲ್ಲಿ ನೆರಳು ಬೆಳಕಿನ ಆಟ ಪ್ರತ್ಯಕ್ಷವಾಗಿ ಕಾಣುವಂತಹದು ಹಾಗೂ ಕೃತಕ ಬೆಳಕಿನ ಸಹಾಯದಿಂದ ಇದನ್ನು ಬದಲಾಯಿಸಲೂಬಹುದು.

ರ. ಶಾಶಿ

## ಬೈಜಂಟೈನ್

ಬೈಝುಂಟಾಯಿನರು ಸಿರಿಯಾ ಮತ್ತು ಮೆಸೋಪೊಟೇಮಿಯ ಜನಾಂಗಗಳಿಂದ ಹೆಚ್ಚು ಸ್ಫೂರ್ತಿಯನ್ನು ಪಡೆದವರಾಗಿದ್ದರು. ಕ್ರಿ.ಶ. ೪ನೆಯ ಶತಮಾನದ ವೇಳೆಗೆ ಅವರು ತಮ್ಮ ಧಾರ್ಮಿಕಾಸಕ್ತಿಗೊಳಗಾಗಿ ರೋಮನ್‌ಕಲೆಯಿಂದ ಸಂಪೂರ್ಣವಾಗಿ ಭಿನ್ನವಾದ ಕ್ರಿಶ್ಚಿಯನ್ ಕಲೆಯನ್ನು ಉತ್ಪಾದಿಸಿದರು. ಈ ಹೊಸ ಕಲೆಯು ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ಸುಮಾರು, ೧೦೦೦ ವರುಷಗಳ ವರೆಗೆ ಸ್ಥಿರವಾಗಿ ಬೆಳೆದು ಬಂದಿತು. ಅಲ್ಲದೇ ಕ್ರಿಶ್ಚಿಯನ್ ಪ್ರಪಂಚಕ್ಕೆ ಅತಿ ಪ್ರಿಯವೂ ಆಗಿತ್ತು.

ಕಾನ್ಸ್ಟಂಟಾಯಿನ್(Constantine) ಥಿಯೋಡೋಸಿಯಸ್ ಮಹಾಶಯ(ಕ್ರಿ.ಶ. ೩೭೯-೬೫), ಮತ್ತು ಜಸ್ಟೀನಿಯನ್ ಚಕ್ರವರ್ತಿಗಳ ಕಾಲವು ಬೈಝುಂಟಾಯಿನ್ ಕಲೆಯ ಪ್ರಥಮ ಸುವರ್ಣಯುಗವೆಂದು ಕರೆಯಲ್ಪಟ್ಟಿದೆ. ಕ್ರಿ.ಶ. ೭ನೆಯ ಶತಮಾನದಲ್ಲಿ ಸ್ವಲ್ಪ ಬದಲಾವಣೆಯಾಯಿತಾದರೂ ೮ನೆಯ ಶತಮಾನದಲ್ಲಿ ಅಧಿಕಾರಕ್ಕೆ ಬಂದ ರಾಜಸಂತತಿ ದೈವೀ ಸ್ವರೂಪಗಳನ್ನೂ ಸಂತರನ್ನು ಪ್ರತಿನಿಧಿಸುವ ಭಾವಚಿತ್ರಗಳನ್ನೂ ಧಾರ್ಮಿಕ ಕಲೆಯಲ್ಲಿ ರೂಪಿಸುವುದನ್ನು ಪ್ರತಿಬಂಧಿಸಿತು. ಈ ಪ್ರತಿಬಂಧವು ಸುಮಾರು ಒಂದು ಶತಮಾನಕ್ಕೂ ಹೆಚ್ಚುಕಾಲ ಜಾರಿಯಲ್ಲಿತ್ತು. ಕ್ರಿ.ಶ. ೮೪೩ರಲ್ಲಿ ಈ ಪ್ರತಿಬಂಧವನ್ನು ಕಿತ್ತೊಗೆಯಲಾಯಿತು. ಈ ಕಾಲದಲ್ಲಿ ಅಸಾಧಾರಣವಾದ ಕಲಾಕೃತಿಗಳ ಸೃಷ್ಟಿಯಾಯಿತಲ್ಲದೇ ಇಂದಿಗೂ ಉಳಿದುಕೊಂಡಿರುವ ಕಲಾಕೃತಿಗಳು ಪ್ರಾಯಶಃ ಇದೇ ಕಾಲದಲ್ಲಿ ರಚಿತವಾದವುಗಳಾಗಿವೆ. ಈ ಕಾಲವನ್ನು ದ್ವಿತೀಯ ಸುವರ್ಣಯುಗವೆಂದು ಕರೆಯಲಾಗಿದೆ. ಕ್ರಿ.ಶ. ೧೪೫೩ರ ನಂತರದ ಕಲಾ ಕೃತಿಗಳಲ್ಲಿ ಆಕೃತಿಯ ಪರಿಶುದ್ಧ ಸೌಂದರ್ಯ, ಅದ್ವಿತೀಯವಾದ ಕುಶಲಕಲೆಗಾರಿಕೆಯ ಸಾಧನೆಯಾಯಿತು. ಅನ್ಯಾದೃಶವಾದ ಬೈಝುಂಟಾಯಿನ್ ವರ್ಣಚಿತ್ರ ಕಲಾಕೃತಿಗಳು ಇದೇ ಕಾಲದಲ್ಲಿಯೇ ಮೂಡಿ ಬಂದವುಗಳಾಗಿವೆ.

ಬೈಝುಂಟಾಯಿನರು ವರ್ಣಚಿತ್ರ, ವಾಸ್ತುಶಿಲ್ಪ ಮುಂತಾದ ಪ್ರತಿಯೊಂದು ಕಲೆಯಲ್ಲಿಯೂ ಸಿದ್ಧಹಸ್ತರಾಗಿದ್ದರು. ರೋಮನ್ ಕಟ್ಟಡಗಳ ಎರಡು ಶೈಲಿಗಳಿಂದ ತಮ್ಮದೇ ಆದ ಹೊಸ ಶೈಲಿಯೊಂದನ್ನು ಹುಟ್ಟು ಹಾಕಿದರು. ಈ ಹೊಸ ಶೈಲಿಯಲ್ಲಿಯೇ ಬೈಝುಂಟಾಯಿನ್ ಸಾಮ್ರಾಜ್ಯದ ತುಂಬೆಲ್ಲ ಅಸಂಖ್ಯಾತ ಚಿಕ್ಕ ಚಿಕ್ಕ ಚರ್ಚುಗಳ ನಿರ್ಮಾಣವಾಯಿತು. ಇವೆಲ್ಲವುಗಳಲ್ಲಿ ಕ್ರಿ.ಶ. ೬ನೆಯ ಶತಮಾನದಲ್ಲಿ ಕಾನ್‌ಸ್ಟಾಂಟಿನೋಪಲ್‌ನಲ್ಲಿ ಜಸ್ಟೀನಿಯನ್ ಚಕ್ರವರ್ತಿಯು ಕಟ್ಟಿಸಿದ ಸಂತ ಸೋಫಿಯಾ ಮಂದಿರವು ಅತ್ಯುತ್ತಮವಾಗಿದ್ದು ವಿಸ್ತಾರವುಳ್ಳದ್ದೂ ಆಗಿದೆ. ಬೈಝುಂಟಾಯಿನರು ತಮ್ಮ ಕಟ್ಟಡಗಳನ್ನು ಶ್ರೀಮಂತ ಅಲಂಕಾರಗಳಿಂದ ತುಂಬಿರುತ್ತಿದ್ದರು. ಚರ್ಚುಗಳ ಒಳಭಾಗಗಳು ಯಥೇಚ್ಛವಾಗಿ ಅಲಂಕರಿಸಲ್ಪಡುತ್ತಿದ್ದು ಗೋಡೆಯ ಕೆಳಭಾಗವನ್ನು ಅಮೃತಶಿಲೆಯಿಂದಲೂ ಮೇಲ್ಭಾಗವನ್ನು ಮೊಸಾಯಿಕ್ ಮತ್ತು ವರ್ಣಚಿತ್ರಗಳಿಂದಲೂ ಅಲಂಕರಿಸುತ್ತಿದ್ದರು. ಈ ಕಲಾವಿದರು ಕೇವಲ ತಮ್ಮ ಪ್ರಚಾರಕ್ಕಾಗಿ ಕೆಲಸಮಾಡದೇ ದೇವರ ವೈಭವಕ್ಕಾಗಿ ಕೆಲಸಮಾಡುತ್ತಿದ್ದ ಯತಿಗಳಾಗಿದ್ದರು. ಅತ್ಯುತ್ತಮವಾದ ಬೈಝುಂಟಾಯಿನ್ ವರ್ಣಚಿತ್ರಗಳನ್ನು ಅಲಂಕೃತ ಹಸ್ತಪ್ರತಿಗಳಲ್ಲಿಯೂ ಕಾಣಬಹುದು. ಈ ಹಸ್ತಪ್ರತಿಗಳಲ್ಲಿನ ವರ್ಣಚಿತ್ರಗಳನ್ನೂ ಸಹ ಭಿತ್ತಿಚಿತ್ರಗಳನ್ನು ರಚಿಸಿದ ಕಲಾವಿದರೇ ರಚಿಸಿದ್ದಾರೆ. ಒಟ್ಟಿನಲ್ಲಿ

ಬೈಝಂಟಾಯಿನರ ಜೀವನ ಮಟ್ಟವನ್ನೂ ಸಂಸ್ಕೃತಿಯನ್ನೂ ಈ ಕಲಾಕೃತಿಗಳೇ ಉಚ್ಛ್ರಾಯ ಸ್ಥಿತಿಗೆ ತಂದವೆಂದು ಹೇಳಬಹುದು.

ಎ.ಟ.ಶಾ.

## ಬೋನ್ ಚೈನಾ

"ಬೋನ್ ಚೈನಾ" ಎಂಬುದು ಎಲುಬಿನ ಬೂದಿ, ಚೈನಾಮಣ್ಣು ಮತ್ತು ಚೈನಾ ಕಲ್ಲುಗಳಿಂದ ಸಿದ್ಧಪಡಿಸಲಾಗುವ ಚೀನಿ ಪಿಂಗಾಣಿಗಳ ಅನುಕರಣವಾಗಿದೆ. ಈ ವಿಧಾನದಲ್ಲಿ ತಯಾರಿಸುವ ಪಿಂಗಾಣಿಗಳನ್ನು ಹೆಚ್ಚಿನ ಉಷ್ಣಾಂಶದಲ್ಲಿ ಸುಟ್ಟು ಕಡಿಮೆ ಉಷ್ಣಾಂಶದಲ್ಲಿ ಹೊಳಪು ಕೊಡಲಾಗುತ್ತದೆ. ಈ ತಂತ್ರವನ್ನು ೧೮ನೆಯ ಶತಮಾನದ ಕೊನೆಯಲ್ಲಿ ಜೋಶಿಯಾ ಸ್ಪೋಡ್ ಎಂಬುವವನು ಬೆಳೆಸಿದನು.

ಮ್ಯಹೊ.

## ಭಾವಚಿತ್ರ (Portrait)

ಫೋಟೋಗ್ರಫಿಯ ಅನ್ವೇಷಣೆಯ ಮೊದಲಿಗೆ ಭಾವಚಿತ್ರಗಳು ಹೆಚ್ಚು ರೂಢಿಯಲ್ಲಿದ್ದವು. ರಾಜಮಹಾರಾಜರ, ಸೈನ್ಯಾಧಿಕಾರಿಗಳ, ರಾಣಿ, ಅಧಿಕಾರಿಗಳು ಮುಂತಾದ ಸಮಾಜದ ಉನ್ನತವರ್ಗದವರು ಮಾತ್ರ ಹಣ ತೆತ್ತು ತಮ್ಮ ಭಾವಚಿತ್ರವನ್ನು, ಕಲಾವಿದನಿಂದ ಬರೆಸಿಕೊಳ್ಳುತ್ತಿದ್ದರು. ರೆನಾಯಸಾನ್ಸ್ ಕಾಲದಿಂದ ಯೂರೋಪ್ ಹಾಗೂ ಅಮೇರಿಕೆಯ



ರೆಂಬ್ರಾಂಟ್



ಎಂ. ವೀರಪ್ಪ

ದೇಶಗಳಲ್ಲಿ ಈ ಪ್ರಕಾರ (Genre) ರೂಢಿಗೆ ಬಂದಿತು ಭಾವಚಿತ್ರದಲ್ಲಿ ವ್ಯಕ್ತಿಯು(Model) ತದ್ರೂಪ ಮೂಡುವಂತೆ ಸಹಾಯಕವಾದುದು. ರೆನಾಯಸಾನ್ಸ್ ಕಾಲದಲ್ಲೇ ಬಳಕೆಗೆ ಬಂದುದು ತೈಲಮಾಧ್ಯಮ.

ಕಲಾವಿದನು ಇತರರ ಭಾವಚಿತ್ರಗಳನ್ನು ಸಾಮಾನ್ಯವಾಗಿ ಹೆಚ್ಚು ತಾಂತ್ರಿಕ ಪರಿಣತಿಯಿಂದ ಚಿತ್ರಿಸಿದ ಆತನ Brush Strokes ಸಾಮಾನ್ಯವಾಗಿ ಒಂದಕ್ಕೊಂದು Merge ಆಗಿರುತ್ತಿತ್ತು. ಪೋಪರ(Pope), ಮೊನಾಲಿಸಾಳ ಹಾಗೂ ನೆಪೋಲಿಯನ್ನನ ಭಾವಚಿತ್ರಗಳು ಇದಕ್ಕೆ ಉದಾಹರಣೆ ಕ್ರಮೇಣ ಕಲಾವಿದ ತನ್ನ ಚಿತ್ರಗಳನ್ನೇ (Self Portraits) ರಚಿಸಿಕೊಂಡರು ರಂಬ್ರಾಂಟ್, ವೆಲಾಸ್ಕ (Velazquez) ವ್ಯಾನ್‌ಗೋನ್, ಗೊಗಾನ್, ಬೆಕ್ ಮನ್, ಡ್ಯೂರರ್ ಇವರೇ ಪ್ರಸಿದ್ಧ ಸ್ವ-ಭಾವಚಿತ್ರ ಕಲಾವಿದರು.

ಕಲಾವಿದರು ತಮ್ಮ ನೆಂಟರಿಷ್ಟರನ್ನು ಅನೇಕ ಬಾರಿ ಚಿತ್ರಿಸಿದ್ದುಂಟು. ಇಂಪ್ರೆಷಿಯನಿಸಂ ಕಾಲದಲ್ಲಿ, ಹಿಂದೆಂದೂ ಆಗಿರದಷ್ಟು ವಿಪುಲವಾಗಿ ಸ್ನೇಹಿತರ, ಸಹಕಲಾವಿದರ/ಕಲಾವಿದೆಯರ, ಸ್ನೇಹಿತರ ಪತ್ನಿ-ಮಕ್ಕಳ ಭಾವಚಿತ್ರಗಳು ಮೂಡಿಬಂದವು. ಡೆಗಾಸನು(Degas) ತನ್ನ ಅಕ್ಕ-ಭಾವ, ಅವರ ಮಕ್ಕಳ ಚಿತ್ರ ರಚಿಸಿದರೆ, ಮಾನೆ(Monet) ತನ್ನ ಸಾಹಿತಿ-ಸ್ನೇಹಿತ ಎಮಿಲಿ ಜೋಲನ ಭಾವಚಿತ್ರ ರಚಿಸಿದ.

೧೯ನೇ ಶತಮಾನದ ನಂತರ ಮೂಡಿದ ಭಾವಚಿತ್ರಗಳು ಯಾವ ವ್ಯಕ್ತಿಯ ಚಿತ್ರವದು ಎಂದಷ್ಟೇ ಹೇಳದೆ, ಚಿತ್ರಣದ ಶೈಲಿಯಲ್ಲಿಯೇ-ರೀತಿಯಲ್ಲಿಯೇ, ಯಾವ ಕಲಾವಿದನ ಶೈಲಿಯಿದು ಎಂದೂ ಸೂಚಿಸುತ್ತದೆ. ವ್ಯಾನ್‌ಗೂಗನ ಡಾ|| ಗೇಚಟ್(Gachet), ಮಿತ್ರ ಟಾಂಗ್ವೇ(Tanguey) ಆಸ್ಕರ್ ಕೊಕೋಶ್ಕನ(Kokkaschka)ನ ಕೆಲವು ಭಾವಚಿತ್ರಗಳು ಇದಕ್ಕೆ ಉತ್ತಮ ಉದಾಹರಣೆ.

ಆದರೆ ಒಮ್ಮೊಮ್ಮೆ ಭಾವಚಿತ್ರವು ಯಾವ ವ್ಯಕ್ತಿಯನ್ನು ಕುರಿತದ್ದು ಎಂದೂ ಹೇಳಲಾಗದು. ಆದರೆ ಕಲಾವಿದ ಯಾರು ಎಂದು ಕೂಡಲೇ ಹೇಳಿಬಿಡಬಹುದು. ಪಿಕಾಸೋನ 'ಕಾನ್‌ವೇಲರ್' ಭಾವಚಿತ್ರ(Kahnweiler) ಪಿಕಾಸೋನದೇ ಎಂದು ಚಿತ್ರಣ ರೀತಿಯಿಂದ ಹೇಳಿಬಿಡಬಹುದು. ಆದರೆ ಆ ಚಿತ್ರದಲ್ಲಿರುವ ವ್ಯಕ್ತಿಯ ಚಹರೆಯೇ ಅಸ್ಪಷ್ಟ ಆಕಾರ ಹೊಂದಿದೆ.

ಹೀಗೆ, ಭಾವಚಿತ್ರಪ್ರಕಾರಗಳು ಶೈಲಿಯುಕ್ತವಾಗಿ ಅತಿಭಿನ್ನವಾಗುತ್ತ ಸಾಗಲು- ಹಲವು ಕಾರಣಗಳಿವೆ. ಆದರೆ ಇವುಗಳಲ್ಲೆಲ್ಲಾ ಅತ್ಯಂತ ಮುಖ್ಯಕಾರಣವೆಂದರೆ : ಫೋಟೋಗ್ರಫಿಯ ಅನ್ವೇಷಣೆ. ಮೊದಲು ಹಣವಂತರು ಮಾತ್ರ ತಮ್ಮ ಚಿತ್ರಗಳನ್ನು ಬರೆಯಿಸಿಕೊಳ್ಳುತ್ತಿದ್ದರೆ, ಫೋಟೋಗ್ರಫಿ ಬಂದ ನಂತರ ಎಲ್ಲರೂ ತಮ್ಮ ಚಿತ್ರ ತೆಗೆಸಿಕೊಳ್ಳಬಲ್ಲಂತಾದರು. ಮತ್ತು ವೆಚ್ಚವೂ ಅತಿ ಕಡಿಮೆಯಾಗುತ್ತ ಹೋಯಿತು.

ಭಾರತದಲ್ಲಿ ಪಿ. ಸಿ. ಸನ್ಯಾಲ್, ರವೀಂದ್ರನಾಥ ಟಾಗೋರ್, ಕೆ. ಕೆ. ಹೆಬ್ಬಾರ್ ಮುಂತಾದ ಕೆಲವೇ ಮಂದಿ ಭಾವಚಿತ್ರ ರಚನಕಾರಿದ್ದಾರೆ. ಭಾವಚಿತ್ರ ರೆನಾಯಸಾನ್ಸ್ ಕಾಲದಲ್ಲಿ ಪ್ರಾರಂಭಗೊಂಡಾಗ Profile (ಪಕ್ಕಕ್ಕೆ ತಿರುಗಿಸಿದ ಮುಖ) ಭಾವಚಿತ್ರಗಳು, ಅದರಲ್ಲೂ ಹೆಂಗಸರ ಚಿತ್ರಗಳು ವಿಪುಲವಾಗಿದ್ದವು Simonetta Vespucci ಎಂಬಾಕೆಯ ಚಿತ್ರ

(ಕಲಾವಿದ Piero Di Cosimo) ಒಂದು ಉತ್ತಮ ಉದಾಹರಣೆ. ನಂತರ ಮುಂದೆ ನಮ್ಮನ್ನೇ ನೋಡುವ ಭಾವಚಿತ್ರಗಳು ರೂಡಿಗೆ ಬಂದವು (ರಾಫೆಲ್ಲನ 'Angello Doni' ಒಂದು ಉದಾಹರಣೆ) ಸ್ವಲ್ಪ ಪಕ್ಕಕ್ಕೆ ತಿರುಗಿದ ಭಾವಚಿತ್ರಗಳು ಇದ್ದವು. ಲಿಯನಾರ್ಡೋ ವಿಂಚಿಯ 'Young woman with an Ermine' ಒಂದು ಉದಾಹರಣೆ.

೧೫ನೇ ಶತಮಾನದಲ್ಲಿ ಮುಖವನ್ನು ಮಾತ್ರ ಭಾವಚಿತ್ರವೆಂದು ಚಿತ್ರಿಸಿದರೆ, ೧೬ನೇ ಶತಮಾನದಲ್ಲಿ ಇಡೀ ದೇಹವನ್ನು ಭಾವಚಿತ್ರವೆಂದು ಚಿತ್ರಿಸಿದರು. Bernhard Strigel (1460-1528) ಮೊದಲು ಹೀಗೆ ಚಿತ್ರಿಸಿದ ಕಲಾವಿದ).

ಎಚ್.ಎ.ಅ

## ಭಾರತೀಯ ಚಿತ್ರಕಲೆ

ಭಾರತೀಯ ಚಿತ್ರಕಲೆ ಅತ್ಯಂತ ಪುರಾತನವಾದುದು. ಭಾರತದಲ್ಲಿ ಅತೀ ಪುರಾತನ ಚಿತ್ರಗಳು ಮಧ್ಯ ಪ್ರದೇಶದ ರಾಮಘಡ ಬೆಟ್ಟದ ಯೋಗಿಪುರ ಹಾಗೂ ಮಧ್ಯಪ್ರದೇಶದ ಸಿಂಗನಪುರ, ಆಂಧ್ರಪ್ರದೇಶದ ಕರ್ನೂಲ್ ಕರ್ನಾಟಕದ ಮಾಸ್ಕಿಯಲ್ಲಿ ಚಿತ್ರಗಳಿವೆ. ಸುಮಾರು ಐದು ಸಾವಿರ ವರ್ಷಗಳ ಹಿಂದಿನ ಸಿಂಧೂ ಕಣಿವೆಯ ಸಂಸ್ಕೃತಿಯಲ್ಲೂ ಚಿತ್ರ ರಚನೆ ನಡೆದು, ನಂತರ ಕ್ರಿ.ಪೂ ೨ನೇ ಶತಮಾನದ ಅಜಂತ ಚಿತ್ರಗಳು ಮುಖ್ಯವಾದುದು. ಅಜಂತದ ಗವಿಯಲ್ಲಿರುವ ಚಿತ್ರಗಳಲ್ಲಿ ಸಾಮಾಜಿಕ ರಾಜಕೀಯ ಜನಜೀವನಕ್ಕೆ ಸಂಬಂಧಿಸಿದ ಚಿತ್ರಗಳು ಇದ್ದು, ಇಲ್ಲಿನ ಚಿತ್ರಗಳಿಗೆ ಬುದ್ಧನ ಜೀವನ, ಜಾತಕ ಕಥೆಗಳೇ ಪ್ರೇರಣೆ. ಇಲ್ಲಿ ಚಿತ್ರಗಳ ರಚನಾತಂತ್ರ ಕಲೆಯ ದೃಷ್ಟಿಯಿಂದ ಬಹಳ ಮುಖ್ಯವಾಗಿದ್ದು, ಈ ಚಿತ್ರಗಳು ಚಿತ್ರಕಲೆಯಲ್ಲಿ ಅಮೂಲ್ಯ ಕಾಣಿಕೆಗಳಾಗಿವೆ. ನಂತರ ಬಾಗ್‌ಗಳಲ್ಲೂ ಅಜಂತಾ ಶೈಲಿಯ ಚಿತ್ರಕಲೆಯನ್ನು ಕಾಣಬಹುದು. ನಂತರ ಗ್ರಂಥ ಅಲಂಕರಣ, ಚಿತ್ರ ಲೇಖನಗಳಲ್ಲಿ, ತಾಳೆಗರಿ ಗ್ರಂಥಗಳಲ್ಲಿ ಬಳಕೆಗೆ ಬಂದು, ಕಾಗದದ ಮೇಲೆ ಚಿತ್ರ ರಚನೆ ನಡೆಯಿತು. ೧೬ನೇ ಶತಮಾನದಲ್ಲಿ ಮೊಗಲ್ ಕಲೆ ಪ್ರಾರಂಭವಾಗಿ ಭಾರತದಲ್ಲಿ ಒಂದು ಹೊಸ ಚಿತ್ರ ರಚನಾ ಶೈಲಿ ಆಚರಣೆಗೆ ಬಂದಿತು. ಅಕ್ಬರ್, ಜಹಂಗೀರರಿಂದ ವಿಶೇಷ ಪ್ರೋತ್ಸಾಹ ಪಡೆದ ಈ ಶೈಲಿ ಔರಂಗಜೇಬನ ಕಾಲದಲ್ಲಿ ಉಪೇಕ್ಷೆಗೆ ಗುರಿಯಾಯಿತು. ಈ ಶೈಲಿಯ ಮೇಲೆ ಪರ್ಶಿಯದ ಕಲಾ ಪ್ರಭಾವವನ್ನು ಕಾಣಬಹುದು. ಭಾರತೀಯ ಕಲೆಯಲ್ಲಿ ಮೊಗಲ್ ಕಲೆಗೆ ಒಂದು ವಿಶಿಷ್ಟ ಸ್ಥಾನವಿದೆ. ಇದೇ ಸಂದರ್ಭದಲ್ಲಿ ರಜಪೂತ ಕಲೆ ಸ್ವತಂತ್ರವಾಗಿ ಬೆಳೆದು ರಾಗರಾಗಿಣಿ ಶೈಲಿ ಬೆಳೆದು ಸಂಗೀತ ಹಾಗೂ ಚಿತ್ರ - ಈ ಕಲೆಗಳ ಭಾವವೂ ಮೇಳವಿಸಿ ಸೃಷ್ಟಿಯಾದವು. ಚಿತ್ರಕಲೆಯಲ್ಲಿ ಸಂಗೀತದ ಭಾವ ಹೀಗೆ ಚಿತ್ರಿತವಾಗಿರುವುದು ಭಾರತದಲ್ಲಿ ಮಾತ್ರ ಹಾಗೂ ಇದು ಕಲೆಗೆ ಒಂದು ವಿಶೇಷ ಕೊಡುಗೆಯಾಗಿದೆ. ಭಾರತಕ್ಕೆ ಬ್ರಿಟೀಷರು ಬಂದ ಮೇಲೆ ಆಂಗ್ಲರ ಕಲಾ ಪದ್ಧತಿ ನಮ್ಮ ದೇಶದ ಕಲೆಯ ಮೇಲೂ ಪ್ರಭಾವ ಬೀರಿತು. ಬ್ರಿಟೀಶರು ಭಾರತಕ್ಕೆ ವ್ಯಾಪಾರಕ್ಕೆ ಬಂದರು. ಅವರ ಶಿಕ್ಷಣ ಪದ್ಧತಿ ಬಳಕೆಗೆ ಬಂದಿತು. ಅಲ್ಲಿನ ಚಿತ್ರ, ಪ್ರಕೃತಿ ಚಿತ್ರ, ಭಾವಚಿತ್ರ, ಸಂಯೋಜನ ಚಿತ್ರಗಳ ಪದ್ಧತಿ ನಮ್ಮಲ್ಲೂ ಬೆಳವಣಿಗೆಗೆ ಬಂದಿತು. ೧೯ನೇ ಶತಮಾನದಲ್ಲಿ ಚಿತ್ರಕಲೆಯ ಪುನರ್‌ಜೀವನ ಪಡೆದು ಎರಡನೇ ಮಹಾಯುದ್ಧದ ನಂತರ ವಿದೇಶಿ ಕಲಾವಿದರ ಸಂಪರ್ಕ ಬೆಳೆದು ಆಧುನಿಕ ಚಿತ್ರಕಲೆ



‘ತಂಜಾವೂರು’



‘ಅಜಂತ’



ಕ್ಷಿತೀಂದ್ರನಾಥ ಮಜುಂದಾರ್



ರವೀಂದ್ರನಾಥ ಠಾಗೂರ್

ಬೆಳೆಯಿತು. ಕಳೆದ ಶತಮಾನದ ಉತ್ತರಾರ್ಧ ಮತ್ತು ಈ ಶತಮಾನದಲ್ಲಿ ಪಾಶ್ಚಿಮಾತ್ಯ ರಾಷ್ಟ್ರದಲ್ಲಿ ಚಿತ್ರಕಲೆಯಲ್ಲಿ ಕ್ರಾಂತಿಕಾರಕ ರೀತಿಯಲ್ಲಿ ಆದ ಬದಲಾವಣೆಗಳು ನಮ್ಮ ಕಲಾವಿದರ ಮೇಲೂ ಪ್ರಭಾವ ಬೀರಿತು. ರವಿವರ್ಮನು ಪ್ರಥಮ ಭಾರಿಗೆ ತೈಲವರ್ಣಗಳನ್ನು ಚಿತ್ರಗಳಲ್ಲಿ ಬಳಸಿ ಭಾರತೀಯ ಕಥಾ ರೂಪವನ್ನು ಬ್ರಿಟಿಷ್ ಶೈಲಿಯಲ್ಲಿ ಚಿತ್ರಿಸಿದ. ಈ.ಬಿ.ಹ್ಯಾವೆಲ್‌ರವರು ಕಲ್ಕತ್ತಾ ಸ್ಕೂಲ್ ಆಫ್ ಆರ್ಟ್ಸ್ ಪ್ರಿನ್ಸಿಪಾಲ್‌ರಾಗಿದ್ದಾಗ, ಭಾರತೀಯ ಕಲಾವಿದರನ್ನು ಪ್ರೇರೇಪಿಸಿ ಪಾಶ್ಚಾತ್ಯ ಕಲೆಯ ಅಂಧ ಅಭಿಮಾನವನ್ನು ತಪ್ಪಿಸಲು ಭಾರತೀಯ ಚಿತ್ರಕಲೆಯ ಪರಂಪರೆಯ ಬಗ್ಗೆ ಅನೇಕ ಲೇಖನ ಬರೆದರು. ಚಿತ್ರಕಲೆಯ ಪುನರ್‌ಜೀವನಕ್ಕೆ ಶ್ರಮಿಸಿದವರಲ್ಲಿ ಹ್ಯಾವೆಲ್ ಮತ್ತು ಡಾ: ಆನಂದ್ ಕುಮಾರ್ ಸ್ವಾಮಿಯವರು ಬಹಳ ಮುಖ್ಯವಾದವರು. ಇವರ ಉದ್ದೇಶವನ್ನು ಪೂರ್ತಿ ಮಾಡಲು ಅವನೀಂದ್ರನಾಥ ಟಾಗೂರ್ ಮತ್ತು ಅವರ ಶಿಷ್ಯರು ಪ್ರಯತ್ನಿಸಿದರು. ಈ ಚಳುವಳಿಗೆ "ಬಂಗಾಳದ ಪುನರ್‌ಜೀವನ ಆಂದೋಳನ"ವೆಂದು ಹೆಸರು. ಇದೇ ವೇಳೆಯಲ್ಲಿ ಮುಂಬೈಯಲ್ಲಿ ಪಾಶ್ಚಾತ್ಯ ಶೈಲಿಯನ್ನು ಸ್ವಂತ ಮಾಡಿಕೊಳ್ಳುವುದು ಪ್ರಾರಂಭವಾಯಿತು. ಭಾರತದಲ್ಲಿ ಪರಂಪರವಾದ ಮತ್ತು ಪಾಶ್ಚಾತ್ಯ ಶೈಲಿಯ ಪ್ರಭಾವದ ಸಂಘರ್ಷಣೆ ನಡೆಯುತ್ತಲೇ ಇತ್ತು. ಪರಂಪರಾಗತ ಕಲಾ ರೂಪಕ್ಕೆ ಆಧುನಿಕ ರೀತಿಯಲ್ಲಿ ತಮ್ಮ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಲು ಕೆಲವು ಕಲಾವಿದರು ಪ್ರಯತ್ನಿಸಿ ತಮ್ಮ ವೈಯಕ್ತಿಕತೆಯನ್ನು ಬೆಳಸಿಕೊಂಡರು. ರವೀಂದ್ರನಾಥ ಟಾಗೂರ್, ಜೈಮಿನಿ ರಾಯ್, ಗಗೇಂದ್ರನಾಥ್ ಟಾಗೂರ್, ಅಮೃತಾ ಶೇರಿಗಿಲ್ ಇವರು ಭಾರತದ ಆಧುನಿಕ ಕಲೆಯ ಪ್ರವರ್ತಕರು ಎನಿಸಿದರು. ಮುಂಬೈಯಲ್ಲಿ ಪ್ರಗತಿಶೀಲ ಕಲಾವಿದರ ತಂಡ ಎಂಬ ಹೊಸ ತಂಡದಲ್ಲಿ ನ್ಯೂಟನ್ ಸೌಜ, ಎಸ್.ಎಚ್.ರಾಜ, ಕೆ.ಎಚ್.ಆರ್, ಎಂ.ಎಫ್.ಹುಸೇನ್, ಗಾಯಿತೊಂಡೆ ಮುಂತಾದವರು ಹೊಸ ಅಲೆಯ ಶೈಲಿಯಲ್ಲಿ ಕೃತಿ ರಚಿಸಿದರು. ಇದಲ್ಲದೆ ಹೆಬ್ಬಾರ್, ಸಾಥವೇಳಕರ್, ಚಾವಡ ಮುಂತಾದವರು ವೈಯಕ್ತಿಕವಾಗಿ ಆಧುನಿಕ ಕಲೆಯಲ್ಲಿ ಬೆಳೆದರು.

ಆರನೆಯ ದಶಕದಲ್ಲಿ ನವ್ಯತೆಯು ಬರೋಡ ಕಲಾಶಾಲೆಯತ್ತ ವಾಲಿತು. ಎನ್.ಎಸ್.ಬೇಂದ್ರೆ, ಶಂಖೊಚೌಧರಿ, ಕೆ.ಜಿ.ಸುಬ್ರಹ್ಮಣ್ಯನ್‌ರಂಥ ಶಿಕ್ಷಕರು ಅನೇಕ ಯುವ ಕಲಾವಿದರ ಮೇಲೆ ತಮ್ಮ ಪ್ರಭಾವವನ್ನು ಬೀರಿದರು. ಇಲ್ಲಿ ಶಿಕ್ಷಣ ಪಡೆದ ಅನೇಕ ಕಲಾವಿದರು ತಮ್ಮ ಸೃಜನಾತ್ಮಕ ಕೃತಿಗಳ ಮೂಲಕ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಸರು ಪಡೆದಿದ್ದಾರೆ. ಇದೇ ಸಮಯದಲ್ಲಿ ಬಂಗಾಳದಲ್ಲಿ ನವ್ಯ ಕಲಾ ಚಳುವಳಿ ಪ್ರಾರಂಭವಾಗಿ ಗೋಪಾಲ್ ಗೋಷ್ ಶ್ಯಾಮಲ್‌ದತ್ ರೈ, ಸುನೀಲ್ ದಾಸ್, ಬಿಕಾಸ್, ಭಟ್ಟಾಚಾರ್ಯ ಗಣೇಶ ಪೈನೆ ಮುಂತಾದ ಕಲಾವಿದರು ಸಮಕಾಲೀನ ಪೂರ್ವದ ಮತ್ತು ಸಮಕಾಲೀನ ಪಶ್ಚಿಮದ ಹಾಗೂ ಪ್ರಾಚೀನ ಮೂಲಗಳಿಂದ ಸ್ಫೂರ್ತಿಯನ್ನು ಪಡೆದು ಚಿತ್ರ ರಚಿಸಿದರು. ಶಾಂತಿನಿಕೇತನದ ಬಿನೋದ್ ಬಿಹಾರಿ ಮುಖರ್ಜಿ, ಶಿಕ್ಷಕರಾಗಿ, ಕಲಾವಿದರಾಗಿ ಬಹಳ ಪ್ರಮುಖರು ಎನಿಸಿದರು. ದೆಹಲಿಯಲ್ಲಿ ಬಿ.ಸಿ.ಸನ್ಯಾಲ್ ಕನ್ವರ್ ಕೃಷ್ಣ, ಬಿರೆನ್‌ದೇ ಸ್ವಾಮಿನಾಥನ್, ಕೃಷ್ಣನ್ ಖನ್ನಾ, ಶಾಂತಿದವೆ, ರಾಮ್‌ಕುಮಾರ್, ರಾಮಚಂದ್ರ, ಪರಮಜಿತ್ ಸಿಂಗ್ ಮುಂತಾದವರು ತಮ್ಮ ವೈಯಕ್ತಿಕ ಪ್ರತಿಭೆಯ ಮೂಲಕ ತಮ್ಮತನವನ್ನು ಉಳಿಸಿಕೊಂಡರು.

ದಕ್ಷಿಣ ಭಾರತದಲ್ಲಿ ಕೆ.ಸಿ.ಎಸ್. ಪಣಿಕರ್, ಧನಪಾಲ್, ಶ್ರೀನಿವಾಸಲು, ಎಸ್.ಜಿ.ವಾಸುದೇವ್ ರೆಡ್ಡಪ್ಪನಾಯಿಡು, ಲಕ್ಷ್ಮಣಗೌಡ, ಆದಿಮೂಲಂ ಸೂರ್ಯಪ್ರಕಾಶರ ಕೃತಿಯಲ್ಲಿ ಸಾಂಪ್ರದಾಯಿಕ

ಪರಂಪರೆಯಲ್ಲಿ ಹೊಸತನ ಹಾಗೂ ಕೆಲವು ಕಲಾವಿದರಲ್ಲಿ ಸೃಜನ ಶೀಲತೆಯ ನವೀನ ಕೃತಿಗಳು ಸೃಷ್ಟಿಯಾದವು. ಕಲೆಯ ಬಗ್ಗೆ ಪ್ರಪಂಚದಾದ್ಯಂತ ಹೆಚ್ಚಿನ ಪ್ರಕಟಣೆಗೆ ಅವಕಾಶ ಮತ್ತು ಕಲಾಪ್ರದರ್ಶನಗಳು ಕಾರಣವಾಗಿ ಇವರ ದೃಷ್ಟಿ ವಿಶಾಲವಾಗಿ, ಇದರಿಂದ ಆಗಿನ ಪರಿಸರವನ್ನು ವಿವೇಚಿಸಲು ಸಾಧ್ಯವಾಯಿತು. ಇದು ಅನೇಕ ಹೊಸ ಅನ್ವೇಷಣೆಗಳಿಗೆ ಮೂಲವಾಯಿತು. ಆತ್ಮ ಸಂಶೋಧನೆಯ ಮತ್ತು ತನ್ನತನವನ್ನು ಕಂಡುಕೊಳ್ಳುವ ಸಮಯವಾಯಿತು. ಅಲ್ಲದೆ ಅಮೂರ್ತ ಕಲೆಯಿಂದ ಸೃಷ್ಟಿ, ಆಕೃತಿಗೆ ಪುನರುಜೀವನ ನೀಡಿತು. ಇದು ಕಲೆಯ ಪ್ರಮುಖ ಪಾಶ್ಚಾತ್ಯ ಮಾದರಿಗಳ ನಿರ್ಗಮನಕ್ಕೂ ಕಾರಣವಾಯಿತು. ಭಾರತೀಯ ಸಾಂಪ್ರದಾಯಿಕ ಕಲೆಯಲ್ಲಿ ಕತೃತ್ವಕ್ಕೆ ಬೆಲೆ ಕೊಡಲಾಗಿದೆ. ಪಾಶ್ಚಾತೀಕರಣ ಮತ್ತು ಭಾರತೀಕರಣ ನಮ್ಮ ಕಲೆಯ ಎರಡು ಮುಖವಿದ್ದು ಕೃತಿಯಲ್ಲಿ ಹೊಸತನವನ್ನು ಕಾಣಬಹುದು.

ಪ್ರತಿಯೊಬ್ಬ ಕಲಾವಿದನು ತನ್ನದೇ ಆದ ಸ್ವಂತ ಪ್ರಪಂಚದ ಸೃಷ್ಟಿಯಲ್ಲಿ ಆಸಕ್ತನಾಗಿದ್ದು, ವೈಯಕ್ತಿಕ ಭಾವನೆಗಳನ್ನು ಎತ್ತಿಹಿಡಿಯುತ್ತಿದ್ದಾನೆ.

ಮರಿ

## ಭಾರತೀಯ ಶಿಲ್ಪಕಲೆ

ಇತಿಹಾಸ ಪೂರ್ವದಿಂದಲೂ ಭಾರತದ ಆದಿಮಾನವ ಮಣ್ಣಿನಲ್ಲಿ ಮೂರ್ತಿಗಳನ್ನು ಮಾಡುತ್ತಿದ್ದ ಕುರುಹುಗಳು ದೊರೆಯುತ್ತದೆ. ಕ್ರಿ.ಪೂ.೨೦೦೦ದ ಹರಪ್ಪ ಮಹೆಂಜಾದಾರೋ ಇತ್ಯಾದಿ ಕಡೆಗಳಲ್ಲಿ ದೊರೆತಿರುವ ಶಿಲ್ಪಗಳು ಆದಿಮ ಶೈಲಿಯಿಂದ ಬೇರೆಯಾಗಿ ಪರಿಪೂರ್ಣ ಶಿಲ್ಪಗಳಂತೆ ಕಂಡುಬರುತ್ತವೆ. ಕ್ರಿಸ್ತಶಕೆಯ ಆರಂಭದ ಆಸುಪಾಸಿನ ಶತಕಗಳಲ್ಲಿ ಬೌದ್ಧಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಆ ಧರ್ಮದ ಅನೇಕ ಸ್ತೂಪ, ಚೈತ್ಯ ಇತ್ಯಾದಿಗಳು ರಚನೆಯಾಗತೊಡಗಿದವು. ಇವುಗಳಲ್ಲೂ ಹಾಗೂ ಇದೇ ವೇಳೆಯಲ್ಲಿ ರಚಿತವಾದ ಗುಹಾಲಯಗಳಲ್ಲೂ ಹಲವಾರು ಶಿಲ್ಪಗಳೂ ಮೂಡಿಬಂದವು. ಮೊದಮೊದಲ ಬೌದ್ಧಸಂಬಂಧಿ ಶಿಲ್ಪಗಳು ಗ್ರೀಕ್ ಶಿಲ್ಪಗಳ ಪ್ರಭಾವ ಹೊಂದಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಅಲ್ಪ ಕಾಲಾವಧಿಯಲ್ಲೇ ಭಾರತೀಯ ಶಿಲ್ಪ ತನ್ನತನವನ್ನು ಕಂಡುಕೊಂಡಿತು. ದೇಶೀಯ ಉಡುಗೆ ತೊಡುಗೆಗಳು, ನಿಂತ, ಕುಳಿತ ಭಾವಭಂಗಿಗಳು, ಇಲ್ಲಿಯ ಸಾಮಾಜಿಕ ಜನಜೀವನ, ದೈನಂದಿನ ಬಳಕೆಯ ವಸ್ತುಗಳು ಶಿಲ್ಪಕಲೆಗೆ ಪೂರಕವಾಗಿ ಮೂಡಿಬಂದವು. ದೈಹಿಕ ಮುಖ ಲಕ್ಷಣಗಳು; ಮೈಕಟ್ಟುಗಳು ಭಾರತೀಯವೆಂಬಂತೆ ರೂಪುಗೊಂಡವು.

ಇದರೊಂದಿಗೇ ಬಂದ ದೈವಿಕ ಭಾವನೆಗಳು ಭಾರತೀಯ ಶಿಲ್ಪಕಲೆಗೆ ಬೇರೊಂದು ತಿರವು ನೀಡಿತು. ಅಸಂಖ್ಯಾತ ದೇವ-ದೇವಿಯರು ಶೈವ, ವೈದಿಕ ಇತ್ಯಾದಿ ಮತ-ಧರ್ಮಗಳೊಂದಿಗೆ ಹುಟ್ಟಿಕೊಂಡವು. ದೇವತೆಗಳ ನಿಲವು, ಆಭರಣ, ಅಲಂಕಾರಗಳು, ಆಯುಧ, ವಾಹನಗಳು ಇತ್ಯಾದಿಗಳಿಂದ ಕೂಡಿ ಶಿಲ್ಪ ಎಂಬುದು ಕಲೆಯಿಂದ ಬೇರೆಯಾಗಿ ಪೂಜಾರ್ಹವೆನಿಸುವಂತಾಯಿತು. ಆದರೆ ಮುಖ್ಯ ದೇವರಿಗೆ ಆಲಯದ ರಚನೆಯಾಗುವಂತಾಗಿದ್ದು ಅದರಲ್ಲಿ ಪುರಾಣ, ಐತಿಹ್ಯದ ಕಥೆಗಳ ಶಿಲ್ಪಗಳು ಸೇರ್ಪಡೆಯಾಗಿದ್ದು ಶಿಲ್ಪಿಯ ಕ್ರಿಯಾಶೀಲತೆ ಹೊರಹೊಮ್ಮುವಂತಾಯಿತು. ಇರುವ ಸ್ಥಳಗಳನ್ನು ಬಳಸಿಕೊಂಡು ಪಟ್ಟಿಕೆಯ ರೂಪದಲ್ಲಿ ಕಥಾನಿರೂಪಣೆ, ಪ್ರಾಣಿ ಪಕ್ಷಿಗಳ ಸಾಲುಗಳು, ಹೂ ಬಳ್ಳಿಗಳ ರಚನೆ ಇತ್ಯಾದಿಗಳು ವಾಸ್ತುಶಿಲ್ಪದ ಸೌಂದರ್ಯವನ್ನು



ಖಜುರಾಹೋ



ಯೋಗಾನರಸಿಂಹ - ಹಂಪಿ



ಶಿವ - ಖಜುರಾಹೋ



ಬುದ್ಧ - ಗಾಂಧಾರ



ನಟರಾಜ - ಬಾದಾಮಿ

ಹೆಚ್ಚಿಸುವಂತಾಯಿತು. ನಗ್ನ ಹಾಗೂ ಮಿಥುನ ಶಿಲ್ಪಗಳ ಸೇರ್ಪಡೆಯಾಗಿದ್ದು ಎಲ್ಲ ಮನೋಭಾವದ ಜನರಿಗೂ ಆಕರ್ಷಣೆಯಾಯಿತು.

ಉತ್ತರ ಭಾರತದಲ್ಲಿ ಮೌರ್ಯರು, ಶೃಂಗರು, ಕುಶಾನರು, ಗುಪ್ತರು, ವಾಕಾಟಕ, ಪಾಲ, ಸೇನ, ಒರಿಸ್ಸಾದ ಗಂಗರು, ವೆಂಗಿಯ ಚಾಳುಕ್ಯರು, ಚಾಂದೇಲರು ಮುಂತಾದ ಅನೇಕ ಅರಸುಮನೆತನಗಳು ಶಿಲ್ಪಕಲೆಗೆ ತಮ್ಮ ಕಾಣಿಕೆಯನ್ನು ನೀಡಿವೆ. ದಕ್ಷಿಣ ಭಾರತದಲ್ಲಿ ಶಾತವಾಹನರು, ಬಾದಾಮಿ ಹಾಗೂ ಕಲ್ಯಾಣಿ ಚಾಳುಕ್ಯರು, ರಾಷ್ಟ್ರಕೂಟರು ಹೊಯ್ಸಳ ವಿಜಯನಗರದವರು, ತಮಿಳುನಾಡಿನಲ್ಲಿ ಪಲ್ಲವ ಚೋಳ, ಚೇರ ಪಾಂಡ್ಯರು, ಕರಾವಳಿಯಲ್ಲಿ ಕದಂಬ, ಆಳುಪರು ಮುಂತಾದ ಪ್ರಮುಖ ರಾಜಮನೆತನಗಳಲ್ಲದೆ ಹಿರಿಯ ಕಿರಿಯ ಪಾಳೆಯಗಾರರು, ಸಾಮಂತರುಗಳು ಸಹ ಕಾಲಕಾಲಕ್ಕೆ ಶಿಲ್ಪ ವಾಸ್ತು ಶಿಲ್ಪಗಳಿಗೆ ಪ್ರೋತ್ಸಾಹ ನೀಡಿದ್ದು ಕ್ರಿಶಕದ ಆರಂಭದಿಂದ ಈವರೆಗೆ ಭಾರತಾದ್ಯಂತ ಕೋಟ್ಯಾಂತರ ಶಿಲ್ಪಗಳನ್ನು ಕಲ್ಲು, ಮರ, ಲೋಹಗಳಲ್ಲಿ ರೂಪಿತಗೊಂಡವುಗಳನ್ನು ಇಂದಿಗೂ ಕಾಣಬಹುದಾಗಿದೆ.

**ಸುಮ**

## ಭಾವನೆಗಳು

ವೀಕ್ಷಕ ಚಿತ್ರವನ್ನು ಪರಿಗ್ರಹಿಸುವಾಗ ವಿಚಕ್ಷಣೆಯ ಹಲವಾರು ಮಜಲುಗಳನ್ನು ದಾಟುತ್ತಾನೆ. ಇದರಲ್ಲಿ ಭಾವನೆಯೂ ಒಂದು. ಎಷ್ಟೋ ಚಿತ್ರಗಳು ಭಾವನಾತ್ಮಕವಾಗಿ ವೀಕ್ಷಕನನ್ನು ತಟ್ಟುತ್ತವೆ. ಅದರಲ್ಲೂ ಛಾಯಾ-ಪತ್ರಕಾರರ ಚಿತ್ರಗಳು ಮನ ಮಿಡಿಯುವಂತಿರುತ್ತವೆ. ರಾಬರ್ಟ ಕಾಪಾನ ಯುದ್ಧದ ಸಮಯದ ಸಾವಿನಂಚಿನಲ್ಲಿ ಬಳಲುತ್ತಿರುವ ಯೋಧನ ಚಿತ್ರ, ಸಾಲ್ವಾಗಾಡೋನ ಸೋಮಾಲಿಯಾದ ನರಮೇಧದ ಚಿತ್ರಗಳನ್ನು ಇಲ್ಲಿ ನೆನೆಸಿಕೊಳ್ಳಬಹುದು. ಅತ್ಯಂತ ಉತ್ತಮ ಉದಾಹರಣೆಗಾಗಿ ನಾವು ಯೂಜೀನ್ ಸ್ಮಿತ್‌ನ 'ಸ್ನಾನದ ತೊಟ್ಟಿಯಲ್ಲಿ ಟೊಮ್ಯಾಕೋ' ಎಂಬ ಛಾಯಾಚಿತ್ರವನ್ನು ಗಮನಿಸೋಣ. ಔದ್ಯೋಗಿಕ ಅಪಘಾತವೊಂದರಿಂದಾಗಿ ಪಾದರಸದ ವಿಷಪ್ರಾಶನಗೊಂಡ ದುರ್ದೈವಿ ಟೊಮ್ಯಾಕೋ. ವಿಕೃತಗೊಂಡ ಅವಳ ದೇಹವನ್ನೂ ಕಕ್ಕುಲತೆಯಿಂದ ಆರ್ದ್ರವಾಗಿ ನೋಡುತ್ತಿರುವ ವಾತ್ಸಲ್ಯಮಯೀ ತಾಯಿ. ಈ ಚಿತ್ರವನ್ನು ಮೈಖೇಲೆಂಜೆಲೋನ ಪಯೆಟಾ ಚಿತ್ರವನ್ನು ಹೋಲಿಸಲು ಪ್ರೇರೇಪಿಸುತ್ತದೆ. ಮಧ್ಯಯುಗದಲ್ಲಿ ಕಟ್ಟಲ್ಪಟ್ಟ ಹಲವು ಕ್ಯಾಥೆಡ್ರಲ್‌ಗಳಲ್ಲಿ ಲೌಕಿಕ ಬದುಕಿನ ವ್ಯಾಮೋಹ ಕಳೆದು ಆಧ್ಯಾತ್ಮಿಕತೆಯತ್ತ ಜನಸಾಮಾನ್ಯರನ್ನು ಸೆಳೆಯಲು ಶಕ್ತವಾಗುವಂತೆ ವಿನ್ಯಾಸ ರಚಿಸಲಾಗಿತ್ತು. ಅತಿ ಎತ್ತರವಾಗಿ ಕಟ್ಟಲ್ಪಟ್ಟ ಆ ಕಟ್ಟಡಗಳು ಮನುಷ್ಯ ಭಾವನಾತ್ಮಕವಾಗಿ ಕುಬ್ಜನಾಗುವಂತೆ ಮಾಡಿ ಅವನ ಭಾವನೆಗಳನ್ನು ಮೃದುಗೊಳಿಸುತ್ತಿದ್ದವು.

ಹಾಸ್ಯ ಭಾವವಂತೂ ವೀಕ್ಷಕರನ್ನು ಚೆನ್ನಾಗಿ ತುಡಿಯುವಂತೆ ಮಾಡುತ್ತವೆ. ಓಪನ್‌ಹೀಂಳ 'Object' ಅನ್ನು ಉದಾಹರಣೆಗೆ ತೆಗೆದುಕೊಳ್ಳೋಣ. ಈ ಚಿತ್ರ ನಮಗೆ ತುಪ್ಪಳದ ಬಗೆಗಾಗಲೀ ಅಥವಾ ಲೋಟದ ಬಗೆಗಾಗಲೀ ಇರುವ ಯಾವತ್ತೂ ಕಲ್ಪನೆಯನ್ನೇ ಬುಡಮೇಲು ಮಾಡುತ್ತದೆ.

**ರಜಾ**

## ಭಿತ್ತಿ

ಅಧಿಷ್ಠಾನದ ಮೇಲೆ ಪ್ರಸ್ತರದ ಕೆಳಗೆ ಇರುವ ಒಟ್ಟು ಭಾಗಕ್ಕೆ 'ಭಿತ್ತಿ' 'ಕುಡ್ಯ' ಅಥವಾ 'ಸ್ತಂಭವರ್ಗ' ಎಂದು ಕರೆಯುತ್ತಾರೆ. ಪ್ರಾಚೀನ ಕಾಲದ ಸರಳ ದೇವಾಲಯಗಳಿಗೆ ಭಿತ್ತಿ ಅಥವಾ ಗೋಡೆಯನ್ನು ಕಟ್ಟುತ್ತಿರಲಿಲ್ಲ. ನಂತರದ ಕಾಲದಲ್ಲಿ ಗರ್ಭಗೃಹದ ಸುತ್ತಲು ಗಾಳಿಬೆಳಕುಗಳಿಗೆ ಪ್ರವೇಶವಿಲ್ಲದಂತೆ ಭಿತ್ತಿಯನ್ನು ರಚಿಸಲು ಆರಂಭಿಸಲಾಯಿತು. ಇದು ದೇವಾಲಯದ ಎಂಟನೇ ಎರಡರಷ್ಟು ಎತ್ತರವುಳ್ಳದ್ದಾಗಿರುತ್ತದೆ. ಭಿತ್ತಿಯ ಒಳಭಾಗದಲ್ಲಿ ವಿಶೇಷವಾದ ಅಲಂಕಾರ ಇರುವುದಿಲ್ಲ. ಆದರೆ ಹೊರಮುಖದಲ್ಲಿ ಅಲಂಕರಣಗಳನ್ನು ಕಾಣುತ್ತೇವೆ. ಈ ಅಲಂಕರಣಗಳನ್ನು ವೇದಿಕಾ ಕುಡ್ಯಸ್ತಂಭ, ಪಂಜರ, ಕೋಷ್ಟ ಮತ್ತು ಜಾಲಗಳೆಂದು ಗುರುತಿಸಲಾಗಿದೆ.

ವೇದಿ ಅಥವಾ ವೇದಿಕಾವು ಅಧಿಷ್ಠಾನದ ಮೇಲೆ ಭಿತ್ತಿಯ ಭಾಗವಾಗಿ ಬರುತ್ತದೆ. ಇದು ಸಾಮಾನ್ಯವಾಗಿ ಗಳ-ಕಂಪಗಳ ಅಲಂಕರಣಗಳಿಂದ ಕೂಡಿರುತ್ತದೆ. ಕೆಲವು ವೇಳೆ ಗಳಪಾದವು ಸಣ್ಣ ಸಣ್ಣ ಶಿಲ್ಪಗಳನ್ನೊಳಗೊಂಡಿರುವುದುಂಟು. ಆದರೆ ಈ ಭಾಗವು ಭಿತ್ತಿಯ ಕಡ್ಡಾಯವಾದ ಅಂಗವಲ್ಲ.

ಕುಡ್ಯಸ್ತಂಭಗಳೆಂಬುವು ನಿಯೋಜಿತ ಅಂತರದಲ್ಲಿ ಗೋಡೆಯ ಮಧ್ಯೆ ಮಧ್ಯೆ ಬಿಡಿಸಿರುವ ಅರೆಗಂಬಗಳಾಗಿವೆ. ಸಾಲಾಗಿರುವ ಕುಡ್ಯಸ್ತಂಭಗಳ ನಡುವಿನ ಭಾಗವನ್ನು 'ಸಲೀಲಾಂತ' ಎನ್ನುತ್ತಾರೆ. ಈ ಭಾಗ 'ಕುಂಭಪಂಜರ', 'ಕೋಷ್ಠ'ಗಳಿಂದ ಅಲಂಕೃತಗೊಂಡಿರುತ್ತದೆ. ಕೆಳ ಭಾಗದಲ್ಲಿ ಎಲೆಬಳ್ಳಿಗಳಿಂದ ಕೂಡಿರುವ ಕುಂಭವನ್ನು ಮೇಲ್ಭಾಗದಲ್ಲಿ ಪಂಜರವನ್ನು ಹೊಂದಿರುವ ಕುಡ್ಯಸ್ತಂಭವನ್ನು ಕುಂಭಪಂಜರ ಎನ್ನುವರು. ಕೋಷ್ಠವೆಂಬುದು ಹೊರಗೋಡೆಯಲ್ಲಿರುವ ಗೂಡು. ಇವು ಕುಡ್ಯಸ್ತಂಭಗಳಿಂದ ಅಲಂಕೃತಗೊಂಡ ಗೂಡುಗಳಾಗಿರಬಹುದು, ಇಲ್ಲವೆ ದೇವತಾ ಮೂರ್ತಿಗಳನ್ನು ಪ್ರತಿಷ್ಠಾಪಿಸಲು ಮಾಡಿದ ಗೂಡುಗಳಾಗಿರಬಹುದು. ಗರ್ಭಗೃಹ ಮತ್ತು ಅರ್ಧಮಂಟಪಗಳ ಹೊರಗೋಡೆಗಳಲ್ಲಿ ಇರುವ ಇಂತಹ ಗೂಡುಗಳನ್ನು ದೇವಕೋಷ್ಠ ಎನ್ನುತ್ತಾರೆ. ಇವು ಪುಟ್ಟ ಪುಟ್ಟ ಕಂಬ, ತೋರಣ, ಶಿಖರಗಳಿಂದ ಅಲಂಕೃತಗೊಂಡು ಗೋಡೆಯಲ್ಲಿರುವ ಗರ್ಭಗೃಹದಂತೆ ತೋರುತ್ತವೆ. ಶಿಖರದಲ್ಲಿ ಕಾಣುವ ಎಲ್ಲ ಅಂಗ-ಅಲಂಕಾರಗಳನ್ನೂ ಹೊಂದಿರುತ್ತವೆ. ಈ ಅಲಂಕರಣಗಳನ್ನು ಅನುಸರಿಸಿ 'ಶಾಲಾ' ಅಥವಾ 'ಕೂಟಾ' ಕೋಷ್ಠವೆಂದು ಇವನ್ನು ಕರೆಯಲಾಗುತ್ತದೆ.

ಗರ್ಭಗೃಹ ಹೊರತುಪಡಿಸಿ ಇತರ ಮಂಟಪಗಳ ಗೋಡೆಗಳಲ್ಲಿ ಗಾಳಿ ಬೆಳಕುಗಳಿಗಾಗಿ ಜಾಲಕಗಳನ್ನು ಅಳವಡಿಸಲಾಗುತ್ತದೆ. ಇವೇ ಜಾಲಂದರ ಕಿಟಕಿಗಳು. ಇವು ಕೆಲವು ಸಾರಿ ವಿಶೇಷವಾಗಿ ಅಲಂಕೃತಗೊಂಡಿರುವುದುಂಟು. ಅಂತೆಯೇ ಅವು ಆಲಯದ ಅಂದಕ್ಕೆ ಮೆರುಗು ನೀಡುತ್ತವೆ. ಇಂತಹ ಅನೇಕ ವಿಧದ ಜಾಲಂದರಗಳನ್ನು ಶಾಸ್ತ್ರಗ್ರಂಥಗಳು ವಿವರಿಸುತ್ತವೆ. ಋಜು, ಗವಾಕ್ಷ, ಕುಂಜರಾಕ್ಷ, ಗೋಮೂತ್ರ, ಗಣಿಕಾ, ಪತ್ರ, ನಂದ್ಯಾವರ್ತ, ಸ್ವಸ್ತಿಕ, ನಾಗಬಂಧ, ವಲ್ಲೀಬಂಧ, ಪುಷ್ಪಬಂಧ, ವಜ್ರಾಕೃತಿಗಳು ಮುಖ್ಯವಾದವು.

## ಭಿತ್ತಿಚಿತ್ರ(Fresco) ವಿಧಾನ

ಗೋಡೆಯ ಮೇಲೆ ಸುಣ್ಣವನ್ನು ಲೇಪಿಸಿ ಸುಣ್ಣವು ಇನ್ನೂ ಹಸಿಯಾಗಿರುವಾಗಲೇ ಚಿತ್ರವು ಪೂರ್ಣವಾಗಿ ಚಿತ್ರಿತವಾಗುವಂತೆ ಚಿತ್ರಿಸುವುದು ಫ್ರೆಸ್ಕೋ ಪದ್ಧತಿಯ ವೈಶಿಷ್ಟ್ಯವಾಗಿದೆ. ಸುಣ್ಣವು ಒಣಗಿದ ನಂತರ ಅದರೊಂದಿಗೆ ಚಿತ್ರವೂ ಗಟ್ಟಿಗೊಂಡು ಶಾಶ್ವತವಾಗಿ ಉಳಿಯುತ್ತದೆ. ಪುನರುತ್ಥಾನ ಕಾಲದಲ್ಲಿ ಗೋಡೆಗಳ ಮೇಲೆ ಚಿತ್ರಿಸಲ್ಪಟ್ಟ ಅನೇಕ ಫ್ರೆಸ್ಕೋ ಚಿತ್ರಗಳು ಉತ್ಕೃಷ್ಟ ಕಲಾಕೃತಿಗಳಾಗಿವೆ. ಗೋಡೆಗಳಿಗೆ ಬಣ್ಣವನ್ನು ಹಚ್ಚುವ ವಿಧಾನಗಳೂ ಅನೇಕ ವಿಧಗಳಾಗಿವೆ. ತೈಲವರ್ಣ ಮತ್ತು ಮೇಣ ವರ್ಣಗಳನ್ನೂ ಸಹ ಬಳಸಬಹುದೆಂಬುದಕ್ಕೆ ವೆನಿಸ್ ಮತ್ತಿತ್ತರ ಕಡೆಗಳಲ್ಲಿ ಕ್ಯಾನವಾಸಿನ ಮೇಲೆ ಚಿತ್ರಿಸಿ ನಂತರ ಗೋಡೆ ಇಲ್ಲವೆ ಒಳಮಾಳಿಗೆಯಲ್ಲಿ ಅಂಟಿಸಿರುವುದು ಕಂಡು ಬರುತ್ತದೆ. ಸುಣ್ಣವು ಹಸಿಯಾಗಿರುವಾಗಲೇ ಚಿತ್ರಣಕಾರ್ಯವು ಮುಗಿಯಲೇ ಬೇಕಾಗಿರುವುದರಿಂದ ಈ ಪದ್ಧತಿಯು ಸಹ ಬಹು ಕಠಿಣವಾಗಿದೆ. ಚಿತ್ರಣ ಕಾರ್ಯವು ಸಾಧ್ಯವಾಗುವ ಮಟ್ಟಿಗೆ ಗೋಡೆಯ ಭಾಗದ ಮೇಲೆ ಸುಣ್ಣವನ್ನು ಲೇಪಿಸಿ ಅದರ ಮೇಲೆ ವರ್ಣಚಿತ್ರಗಳನ್ನು ರಚಿಸಬೇಕಾಗುತ್ತದೆಯಲ್ಲದೇ ಸುಣ್ಣದ ಲೇಪವು ಹಸಿಯಾಗಿರಬೇಕಾದುದು ಅಗತ್ಯವಾಗಿದೆ. ಒಂದು ಬಾರಿ ಬಣ್ಣವನ್ನು ಬಳಿದ ನಂತರ ತಿದ್ದುಪಡಿ ಮಾಡಲು ಸಾಧ್ಯವಾಗಲಾರದು. ಅಲ್ಲದೆ ಬಣ್ಣವು ಒಣಗಿದ ಬಳಿಕ ಬಣ್ಣದ ರೂಪು ಬದಲಾವಣೆಗೊಳ್ಳುವದರಿಂದ ಸರಿಯಾದ ಬಣ್ಣವನ್ನು ತಯಾರಿಸಿಕೊಳ್ಳುವಲ್ಲಿ ಕಲಾವಿದನಿಗೆ ಅಸಾಮಾನ್ಯ ಜಾಣ್ಮೆ ಇರಬೇಕಾದುದು ಅತ್ಯವಶ್ಯವಾಗಿದೆ.

ನೇರವಾಗಿ ಗೋಡೆಯ ಮೇಲೆ ಚಿತ್ರದ ಬಾಹ್ಯರೇಖೆಗಳನ್ನು ಎಳೆಯಲು ಸಾಧ್ಯವಿಲ್ಲದಿರುವುದರಿಂದ ಇಟಾಲಿಯನ್ ಫ್ರೆಸ್ಕೋ ಕಲಾವಿದರು ಇಡೀ ಗೋಡೆಯ ಮೇಲೆ ಚಿತ್ರಿಸಲಿರುವ ಸಂಪೂರ್ಣ ಚಿತ್ರದ ಬಾಹ್ಯರೇಖೆಗಳನ್ನು ದೊಡ್ಡದಾದ (ಗೋಡೆಯನ್ನಾವರಿಸುವಷ್ಟು ಕಾಗದದ ಮೇಲೆ ಚಿತ್ರಿಸಿ ನಂತರ ಬಾಹ್ಯರೇಖೆಯಗುಂಟ ಪಿನ್ ಇಲ್ಲವೆ ಮೊನಚಾದ ಮೊಳೆಯಿಂದ ಸಣ್ಣ ಸಣ್ಣ ತೂತುಗಳನ್ನು ಮಾಡಿಕೊಂಡು ಇಲ್ಲವೇ ಗೆರೆಗಳನ್ನು ಎಳೆದುಕೊಂಡು ಕಾಗದವನ್ನು ಗೋಡೆಗೆ ಅಂಟಿಸಿ ಚಿತ್ರದ ಬಾಹ್ಯರೇಖೆಗಳನ್ನು ಹಸಿಸುಣ್ಣದ ಲೇಪದ ಮೇಲೆ ಮೂಡಿಸಿಕೊಂಡು ಚಿತ್ರಣ ಕಾರ್ಯವನ್ನು ಮುಂದುವರಿಸುತ್ತಿದ್ದರು. ಹೀಗೆ ಕಾಗದದ ಮೇಲೆ ಚಿತ್ರಿಸಿಕೊಳ್ಳುವುದಕ್ಕೆ ಕಾರ್ಟೂನ್(Cortone) ಎಂದು ಕರೆಯಲಾಗುತ್ತಿತ್ತು. ಸುಣ್ಣವು ಒಣಗಿದ ನಂತರ ಟೆಂಪೆರಾ ವಿಧಾನದಿಂದ ಚಿತ್ರಕ್ಕೆ ಮುಕ್ತಾಯ ಸ್ಪರ್ಶಗಳನ್ನು ಕೊಡುತ್ತಿದ್ದರು. ಆದರೆ ದೈತ್ಯ ಫ್ರೆಸ್ಕೋ ಕಲಾವಿದರು ಟೆಂಪೆರಾ ವಿಧಾನದಿಂದ ಚಿತ್ರವನ್ನು ಮುಕ್ತಾಯಗೊಳಿಸಿದಲ್ಲಿ ನೈಜ ಫ್ರೆಸ್ಕೋ ವಿಧಾನದಂತೆ ಚಿತ್ರವು ಶಾಶ್ವತವಾಗಲಾರದೆಂದು ಸಾಧ್ಯವಾದ ಮಟ್ಟಿಗೆ ಫ್ರೆಸ್ಕೋ ವಿಧಾನದಲ್ಲಿಯೇ ಚಿತ್ರಗಳಿಗೆ ಮುಕ್ತಾಯ ಸ್ಪರ್ಶಗಳನ್ನು ಕೊಡುತ್ತಿದ್ದರು. ಟೆಂಪೆರಾ ಮತ್ತು ಫ್ರೆಸ್ಕೋ ವಿಧಾನಗಳೆರಡರಲ್ಲಿಯೂ ಸರಿ ಮತ್ತು ತಪ್ಪುಗಳು ಸರಿಸಮಾನವಾಗಿವೆ. ಎರಡು ವಿಧಾನಗಳಲ್ಲಿಯೂ ತೆಳುವರ್ಣ ಛಾಯೆ, ದಟ್ಟ ಮಸುಕಿನ ಪರಿಣಾಮಗಳ ಚಿತ್ರಣ ಕಷ್ಟಸಾಧ್ಯವಾಗಿದೆ. ಫ್ಲೋರೆಂಟಾಯಿನ್ ಪಂಥವು ಟೆಂಪೆರಾ ವಿಧಾನದಲ್ಲಿ ಅತ್ಯದ್ಭುತವಾದ ಬೆಳವಣಿಗೆಯನ್ನು ತೋರಿಸಿದಂತೆ ಫ್ರೆಸ್ಕೋ ವಿಧಾನದಲ್ಲಿಯೂ ಅದ್ಭುತವಾದ ಸಾಧನೆಯನ್ನು ತೋರಿಸಿದೆ. ವೆನೀಷಿಯನ್ ಪಂಥವು ತೈಲವರ್ಣ ವಿಧಾನವನ್ನು ಧಾರಾಳವಾಗಿ ಬಳಸಿದಂತೆ ಟೆಂಪೆರಾ ಇಲ್ಲವೆ ಫ್ರೆಸ್ಕೋ ಪದ್ಧತಿಗಳನ್ನು ಬಳಸಲು ಉತ್ಸುಕವಾಗಿರಲಿಲ್ಲ. ಉತ್ತರ ಯುರೋಪಿನಂಥ

ತಂಪು ಮತ್ತು ಆರ್ದ್ರ ವಾತಾವರಣವಿರುವ ದೇಶಗಳಲ್ಲಿ ಫ್ರೆಸ್ಕೋ ಪದ್ಧತಿಯನ್ನು ಹೆಚ್ಚಾಗಿ ಬಳಸಲಿಲ್ಲ. ೧೫ ಮತ್ತು ೧೬ನೇ ಶತಮಾನಗಳಲ್ಲಿ ಟೆಂಪೆರಾ ಮತ್ತು ಫ್ರೆಸ್ಕೋ ವಿಧಾನಗಳು ಇಟಾಲಿಯಲ್ಲಿ ಪರಿಶುದ್ಧ ರೂಪಕ್ಕೆ ತಲುಪಿದ್ದವು. ಅದರಲ್ಲೂ ಫ್ಲೋರೆಂಟಾಯಿನ್ ವರ್ಣಚಿತ್ರಕಲಾಕೃತಿಗಳು ಈ ವಿಧಾನಗಳಲ್ಲಿ ಚಿತ್ರಿಸಿದ ಅಸಾಮಾನ್ಯ ಕಲಾಕೃತಿಗಳೆಂದು ಪರಿಗಣಿಸಲ್ಪಟ್ಟಿವೆ.

ಭಾರತದಲ್ಲಿ ಫ್ರೆಸ್ಕೋ ವಿಧಾನವು ಕ್ರಿ. ಪೂ. ೧ನೆಯ ಶತಮಾನದಿಂದಲೂ ಬಳಕೆಯಲ್ಲಿತ್ತು ಎಂಬುದಕ್ಕೆ ಅಜಂತಾ, ಎಲ್ಲೋರಾ, ನಾಸಿಕ್, ಬಾಗ್, ಸಿಗೀರಿಯ ಮುಂತಾದ ಕಡೆಗಳಲ್ಲಿರುವ ಭಿತ್ತಿಚಿತ್ರಗಳು ಪ್ರತ್ಯಕ್ಷ ಉದಾಹರಣೆಗಳಾಗಿವೆ.

ಪಿ.ಟಿ.ಶಾ.

## ಭಿತ್ತಿ ಪತ್ರಗಳು (Poster)

ಸರ್ಕಾರದ ಸುತ್ತೋಲೆಗಳನ್ನು ಕಂಬಗಳ (Post) ಮೇಲ ಅಂಟಿಸುತ್ತಿದ್ದು ಅದರಿಂದ ಪೋಸ್ಟರ್ ಎಂಬ ಶಬ್ದ ಹುಟ್ಟಿಕೊಂಡಿದೆ. ಈ ಪದ್ಧತಿ ಕ್ರಿಸ್ತಶಕೆಯ ಆರಂಭದಲ್ಲಿ ಯೂರೋಪಿನಲ್ಲಿ ಇತ್ತು. ಮುದ್ರಿತ ಜಾಹಿರಾತು ರೂಪದ ಪೋಸ್ಟರ್ ೧೪೭೭ರಲ್ಲಿ ವಿಲಿಯಂ ಕಾಕ್‌ಸ್ಟನ್ ರೂಪಿಸಿದ. ಇದು ಜನಪ್ರಿಯವಾಗಿ ೧೬ನೇ ಶತಮಾನದಲ್ಲಿ ವ್ಯೆಯಕ್ತಿಕ ಜಾಹಿರಾತಿಗಾಗಿಯೂ ಬಳಕೆಯಾಗತೊಡಗಿತು. ಭಿತ್ತಿಪತ್ರಗಳು ಕಲಾತ್ಮಕವಾಗಿರುವಂತೆ ಮಾಡಲು ಕಲಾವಿದರನ್ನು ಬಳಸಿಕೊಂಡಿದ್ದು ಅನೇಕ ಪ್ರಸಿದ್ಧ ಕಲಾವಿದರೂ ಚಿತ್ರ ರಚಿಸಿ ಕೊಟ್ಟಿದ್ದಾರೆ. ಇದು ರಂಗಭೂಮಿಯ ನಾಟಕಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

ಕಲ್ಲಚ್ಚನ್ನು (ಲಿಥೊಗ್ರಫಿ) ಕಲಾಕೃತಿಗಳ ಮುದ್ರಣದಲ್ಲಿ ಬಳಸಿಕೊಳ್ಳುವ ವಿಚಾರ ೧೭೯೮ರಲ್ಲಿ ಆಸ್ಟ್ರಿಯಾದ ಅಲೋಸ್ ಸೆನೆಫಿಲ್ಡ್‌ನಿಂದ ಬಂದಿದ್ದು ಫ್ರಾನ್ಸ್‌ನಲ್ಲಿ ೧೮೫೮ರಲ್ಲಿ ಜೂಲಿ ಚೆರಟ್ ಪೋಸ್ಟರ್‌ಗಳ ಕಲಾತ್ಮಕ ಮುದ್ರಣಗಳಿಗೂ ಈ ಮಾಧ್ಯಮವನ್ನು ಯಶಸ್ವಿಯಾಗಿ ಬಳಸಿಕೊಂಡ ಮೊದಲಿಗ ಎಂದು ಪರಿಗಣಿಸಲಾಗಿದೆ. ಮುಂದೆ ಗವರಾಗಿ, ಡೌಮೀರ್ ಮುಂತಾದವರು ಕಲೆಯ ಅಂಶದೊಂದಿಗೆ ವಿಷಯಗಳನ್ನು ಸಂವಹನ ಮಾಡುವಂತೆ ಹಲವಾರು ಭಿತ್ತಿಚಿತ್ರ ರಚಿಸಿದರು.

ಕಲಾವಿದರು ಕಲಾಕೃತಿಗಳೆಂಬಂತೆ ಪೋಸ್ಟರ್‌ಗಳನ್ನು ರಚಿಸಿದ್ದು ಅವುಗಳ ಸಂಗ್ರಹ ಬಹಳ ಬೇಗ ಜನಪ್ರಿಯವಾಯಿತು. ಗ್ರಾಫಿಕ್ ಮುದ್ರಣಗಳಂತೆ ಪೋಸ್ಟರ್‌ಗಳನ್ನು ನಿಶ್ಚಿತ ಸಂಖ್ಯೆಯಲ್ಲಿ ಕಲಾವಿದರೇ ರಚಿಸಿ ಮುದ್ರಿಸುತ್ತಿದ್ದರಿಂದ ಕಲಾಕೃತಿಗಳೆಂಬಂತೆ ಸಂಗ್ರಹಿಸಿ ಇರಿಸಿಕೊಳ್ಳುತ್ತಿದ್ದರು. ಇಂತಹ ಸಂಗ್ರಹಗಳ ಮೊದಲ ಪ್ರದರ್ಶನ ೧೮೮೪ರಲ್ಲಿ ವಾಲೆಟ್ ಎಂಬಾತ ಸಂಘಟಿಸಿದ್ದ. ಇನ್ನೊಂದು ಪ್ರದರ್ಶನ ೧೮೮೯ರ ಪ್ಯಾರೀಸ್‌ನ ಅಂತರರಾಷ್ಟ್ರೀಯ ವಸ್ತು ಪ್ರದರ್ಶನದಲ್ಲೂ ನಡೆಯಿತು. ಮೈಸೂರಿನಲ್ಲಿಯೂ ೧೯೯೧ರಲ್ಲಿ ಬಿ.ವಿ.ಕಾರಂತರ ಸಂಗ್ರಹದಲ್ಲಿದ್ದ ನೂರಾರು ಪೋಸ್ಟರ್‌ಗಳ ಪ್ರದರ್ಶನ ಪ್ರಥಮ ಬಾರಿಗೆ ನಡೆಯಿತು.

ಪೋಸ್ಟರ್‌ಗಳನ್ನು ಮಹಾಯುದ್ಧದ ಅವಧಿಯಲ್ಲಿ ಮಾನಸಿಕ ಸ್ಥೈರ್ಯವಾಗಿ, ಯುದ್ಧಾನಂತರ ಅವುಗಳ ಭೀಕರ ಪರಿಣಾಮವನ್ನು ಚಿತ್ರಿಸಿ 'ಯುದ್ಧ ಬೇಡ' ವೆಂಬ ಕಳಕಳಿಯ ವಿನಂತಿಗಾಗಿ

ಬಳಸಿಕೊಳ್ಳಲಾಯಿತು. ರಷ್ಯಾದಲ್ಲಿ ತಮ್ಮ ಸಮಾಜವಾದವನ್ನು ಪ್ರತಿಬಿಂಬಿಸುವಂತೆ ಸಾವಿರಾರು ಸಂಖ್ಯೆಯಲ್ಲಿ ಭಿತ್ತಿ ಚಿತ್ರ ರಚನೆಯಾಯಿತು. ಇಂದು ಪ್ರವಾಸೋದ್ಯಮ ಮಾಹಿತಿಗಾಗಿ ರಂಗುರಂಗಿನ ಭಿತ್ತಿಪತ್ರಗಳು ಹೊರ ಬರುತ್ತಿವೆಯಾದರೂ ನಾಟಕ, ಸಿನಿಮಾಗಳ ಪೋಸ್ಟರ್‌ಗಳು ತಮ್ಮದೇ ಕಲಾತ್ಮಕತೆಯಿಂದ ರಚಿತಗೊಂಡು ಸಂಗ್ರಹ ಯೋಗ್ಯವೂ ಆಗಿದೆ.

ಆಲನ

## ಭುವನೇಶ್ವರ

ಒರಿಸ್ಸಾದಲ್ಲಿ ಪ್ರಾಚೀನವೆನಿಸಿದ ಪರಮೇಶ್ವರ ದೇವಾಲಯ ಕ್ರಿ.ಶ. ೮ನೆಯ ಶತಕದ್ದು. ಗೋಪುರದ ಪ್ರತಿಹಂತದಲ್ಲಿಯೂ ಸರಳವಾದ ಮುಂಚಾಚಿದ ಭಾಗಗಳಿದ್ದು, ಗೋಪುರಗಳ ಮೇಲೇರುತ್ತ ಒಳತಿರುವನ್ನು ಪಡೆಯುತ್ತದೆ. ಹಾಗೂ ಅದರ ನೆತ್ತಿಯಲ್ಲಿ ಅಮಲಕ ಕೂಡುತ್ತದೆ. ಗೋಪುರದ ತಲಭಾಗದಲ್ಲಿ ಅನೇಕ ವೃತ್ತಾಕಾರದ ಗೂಡುಗಳಿವೆ. ಇವುಗಳಲ್ಲಿ



ಶಿವ-ನಾಗರಾಜರ ಮೂರ್ತಿ ಇವೆ. ಅಂದವಾದ ಶಿಲ್ಪವುಳ್ಳ ಮುಂಚಾಚಿರುವ ಕಿಟಕಿಗಳು, ಅವುಗಳ ಶಿಲ್ಪಾಲಂಕರಣ ಗಮನಾರ್ಹವಾದದ್ದು.

ಅರ್ಧ ಉರುಳೆಯಾಕಾರದ, ನೆಲಮಾಳಿಗೆಯ ಕೋಣೆ, ಚಾವಣಿಯುಳ್ಳ ದೇವಾಲಯ ದಕ್ಷಿಣಾತ್ಯ ಶೈಲಿಯ ಗೋಪುರಗಳಿಗೆ ಸ್ವಲ್ಪಮಟ್ಟಿಗೆ ಹೋಲುತ್ತದೆ. ದೇವಾಲಯದಲ್ಲಿರುವ ಮುಂಚಾಚಿರುವ ಬೋದಿಗೆ, ಅಲ್ಲಿರಿಸಿರುವ ನಟರಾಜ ಮೂರ್ತಿಶಿಲ್ಪ, ಅಂದವಾಗಿದ್ದು, ಮಹಿಷಮರ್ದಿನಿ, ಕಿರುಮಾಡಗಳಲ್ಲಿರುವ ಪ್ರಣಯ ದಂಪತಿ ಶಿಲ್ಪ ಗಮನಾರ್ಹವಾದುದು.

**ಲಿಂಗರಾಜ ದೇವಸ್ಥಾನ**

ಅತ್ಯಂತ ವಿಸ್ತಾರವಾದ ಪ್ರಮುಖ ದೇವಾಲಯ ಕೋನಾರ್ಕ, ಪುರಿಯ ದೇವಾಲಯ ಸಾಲಿಗೆ ಸೇರುವಂತಹುದು. ಸುಮಾರು ಕ್ರಿ.ಶ. ೧೦೦೦ರಲ್ಲಿ ನಿರ್ಮಿಸಿದ್ದು ಸೋಮವಂಶದ ರಾಜನಾದ 'ಮಹಾಭವಗುಪ್ತ ಜನಮೇಜಯ' ನೆಂಬಾತನು ಈ ದೇವಾಲಯವನ್ನು ನಿರ್ಮಿಸಿದನೆಂದು ಹೇಳುತ್ತಾರೆ. ನಡುವಣ ಪ್ರಮುಖ ದೇವಾಲಯ, ಸುತ್ತ ಅನೇಕ ಕಿರುಮಂದಿರಗಳಿವೆ. ಕೇಂದ್ರ ಮಂದಿರ ಪಾಟಲವರ್ಣದ ಮರಳು ಶಿಲೆಯಲ್ಲಿ ನಿರ್ಮಾಣವಾಗಿದ್ದರೂ, ಅಲ್ಲಿ ಹಳದಿ ಹಸುರು ಮಿಶ್ರಬಣ್ಣದ ವಿಗ್ರಹಗಳು, ಗಣಪತಿ, ಪಾರ್ವತಿ, ಸ್ಕಂದರು, ದೊಡ್ಡ ಮಾಡಗಳಲ್ಲಿ ಇರಿಸಲಾಗಿದ್ದು, ಸುತ್ತ ಹೆಣಿಗೆಯಲಂಕರಣವಿದೆ. ಪಿರಮಿಡ್ಡಾಕೃತಿಯ ಚಾವಣಿ ಮೇಲೆ ಹೋಗುತ್ತ ಗಂಟೆಯಾಕಾರವನ್ನು ತಳೆದಿದೆ.

**ರಾಜರಾಣಿ ದೇವಾಲಯ**

ಭಾವನೆಗಳ ಕಾವ್ಯರೂಪ, ಎಲ್ಲದರಲ್ಲೂ ಪೂರಾ ಹೊರಗಿನವೆನಿಸುವ, ಈ ದೇವಾಲಯ ಒರಿಸ್ಸಾದ ಇತರ ಮಂದಿರಗಳಂತಿರದೆ, ಖಜುರಾಹೋ ದೇವಾಲಯದ ಸಾಲಿಗೆ ಸೇರುತ್ತದೆ. ಈ ದೇವಾಲಯ, ಇತರ ಗುಡಿಗಳಿಗಿಂತ ಭಿನ್ನವೆನಿಸಲು ಸಣ್ಣ ಸಣ್ಣ ಶಿಖರಗಳು ಕೇಂದ್ರ ಗೋಪುರದ ಸುತ್ತ ಗುಂಪಾಗಿವೆ, ಹಾಗೂ ವಿವಿಧ ಹಂತಗಳಲ್ಲಿ ಮೇಲೆರುತ್ತವೆ. ಈ ವಿಶಿಷ್ಟ ದೇವಾಲಯ ಕಟ್ಟಡವನ್ನು ನಕ್ಷತ್ರಾಕಾರದಲ್ಲಿ ಕಟ್ಟಬೇಕೆಂಬ ಉದ್ದೇಶವಿತ್ತೆಂದು ತೋರುತ್ತದೆ.

ಪ್ರವೇಶದ್ವಾರದ ಅಲಂಕರಣ, ಎರಡು ಕಂಬಸಾಲುಗಳು ಅದರ ಸುತ್ತ ಹೆಣೆದುಕೊಂಡಿರುವ ನಾಗರಾಜರ ವಿಸ್ಮಯ ಕೃತಿ, ಶಿಲ್ಪದಲಂಕರಣ, ಎಲ್ಲವೂ ಮೆರುಗು ನೀಡುವ ಆಕರಗಳಾಗುತ್ತವೆ.

**ನಿಕೃನಾ**

## ಭೀಂ ಬೇಟ್ಕಾ

ಭಾರತೀಯ ಚಿತ್ರಕಲೆಯ ಇತಿಹಾಸ ಪ್ರಾರಂಭವಾಗುವುದು ಮಧ್ಯಪ್ರದೇಶದ ವಿಂಧ್ಯಪರ್ವತದ ನದಿಯ ಕಣಿವೆಗಳಲ್ಲಿ ಹರಡಿರುವ ಇತಿಹಾಸಪೂರ್ವ ಗುಹೆ, ಶಿಲಾಶ್ರಯಗಳ ಚಿತ್ರಗಳಿಂದ. ಅಲ್ಲಿನ ನೂರಾರು ಶಿಲಾಶ್ರಯ ನಿವೇಶನಗಳಲ್ಲಿ ಭೀಂಬೇಟ್ಕಾ ಶಿಲಾಶ್ರಯ ನಿವೇಶನವೂ ಒಂದು. ಅದು ತನ್ನ ವೈವಿಧ್ಯಮಯ, ಆಕರ್ಷಕ ಚಿತ್ರಕಲೆಯಿಂದ ಪ್ರಾಮುಖ್ಯತೆಯನ್ನು ಗಳಿಸಿದೆ. ಭೀಂಬೇಟ್ಕಾ ಭೂಪಾಲ್‌ನಿಂದ ೪೦ ಕಿಲೋಮೀಟರ್ ದೂರದಲ್ಲಿ ದಕ್ಷಿಣಕ್ಕಿದೆ. ಬಹುತೇಕ ಹೊಸ ಶಿಲಾಯುಗದ ಕಾಲಕ್ಕೆ ಸೇರಿದ ೫೦೦ಕ್ಕೂ ಹೆಚ್ಚಿನ ಶಿಲಾಶ್ರಯಗಳಲ್ಲಿ ಅಲ್ಲಿಯೇ

ವಾಸಿಸುತ್ತಿದ್ದ ಮತ್ತು ಅಲ್ಲಿಂದ ಹೊರಗೂ ಜೀವಿಸುತ್ತಿದ್ದ ಜನರ ದಿನನಿತ್ಯದ ಬದುಕಿನ ಚಟುವಟಿಕೆ, ಚಿಂತನೆ, ಬೇಟೆ ಮತ್ತು ಸಂಗ್ರಹಣೆಗಳ ಚಿತ್ರಗಳಿವೆ.

ಮುಖ್ಯವಾಗಿ ಕೆಂಪು ಮತ್ತು ಬಿಳುಪು ಹಾಗೂ ಅಪರೂಪಕ್ಕೆ ಹಸಿರು- ಹಳದಿ ಬಣ್ಣಗಳನ್ನೂ ಇಲ್ಲಿನ ಚಿತ್ರಗಳು ದುಡಿಸಿಕೊಂಡಿವೆ. ಬೇಟೆಯ ಚಿತ್ರಗಳ ಜೊತೆಜೊತೆಗೆ ನೃತ್ಯ-ಸಂಗೀತ, ಪ್ರಾಣಿಗಳ ಕಾದಾಟ, ಜೇನು ಸಂಗ್ರಹಣೆ, ದೇಹಗಳನ್ನು ಅಲಂಕರಿಸುತ್ತಿರುವಿಕೆ. ಕುದುರೆ, ಆನೆ ಸವಾರರು ಇತ್ಯಾದಿಗಳನ್ನು ಹಲವಾರು ಪ್ರಾಣಿಗಳನ್ನು ರೇಖಿಸಲಾಗಿದೆ. ಕೆಲವು ಗುಹೆಗಳಲ್ಲಿ ಧಾರ್ಮಿಕ ಮತ್ತು ಮತಾಚರಣೆಯ ಸಾಂಕೇತಿಕ ಚಿತ್ರಗಳೂ ಇವೆ. ಪುರಾತನ ಶಿಲಾಯುಗದ ಕಾಲದ ಹಸಿರು ಮತ್ತು ಕಡುಗೆಂಪು ಬಣ್ಣಗಳ ಬೃಹದಾಕಾರದ ಪ್ರಾಣಿಗಳಿದ್ದರೆ, ಅನಂತರದ ಕಾಲಗಳಲ್ಲಿನ ಚಿತ್ರಗಳು ಚಿಕ್ಕ ಆಕಾರದಲ್ಲಿವೆ. ಇತಿಹಾಸ ಆರಂಭದ ಮತ್ತು ಮಧ್ಯಯುಗದ ಕಾಲದ ಚಿತ್ರಗಳೂ ಇವೆ. ಇಲ್ಲಿನ ಬಣ್ಣಗಳನ್ನು ಮ್ಯಾಂಗನೀಸ್, ಹೆಮಟೈಟ್ ಮೃದುಕೆಂಪು ಶಿಲೆ ಮತ್ತು ಮರಗಳ ಇದ್ದಿಲಿನಿಂದ ಪಡೆಯಲಾಗಿದೆ. ಕೆಲವೊಮ್ಮೆ ಪ್ರಾಣಿಗಳ ಕೊಬ್ಬು ಮತ್ತು ಎಲೆಗಳ ರಸಗಳನ್ನೂ ಬಣ್ಣಗಳು ಮಿಶ್ರಣದಲ್ಲಿ ಬಳಸಲಾಗಿದೆ. ಬಂಡೆಗಳ ಮೇಲ್ಮೈಗಳಲ್ಲಿರುವ ಆಕ್ಸೈಡುಗಳ ಕಾರಣದಿಂದ ಈ ಬಣ್ಣಗಳೊಂದಿಗೆ ಉಂಟಾಗಿರಬಹುದಾದ ರಾಸಾಯನಿಕ ಪ್ರಕ್ರಿಯೆಯಿಂದ ಇಲ್ಲಿನ ಚಿತ್ರಗಳು ಇಂದಿಗೂ ವಿಶಿಷ್ಟ ರೀತಿಯಲ್ಲಿ ಉಳಿದುಕೊಂಡಿರುವುದು ಸಾಧ್ಯವಾಗಿದೆ. ಈ ಚಿತ್ರಗಳನ್ನು ಕಲಾಪ್ರಪಂಚಕ್ಕೆ ಪರಿಚಯಿಸುವುದರ ಹಿಂದೆ ಡಿ।। ವಾಕಾನ್ಕರ್‌ರವರ ಕೊಡುಗೆ ಅಮೂಲ್ಯವಾದುದು.

ಕೆ. ವಿ. ಮು.

## ಭೂದೃಶ್ಯಗಳು (Land scape)

ಗ್ರಾಮೀಣ ನೆಲಕ್ಕೆ ಅಥವಾ ಪ್ರಕೃತಿಗೆ ಹತ್ತಿರವಾದ, ನೇರವಾದ ಅಭಿವ್ಯಕ್ತಿಗೆ ಲ್ಯಾಂಡ್‌ಸ್ಕೇಪ್ ಎಂದು ೧೫ನೆಯ ಶತಮಾನದಿಂದ ಕರೆಯಲಾಗುತ್ತಿದೆ. ಗ್ರಾಮೀಣ ದೃಶ್ಯ ಎಂಬರ್ಥದ ಡಚ್‌ಪದದಿಂದ (Land scape) ಪದ ಹುಟ್ಟಿಕೊಂಡಿದೆ. ದೃಶ್ಯಗಳ ಅಲಂಕೃತ ಚಿತ್ರಣಗಳಂಥ, ಇಂದು ನಾವು Land scape ಎಂದು ಕರೆಯುವ ಭೂದೃಶ್ಯಗಳು ರೋಮನ್ನರ ಕಾಲದಿಂದಲೂ ಕಾಣಿಸಿಕೊಂಡಿವೆ. ಮಧ್ಯ ಕಾಲೀನ ಯುಗದಲ್ಲೂ ಮುಂದುವರಿದ ಈ ಚಿತ್ರಕ ವಿಭಾಗ ಕಾಲದ ಪರೀಕ್ಷೆಯಲ್ಲಿ ಕೆಲವನ್ನಷ್ಟೇ ಉಳಿಸಿಕೊಂಡಿದೆ. ಆದರೆ ಭೂದೃಶ್ಯ ಚಿತ್ರಣ ತನ್ನದೇ ಆದ ಪೂರ್ಣ, ಸ್ವತಂತ್ರ ಅಸ್ತಿತ್ವವನ್ನು ಕಂಡುಕೊಂಡದ್ದು. ಪುನರುಜ್ಜೀವನ (೧೫-೧೬ನೆಯ ಶತಮಾನ) ಕಾಲದಲ್ಲಿ. ಡಚ್ ಭಾವಚಿತ್ರಗಳ ಹಿನ್ನೆಲೆಯಲ್ಲಿ ಭೂ ದೃಶ್ಯಗಳನ್ನು ಚಿತ್ರಿಸಿ ಆನಂದಿಸುವ ಅಭ್ಯಾಸ ಆರಂಭವಾಗಿದ್ದು, ೧೬ನೆಯ ಶತಮಾನದಲ್ಲಿ ಡಚ್ ಕಲಾವಿದರು ಭೂದೃಶ್ಯಗಳನ್ನೇ ವಿಶೇಷವಾಗಿ ಚಿತ್ರಿಸುವ ಪರಿಣತಿ ಪಡೆಯಲು ಪ್ರಯತ್ನಿಸಿದರು. ೧೭ನೆಯ ಶತಮಾನದಲ್ಲಿ ಡಚ್ ಕಲಾವಿದರಾದ ರೇಸ್‌ಡೇಲ್ ಮತ್ತು ಕುಯ್ಬಿ ಹಾಗೂ ಫ್ರೆಂಚ್‌ಸಂಜಾತರಾಗಿ ಇಟಲಿಯಲ್ಲಿ ನೆಲೆಗೊಂಡಿದ್ದ ಕ್ಲಾಡೆ ಮತ್ತು ಪೌಸ್ಸಿನ್ ಅಂದಿನ ಸಾಹಿತ್ಯದ ಸಂದರ್ಭಗಳ ಭೂದೃಶ್ಯಗಳನ್ನು ಚಿತ್ರಿಸಿದರು. ೧೮ನೆಯ ಶತಮಾನದಲ್ಲಿ ಪ್ರಾಮುಖ್ಯತೆ ಹೆಚ್ಚಿತು. ಭಾವಚಿತ್ರಗಳ ಹಿನ್ನೆಲೆಗೆ ಸುಂದರ ಭೂದೃಶ್ಯಗಳು Portait Land Scapeಗಳ ಸಂಯೋಜಿಸಲ್ಪಟ್ಟಿರು ತ್ತಿದ್ದವು. ಇಂಥ ಭೂದೃಶ್ಯ ವಿಭಾಗ ಇಟಲಿಯ ಕಲಾವಿದರಾದ ಕಾನಲೆಟ್ಟೋ, ಪಾನಿನಿ, ಗುಆರ್ಡಿ,



ಎಂ. ಎಸ್. ಚಂದ್ರಶೇಖರ್

ಜರ್ಮನಿಯ ಜಾಕೊಬ್ ಫಿಲಿಪ್-ಹಾಕೆರ್ಟ್, ಫ್ರಾನ್ಸಿನ ಹ್ಯೂಬರ್ಟ್ ರಾಬರ್ಟ್ ಮತ್ತು ಕ್ಲಾಡೆ ಜೋಸೆಫ್ ವೆರ್‌ನೆಟ್‌ರವರುಗಳಲ್ಲಿ ಕಾಣಿಸಿಕೊಂಡಿತು. ಭೂದೃಶ್ಯ ಚಿತ್ರವಿಭಾಗದ ಸಂಪೂರ್ಣ ಫಲ ೧೮ನೆಯ ಶತಮಾನದ ಅಂತಿಮ ದಶಕಗಳಲ್ಲಿ ಹಾಗೂ ೧೯ನೆಯ ಶತಮಾನದ ಉದ್ದಕ್ಕೂ ಕಾಣಿಸಿಕೊಂಡಿತು. ಇಂಗ್ಲೆಂಡಿನ ಕಾನ್‌ಸ್ಟೆಬಲ್, ಟರ್ನರ್, ಜರ್ಮನಿಯ ಫ್ರೆಡ್ರಿಕ್ ಮತ್ತು ಇಂಪ್ರೆಷನಿಸ್ಟ್ ಕಲಾವಿದರನ್ನು ಉದಾಹರಿಸಬಹುದು. ೧೬ನೆಯ ಶತಮಾನದ ಪಶ್ಚಿಮ ರಾಷ್ಟ್ರಗಳ ಹಾಗೂ ನಮ್ಮ ದೇಶದ ಚಿತ್ರಾಲಂಕೃತ ಹಸ್ತಪ್ರತಿಗಳಲ್ಲಿ ಭೂದೃಶ್ಯಗಳನ್ನು ಮಾನವಾಕಾರಗಳ ಹಿನ್ನೆಲೆಗೆ ದುಡಿಸಿಕೊಳ್ಳಲಾಗಿದೆ. ನಮ್ಮ ಮಿನಿಯೇಚರ್ ಚಿತ್ರಗಳಲ್ಲಿ ಭೂದೃಶ್ಯಗಳು ಸುಂದರವಾಗಿ, ವೈವಿಧ್ಯಮಯವಾಗಿ ಕಾಣಿಸಿಕೊಂಡಿವೆ. ೧೯ನೆಯ ಶತಮಾನದ ಅಂತ್ಯ ಹಾಗೂ ೨೦ನೆಯ ಶತಮಾನದ ಆರಂಭದಲ್ಲಿ ಭಾರತದ ರಾಜಾರವಿವರ್ಮನ ತೈಲವರ್ಣ ಚಿತ್ರಗಳೇ ಅಲ್ಲದೆ ಓಲಿಯೋಗ್ರಾಫ್ ಕೃತಿಗಳಲ್ಲೂ ಭೂದೃಶ್ಯಕಲೆ ವೈಭವೀಕರಣಗೊಂಡಿದೆ. ಆದರೆ ಇಲ್ಲೂ ಮಾನವ ರೂಪಗಳ ಹಿನ್ನೆಲೆಯಲ್ಲಿ ಭೂದೃಶ್ಯಗಳು ಕಾಣಿಸಿಕೊಂಡವು. ಬಂಗಾಳದ ಪುನರುಜ್ಜೀವನ ಕಾಲದ ಕಲೆಯಲ್ಲೂ ನಂತರದ ಪಶ್ಚಿಮದ ಪ್ರಭಾವ ದೇಶೀಯ ಕಲಾವಿದರ ಮೇಲೂ ಆಯಿತು.

**ಕೆ.ವಿ.ಸು**

## ಮಂಗಳೂರು

ಹದಿನೆಂಟನೆಯ ಶತಮಾನದ ಆದಿಯಲ್ಲಿ ಮಂಗಳೂರು ಹಾಗೂ ಅದರ ಸುತ್ತ ಮುತ್ತ ಕ್ರೈಸ್ತ ಧರ್ಮ ಪ್ರಸಾರಕರು ಅಧಿಕ ಸಂಖ್ಯೆಯಲ್ಲಿ ಬಂದಿದ್ದು ಅವರ ಧಾರ್ಮಿಕ ವಾಸ್ತುಗಳ



ಸೆಂಟ್ ಅಲಾಯಸಿಸ್ ಚರ್ಚ್

ರಚನೆಯಾಯಿತು. ಗೋವಾದ ಚರ್ಚ್‌ಗಳಿಂದ ಪ್ರೇರಿತವಾಗಿ ಇಲ್ಲಿಯೂ ಬೃಹದಾಕಾರದ ಚರ್ಚ್‌ಗಳು ಚಿತ್ರಶಿಲ್ಪಗಳಿಂದ ಕೂಡಿ ರಚಿತವಾದವು. ಮಂಗಳೂರು ಊರಿನಲ್ಲೇ ಇರುವ ಸೆಂಟ್ ಅಲಾಯಸಿಸ್ ಚರ್ಚ್ ೧೮೮೫ರಲ್ಲಿ ರಚನೆಯಾಗಿದ್ದು ಇಟಲಿಯ ಧರ್ಮ ಪ್ರಸಾರಕ ಹಾಗೂ ಕಲಾವಿದ ಆ್ಯಂಟಾನಿಯೋ ಮೋಶ್ಚಿನಿ ೧೮೯೯ರಲ್ಲಿ ಇಲ್ಲಿಗೆ ಬಂದು ಅಲಾಯಸಿಸ್ ಚರ್ಚ್‌ನಲ್ಲಿ ನೂರಾರು ಚಿತ್ರಗಳನ್ನು ರಚಿಸಿದರು. ಇವು ಭಿತ್ತಿ ಮತ್ತು ಕ್ಯಾನ್‌ವಾಸ್ ಎರಡರ ಮೇಲೂ ಇವೆ. ಇದಲ್ಲದೆ ನಗರದ ಕೊರ್ಡೆಲ್ ಪ್ರದೇಶದ ಕುಲಶೇಖರದ ಹೋಲಿಕ್ರಾಸ್ ಚರ್ಚ್‌ನಲ್ಲಿ. ಜಪ್ಪೂವಿನ ಸಂತ ಜೋಸಫ್ ಸೆಮಿನರಿ, ಇನ್‌ಫೆಂಟ್ ಮೇರಿ ಕಾನ್ವೆಂಟ್, ಪ್ರಶಾಂತಿ ನಿಲಯ, ಕಂಕನಾಡಿಯ ಕಾರ್ಮೆಲ್ ಕಾನ್ವೆಂಟ್ ಹಾಗೂ ಮಂಗಳೂರು ಬಳಿಯ ಬಂಟ್ವಾಳದ ಮೊಡನ್ ಕೊಪ್ ಪ್ರದೇಶದ ಇನ್ಫೆಂಟ್ ಜೀಸೀಸ್ ಚರ್ಚ್, ಅಗರಾರ್ ಬಳಿಯ ಜರಿಬೆಟ್ಟುವಿನ ಮೇಲಿರುವ ಸೆಂಟ್ ಹೋಲಿ ಸೋವಿನಿಯರ್‌ಗಳಲ್ಲಿ ಶಿಲ್ಪ, ಚಿತ್ರ ಹಾಗೂ ಗಾಜಿನ ಮೇಲಿನ ಚಿತ್ರಗಳನ್ನು ಕಾಣಬಹುದು. ಅಲಾಯಸಿಸ್‌ನ ಚಿತ್ರಗಳನ್ನು ಮೋಶ್ಚಿನಿ ೧೯೦೨-೦೪ರಲ್ಲಿ ರಚಿಸಿದರು. ಅಗರಾರ್ ಚರ್ಚ್‌ನ ಚಿತ್ರಗಳನ್ನೂ ಇವರೇ ಬರೆದಿದ್ದರೆಂದು ಹೇಳಿಕೆಯಿದ್ದು ಇವು ೧೯೦೦ರಲ್ಲಿಯೇ ರಚಿಸಿರಬಹುದು. (ಮೋಶ್ಚಿನಿ ೧೯೦೫ರಲ್ಲಿ ತೀರಿಕೊಂಡರು) ಉಳಿದ ಎಲ್ಲ ಚರ್ಚ್‌ಗಳ ಚಿತ್ರಗಳೂ ಈ ಶತಕದ ಆರಂಭದ ದಶಕಗಳವು. ಬಂಟ್ವಾಳದ ಚಿತ್ರಗಳು ಈಚಿನವು. ಕುಲಶೇಖರ ಹಾಗೂ ಕಾರ್ಮೆಲ್ ಕಾನ್ವೆಂಟ್‌ನಲ್ಲಿರುವ ಬೃಹದಾಕಾರದ ಚಿತ್ರಿತ ಗಾಜಿನ ಕಿಟಕಿಗಳನ್ನು ವಿದೇಶದಿಂದ ತರಿಸಿ ಹದ್ದಿಸಿರಬಹುದು. ಈ ಎಲ್ಲ ಚಿತ್ರಗಳೂ ಕ್ರೈಸ್ತಧಾರ್ಮಿಕ ಕಥಾ ಸಂದರ್ಭಗಳದ್ದಾಗಿದ್ದು ತೈಲವರ್ಣಗಳಲ್ಲಿ ರಚಿತವಾಗಿರುತ್ತದೆ.

ಅಲನ

## ಮಜೋಲಿಕ

ಪಾರದರ್ಶಕ ಹೊಳಪು ಹೊಂದಿರುವ ಪಿಂಗಾಣಿಯ ಮಣ್ಣಿನ ವಸ್ತುಗಳಿಗೆ ಮಜೋಲಿಕ ಅಥವಾ ಫಾಯೆನ್ಸ್(Faience) ಎನ್ನುತ್ತಾರೆ. ಪಿಂಗಾಣಿ ಪಾತ್ರೆಗಳು ಮತ್ತು ಜೇಡಿ ಹಾಗೂ ಬೆಣಚುಕಲ್ಲಿನ ಪುಟಿ ಬೆರಕೆಯ ಮಡಕೆ ಕುಡಿಕೆಗಳನ್ನು ಹೊರತುಪಡಿಸಿ ಉಳಿದೆಲ್ಲ ಮಣ್ಣಿನ ಪಾತ್ರೆಗಳೂ ಆವಿಗೆ(Kiln)ಯಲ್ಲಿ ಸುಟ್ಟಾಗ ಸೂಕ್ಷ್ಮರಂಧ್ರಗಳನ್ನು ಹೊಂದುತ್ತವೆ. ಇವುಗಳನ್ನು ಮುಚ್ಚಲು ನೀರುಜೇಡಿ ಅಥರಾ ಮಿದುಜೇಡಿ ಅಥವಾ ಗಾಜುಮ್ಮೆ(glaze)ಗಳನ್ನು ಬಳಿದು ಮತ್ತೊಮ್ಮೆ ಸುಡಲಾಗುವುದು. ಹೊಳಪು ಅಥವಾ ಗಾಜುಮ್ಮೆಗಳು ವಿವಿಧ ಖನಿಜ ವಸ್ತುಗಳಿಂದ ಕೂಡಿರುತ್ತವೆ. ಮುಖ್ಯವಾಗಿ ಲೋಹದ ಆಕ್ಸೈಡ್‌ಗಳನ್ನು ಹೊಂದಿರುತ್ತವೆ. ಲೋಹದ ಆಕ್ಸೈಡ್‌ಗಳನ್ನು ಎರಡು ಮುಖ್ಯ ಗುಂಪುಗಳಾಗಿ ವಿಂಗಡಿಸಬಹುದು. ಮೊದಲ ಗುಂಪಿಗೆ ಸೇರುವ ಸೀಸದ ಗಾಜುಮ್ಮೆ ಪಾರದರ್ಶಕವಾದದ್ದು; ಬಹುತೇಕ ಬಣ್ಣವಿಲ್ಲದ್ದು. ಈ ಕಾರಣದಿಂದಲೇ ಅದು ತನ್ನ ಪದರದ ಕೆಳಗಿನ ಮಣ್ಣಿನ ಮೂಲ ಬಣ್ಣ ಮತ್ತು ರಚನೆಗಳನ್ನು ಎತ್ತಿ ತೋರುತ್ತದೆ. ಮತ್ತೊಂದು ಗುಂಪಿಗೆ ಸೇರುವ ತವರದ glazeಗಳು ನಿಷ್ಪಾರದರ್ಶಕವಾಗಿರುತ್ತವೆ. ಇವುಗಳು ಮೂಲಮಣ್ಣಿನ ಬಣ್ಣ ಹಾಗೂ ಸಂರಚನೆ ಅಥವಾ ಮೈವಳಿಕೆ(texture)ಗಳನ್ನು ಸಂಪೂರ್ಣವಾಗಿ ತನ್ನ ಬಿಳುಪು ಹೊಳಪು ಪದರದಿಂದ ಕಾಣದಂತೆ ಮಾಡುತ್ತದೆ. ಇಂಥ ನಿಷ್ಪಾರದರ್ಶಕ ಹೊಳಪು ಮೈಯನ್ನು ಹೊದ್ದುಕೊಂಡ ಪಾತ್ರೆಗಳನ್ನು ಇಟಲಿ ಭಾಷೆಯ ಮಜೋಲಿಕಾ ಅಥವಾ ಇಟಲಿಯಲ್ಲಿ ಮೊದಲ ಬಾರಿಗೆ ಇಂಥ ಪಾತ್ರೆಗಳನ್ನು ಸೃಷ್ಟಿಸಿದ ಪಟ್ಟಣವಾದ ಫಾವಿನ್ಸಾದ ಫ್ರೆಂಚ್ ಹೆಸರಾದ ಫಾಯೆನ್ಸ್(Faience) ಎಂದು ಕರೆಯುತ್ತಾರೆ.



ಈ ತಂತ್ರ ಬೇಬಿಲೋನಿಯಾದವರ ಅನ್ವೇಷಣೆಯಾಗಿರಬಹುದಾದರೂ, ಈಜಿಪ್ಟ್, ಅಸ್ಸೀರಿಯಾ, ಪರ್ಷಿಯಾದ ಜನರಿಂದಲೂ ಬಳಸಲ್ಪಟ್ಟಿತು. ಮಜೋಲಿಕಾ ಅರಬ್ ಜನರಿಂದ ಯೂರೋಪಿಗೆ ಪರಿಚಯಿಸಲ್ಪಟ್ಟು ನಂತರ ೯ನೆಯ ಶತಮಾನದಲ್ಲಿ ಅದು ದಕ್ಷಿಣ ಸ್ಪೈನ್‌ಗೂ ಹರಡಿತು. ರಿನೈಸಾನ್ಸ್ ಸಂದರ್ಭದಲ್ಲಿ ಈ ತಂತ್ರದ ಪಾತ್ರೆಗಳ ಮೇಲೆ ಉಡ್‌ಕಟ್ಸ್ ಮತ್ತು ಗ್ರಾಫಿಕ್ ಕೃತಿಗಳ ಭೂದೃಶ್ಯಗಳನ್ನು ಹಾಗೂ ಬೈಬಲ್ ಹಾಗೂ ಪುರಾಣಗಳ ದೃಶ್ಯಗಳನ್ನೂ ತಂದುಕೊಳ್ಳಲಾಯಿತು. ಶಿಲ್ಪಗಳಿಗೂ ಈ ತಂತ್ರವನ್ನು ದುಡಿಸಿಕೊಳ್ಳುತ್ತಿರುವುದನ್ನು ಪ್ರಸ್ತುತ ಹಲವು ರಾಷ್ಟ್ರಗಳ ಕಲಾ ಸೃಷ್ಟಿಯಲ್ಲಿ ಗುರುತಿಸಬಹುದು.

ಕೆ.ವಿ.ಸು.

## ಮಟ್ಟಂಚೇರಿ

ಮಟಂಚೆರಿಯ ಅರಮನೆಯನ್ನು ೧೫೫೫ರಲ್ಲಿ ಪೋರ್ಚುಗೀಸರು ಕಟ್ಟಿ, ಕೊಚಿ ಅರಸನಿಗೆ ಬಳುವಳಿಯಾಗಿತ್ತರು. "ಡಚ್ ಅರಮನೆ"ಯೆಂದೇ ಮೂಲತಃ ಹೆಸರಾಗಿದ್ದು, ಈ ಅರಮನೆಯ ವಿನ್ಯಾಸ- ಅಲಂಕರಣಗಳಲ್ಲಿ ಕೇರಳದ ಮಾದರಿಯದೇ ಆಗಿದೆ. ಎತ್ತರದ ಪೌಳಿಗೋಡೆ, ಒಳಾಂಗಣ, ಬಯಲಲ್ಲಿ ಚಚ್ಚೌಕನಾಗಿರುವ ಅರಮನೆಯ ಕಟ್ಟಡ, ವಿಶಾಲವಾದ ಆಸ್ಥಾನ ಪರಿಸರವನ್ನು ಹೊಂದಿದೆ. ಎರಡನೆಯ ಅಂತಸ್ತಿನಿಂದ ಕೊಚಿನ್ ಬಂದರಿನ ಸುಂದರ ದೃಶ್ಯವನ್ನು ವೀಕ್ಷಿಸಬಹುದು. ಅರಮನೆಯ ಅಂಕಣದಲ್ಲೊಂದು ದೇವಾಲಯ ಕುಟುಂಬದೇವತೆ, ಪಲಯನೂರು ಭಗವತಿಯಾಲಯ. ಜೊತೆಗೇ ವಿಷ್ಣು-ಈಶ್ವರಾಲಯವೂ ಇದೆ. ದರ್ಬಾರ್‌ಹಾಲ್, ವಿಶಾಲವಾದ ಶಯನಗೃಹಗಳು, ಅಂತಃಪುರದ ಸ್ತ್ರೀಯರಿಗೆ ಮೀಸಲಾದ ಅಲಂಕೃತ ಕೊಠಡಿ, ಅರಮನೆಯ ಅಂದ ಹೆಚ್ಚಿಸುತ್ತವೆ.

ಮಟಂಚೇರಿ ಅರಮನೆ ವಿಶೇಷತಃ ಅಲ್ಲಿನ ಭಿತ್ತಿಚಿತ್ರ, ವರ್ಣಚಿತ್ರಗಳಿಂದಾಗಿ ಗಮನಾರ್ಹವಾಗಿದೆ; ರಾಮಾಯಣ-ಭಾಗವತ-ಪಾರ್ವತೀ ಕಲ್ಯಾಣ, ಚಿತ್ರಗಳನ್ನು ಗಮನಿಸುವಲ್ಲಿ ಚಿತ್ರಕಾರನ ಶೈಲಿಯು ಪದ್ಮನಾಭಪುರದ ವರ್ಣಚಿತ್ರಗಳಿಗೂ ಮುಂಚಿನ ಶೈಲಿಯದೆನ್ನಿಸುತ್ತದೆ. ನಯ, ಧ್ಯೇಯ ಸಾಧನೆ, ಇಲ್ಲಿ ಕಾಣುವ ಅಂಶ. 'ಕುಮಾರ ಸಂಭವ'ದ ವಿವಿಧ ವರ್ಣಮಯ ದೃಶ್ಯಗಳನ್ನು ವರ್ಣ ಚಿತ್ರಕಾರ ಸೂಕ್ಷ್ಮವಾಗಿ ಬಿಡಿಸಿದ್ದಾನೆ. ಪಾರ್ವತಿದೇವಿಯನ್ನು ವಿವಾಹ ಸಂದರ್ಭದಲ್ಲಿ ಆಕೆಯ ಸಖಿಯರು ಅಲಂಕರಿಸುತ್ತಿರುವ ಚಿತ್ರಫಲಕ ತುಂಬಾ ಆಕರ್ಷಣೀಯ. ಇನ್ನೊಂದೆಡೆ ಮೋಹಿನಿಯ ನಾಟ್ಯ, ಶೇಷಶಾಯಿವಿಷ್ಣು, ಆದಿಶೇಷನ ಸಹಸ್ರ ಹೆಡೆ ಭಗವಾನ್ ವಿಷ್ಣುವಿನ ಶಿರಸ್ಸಿನ ಮೇಲೆ ಮಣಿಯಂತಿವೆ, ಹೀಗೆ ಅನೇಕ ವರ್ಣಚಿತ್ರಗಳು ಮನಸೆಳೆಯುತ್ತದೆ. ಮೇಲಂತಸ್ತಿನ ಅಂಗಳದಲ್ಲಿ, ದರ್ಬಾರ್‌ಹಾಲ್‌ನ ಎಡಪಾರ್ಶ್ವದಲ್ಲಿ ಅದ್ಭುತವೆನಿಸುವ ಭಿತ್ತಿಚಿತ್ರಗಳ ಸರಣಿಯೇ ಇದೆ.

ನಿಕೃರಾ

## ಮದರಂಗಿ ಕಲೆ

ಕಣ್ಣಿಗೆ ಇಂಪು ಒಡಲಿಗೆ ತಂಪು ನೀಡುವ ಮದರಂಗಿ ಸಂಪ್ರದಾಯ, ಕಲಾತ್ಮಕತೆ, ಸೌಭಾಗ್ಯದ ಕುರುಹುಗಳಾಗಿಯೂ ಬಳಕೆಗೊಳ್ಳುತ್ತದೆ. ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಈ ಕಲೆ ವಿವಿಧ ರೀತಿಯ ಹೆಸರುಗಳಿಂದ ದೇಶ, ಭಾಷೆ, ಪ್ರದೇಶಗಳನ್ನು ಮೀರಿ ಜನಪ್ರಿಯವಾಗಿದೆ.

ಸಂಸ್ಕೃತದಲ್ಲಿ ಮದಯಂತಿಕಾ, ಹಿಂದಿಯಲ್ಲಿ ಮೆಹಂದಿ, ಮರಾಠಿಯಲ್ಲಿ ಮೆಂದಿಯಾಚ, ತೆಲುಗಿನಲ್ಲಿ ಗೌರಿಂಟಾಡು, ಗೋರಂಟಿ, ಇಂಗ್ಲೀಷಿನಲ್ಲಿ ಹೆನ್ನಾ, ಪರ್ಶಿಯಾದಲ್ಲಿ ಹಿನಾ, ಹೀಗೆ ವಿವಿಧ ಹೆಸರುಗಳಿವೆ.

ಕ್ರಿ.ಶ.ಪೂ. ೨ನೇ ಶತಮಾನದ 'ಶುಶ್ರುತ ಸಂಹಿತಾ' ಶುದ್ರಕ ಕವಿಯ ಮೃಚ್ಛಕಟಿಕ, ಭಟ್ಟನಾರಾಯಣನ ವೇಣಿಸಂಹಾರ ಪಂಪಕವಿಯ ಆದಿಪುರಾಣ ಮುಂತಾದ ಗ್ರಂಥಗಳಲ್ಲಿ ಮದರಂಗಿಯ ಉಲ್ಲೇಖಗಳಿವೆ. ವಾತ್ಸಾಯನನ ೬೪ ಕಲೆಗಳಲ್ಲಿ ಇದು ಒಂದು ಕಲೆಯಾಗಿದೆ.

ಮದರಂಗಿಯನ್ನು ಹಬ್ಬ ಹುಣ್ಣಿಮೆ, ಉತ್ಸವ, ಮದುವೆ ಮುಂಜಿಯ ಸಂದರ್ಭಗಳಲ್ಲಿ ಹಚ್ಚಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಸೌಂದರ್ಯದ ಸಾಧನವಾಗಿ ಯಾವಾಗಬೇಕಾದರೂ ಹಚ್ಚಿಕೊಳ್ಳಲಾಗುತ್ತಿದೆ. ಮದರಂಗಿಯ ಬಣ್ಣ ತಯಾರಿಕೆ ತುಂಬ ಸರಳ. ಮದರಂಗಿ ಗಿಡದ ತಪ್ಪಲನ್ನು ಚೆನ್ನಾಗಿ ಒಣಗಿಸಿ ಕುಟ್ಟಿಪುಡಿಮಾಡಿ ಅಥವಾ ಹಸಿಯಾಗಿಯೂ ಬಳಸಬಹುದು. ಈಗ ಇದರ ಪುಡಿ ಅಂಗಡಿಗಳಲ್ಲಿ ಲಭ್ಯವಾಗುತ್ತದೆ. ನೀಲಗಿರಿ ಎಣ್ಣೆ, ಲಿಂಬಿಹಣ್ಣಿನರಸ ಮತ್ತು ಮದರಂಗಿ ಪುಡಿಯನ್ನು ಚೆನ್ನಾಗಿ ಕಲಸಿ ದ್ರಾವಣ ತಯಾರಿಸುವುದು ಉಂಟು, ಇಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿವೆ. ಬೆಂಕಿಕಡ್ಡಿಯ ಹಿಂಭಾಗ ಇಲ್ಲವೆ ಬೇರೆ ಕಡ್ಡಿಯ ಸಹಾಯದಿಂದ ಚಿತ್ರಬರೆಯುವುದುಂಟು, ಈಗ ಆಧುನಿಕ ಸಲಕರಣೆಗಳು ಬಂದಿವೆ.

ಮದರಂಗಿಯ ಚಿತ್ರಗಳು ಮಾನವಾಕೃತಿಯಲ್ಲಿ ಇರದೆ ಹೆಚ್ಚಾಗಿ ಭೂಮೇತಿ ಆಕೃತಿ ವಲ್ಲರಿ ಆಕೃತಿಯುಳ್ಳವುಗಳಾಗಿವೆ. ಬಳ್ಳಿ, ಆಕೃತಿ ಸುಳುಹುಗಳಿಗೆ ಹೆಚ್ಚಿನ ಪ್ರಾಧಾನ್ಯತೆ, ಸ್ವಸ್ತಿಕ, ಶ್ರೀ ಓಂ, ನಂತಹ ಸಂಕೇತ ಪ್ರಧಾನ ಆಕೃತಿಗಳು ಶುಭ, ಲಾಭ, ಸೂರ್ಯ, ಚಂದ್ರ ಮುಂತಾದ ವಿವಿಧ ಆಭರಣಗಳ ಮಾದರಿಯ ಚಿತ್ರವಿನ್ಯಾಸಗಳು ಹೆಚ್ಚಾಗಿ ಕಂಡುಬರುತ್ತವೆ.

ಹೀಗೆ ಹತ್ತು ಹಲವಾರು ರೀತಿಯ ಸುಂದರ ವಿನ್ಯಾಸಗಳ ಮದರಂಗಿ, ಒಣಗಿದ ಮೇಲೆ ಸಾಸಿವೆ ಎಣ್ಣೆ ಇಲ್ಲವೆ ನಿಂಬೆರಸವನ್ನು ನಯವಾಗಿ ಇದರ ಮೇಲೆ ಲೇಪಿಸಲಾಗುತ್ತದೆ. ಒಂದು ಗಂಟೆಯ ನಂತರ ಹಚ್ಚಿದ ಮದರಂಗಿಯನ್ನು ಒರೆಸಿದರೆ ಕಂದುಬಣ್ಣದ ಕೆಂಪಾದ ನಯನ ಮನೋಹರ ಚಿತ್ರವಿನ್ಯಾಸಗಳು ಕಾಣಿಸುತ್ತವೆ. ಅದಕ್ಕೆ ಮತ್ತೆ ಎಣ್ಣೆಯನ್ನು ಹಚ್ಚಬೇಕು. ಮಾರನೆಯ ಬೆಳಗಿನವರೆಗೆ ಬಿಟ್ಟು ನಂತರ ಕೈಯನ್ನು ತೊಳೆದರೆ ಬಹಳ ಕಾಲ ಕೆಂಪು ಬಣ್ಣದ ಮದರಂಗಿ ಮಾಸದೆ ಇರುತ್ತದೆ.

ಕಾವ್ಯಗಳಲ್ಲಿ ಚಿತ್ರಪತ್ರ, ಮಕರಿಕಾ ಪತ್ರ, ಚಿತ್ರಪತ್ರಾವಳಿ ಇತ್ಯಾದಿಯಾಗಿ ಕರೆದಿದ್ದು ದೇಹದ ಮೇಲೆ (ಮುಖ್ಯವಾಗಿ ಮುಖ, ಎದೆಗಳ ಮೇಲೆ) ಮದರಂಗಿಯಿಂದ ಚಿತ್ರಿಸುತ್ತಿದ್ದ ಬಗ್ಗೆ ಸೂಚಿಸುತ್ತದೆ.

ಎಸ್.ಸಿ.ಪಾ.

## ಮಧ್ಯಯುಗೀನ ಯುರೋಪ - (ಪ್ರಾಚೀನ)

ಪರಕೀಯರ ದಾಳಿಯಿಂದಾಗಿ ೫ನೇಯ ಶತಮಾನದಲ್ಲಿ ರೋಮನ್ ಸಾಮ್ರಾಜ್ಯವು ಅವನತಿ ಹೊಂದಿದ ನಂತರ ಮೆಡಿಟರೇನಿಯನ್ ಪ್ರದೇಶಗಳ ಕಲೆಗೂ ಉತ್ತರ ಯುರೋಪ ಕಲೆಗೂ ಹೆಚ್ಚಿನ ವೈರುಧ್ಯ ಬೆಳೆಯಿತು. ಇಟಾಲಿಯನ್ ಮತ್ತು ಬೈಜಂಟಾಯಿನ್ ಕಲೆಯು ಗ್ರೀಸ್ ಮತ್ತು ರೋಮನ್ ಕಲೆಯ ಸಂಬಂಧವನ್ನುಳಿಸಿಕೊಂಡು ಅಭಿವೃದ್ಧಿಗೊಂಡರೆ ಆಲ್ಪ್ಸ ಬೆಟ್ಟಗಳ ಉತ್ತರದ ಜನಾಂಗಗಳು ಲೋಹಯುಗದ ಸೆಲ್ಟಿಕ್ ಜನರ ಕಲೆಯತ್ತ ವಾಲಿದವು. ಅವರು ಹೆಚ್ಚಾಗಿ ಸಂಚಾರಯೋಗ್ಯ ವಾಹನಗಳು, ಆಯುಧಗಳು, ಕುದುರೆಯ ಅಲಂಕರಣ ವಸ್ತುಗಳು, ಹಾಗೂ ಗೃಹೋಪಯೋಗಿ ಪಾತ್ರಗಳೇ ಮುಂತಾದವುಗಳ ಅಲಂಕರಣಕ್ಕಾಗಿ ಕಲೆಯನ್ನು ಬಳಸಿಕೊಂಡರು. ಅತ್ಯುತ್ತಮ ಹಾಗೂ ಕರಾರುವಾಕ್ಕಾದ ಚಿತ್ರೀಕರಣ ಅವರ ವೈಶಿಷ್ಟ್ಯವಾಗಿತ್ತು ಪಾತ್ರೆಗಳ ಆಕಾರಕ್ಕೆ ತಕ್ಕ ಅಮೂರ್ತ ಪಡಿಕಟ್ಟುಗಳ ರಚನೆ ಅತ್ಯಂತ ಕಲಾತ್ಮಕ. ಬಣ್ಣ ಬಣ್ಣದ ಗಾಜು ಲೇಪದಿಂದಲೂ ಪದ್ಮರಾಗ ಮತ್ತು ಹವಳಗಳನ್ನು ಒತ್ತಿ ಅಂಟಿಸಿದ (Inlayed) ಲೋಹ ಕಲಾಕೃತಿಗಳು ಅದ್ವಿತೀಯವಾಗಿವೆ.

ಬ್ರಿಟಿಷ್ ಮತ್ತು ಸ್ಯಾಕ್ಸನ್‌ರು ಇಂಗ್ಲಂಡನ್ನು ಗೆದ್ದುಕೊಂಡನಂತರ ಇಂಗ್ಲಂಡಿನಲ್ಲಿ ಸುಂದರ ಕಲಾಕೃತಿಗಳ ಉತ್ಪಾದನೆಯಾಯಿತು. ಈ ಕಲಾಕೃತಿಗಳನ್ನು ಆಯರಿಷ್ ಜನರು ಸಿದ್ಧಪಡಿಸಿದ್ದು ಅವರು ರೋಮನ್ ಇಲ್ಲವೇ ಪರಕೀಯರ ದಾಳಿಗಳಿಂದ ಸ್ಥಾನೀಯ ಸಂಸ್ಕೃತಿಯ ವಿಚಲಿತಗೊಳ್ಳದಂತೆ ಅದನ್ನು ಬೆಳೆಸಿದರು. ಆಯುರಿಷ್ ಕಲೆಯು ಕ್ರಿಶ್ಚಿಯನ್ ಧರ್ಮದ



ಪರಿಚಯದಿಂದ ಉತ್ತೇಜನಗೊಂಡುದಾಗಿತ್ತು. ಕ್ರಿ.ಶ. ೪೩೨ರಲ್ಲಿ ಸಂತ ಪ್ಯಾಟ್ರಿಕ್‌ನ ಧರ್ಮ ಪ್ರಚಾರದ ಪ್ರಾರಂಭದೊಂದಿಗೆ ಅಲ್ಲಿನ ಜನತೆಗೆ ಲೇಖನ ಕಲೆಯನ್ನೂ ಕಲಿಸಿದನು. ಚರ್ಚ್ ಸೇವೆಗೆ ಬೇಕಾಗುವ ಪಾತ್ರೆ ಹಾಗೂ ಆಭರಣಗಳನ್ನು ಉತ್ಪಾದಿಸುವಂತೆ ಪ್ರೇರಣೆಯನ್ನೂ ನೀಡಿದನು. ಆಯರಿಷ್ ಕ್ರಿಶ್ಚಿಯನ್ ಧರ್ಮವು ಹೆಚ್ಚಾಗಿ ವಿರಕ್ತ ಮಠಗಳನ್ನೇ ಅವಲಂಬಿಸಿತ್ತು. ಸನ್ಯಾಸಿಗಳಿಗಾಗಿ ಕಟ್ಟಿದ ಈ ಮಠಗಳು ದೂರದ ಗುಡ್ಡ-ಬೆಟ್ಟಗಳಲ್ಲಿದ್ದು ಕಲ್ಲಿನಿಂದ ಕಟ್ಟಿದ ರೈತಾಪಿ ಜನರ ಮನೆಗಳಂತಿರದೇ ಜೇನುಗೂಡನ್ನು ಹೋಲುವಂತೆ ಕಟ್ಟಿದ ಗುಡಿಸಲುಗಳಾಗಿರುತ್ತಿದ್ದವು. ಗುಡಿಸಲು ಅಥವಾ ಈ ವಿರಕ್ತ ಮಠಗಳಲ್ಲಿ ಚಿಕ್ಕದಾದ ಒಂದು ಉಪನ್ಯಾಸ ವೇದಿಕೆ ಹಾಗೂ ಒಂದು ಉತ್ಸವ ಸ್ತಂಭಗಳಿರುತ್ತಿದ್ದವು. ಮೊದ ಮೊದಲು ಈ ಉತ್ಸವ ಸ್ತಂಭದಲ್ಲಿ ಸಾದಾರೀತಿಯ ಶಿಲುಬೆಯನ್ನು ಕೊರೆದಿರಲಾಗುತ್ತಿತ್ತು. ಎಂಟನೆಯ ಶತಮಾನದ ವೇಳೆಗೆ ಈ ಸ್ತಂಭಗಳು ಹೆಚ್ಚಾಗಿ ಹೆಣಿಕೆ, ಕಟ್ಟುಪಟ್ಟಿ, ವಿಚಿತ್ರವಾದ ಪ್ರಾಣಿಗಳು ಹಾಗೂ ಮಾನವಾಕೃತಿಗಳಿಂದ ಅಲಂಕೃತಗೊಳ್ಳತೊಡಗಿದವು. ಈ ಶಿಲುಬೆಗಳೇ ಯುರೋಪಿನ ಪ್ರಪ್ರಥಮ ಸ್ಮಾರಕ ಕೆತ್ತನೆಗಳಾಗಿರುತ್ತವೆ. ಉತ್ತರ ಇಂಗ್ಲಂಡ್ ಮತ್ತು ದಕ್ಷಿಣ ಸ್ಕಾಟ್‌ಲಂಡ್‌ಗಳಲ್ಲಿ ಇಂಥ ಎರಡು ಶಿಲುಬೆಗಳು ದೊರೆತಿದ್ದು ಅತ್ಯುತ್ತಮ ಉದಾಹರಣೆಗಳಾಗಿವೆ. ಇದೇ ಅವಧಿಯಲ್ಲಿ ಕ್ರಿಶ್ಚಿಯನ್ ಸನ್ಯಾಸಿಗಳು ತಮ್ಮ ಹಸ್ತಪ್ರತಿಗಳಲ್ಲಿ ಪುರಾತನವಾದುದೆಂದು ಪರಿಗಣಿಸಲಾದ "ಬುಕ್ ಆಫ್ ಡರ್ರೋವ್" (Book of Darrow) ಎಂಬ ಹಸ್ತಪ್ರತಿಯ ಕೆಲವು ಪುಟಗಳು "ಲೋಹ ಕಲಾಕೃತಿ"ಗಳಷ್ಟೇ ಅಂದವಾಗಿ ಅಲಂಕರಿಸಲ್ಪಟ್ಟಿವೆ. ನಾರ್ದಂಬ್ರಿಯಕ್ಕೆ ಸ್ಥಳಾಂತರಗೊಂಡ ಶಿಲುಬೆಯ ಕಲೆಯಂತೆಯೇ ಈ ಹಸ್ತಪ್ರತಿ ಕಲಾ ಪ್ರಕಾರವೂ ಸಹ ನಾರ್ದಂಬ್ರಿಯಕ್ಕೆ ಸ್ಥಾನಾಂತರಗೊಂಡು ಪ್ರತಿಷ್ಠಾಪಿಸಲ್ಪಟ್ಟಿತು.

ಆಯರ್ಲಂಡಿನಿಂದ ಬಂದಂತೆ ಕ್ರಿಶ್ಚಿಯನ್ ಧರ್ಮ ಪ್ರಚಾರಕರು ರೋಮ್‌ನಿಂದಲೂ ನಾರ್ದಂಬ್ರಿಯಕ್ಕೆ ಬಂದರಲ್ಲದೇ ಜೊತೆಗೆ ಕಲಾಕೃತಿಗಳನ್ನೂ ತಂದರು. ಹೀಗೆ ಆಯರಿಷ್ ಮತ್ತು ನಾರ್ದಂಬ್ರಿಯದ ಸನ್ಯಾಸಿಗಳಿಂದಾಗಿ ಈ ಕಲೆಯು ಯುರೋಪ ಭೂಖಂಡವನ್ನೆಲ್ಲ ವ್ಯಾಪಿಸಿತು.

ಚಾರ್ಲಮೇನ್(Chale magne) ದೊರೆಯು ಕ್ರಿ.ಶ. ೭೭೧ರಲ್ಲಿ ಫ್ರಾಂಕ್ಸ್‌ನ ಆಡಳಿತವನ್ನು ತನ್ನ ಕೈಗೆ ತೆಗೆದುಕೊಂಡ ನಂತರ ಅವನ ವೈಯಕ್ತಿಕ ಕಾಳಜಿಯಿಂದಾಗಿ ವಾಸ್ತುಶಿಲ್ಪ ಹಾಗೂ ಕಲೆಗಳಲ್ಲಿ ಅಸಾಧಾರಣವಾದ ಬದಲಾವಣೆಗಳುಂಟಾದವು. ಚಾರ್ಲಮೇನ್ ಮತ್ತು ಅವನ ಉತ್ತರಾಧಿಕಾರಿಗಳ ಕಾಲದಲ್ಲಿ ನಿರ್ಮಾಣಗೊಂಡ ಅನೇಕ ಚರ್ಚುಗಳು ವರ್ಣಚಿತ್ರಗಳಿಂದಲೂ ಸ್ಟಕೋ ಉಬ್ಬುಶಿಲ್ಪಗಳಿಂದಲೂ ಅಲಂಕೃತಗೊಂಡಿದ್ದವಾದರೂ ನೋಡಲು ಈಗ ಒಂದಾದರೂ ಲಭ್ಯವಿಲ್ಲ. ಹಸ್ತಪ್ರತಿಗಳು, ಹಸ್ತಿದಂತ ಕಲಾಕೃತಿಗಳು ಮತ್ತು ಇನ್ನೂ ಅನೇಕ ಚಿಕ್ಕ ಪುಟ್ಟ ಕಲಾಕೃತಿಗಳು ಮುಂತಾದವುಗಳನ್ನು ಇಟಲಿಯಿಂದ ತಂದು ಚಾರ್ಲಮೇನ್ ದೊರೆಯೇ ದಕ್ಷಿಣದ ಕುಶಲ ಕಲಾವಿದರಿಗೆ ಪರಿಚಯಿಸಿದನೆಂಬ ಪ್ರತೀತಿಯಿದೆ.

ಒಂಭತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಚಾರ್ಲಮೇನ ದೊರೆಯ ಮರಣಾನಂತರದ ಅವಧಿಯು ಇಂಗ್ಲಂಡ್ ಹಾಗೂ ಆಯರ್ಲಂಡ್‌ಗಳ ಕರಾವಳಿ ಮತ್ತು ಯುರೋಪಿನ ಭೂಖಂಡಗಳು ಸ್ಕ್ಯಾಂಡಿನೇವಿಯನ್ ವಿಧರ್ಮೀಯರಾದ ವೈಕಿಂಗರ ದಾಳಿಗೆ ತುತ್ತಾಗಿ ಸಾಮ್ರಾಜ್ಯವು ತುಂಡು ತುಂಡಾದ ಪ್ರಯುಕ್ತ ತುಂಬಾ ಅಸ್ಥಿರತೆಯಿಂದ ಕೂಡಿದುದಾಗಿತ್ತು. ವೈಕಿಂಗರು ವಿರಕ್ತ ಮಠಗಳನ್ನೂ ಪಟ್ಟಣಗಳನ್ನೂ ಸುಟ್ಟು ಹಾಕಿದರು. ವೈಕಿಂಗವು ಅಸಾಧಾರಣವಾಗಿ ಅಭಿವೃದ್ಧಿಗೊಂಡ ತಮ್ಮ 'ಪ್ರಾಣಿ ಅಲಂಕಾರ' (Animol ornament) ಕಲೆಯನ್ನೂ ತಮ್ಮ

ಜೊತೆಗೆ ತಂದರು ಒಂಭತ್ತನೆಯ ಶತಮಾನದ ಕೊನೆಯಲ್ಲಿ ದೊರೆ ಆಲ್ಫ್ರೆಡ್‌ನು ಇಂಗ್ಲಂಡ್‌ನಲ್ಲಿ ವ್ಯವಸ್ಥೆಯನ್ನು ಮರುಸ್ಥಾಪಿಸಿದನು. ಅರ್ಧಕ್ಕೂ ಹೆಚ್ಚುಭಾಗವನ್ನು ಗೆದ್ದುಕೊಂಡ ವೈಕಿಂಗರು ಮತಾಂತರಗೊಂಡು ಮುಖ್ಯ ಪ್ರವಾಹದಲ್ಲಿ ಲೀನಗೊಂಡರು. ಚಾರ್ಲಮೇನನ ನಂತರ ಎರಡುನೂರು ವರ್ಷಗಳ ಬಳಿಕ ಮೊದಲನೆಯ ಓಟ್ಟೋ(Otto I) ಸಾಮ್ರಾಟನು ಚರ್ಚನೊಂದಿಗೆ ಅತ್ಯಂತ ಹತ್ತಿರದ ಸಂಬಂಧಗಳನ್ನು ಪ್ರತಿಷ್ಠಾಪಿಸಿದ್ದನಲ್ಲದೇ ವಾಸ್ತುಶಿಲ್ಪ ಮತ್ತು ಕಲೆಗಳ ಮಹಾಪೋಷಕನೂ ಎನಿಸಿದ್ದನು. ಹತ್ತು ಮತ್ತು ಹನ್ನೊಂದನೆಯ ಶತಮಾನಗಳಲ್ಲಿ ಅಸಂಖ್ಯಾತ ಚರ್ಚುಗಳು ಮತ್ತು ಮುಖ್ಯ ಆರಾಧನಾ ಮಂದಿರಗಳು ಜರ್ಮನಿಯಲ್ಲಿ ನಿರ್ಮಾಣಗೊಂಡವು. ಅಲಂಕೃತ ಹಸ್ತಪ್ರತಿಗಳು, ಹಸ್ತಿದಂತದ ಕೆತ್ತನೆ ಕಲಾಕೃತಿಗಳು ಮತ್ತು ಕಂಚಿನ ಶಿಲ್ಪಕಲಾಕೃತಿಗಳಲ್ಲಿ ಅಸಾಧಾರಣವಾದ ಪರಿಪಕ್ವತೆಯನ್ನು ಸಾಧಿಸಲಾಯಿತು.

ಸ್ಯಾಕ್ಸನ್‌ರ ಕಾಲದಲ್ಲಿ ಇಂಗ್ಲಂಡ್‌ನಲ್ಲಿ ಅನೇಕ ಚರ್ಚುಗಳ ನಿರ್ಮಾಣವಾಯಿತಲ್ಲದೇ ಹಸ್ತಿದಂತ ಕಲಾಕೃತಿಗಳಂತೆ ಶಿಲ್ಪಕಲೆಯೂ ದೊಡ್ಡ ಪ್ರಮಾಣದಲ್ಲಿಯೇ ಅಭಿವೃದ್ಧಿಗೊಂಡಿತು. ಈ ಶಿಲ್ಪಗಳು ಗ್ರೀಸ್ ಮತ್ತು ರೋಮ್ ಶಿಲ್ಪಗಳನ್ನು ನೆನಪಿಸುತ್ತವೆ. ಈ ಕಾಲದ ಕಲಾವಿದರು ಪ್ರಾಮುಖ್ಯವಾಗಿ ಕ್ಯಾರೋಲಿಂಜಿಯನ್ ಕಲೆಯಿಂದ ಸ್ಫೂರ್ತಿಗೊಂಡವರಾಗಿದ್ದರು. ಆಂಗ್ಲೋ-ಸ್ಯಾಕ್ಸನ್ ಹಸ್ತಪ್ರತಿಗಳ ಅಲಂಕಾರ ಶೈಲಿಯ ಶ್ರೀಮಂತಿಕೆ ಹಾಗೂ ಆಕೃತಿ ಮತ್ತು ಅಲಂಕಾರಗಳ ಸಮನ್ವಯತೆಗಳು ಆಯರಿಷ್ ಕಲೆಯ ಮುಂದುವರಿದ ಸಾಂಪ್ರದಾಯದಂತೆ ಕಂಡುಬರುತ್ತವೆ. ಹನ್ನೊಂದನೆಯ ಶತಮಾನದ ಕೊನೆಯ ವೇಳೆಗೆ ಸಾಮಾನ್ಯವಾಗಿ ಎಲ್ಲ ದೇಶಗಳ ಕಲೆಯ ಮೇಲೆ ಆಧುನಿಕ ಆವಿಷ್ಕಾರವುಂಟಾಗಿರುವುದನ್ನು ಗಮನಿಸಬಹುದಲ್ಲದೇ ಜೊತೆಗೆ ಹನ್ನೆರಡನೆಯ ಶತಮಾನದ ವೇಳೆಗೆ ಯೂರೋಪನ್ನು ವ್ಯಾಪಿಸಿದ ಸ್ಮಾರಕ ರೋಮನಸ್ಕ್ ಕಲೆಯ ಬೆಳವಣಿಗೆಗೂ ದಾರಮಾಡಿಕೊಟ್ಟದನ್ನು ಕಾಣಬಹುದು.

**ಎ.ಟ.ಕಾ.**

## ಮಧುಬನಿ

ಬಿಹಾರ ರಾಜ್ಯದ 'ಮಧುಬನಿ ಕಲೆ', ಭಾರತದ ಜಾನಪದ ಕಲೆಯಲ್ಲಿ ಉತ್ಕೃಷ್ಟ ಸ್ಥಾನವನ್ನು ಪಡೆದಿದೆ. 'ಮಧುಬನಿ' ಎಂದರೆ 'ಜೇನಿನ ಹನಿ' ಎಂದರ್ಥವಿದ್ದು, ಒಂದು ತಾಲ್ಲೂಕಿಗೇ ಈ ಹೆಸರಿದೆ. ಕಾವ್ಯ ಲಕ್ಷಣಗಳುಳ್ಳ ಪುರಾಣ ಕಥೆಗಳನ್ನು ಈ ಪವಿತ್ರವಾದ ಮಧುಬನಿ ಚಿತ್ರಗಳ ಮೂಲಕ ವ್ಯಾಖ್ಯಾನ ಮಾಡಿದ್ದಾರೆ. ಸಾಂಪ್ರದಾಯಿಕ ಗುಣವುಳ್ಳ ಜಾನಪದ ಕಲೆಯನ್ನು ಸ್ಪಷ್ಟವಾಗಿ, ಅಂತಃಪ್ರೇರಣೆಯ, ನಿಷ್ಕಳಂಕವಾದ ಜನ, ಪ್ರಕೃತಿಯ ಬಗ್ಗೆ ಪ್ರಜ್ಞೆ ಬೆಳೆಸಿಕೊಂಡಿದ್ದಾರೆ. ಮಧುಬನಿ ಕಲಾವಿದರಲ್ಲಿ ಸುಪ್ತವಾಗಿರುವ ಭಾವನೆಗಳು ಪ್ರತಿಧ್ವನಿಸಿ, ಅವುಗಳನ್ನು ಚಿತ್ರಗಳಲ್ಲಿ ಭೂಮಿ, ಸೂರ್ಯ, ಚಂದ್ರ, ನಕ್ಷತ್ರಗಳು, ಹೂಗಳು, ಪ್ರಾಣಿಗಳು, ಮಾನವಾಕೃತಿ ಮುಂತಾದುವುಗಳನ್ನು ಅಸಾಧಾರಣವಾಗಿ ಅಭಿವ್ಯಕ್ತಿಸಿದ್ದಾರೆ.

ಮಧುಬನಿ ಕಲಾವಿದರು ಪೌರಾಣಿಕ ಕಥನಗಳನ್ನು ತಮ್ಮ ಕಲ್ಪನೆಗಳಿಂದ ಚಿತ್ರಿಸುವಂತೆ ನಾವು ಮತ್ತೆಲ್ಲೂ ಕಾಣಲಾರೆವು. ಮಹಾ ಕಾವ್ಯಗಳಾದ ರಾಮಾಯಣ, ಮಹಾಭಾರತದ ಕಥೆಗಳನ್ನು ವಂಶಾನುಕ್ರಮವಾಗಿ ಮಧುಬನಿ ಕಲಾವಿದರು ಚಿತ್ರಿಸಿದ್ದಾರೆ. ಅವರ ಚಿತ್ರದ ಕಲ್ಪನೆಗಳು ಹೆಚ್ಚು ಖಚಿತವಾಗಿದ್ದು, ಅವು ವಾಸ್ತವಿಕ ಪ್ರಪಂಚಕ್ಕೆ ಹತ್ತಿರವಿರುತ್ತವೆ. ಅವರ

ಚಿತ್ರಗಳಲ್ಲಿ ರೋಮಾಂಚಕವಾದ ರೂಪಾಲಂಕಾರ ಮತ್ತು ಉಲ್ಲಾಸ ವ್ಯಕ್ತಪಡಿಸಿದ್ದಾರೆ. ಮಂಡಲಗಳನ್ನು ಪವಿತ್ರತೆಯಿಂದ ರಚಿಸಿ, ಪೂಜಿಸುತ್ತಾರೆ. ಪ್ರತಿವರ್ಷ ನಡೆಯುವ ಹಬ್ಬ ಉತ್ಸವಗಳು ಕಾವ್ಯಗಳನ್ನು ಕಥನ ರೂಪದಲ್ಲಿ ಚಿತ್ರಿಸಿ, ತಮ್ಮ ಕಲ್ಪನೆಗಳನ್ನು ಸಾಂಕೇತಿಕವಾಗಿ ರಚಿಸಿದ್ದಾರೆ ಹಾಗೂ ದಿನನಿತ್ಯದ ಸನ್ನಿವೇಶಗಳನ್ನು ಅಭಿವ್ಯಕ್ತಿಸಿರುವುದು ವಿಶೇಷ. ಇಲ್ಲಿಯ ಚಿತ್ರಗಳು ನಂಬಿಕೆ, ಶಕ್ತಿ, ಭರವಸೆಯ ಅಭಿವ್ಯಕ್ತಿ ವಸ್ತು ಮತ್ತು ತಂತ್ರ ಬಹಳ ಸರಳವಾಗಿರುತ್ತದೆ. ಆದರೆ ಅದರ ಅಭಿವ್ಯಕ್ತಿ ಮತ್ತು ವೀರ್ಯವತ್ತಾದ ರೇಖೆಗಳು ಗಾಢವಾದುದು. ಮೊದಲಿಗೆ ಸ್ಥಳೀಯವಾಗಿ ದೊರಕುತ್ತಿದ್ದ ಸಸ್ಯಗಳಿಂದ ತಯಾರಿಸಿದ ವರ್ಣಗಳನ್ನು ಉಪಯೋಗಿಸುತ್ತಿದ್ದರು. ಈಗ ಸಿದ್ಧಪಡಿಸಿದ ಕೆಂಪು, ಹಳದಿ, ನೀಲಿ, ಹಸಿರು ವರ್ಣಗಳನ್ನು ಅಕ್ಕಿಹಿಟ್ಟು, ಅಂಟು, ಎಣ್ಣೆ ಮುಂತಾದುವುಗಳೊಂದಿಗೆ ಮಿಶ್ರಮಾಡಿ, ಚಿತ್ರರಚನೆಗೆ ಉಪಯೋಗಿಸುವರು. ಮಧುಬನಿ ಕಲಾವಿದರು ತಮ್ಮ ಕಲ್ಪನೆಗಳನ್ನು ಚಿತ್ರದಲ್ಲಿ ಮೂಡಿಸುವುದು ತುಂಬಾ ಆಸಕ್ತಿಯನ್ನುಂಟು ಮಾಡುತ್ತದೆ ಮತ್ತು ಅವರ ಕಥನ ಚಿತ್ರಗಳು ಭಾವನಾತ್ಮಕವಾಗಿರುತ್ತವೆ. ಈ ಚಿತ್ರಗಳು ವಿಶ್ವದ ಕಲೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿವೆ.

**ಮರಿ**

## ಮಧುರೆ

ಪಾಂಡ್ಯರ ಪ್ರಾಚೀನ ರಾಜಧಾನಿ. ಪ್ರಾಚೀನ ಭಾರತದಲ್ಲಿ ಸುವ್ಯವಸ್ಥಿತ ರೀತಿಯಲ್ಲಿ ನಿರ್ಮಿಸಿರುವ ನಗರಗಳಲ್ಲೊಂದು. ಇಲ್ಲಿನ ಎಲ್ಲ ಮಾರ್ಗವೂ ದೇವಾಲಯುವನ್ನು ಕೇಂದ್ರಬಿಂದುವಾಗಿಸಿಕೊಂಡು ಅತ್ತಲೇ ಗಮಿಸುವಂತೆ ಮಾರ್ಗ ವ್ಯವಸ್ಥೆ ರೂಪುಗೊಂಡಿದೆ.

ಮನಸೆಳೆವ ಗಗನಚುಂಬಿಗೋಪುರಗಳು, ಪ್ರವಾಸಿಗರನ್ನು ಭಕ್ತರನ್ನು ಮೀನಾಕ್ಷಿ-ಸುಂದರೇಶ್ವರರ ದೇವಾಲಯುಗಳೆಡೆ ಸೆಳೆಯುತ್ತದೆ. ಇವು ಇತ್ತೀಚಿನವು ಎಂದರೆ ೧೭ನೇ ಶತಮಾನದ ತಿರುಮಲನಾಯಕರ ಕಾಲದ್ದು. ಆದರೆ, ನಾಲ್ಕು ಆಸ್ಥಾನಗಳು, ಮಾತ್ರ ಪುರಾತನವಾದವು. ನಡುವಣದೇವಾಲಯ ನಂದಿ ಮಂಟಪದೊಡಗೂಡಿದ್ದು, ಅದರ ಕಿರುಕಂಬಗಳ ಅಂಗಳ, ಒಳಗಣ ಗರ್ಭಗುಡಿ, ಒಂದು ಅಂಕಣವನ್ನು ಒಳಗೊಂಡು, ಆ ಅಂಕಣವು ಪೂರ್ವ ಪಶ್ಚಿಮ ದಿಸೆಗಳಲ್ಲಿ ಗೋಪುರ, ಪ್ರವೇಶ ದ್ವಾರಗಳಿಂದಾವೃತವಾಗಿವೆ. ಗರ್ಭಗುಡಿಯ ವಿಮಾನವು, ಸಮತಲದ ಚಾವಣಿಯಿಂದ ಮೇಲಕ್ಕೇರುತ್ತದೆ. ವಿಸ್ತಾರವಾದ ಚತುಶ್ಶಾಲೆ, ದೇವಿಯ ಸುಂದರ ಮಂದಿರ, ಮನೋಜ್ಞ

ಮೀನಾಕ್ಷಿದೇವಿ ಮಂದಿರದೆದುರು, "ಸ್ವರ್ಣವರ್ಣ ಪುಷ್ಕರಿಣಿ"ಯಿದೆ. ಅಂಗಳದಾಚೆ, ಉತ್ತರಕ್ಕೆ ಸಾವಿರ ಕಂಬಗಳ ಅಂಕಣವಿದೆ. ಉದ್ದವಾದ ಕಂಬಸಾಲಿನ ತೊಟ್ಟಿಗಳು, ಸಭಾಸ್ಥಾನಗಳು, ದೇವಾಲಯ ಸಂಕೀರ್ಣವೇ ಬೃಹತ್ತಾದದ್ದು. ಮಂದಿರದೆದುರು ಇರುವ ಸ್ತಂಭ ಶಾಲೆಗೆ, "ಅಷ್ಟಶಕ್ತಿ ಮಂಟಪ"ವೆನ್ನುತ್ತಾರೆ. ಅಷ್ಟಸಿದ್ಧಿಗಳ ಮೂರ್ತಿಶಿಲ್ಪವಿದೆ. ಇವಕ್ಕೆ ಸೇರಿದ್ದು-"ಯಾಲಿ" ಮಂಟಪ ವಿರಳವೆನಿಸುವ ಹದ್ದಿನ ತಲೆ, ರೆಕ್ಕೆ, ಸಿಂಹದ ಕಾಲು, ಇರುವ ಒಂದು ಪೌರಾಣಿಕ ಪ್ರಾಣಿಯ ಶಿಲ್ಪವಿದೆ. ಕೊಳದ ಒಂದು ಭಾಗದ ಭಿತ್ತಿಯಲ್ಲಿ ಶಿವಪುರಾಣಕ್ಕೆ ಸಂಬಂಧಿಸಿದ ಭಿತ್ತಿಚಿತ್ರಗಳಿವೆ. ದೇವಾಲಯದ ಒಂದು ಭಾಗದಲ್ಲೇ ಇರುವ ವಸ್ತು ಪ್ರದರ್ಶನಾಲಯದಲ್ಲಿ ಇಲ್ಲಿಯ ಭಿತ್ತಿಚಿತ್ರಗಳನ್ನು ಅದೇ ಅಳತೆಗೆ ನಕಲು ಮಾಡಿಸಿ

ಇರಿಸಿದ್ದಾರೆ. ಊರ ಇನ್ನೊಂದು ಭಾಗದಲ್ಲಿ ತಿರುಮಲ ನಾಯಕನ ಅರಮನೆಯಿದ್ದು, ಭವ್ಯವಾದ ಕಂಬಗಳಿಂದ ಕೂಡಿದ ಬೃಹದಾಕಾರದ ರಚನೆಯಾಗಿದೆ.

ನಿಕ್ಸಾ

## ಮನೋವಿಲಾಸಿಯುಗ

ಈ ಯುಗದಲ್ಲಿ ಕಲೆ ಮೊದಲಾದವುಗಳಲ್ಲಿ ಮಾನವನ ಅದಮ್ಯ ಸುಪ್ತಚೇತನ ಪ್ರಕಟಗೊಳ್ಳಬೇಕೆಂಬ ಹೊಸ ಆದರ್ಶ ಕಾಣಿಸಿಕೊಂಡಿತು.

೧೮ನೇ ಶತಮಾನದಲ್ಲಿ ಕಲೆ ಹೀಗೆಯೇ ಇರಬೇಕು ಅದರಲ್ಲಿ ಸೌಂದರ್ಯವೆಂಬುದು ಹೀಗೆಯೇ ಪ್ರಕಟಗೊಳ್ಳಬೇಕು, ಹೀಗಿದ್ದರೆ ಮಾತ್ರವೇ ಸುಂದರ ಎಂಬ ನಿಯಮಗಳನ್ನು ಬಿಟ್ಟರು. ಇಲ್ಲಿ ಕಲಾತಂತ್ರ ಮುಖ್ಯವಲ್ಲ ಕಲೆ ಎಂಬುದು ವ್ಯಕ್ತಿಯ ಅನುಭವದಿಂದ ಪ್ರೇರಿತವಾಗಬೇಕಾದ ಕ್ರಿಯೆ; ಅದರಲ್ಲಿ ಶಕ್ತಿಯುತವಾದ ಭಾವನೆಗಳು ಹೊರಹೊಮ್ಮಬೇಕು, ಸ್ಫೂರ್ತಿ ಮತ್ತು ಪ್ರತಿಭೆಗಳಿಂದ ಕಲೆಯನ್ನಳೆಯಬೇಕು, ಕಲೆ ಎಂಬುದು ವ್ಯಕ್ತಿಯ ಆದರ್ಶ, ಅನುಭವಗಳು ಸತ್ವಪೂರ್ಣವಾಗಿ ಇಲ್ಲಿ ಕಾಣಿಸಿಕೊಳ್ಳಬೇಕೆಂಬ ವ್ಯಾಖ್ಯೆಗೆ ಮಹತ್ವಕೊಟ್ಟರು. ಇದೆ ಮನೋವಿಲಾಸಿ ಯುಗದ ಕಲೆ..



ಟರ್ನರ್

ಈ ಬಗೆಯ ಮನೋವಿಲಾಸದ ಪ್ರವೃತ್ತಿಯ ೧೮ನೇ ಶತಮಾನದ ಚಿತ್ರಕಾರರು ತಮ್ಮ ಸಮಕಾಲೀನ ನಿತ್ಯಜೀವನದಿಂದ ಚಿತ್ರವಸ್ತುಗಳನ್ನು ಆರಿಸಿಕೊಳ್ಳತೊಡಗಿದರು. ಗೃಹಕೃತ್ಯದ, ಮಕ್ಕಳ ಚಿತ್ರಗಳನ್ನು ಬಾರ್ತಲೋಮಿಯೋ, ಮುರಿಲ್ಲೋ, ಜೋಶುವಾ, ರೆನಾಲ್ಡರಂಥ ಕಲಾವಿದರು ರಚಿಸತೊಡಗಿದರು. ಅದೇ ಬಗೆಯಲ್ಲಿ ಮುಂದಿನವರು ಭಾವನಾಪರದೃಷ್ಟಿಗೂ, ಕಲೆಗೂ ಇನ್ನಷ್ಟು ಹೆಚ್ಚಿನ ಸಂಬಂಧ ಬೆಳೆಯಿಸತೊಡಗಿದರು. ಇದರಿಂದಾಗಿ ನಿಸರ್ಗದ ರಮಣೀಯತೆಯನ್ನು, ಭವ್ಯತೆಯನ್ನೂ ಚಿತ್ರಿಸುವ ಮನೋಲಹರಿ ಚಿತ್ರಕಾರರಲ್ಲಿ ಹೆಚ್ಚಾಗತೊಡಗಿತು.

ನಗರ ಕೃತಕ ಜೀವನದಿಂದ ಬೇಸರಗೊಂಡು ನೈಸರ್ಗಿಕ ದೃಶ್ಯಗಳನ್ನು ಜಲವರ್ಣದಿಂದ ತೈಲವರ್ಣಗಳಲ್ಲಿ ರಚಿಸತೊಡಗಿದರು. ಜಾನ್‌ಕಾನ್ಸಟೇಬಲ್ ಮತ್ತು ಜೆ. ಎಂ. ಡಬ್ಲ್ಯೂ ಟರ್ನರನಂಥ ಚಿತ್ರಕಾರರು ಇನ್ನಷ್ಟು ಶೋಧಕ ದೃಷ್ಟಿಯಿಂದ ರಚಿಸಿದರು. ವಿಲಿಂಬ್ಲೈಕ್‌ನಂಥ ಮನೋವಿಲಾಸಿ ಚಿತ್ರಕಾರ ತಮ್ಮ ಕಲ್ಪನಾವಿಲಾಸಕ್ಕೆ ಒದಗುವ ರೀತಿಯಲ್ಲಿ ನಿತ್ಯಜೀವನದ ವಸ್ತುಗಳನ್ನು ಬಿಟ್ಟು, ವಿಷಯಗಳಿಗೆ ಅನ್ವರ್ಥವಾಗುವ ರೀತಿಯಲ್ಲಿ ಕಾಲ್ಪನಿಕ ಚಿತ್ರ ಬರೆದರು.

ವಾಸ್ತುಕೃತಿಗಳಲ್ಲೂ ವಿಭಿನ್ನ ಶೈಲಿಯಲ್ಲಿ ತಮಗೆ ಬೇಕಾದುದನ್ನು ಆರಿಸಿ ಬಳಸತೊಡಗಿದರು. ಒಂದೇ ವಾಸ್ತುವಿನಲ್ಲಿ ಗ್ರೀಕ್ ಮುಖಮಂಟಪ, ರೋಮನ್ ಕುಂಭಕ, ಇನ್ನಾವುದೋ ಸ್ತಂಭರಾಜಿ ಮೊದಲಾದವುಗಳನ್ನು ಜೋಡಿಸಿ ಹೊಸ ಗೃಹಗಳನ್ನು ಸೃಷ್ಟಿಸಿದರು.

ಶಿಲ್ಪನಿರ್ಮಾಣ ಮನೋವಿಲಾಸಕ್ಕೊದಗುವ ಮಾಧ್ಯಮವಲ್ಲ. ಆದುದರಿಂದ ಶಿಲ್ಪ ಹೆಚ್ಚಾಗಿ ಸೃಷ್ಟಿ ಆಗಲಿಲ್ಲ. ಕೆಲವರು ಮಾತ್ರ ಈ ಮಾರ್ಗ ಅನುಸರಿಸಿದರು. ಎಂಟೋಣಿಯೋ ಕೆನೋವಾ(೧೭೫೭-೧೮೨೨) ರೂಡಫೆಂಕೋ ಮುಂತಾದವರನ್ನು ಹೆಸರಿಸಬಹುದು.

ಮನೋವಿಲಾಸಿ ಪಂಥದ ಗಾಳಿ ಫ್ರಾನ್ಸ್, ಇಂಗ್ಲೆಂಡ್‌ಗಳಲ್ಲಿ ಮಾತ್ರವಲ್ಲ ಈ ಅವಧಿಯಲ್ಲಿ ಜರ್ಮನಿ, ಇಟಲಿ, ಯುನೈಟೆಡ್ ಸ್ಟೇಟ್ಸ್ ಮೊದಲಾದ ದೇಶಗಳಿಗೂ ಹಬ್ಬಿ ಅನುಯಾಯಿಗಳನ್ನು ಗಳಿಸಿತು.

ಅ.ಗ.

## ಮಹಾಬಲಿಪುರ

ಮದರಾಸಿನಿಂದ ಮೂವತ್ತೆರಡು ಮೈಲಿ ದೂರದಲ್ಲಿರುವ ಮಹಾಬಲಿಪುರ ಪಲ್ಲವರ ಕಾಲದಲ್ಲಿ ಶಿಲ್ಪಕಲೆಯ ತೌರಾಗಿತ್ತು. ಒಂದನೇ ಮಹೇಂದ್ರವರ್ಮನ್ ಮತ್ತು ಒಂದನೇ ನರಸಿಂಹವರ್ಮನ್ ಕಲಾಭಿರುಚಿಯ ಸಂಕೇತವಾಗಿ ಸುಪ್ರಸಿದ್ಧ ಮಂಟಪಗಳೂ, ಶಿಲಾರಥಗಳೂ ನಿರ್ಮಾಣವಾಗಿವೆ. ಮಹಾಮಲ್ಲನ ಕಾಲದಲ್ಲಿ ಮಂಟಪಗಳು ಕಂಬಗಳು ಮತ್ತು ಕಲ್ಲು ಗೋಡೆಗಳು ಅನೇಕ ಪೌರಾಣಿಕ ಚಿತ್ರಗಳಿಂದ ಕೂಡಿದ ಸುಂದರವಾದ ಹತ್ತು ಮಂಟಪಗಳನ್ನು ಕಟ್ಟಲಾಗಿದೆ. ವರಾಹ ಮಂಟಪದಲ್ಲಿ ವಿಷ್ಣುವಿನ ಅವತಾರಗಳನ್ನು ಕೆತ್ತಲಾಗಿದೆ. ಅವುಗಳ ಜೊತೆಯಲ್ಲಿ ಸೂರ್ಯ, ದುರ್ಗಿ, ಗಜಲಕ್ಷ್ಮಿ ಚಿತ್ರಗಳನ್ನೂ ಕೆತ್ತಲಾಗಿದೆ. ಸಿಂಹವಿಷ್ಣು ಒಂದನೇ ಮಹೇಂದ್ರವರ್ಮನ್ ಮತ್ತು ಅವನ ರಾಣಿಯರ ಶಿಲಾಕೃತಿಗಳು ಮನಮೋಹಕವಾಗಿವೆ. ಪಂಚಪಾಂಡವರ ಮಂಟಪದಲ್ಲಿ ಅನಂತಶಯನ, ಮಹಿಷಾಸುರ ಮರ್ದಿನಿ, ಶ್ರೀಕೃಷ್ಣನು



ಗೋವರ್ಧನ ಗಿರಿಯನ್ನು ಎತ್ತಿ ಹಿಡಿದಿರುವ ಶಿಲ್ಪಕಲಾಕೃತಿಗಳನ್ನು ಕೆತ್ತಲಾಗಿದೆ. ನರಸಿಂಹವರ್ಮ ಮಾಮಲ್ಲಾಪುರದಲ್ಲಿ ಸಪ್ತಮಂಟಪಗಳನ್ನು ಕಟ್ಟಿಸಿದ್ದಾನೆ.

ವಿಶ್ವವಿಖ್ಯಾತಿಯನ್ನು ಪಡೆದ ಎಂಟು ಶಿಲಾರಥಗಳು ಮಹಾಬಲಿಪುರದಲ್ಲಿವೆ. ಶಿಲಾರಥಗಳನ್ನು ಪಂಚಪಾಂಡವರ ಮತ್ತು ದ್ರೌಪದಿಯ ಹೆಸರಿನಲ್ಲಿ ಕರೆಯಲಾಗಿದೆ. ಎಲ್ಲೋರದ ಕೈಲಾಸ ದೇವಾಲಯದಂತೆ ಇಲ್ಲಿಯೂ ಒಂದೇ ಶಿಲೆಯಲ್ಲಿಯೇ ಕೊರೆದಿದೆ. ಇವು ಒಂದೊಂದು ದೇವಸ್ಥಾನದ ವಿನ್ಯಾಸವನ್ನು ಪಡೆದಿವೆ. ಚಿಕ್ಕ ರಥ ದ್ರೌಪದಿಯದು. ಭೀಮನ ರಥ ಮೂರು ಹಂತಗಳಲ್ಲಿ ನಿರ್ಮಿಸಿದೆ. ರಥಗಳ ಮೇಲಿರುವ ಕೆತ್ತನೆ ಕೆಲಸ ಆಕರ್ಷಕವಾಗಿದೆ.

ತೊಂಬತ್ತೆಂಟು ಅಡಿ ಉದ್ದ, ನಲವತ್ತೂರು ಅಡಿ ಅಗಲ ಮತ್ತು ಮೂವತ್ತು ಅಡಿಗಳಷ್ಟು ಎತ್ತರದ ಒಂದೇ ಬಂಡೆಕಲ್ಲಿನಲ್ಲಿ ಕೆತ್ತಲಾಗಿರುವ ದೇವಗಂಗೆಯ ಭೂಸ್ಪರ್ಶದ ದೃಶ್ಯ ಅತ್ಯಂತ ಮನಮೋಹಕವಾಗಿದೆ. ವಿದ್ವಾಂಸರು ಭಗೀರತನು ಭಾಗೀರಥಿಯನ್ನು ದೇವಲೋಕದಿಂದ ಭೂಮಿಗೆ ಕರೆತರುತ್ತಿರುವ ದೃಶ್ಯವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ದೇವಗಂಗೆಯು ಧರೆಗೆ ಇಳಿಯುತ್ತಿರುವ ದೃಶ್ಯದ ಸುತ್ತಲೂ ಸಕಲ ಜೀವರಾಶಿಗಳನ್ನು ಬಿಡಿಸಿದ್ದಾನೆ. ನಿಂತ ಶಿವನ ಮೂರ್ತಿ, ತಪಸ್ಸು ಮಾಡುತ್ತಿರುವ ಭಗೀರಥ, ಅವನಂತೆಯೆ ನಿಂತು ತಪಸ್ಸು ಮಾಡುತ್ತಿರುವ ಬೆಕ್ಕು, ಅದರ ಹತ್ತಿರ ಭಯವಿಲ್ಲದೆ ಓಡಾಡುತ್ತಿರುವ ಇಲಿಗಳು. ಈ ದೃಶ್ಯವನ್ನು ನೋಡುತ್ತ ಗುಹೆಯ ಬಾಗಿಲಿನಲ್ಲಿ ನಿಂತಿರುವ ಜೋಡಿ ಜಿಂಕೆಗಳು ಮತ್ತು ಮರ್ಕಟಗಳ ಸಮೂಹ ಮುಂತಾದುವನ್ನು ಶಿಲ್ಪವಾಸ್ತವಿಕತೆಯನ್ನು ಬಿತ್ತರಿಸುತ್ತದೆ. ಅತ್ಯಂತ ಮನೋಜ್ಞವಾಗಿ ಶಿಲ್ಪ ಬಿಡಿಸಿದ್ದಾನೆ. ಈ ಶಿಲ್ಪಗುಚ್ಛವನ್ನು ಮೇರು ಸದೃಶವಾದುದೆಂದು ತಜ್ಞರು ನಿರ್ಣಯಿಸಿದ್ದಾರೆ.

ಸಮುದ್ರ ತೀರದಲ್ಲಿರುವ ಜೋಡಿ ಕಲಶಗಳ ದೇವಾಲಯ ಶಿವ ಮತ್ತು ಅನಂತಶಯನ ನದಾಗಿದ್ದು ಅಪರೂಪದ ವಿನ್ಯಾಸದಿಂದಾಗಿ ಪ್ರಸಿದ್ಧವಾಗಿದೆ.

ಮೇಲಿನ ಶಿಲ್ಪ ಕಲಾಕೃತಿಗಳಲ್ಲದೆ ತಿರುದೇವಸ್ಥಾನ, ಈಶ್ವರ ಮತ್ತು ಮುಕುಂದ ದೇವಸ್ಥಾನಗಳು ಮಹಾಬಲಿಪುರದ ಪ್ರಸಿದ್ಧ ದೇವಸ್ಥಾನಗಳು. ಕೋಟಿಕಾಲ್ ಮಂಟಪ, ವರಹಾವತಾರ ಗುಹೆ ಇತ್ಯಾದಿಗಳಲ್ಲಿ ಶಿಲ್ಪಗಳಿಗೆ ಬಣ್ಣ ತೊಡದಿರುವ ಗುರುತುಗಳು ಇಂದಿಗೂ ಉಳಿದು ಬಂದಿದೆ.

ಮಹಾಬಲಿಪುರದಲ್ಲಿ ಶಿಲ್ಪಶಾಲೆಯೊಂದಿದ್ದು ಪಲ್ಲವ ಚೋಳ ಶೈಲಿಯಲ್ಲಿ ಶಿಲ್ಪಗಳನ್ನು ರೂಪಿಸುವ ನೂರಾರು ಶಿಲ್ಪಿಗಳನ್ನು ಅವರ ಕಾರ್ಯಾಗಾರಗಳನ್ನು ನೋಡಬಹುದು.

ಎಚ್. ಜ.

## ಮಹಾಮಂಟಪ

ಅಂತರಾಳದ ಮುಂದಿನ ಭಾಗ ಮಹಾಮಂಟಪ. ಇದನ್ನು 'ನವರಂಗ'ವೆನ್ನುತ್ತಾರೆ. ಶ್ರವಣಬೆಳಗೊಳದ ಶಾಸನವೊಂದು 'ನವಖಂಡ'ವೆಂದು ಇದನ್ನು ಹೆಸರಿಸಿದೆ. ಇದು ತೆರೆದ ಅಥವಾ ಮುಚ್ಚಿದ ಮಂಟಪವಾಗಿರಬಹುದು. ತೆರೆದ ಮಂಟಪಗಳಿಗೆ 'ಕಕ್ಷಾಸನ'ವನ್ನು ಜೋಡಿಸಿರುವುದುಂಟು. ಈ ಮಂಟಪದ ಮಧ್ಯದಲ್ಲಿ ವೇದಿಕೆಯನ್ನು ಹೊಂದಿರುವುದುಂಟು ಆದ್ದರಿಂದಲೇ ಇದನ್ನು 'ನೃತ್ಯಗೇಹ'ವೆಂದೂ, ರಂಗಮಂಟಪ, ನೃತ್ಯಮಂಟಪವೆಂದೂ ಕೂಡ ಕರೆಯಲಾಗುತ್ತದೆ. ದೇವರಿಗೆ ಸಲ್ಲುವ ರಂಗಭೋಗದ ಅಂಗವಾದ ನೃತ್ಯ-ವಾದ್ಯ-ಸಂಗೀತಾದಿ ಕಾರ್ಯಕ್ರಮಗಳು ಇಲ್ಲಿಯೇ ನಡೆಯುವುದು. ಅವನ್ನು ವೀಕ್ಷಿಸಲು ಜನರು ಸೇರಿ ನೆರೆಯುವುದು ಇಲ್ಲಿಯೇ. ಸಾಮಾನ್ಯವಾಗಿ ಚಚ್ಚೌಕವಾದ ಹಜಾರವನ್ನು ಒಂಬತ್ತು ಅಂಕಣಗಳಂತೆ ವಿಭಾಗಿಸಿರುವಂತಿರುವ ನವರಂಗದ ಭುವನೇಶ್ವರಿಯಲ್ಲಿ ಸೂಕ್ಷ್ಮವಾದ ಕೆತ್ತನೆ ಕೆಲಸ, ಉಬ್ಬುಚ್ಚಿನ ಶಿಲ್ಪಗಳನ್ನೂ ಸಪಾಟಾದ ಮೇಲ್ಭಾವಣಿ ಇದ್ದಲ್ಲಿ ಚಿತ್ರಕಲೆಯನ್ನೂ ಕಾಣಬಹುದು.

ಪಿ.ವಿ.ಕೆ.

## ಮರಳುಗಲ್ಲು

ಸಿಮೆಂಟಿನಂತೆ ಉಪಯೋಗಿಸಲ್ಪಡುವ ಉಸುಕಿನ ಹರಳು, ಸಿಲಿಕಾ(Silica) ಪದಾರ್ಥ, ಐಯರ್ನ ಆಕ್ಸಾಯಿಡ್(Iron Oxide) ಅಥವಾ ಕ್ಯಾಲ್ಸಾಯಿಟ್(Calcite) ಇವೆಲ್ಲವುಗಳನ್ನೊಳಗೊಂಡ ಪದರುಕಲ್ಲಿಗೆ ಸ್ಯಾಂಡ್‌ಸ್ಟೋನ್ ಇಲ್ಲವೆ ಮರಳುಗಲ್ಲು ಎನ್ನುತ್ತಾರೆ. ಇದ್ದಸ್ಥಿತಿಯಲ್ಲೇ ಸುಲಭವಾಗಿ ಇದನ್ನು ಶಿಲ್ಪಕೆಲಸಕ್ಕೆ ಬಳಸಿಕೊಳ್ಳಬಹುದು. ಕಬ್ಬಿಣದಂಶವನ್ನೊಳಗೊಂಡ ಅಥವಾ ಕಬ್ಬಿಣವೇ ಪ್ರಮುಖವಾದ ಈ ಮರಳುಗಲ್ಲುಗಳು ಬೂದು ಅಥವಾ ಹಳದಿ, ಕಂದು ಅಥವಾ ಕೆಂಪು ಬಣ್ಣದವುಗಳಾಗಿರುತ್ತವೆ. ಅದರಂತೆ ಗ್ಲೋಕೋನಾಯಿಟ್(Glauconite)ನ್ನೊಳಗೊಂಡ ಮರಳುಗಲ್ಲು ಹಸಿರು ಬಣ್ಣದ್ದಾಗಿರುತ್ತದೆ.

ಅ.ಜಾ.

## ಮಾಡೆಲಿಂಗ್ ( Modelling)

**ಮಾಡೆಲಿಂಗ್**(Modelling)– ೧) ಮೂರ್ತಿಯನ್ನು ಮಾಡಲು ಬಳಸಲಾಗುವ ವಸ್ತುವನ್ನು ಕೆತ್ತದೆ(ಮೆತ್ತಿ) ರೂಪಕೊಡುವ ಕೌಶಲ್ಯಕ್ಕೆ ಮಾಡೆಲಿಂಗ್ ಎನ್ನುತ್ತಾರೆ. ೨. ಚಿತ್ರ ಹಾಗೂ ರೇಖಾಚಿತ್ರಗಳಲ್ಲಿ ಮೂರು ಆಯಾಮದ ಆಕೃತಿಯ ಆಳವನ್ನು ತೋರಿಸಲು ಪಾತಳಿರೇಖೆ ಹಾಗೂ ಛಾಯೆಗಳನ್ನು ಬಳಸಲಾಗುತ್ತದೆ. ಇದಕ್ಕೂ ಮಾಡೆಲಿಂಗ್ ಎನ್ನುತ್ತಾರೆ. ಯಾವುದೇ ಸಮತಲದಲ್ಲಿ ಈ ತಂತ್ರವನ್ನು ಬಳಸಿ ಆಯಾಮಗಳ ಕಲ್ಪನೆ ಕೊಡಬಹುದಾಗಿದೆ.

**ಮಾಡೆಲಿಂಗ್ ಕ್ಲೇ**(Modelling Clay)– ಕೇವಲ ಜೇಡಿಮಣ್ಣು ಅಥವಾ ಅದರೊಡನೆ ಉಪಯೋಗಿಸುವ ವಸ್ತುವನ್ನು ಮಾಡೆಲಿಂಗ್ ಕ್ಲೇ ಎನ್ನುತ್ತಾರೆ. ವ್ಯಾಪಾರಿ ಉದ್ದೇಶದಿಂದ ಮಣ್ಣಿಗೆ ಬದಲಾಗಿ ಅದರಂತಹ ಕೃತಕ ಮಾಧ್ಯಮಗಳನ್ನು ಬಳಸಿ ಮೂರ್ತಿಯನ್ನು ತಯಾರಿಸುವುದಕ್ಕೂ ಈ ಪದ ಅನ್ವಯವಾಗುತ್ತದೆ.

**ಮಾಡೆಲಿಂಗ್ ಪೇಸ್ಟ್** (Modelling Paste)– ದಪ್ಪವಾಗಿ ಬಣ್ಣ ಹಾಕುವ (Impasto) ಶೈಲಿಯಲ್ಲಿ ಆಕ್ರಲಿಕ್ ಬಣ್ಣಗಳನ್ನು ಕೂಡಿಸುವುದಕ್ಕೆ ಬಳಸುವ ದಟ್ಟ ಲೇಹ್ಯ (heavy paste)

**ಮಾಡೆಲೊ** (Modello)– ನಿರ್ಮಿಸಲಿರುವ ದೊಡ್ಡ ಶಿಲ್ಪ ಅಥವಾ ಚಿತ್ರದ ಕಲ್ಪನೆಯನ್ನು ಉಂಟುಮಾಡುವ ಸಣ್ಣ ಮಾದರಿ.

ಅ.ಜಾ.

## ಮಾದರಿ ನಕ್ಷೆ (Cartoon)

"ಕಾರ್ಟೂನ್"ಎಂಬ ಪದವು ಇಂದು ವಿಡಂಬನಾತ್ಮಕ ಚಿತ್ರಕೃತಿಗಳನ್ನು ಕುರಿತು ಹೇಳುತ್ತಿದೆಯಾದರೂ ಕಾರ್ಟೂನ್ ಎಂಬುದು ವರ್ಣಚಿತ್ರ ರಚನೆಗಾಗಲೀ ಪರದೆಗಳ ಮೇಲಿನ ಚಿತ್ರಗಳಿಗಾಗಲೀ ಕೆತ್ತನೆಯ ಕಲಾಕೃತಿಗಳ ರಚನೆಗಾಗಲಿ ಮಾದರಿಯಾಗುವಂತೆ, ದಪ್ಪ ಕಾಗದದ ಮೇಲೆ ಬರೆದ ನಕ್ಷೆ ಅಥವಾ ಮಾದರಿ ನಕ್ಷೆ ಎಂಬ ಅರ್ಥವನ್ನು ಕೊಡುತ್ತದೆ.

ಹಿಂದೆ ದೊಡ್ಡ ಪ್ರಮಾಣದ ಫ್ರೆಸ್ಕೋ, ಮ್ಯೂರಾಲ್ ಇಲ್ಲವೆ ಮೊಸಾಯಿಕ್ ಮುಂತಾದ ಕಲಾಕೃತಿಗಳನ್ನು ಗೋಡೆಗಳ ಮೇಲೆ ರಚಿಸಲು, ಮಾದರಿಗಾಗಿ ಗೋಡೆಗಳ ಅಳತೆಗೆ ಸರಿಯಾದ ದೊಡ್ಡ ದೊಡ್ಡ ಕಾಗದಗಳ ಮೇಲೆ ಮಾದರಿ ಚಿತ್ರಗಳ ರೇಖಾಚಿತ್ರವನ್ನು ಬರೆದುಕೊಂಡು, ಆಕೃತಿಗಳ ಬಾಹ್ಯರೇಖೆಗಳ ಗುಂಟ ಸೂಜಿಯಿಂದ ಸಣ್ಣ ಸಣ್ಣ ತೂತುಗಳನ್ನು ಮಾಡಿ, ಈ ತೂತುಗಳ ಮೇಲೆ ಬಣ್ಣ ಬಳಿದು, ಆಕೃತಿಗಳ ಬಾಹ್ಯರೇಖೆಗಳನ್ನು ಗೋಡೆಯ ಮೇಲಿನ ಹಸಿಯಾಗಿರುವ ಚಿತ್ರವೇದಿಕೆಯ ಮೇಲೆ ಮೂಡಿಸಿಕೊಂಡು, ನಂತರ ಚಿತ್ರವನ್ನು ಪೂರ್ಣಗೊಳಿಸಲಾಗುತ್ತಿತ್ತು. ಕಾಗದದ ಮೇಲೆ ಪೂರ್ಣಚಿತ್ರಾಕೃತಿಯನ್ನು ಇದ್ದಲು ಇಲ್ಲವೇ ಸೀಮೆ ಸುಣ್ಣದಿಂದ ಎಳೆದ ಬಾಹ್ಯರೇಖೆಗಳಿಂದ ಚಿತ್ರಿಸಿಕೊಳ್ಳಲಾಗುತ್ತಿತ್ತು.

ಶಾ. ದಿ.

## ಮಾನ, ಪ್ರಮಾಣ

| | |
|---|---|
| ೧. ಮಾನ | ಪೂರ್ವ ಪಶ್ಚಿಮಗಳನ್ನಾಗಲೀ, ದಕ್ಷಿಣೋತ್ತರಗಳನ್ನಾಗಲೀ ಅಳೆಯುವ ದೀರ್ಘಮಾನ. |
| ೨. ಪ್ರಮಾಣ | ಸ್ಥಳಗಳ ಅಗಲವನ್ನು ಅಳೆಯುವ ಮಾನ |
| ೩. ಉನ್ಮಾನ | ಎತ್ತರ, ಗಾತ್ರವನ್ನು ಅಳೆಯುವ ಮಾನ |
| ೪. ಪರಿಮಾಣ | ಆಳವನ್ನು ಅಳೆಯುವ ಮಾನ |
| ೫. ಉಪಮಾನ | ಇಳಿಜಾರನ್ನು, ವಕ್ರತೆಗಳನ್ನು (ಉಬ್ಬು ತಗ್ಗುಗಳನ್ನು) ಅಳೆಯುವ ಮಾನ. |
| ೬. ಲಂಬಮಾನ | ನಿಲುವನ್ನು ಅಳೆಯುವ ಮಾನ. |

ಶಾಸ್ತ್ರಕಾರರು ಮೇಲೆ ಹೇಳಿದ ಮಾನ ಪ್ರಮಾಣಗಳನ್ನು ಯಾವ ನಿರ್ಮಾಣಗಳಲ್ಲಿ ಹೇಗೆ ಉಪಯೋಗಿಸಬೇಕೆಂಬುದನ್ನು ವಿವರಿಸಿದ್ದಾರೆ.

೧) ಅಂಗುಲ ಪ್ರಮಾಣವನ್ನು ಗೃಹ ದೇವಾಲಯಗಳ ದ್ವಾರಗಳಿಗೂ, ದೇವ ಮೂರ್ತಿಗಳಿಗೂ ಬಳಸುತ್ತಾರೆ. ೨) ಶಿಸು ಹಸ್ತ(ಕಿಷ್ಕು) ಪ್ರಮಾಣವನ್ನು ರಥಗಳಿಗೆ, ವಾಹನಗಳಿಗೆ, ಪೀಠಗಳಿಗೆ ಬಳಸುತ್ತಾರೆ. ೩) ಪ್ರಾಜಾಪತ್ಯ ಹಸ್ತವನ್ನು ಪ್ರಾಕಾರ, ವಿಮಾನ ಮಂಟಪ, ನಿವಾಸ, ಗೃಹ, ಶಾಲೆಗಳಿಗೆ ಉಪಯೋಗಿಸುತ್ತಾರೆ. ೪) ಧನುರ್ಮುಷ್ಟಿ ಪ್ರಮಾಣವನ್ನು ರಾಜಧಾನಿ, ಗ್ರಾಮ ತಟಾಕ ದುರ್ಗಗಳಿಗೆ ಬಳಸುತ್ತಾರೆ. ೫) ಧನುರ್ಗ್ರಹ ಪ್ರಮಾಣವನ್ನು ನಿರ್ಮಾಣ ಸ್ಥಳ, ಬೀದಿ, ರಾಜ ಬೀದಿಯ ಅಳತೆಗೆ ಬಳಸುತ್ತಾರೆ. ೬) ದಂಡ ಪ್ರಮಾಣ ಹಸ್ತವನ್ನು ನಗರಗಳಿಗೆ, ಹಳ್ಳಿಗಳಿಗೆ ಬಳಸುತ್ತಾರೆ. ೭) ರಜ್ಜು ಪ್ರಮಾಣವು ಮಾರ್ಗಗಳಿಗೆ, ಹೊಲಗಳನ್ನು ಅಳೆಯಲು ಬಳಸುತ್ತಾರೆ.

ದೇಕೋರೆ

## ಮ್ಯಾಜಿಕ್ ರಿಯಲಿಸ್ಂ

ನಮ್ಮ ಕಲಾಸಕ್ತರಲ್ಲಿ, ಕಲಾವಿದರಲ್ಲಿ ಎರಡು ಬಗೆ. ಬಹುಪಾಲು ಜನಗಳನ್ನೊಳಗೊಂಡ ಒಂದು ದೊಡ್ಡ ಗುಂಪು ನವ್ಯಕಲೆ (ಅಮೂರ್ತ) ರಮ್ಯ ಚಿತ್ರವನ್ನೆಲ್ಲ ಹಾಳು ಮಾಡಿತು ಎಂದು ಅಪಾದಿಸಿದರೆ ಇನ್ನೊಂದು ಗುಂಪು ರಮ್ಯ ಚಿತ್ರಕಲೆಯಿಂದ ಸೃಜನಾತ್ಮಕ ಚಿಂತನ, ಕೃತಿ ರಚನೆ ಸಾಧ್ಯವೇ? ಎಂದು ಮೂಗು ಮುರಿಯುತ್ತದೆ.

ಈ ಎರಡೂ ಗುಂಪಿನವರಿಗೂ ಒಂದು ಸವಾಲು ಮ್ಯಾಜಿಕ್ ರಿಯಲಿಸ್ಟ್ ಕಲಾವಿದರ ಗುಂಪು. ಇವು ೨೦ನೇ ಶತಮಾನದ ರಮ್ಯಕಲೆ ಹೇಗಿರಬೇಕೆಂಬುದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ. ಪ್ರಾಯಶಃ ಈ ಬಗೆಯ ರಮ್ಯಕಲೆಯಲ್ಲಿನ ಹೊಸ ಅಲೆ ಆರಂಭವಾದುದು ಆಂಡ್ರ್ಯೂ ವೈಯತ್ (೧೯೧೭-)ನಿಂದ ಎನ್ನಬಹುದು. ಅಮೂರ್ತ ಚಿತ್ರಕಲೆಯ ಧಾಳಿಯೇ ನಡೆಯುತ್ತಿದ್ದ ಆ ಕಾಲದಲ್ಲಿ ಅಮೂರ್ತ ಕಲೆ ಅಮೆರಿಕನ್ ಯುವ ಕಲಾವಿದರನ್ನು ಎಷ್ಟು ಆಕರ್ಷಿಸಿತ್ತೆಂದರೆ

ರಮ್ಯ ಕಲಾವಿದರ ಸೃಜನಾತ್ಮಕ ಪ್ರಜ್ಞೆ ಅಥವಾ ಬೌದ್ಧಿಕ ಮಟ್ಟ ಬಹಳ ಕಡಿಮೆಯೆಂಬುದು ಅವರ ಬಲವಾದ ನಂಬಿಕೆಯಾಗಿತ್ತು.

ವೈಯತ್, ಬಹಳ ಹಳೆಯದೆಂದು ಮೂಲೆಗುಂಪಾದ ಟೆಂಪರಾ ಮಾಧ್ಯಮವನ್ನೇ ಸೃಷ್ಟಿ ಮಾಧ್ಯಮವನ್ನಾಗಿಸಿಕೊಂಡ. ಅಲ್ಲದೇ ಇಟಾಲಿಯನ್ ಕಿರುಚಿತ್ರಗಳ ಕ್ಯಾಲಿಗ್ರಫಿಯನ್ನು ರೂಢಿಸಿಕೊಂಡ. ಇಷ್ಟಾದರೂ ಅವನು ಆರಿಸುತ್ತಿದ್ದ ವಸ್ತು ಮಾನವೀಯ ಭಾವನೆಗಳು. ತಾನೂ ಅಭಿವ್ಯಕ್ತಿಸುತ್ತಿದ್ದುದಲ್ಲದೇ ವೀಕ್ಷಕರಲ್ಲಿಯೂ ಭಾವನೆಗಳನ್ನು ಮಿಡಿಸುತ್ತಿದ್ದ.

ಇವನ ನಂತರ ಆ ಹಾದಿ ತುಳಿದವರೆಷ್ಟೋ ಮಂದಿ. ಅಲ್ಲದೇ ರಮ್ಯಕಲೆ ಮತ್ತೆ ಯುವ ಕಲಾವಿದರ ಗಮನವನ್ನು ತನ್ನತ್ತ ಸೆಳೆದುಕೊಂಡಿತು. ಅದರ ಪರಿಣಾಮ "ಮ್ಯಾಜಿಕ್ ರಿಯಲಿಸಂ" ಎಂಬ ಹೊಸ ಪಂಗಡದ ಉಗಮವಾಯ್ತು. ಹೆಚ್ಚಿನವರು. ಎಗ್ ಟೆಂಪೆರಾವನ್ನೇ ಬಳಸುತ್ತಿದ್ದರು.

ರಾಬರ್ಟ್ ರಿಕರಿ (೧೯೨೭-) ಅಮೆರಿಕನ್ ವಿಮರ್ಶಕರ ಪ್ರಕಾರ ಜಗತ್ತಿನ ಮಹೋನ್ನತ ಕುಶಲಕರ್ಮಿ. ಇವನು ಚಿತ್ರಗಳ ವಿಷದೀಕರಣದಲ್ಲಿ ವೈಯತ್‌ಗಿಂತ ಒಂದು ಹೆಜ್ಜೆ ಮುಂದೆ ಇಟ್ಟಿದ್ದಾನೆ. ವಿನ್ಯಾಸ ಪ್ರಜ್ಞೆಯೂ ಅಷ್ಟೇ ಹರಿತ. ನೆರಳು ಬೆಳಕಿನ ವಿಶಿಷ್ಟ ಕಲ್ಪನೆಯುಳ್ಳ ಈತನ ಚಿತ್ರಗಳು ಹೆಚ್ಚಿನ ರಮ್ಯ ಕಲಾವಿದರ ಚಿತ್ರಗಳಂತೆ ಜಡವಾಗಿರದೇ ಒಂದು ಸತ್ವಯುತ ಹೇಳಿಕೆಯಾಗಿರುತ್ತವೆ.

ಕಲಾವಿದ ಗ್ರಾಂಟ್‌ವುಡ್, ವರ್ಣಶಿಲ್ಪಿ ಅಲೆನ್ ಜೋನ್ಸ್, ಇವರ ಕೆಲವು ಕೃತಿಗಳು ಇಲ್ಲಿ ನೆನೆಯಬಹುದು.

ಬಿಕಾಸ್ ಭಟ್ಟಾಚಾರ್ಯರವರ "ಡಾಲ್ಫ್" ಮಾಲಿಕೆ, ಡಿ. ಎಲ್. ಎನ್. ರೆಡ್ಡಿಯವರ ಹಲವು ಚಿತ್ರಗಳನ್ನು ಇದರ ಪರಿಮಿತಿಯೊಳಗೆ ಸೇರಿಸಬಹುದು.

ರ.ಕಾಶಿ

## ಮ್ಯಾನೆರಿಸಂ (Mannerism)

ಇದು ಕಲಾ ಪುನರುಜ್ಜೀವನದ ಒಂದು ಶೈಲಿ ಅಥವಾ ಚಳವಳಿಯಾಗಿದೆ. ಅನಂತರದಲ್ಲಿ ಇದರ ಪತನವನ್ನು ಕಾಣಬಹುದು. ಮ್ಯಾನರಿಜಂವು ಒಂದು ಚರ್ಚಾಸ್ಪದವಾದ ವಿಷಯವಾಗಿದೆ. ಈ ಪದವು ಸುಮಾರು ೧೫೨೦ರಿಂದ ೧೫೯೦ರ ಅವಧಿಗೆ ಅನ್ವಯವಾಗುತ್ತಿದ್ದು. ಈ ಅವಧಿಯುHigh Renaissance ಕೊನೆಯ ಮತ್ತು Beroqueದ ಪ್ರಾರಂಭವನ್ನು ಒಳಗೊಳ್ಳುತ್ತದೆ. ಅನೇಕ ಇತಿಹಾಸಕಾರರು ಈ ಅವಧಿಯ ಮಾಸರಿಸ್ಟ್ ಕಲಾವಿದರನ್ನು ಒಪ್ಪಲಿಲ್ಲ. ಏಕೆಂದರೆ Late Gothic Mannerism ವು ಬೇರೆ ಅವಧಿಯ ಕಲಾಶೈಲಿಯ ಗುಣಲಕ್ಷಣಗಳನ್ನು ವಿವರಿಸಲೂ ಬಳಕೆಗೊಂಡಿದೆ. ಇದಕ್ಕೆ ವ್ಯತಿರಿಕ್ತವಾಗಿ Late Gothic Mannerist ಒಂದು ನಿಶ್ಚಿತ ಶೈಲಿಯ ಮೇಲೆ ಒತ್ತು ಕೊಡಲು, ಇನ್ನಿತರ ಶೈಲಿಗಳನ್ನು ಅಲ್ಲಗಳೆಯಲು, ಅತ್ಯುಕ್ತಿ ಅಥವಾ ವಿಕೃತಿಗಳ ಮೂಲಕ ಪ್ರಭಾವ ಮತ್ತು ಪರಿಣಾಮ ಬೀರುತ್ತಿದ್ದರು. ಕೆಲವು ಇಟ್ಯಾಲಿಯನ್ ಕಲಾವಿದರನ್ನು ಯಾವಾಗಲೂ 'ಮ್ಯಾನರಿಸ್ಟ'ರೆಂದೇ ಗುರುತಿಸಲಾಗುತ್ತಿತ್ತು. ಮೊದಲ ಮತ್ತು ಅನಂತರದ



ಜಿಯೋವಾನಿ ಬೆಲ್ಲನಿ

ತಲೆಮಾರಿನ ಬೇಕಾಫೂಮಿ ಪರಮಿಜಿಯಾನಿನೊ ಕಲಾವಿದರು ಮತ್ತು ವಿಶೇಷವಾಗಿ ಪ್ರಾನ್ಸ್, ನೆದರಲೆಂಡ ಹಾಗೂ ಬೋಹೋಮಿಯಾದ ಕಲಾವಿದರು ೧೬ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಇಟಾಲಿಯನ್(ಮ್ಯಾನರಿಜಂ)ದ ಪ್ರಭಾವಕ್ಕೆ ಒಳಗಾದರು. ಫ್ಲೋರೆನ್ಸ ಮತ್ತು ರೋಮಗಳಲ್ಲಿ High Renaissance ದ ಪರಿಣಾಮವಾಗಿ, ಮೂಲಭೂತರಾಗಿ ಬೆಳೆದು ಬಂದ ಮ್ಯಾನರಿಜಂದ ಪ್ರಭಾವವು Venice of Mannerismದ ಮೇಲೆ ಇರುವುದು ಚರ್ಚಾಸ್ಪದವಾಗಿದೆ. ಮ್ಯಾನರಿಜಂವು ಮೂಲತಃ ಸೌಂದರ್ಯದ ಅನ್ವೇಷಣೆ. ಆದಾಗ್ಯೂ ಅದರಲ್ಲಿ ನವೀನತೆ ಅಥವಾ ವಿಲಕ್ಷಣತೆಗಳ ಮೂಲಕ ಆನಂದವೂ ಇರುತ್ತದೆ ಎಂಬುದನ್ನು ಅಲ್ಲಗಳೆಯಲಾಗದು. ಸಮಕಾಲೀನ ಕಲಾವಿದರೇ 'ಸೌಂದರ್ಯ ಅಲಕ್ಷಿಸಬಹುದಾಗಿದೆ' ಎಂಬ ಅಭಿಪ್ರಾಯದವರಾಗಿದ್ದಾರೆ. ಆರಂಭದ ಮ್ಯಾನರಿಜಂ ಮೇಲೆ ನಕ್ಷಾಪ್ರವೀಣ ಮೈಕೆಲ್ ಎಂಜೆಲೊನ ತೀವ್ರ ಪ್ರಭಾವವಿದೆ ಎನ್ನಲಾಗುತ್ತದೆ. ಆದರೆ ಅವನೇ ಮ್ಯಾನರಿಸ್ಟ ಎಂಬುದು ವಾದಗ್ರಸ್ತವಾಗಿದೆ.

ವಿಶೇಷವಾಗಿ ೧೫೨೦ರ ದಶಕಗಳಲ್ಲಿ ಇಟಲಿಯಲ್ಲಿ ಉದ್ಭವಿಸಿದ ಸಾಮಾಜಿಕ, ಧಾರ್ಮಿಕ, ರಾಜಕೀಯ ತೊದರೆಗಳು ಮ್ಯಾನರಿಸ್ಟರ ಗುಣಲಕ್ಷಣಗಳೆಂದು ಪರಿಗಣಿಸಲಾಗುತ್ತಿತ್ತು.

ಆದರೆ ಇತ್ತೀಚಿನ ಇತಿಹಾಸಕಾರರು ಅವುಗಳ ಹಿಂದಿರುವ ಕಲಾತ್ಮಕ ಪ್ರೇರಣೆಗೆ ಒತ್ತು ಕೊಟ್ಟಿದ್ದಾರೆ ಮತ್ತು ಆ ಶೈಲಿ ಹಾಗೂ ಅವಧಿಯ ಹೀಗಳೆಯುವಿಕೆಯನ್ನು ವಿರೋಧಿಸಿದ್ದಾರೆ. ಮ್ಯಾನರಿಸ್ಟ್ ಪ್ರತಿಪಾದಕರು 'ಇಟಾಲಿಯನ್ ಲೇಟ್ ಮ್ಯಾನರಿಜಂ'ದಲ್ಲಿ ಇರುವ ಪ್ರತಿಭಾ ಕೊರತೆಯು ಸರ್ವಸಾಮಾನ್ಯವಾದಾಗ್ಯೂ, ಇದು ನಿಸ್ಸಂದೇಹವಾಗಿ ಉತ್ಕೃಷ್ಟ, ತಾಂತ್ರಿಕ ಕೌಶಲವೆಂದು ಭಾವಿಸುತ್ತಾರೆ.

ಅ.ಜಾ.

## ಮಿನರಲ್ ಚಿತ್ರಕಲೆ (Mineral Painting)

ಇದು ಗೋಡೆಯ ಮೇಲೆ ಚಿತ್ರಿಸುವ ಒಂದು ತಂತ್ರವಾಗಿದೆ. ಪ್ಲಾಸ್ಟರ್ ಆಫ್ ಪ್ಯಾರಿಸ್‌ದ ತಳಹದಿಯ ಮೇಲೆ ಮಿನರಲ್ ಖನಿಜ ಮಿಶ್ರಣದಲ್ಲಿ ಜಲವರ್ಣವನ್ನು ಕೂಡಿಸಿ ನೇರವಾಗಿ ಬಳಸುತ್ತಾರೆ. ಪರ್ಯಾಯವಾಗಿ ಮಿನರಲ್ ಮಿಶ್ರಣವನ್ನು ಬಣ್ಣಲೇಪನ ಮಾಡಿದ ಮೇಲೆಯೂ ಲೇಪಿಸುತ್ತಾರೆ. ಖನಿಜ ಮಿಶ್ರಣಗಳೊಡನೆ ಕೂಡಿಸಲಾದ ಬಣ್ಣವು ತೀವ್ರವಾಗಿ ಪ್ರತಿಕ್ರಿಯಿಸುವ ಕಾರಣ, ವರ್ಣಗಳು ಬಹಳ ಬೇಗನೆ ಮಾಸಿ ಹೋಗುತ್ತವೆ. ಈಚೆಗೆ ಅಕ್ರಿಲಿಕ್ ಮೊದಲಾದ ಬಾಳಿಕೆ ಬರುವ ಬಣ್ಣಗಳನ್ನು ಬಳಸುವುದರ ಮೂಲಕ ಮೊದಲಿನ ಕೌಶಲ್ಯಕ್ಕೆ ಎಡೆಯಿಲ್ಲವಾಗಿದೆ.

ಅ.ಜಾ.

## ಮಿನಿಮಲ್ ಕಲೆ (Minimal Art)

ಈ ರೀತಿಯ ಕಲೆಯು ಪ್ರಮುಖವಾಗಿ ಶಿಲ್ಪಕಲಾಪ್ರಕಾರದಲ್ಲಿ ಮೂಡಿಬಂದಿತು. ಅತ್ಯಂತ ಸರಳವಾದ ಮೂಲಭೂತ ಜ್ಯಾಮಿತಿ ಆಕಾರದ ಶಿಲ್ಪಗಳಿವು. ೧೯೬೦ರ ದಶಕದ ಆರಂಭದಲ್ಲಿ ಈ ಕಲಾ ಪ್ರಕಾರರ ಬಳಕೆಗೆ ಬಂದಿತು. ಟೋನಿಸ್ಮಿತ್(Tony Smith), ಸೋಲೋವಿಟ್(So le Witt) ಜಿಡ್(Judd) ಮೋರಿಸ್(Morris) ಮುಂತಾದವರು ಈ ಪ್ರಕಾರದ ಮುಖ್ಯ ಕಲಾವಿದರು. ೧೯೪೦ರಿಂದ ೧೯೫೦ರ ತನಕ ಕಲಾವಿದರು ಆಧಿಭೌತಿಕ ಆಕಾಂಕ್ಷೆಗಳನ್ನು( Metaphysical Preoccupation) ಸರಳ ವಸ್ತುಗಳ ಭೌತಿಕ ನೈಜತೆಯ ಮೂಲಕ ಪ್ರಯೋಗಿಸಿದರು, ಈ ಕಲಾವಿದರು. ಈ ಕಲಾವಿದರ ಉದ್ದೇಶಗಳು ಅಬ್‌ಸ್ಟ್ರಾಕ್ಟ್ ಎಕ್ಸ್‌ಪ್ರೆಷಿಯನಿಸಂ(Abstract Expressionism) ಭಾವತೀವ್ರವಾದ ಹಾಗೂ ಆತ್ಮಚರಿತ್ರಾರ್ಹ ವಾದಗಳಿಗೆ ವಿರುದ್ಧವಾಗಿದ್ದವು.

ಲೇ ವಿಟ್, ಆಂಡ್ರೇ ಹಾಗೂ ಜಡ್‌ರವರು ಔದ್ಯಮೀಕೃತ ವಸ್ತುಗಳನ್ನು(Industrial Foundries) ತಮ್ಮ ಕೃತಿರಚನೆಗಳಿಗೆ ಉಪಯೋಗಿಸಿದರು. ಇವರಿಗೆ ತಾವು ಉಪಯೋಗಿಸುತ್ತಿರುವ ವಸ್ತುವಿನ ಮೂಲಗುಣ ಮುಖ್ಯವಾಗುತ್ತದೆ. ಉದಾಹರಣೆಗೆ ಆಂಡ್ರೀ ಉಪಯೋಗಿಸುವ ತಾಮ್ರ, ಲೋಹ(Lead) ಮುಂತಾದವುಗಳ ವಸ್ತು- ಗುಣ ನೋಡುಗನ ಗಮನ ಹೆಚ್ಚು ಸೆಳೆಯುತ್ತದೆ.

ಜಡ್‌ನ(Judd) ಕೃತಿಗಳಲ್ಲಿ ಒಂದನ್ನೊಂದರೊಂದಿಗೆ ಬದಲಾಯಿಸಬಲ್ಲ ಭಾಗಗಳು(Units) ಮಿನಿಮಲ್ ಕಲೆಯ ಮೂಲಗುಣವಾಗಿದೆ. ಈ ತೋರಿಕೆಗೆ ಸರಳವಾದ ಕೃತಿಗಳು ಸೌಂದರ್ಯಶಾಸ್ತ್ರದ ಸಂಕೀರ್ಣಹರಣವನ್ನು ವಿಷದಪಡಿಸುತ್ತವೆ. ಇಂತಹ ಕೃತಿಗಳಲ್ಲಿ ಕಲಾವಿದರು ತನ್ನ ಕೃತಿಯನ್ನು ಒಂದು 'ವಿಷಯ'(Information)ವನ್ನಾಗಿ ಪ್ರಸ್ತುತಪಡಿಸುತ್ತಾನೆ. ವೀಕ್ಷಕನನ್ನು ಇಂತಹ ಕೃತಿಗಳನ್ನು ನೋಡುವಾಗ ಆತನ ಅನುಭವ; ನೋಡುವ ರೀತಿ ಇತ್ಯಾದಿಯ ಪ್ರಕಾರವೇ ಆಕೃತಿ ಅನುಭವ ನೀಡುತ್ತದೆ. ಮಿನಿಮಲ್ ಕೃತಿಗಳನ್ನು ಒಳಾಂಗಣದ ಗ್ಯಾಲರಿಯಲ್ಲಿ ಅಥವಾ ಹೊರಾಂಗಣದಲ್ಲಿರಿಸಿ ಆಕಾರ(Form), ಸ್ಥಳ(Space) ಹಾಗೂ ಚಲನೆಗಳ(Force) ಸಮ್ಮಿಳನವು ಮುಖ್ಯವಾಗಿ ನೋಡುಗನ ಪ್ರಜ್ಞೆಯನ್ನು ಕೆಣಕುತ್ತವೆ.

೧೯೫೦ ಹಾಗೂ ೬೦ರ ದಶಕದಲ್ಲಿ ಸ್ಟೆಲ್ಲಾ(Stella), ನೋಲ್ಯಾನ್ಡ್(Noland), ಕೆಲ್ಲಿ(Kelly) ಮುಂತಾದವರ ಚಿತ್ರಗಳು(Paintings) ಎರಡು ಆಯಾಮದ ಚಿತ್ರಕಲಾ ಮಾಧ್ಯಮದ ಶುದ್ಧ ರೂಪಗಳನ್ನೇ ಉಳಿಸಿಕೊಂಡಿವೆ. ಸರಳ ಆಕಾರಗಳು, ಶುದ್ಧ ವರ್ಣಗಳು ಹಾಗೂ ವ್ಯವಸ್ಥಿತವಾದ ಸಂಯೋಜನೆಗಳು ಇವೇ ಮುಂತಾದ ಗುಣಗಳಿಂದಾಗಿ ಈ ಕೃತಿಗಳನ್ನು ಮಿನಿಮಲಿಸ್ಟ್ ಕೃತಿಗಳೆಂದು ವಿಂಗಡಿಸಬಹುದು.

ಎಚ್.ಎ.ಅ.

## ಮಿನೋಯಿನ್ ಕಲೆ (Minoan Art)

ಕ್ರೀಟನಲ್ಲಿ ಕ್ರಿ. ಪೂ. ೧೪೦೦ರ ವರೆಗೆ ಬೆಳೆದು ಬಂದ ಕಲೆಗೆ 'ಮಿನೋಯಿನ್ ಕಲೆ ' ಎನ್ನುತ್ತಾರೆ. ಮಿನೋಯಿನ್ ಸಮಾಜವು ಕ್ರಿ. ಪೂ. ೨೦೦೦ರಿಂದ ನೊಸನ್ ಮತ್ತು ಫೀಸ್ಟೋಸ್‌ಗಳಲ್ಲಿ ಅರಮನೆಗಳ ಸುತ್ತ ಬೆಳೆದು ಬಂದುದಾಗಿದೆ. ಇದು ಮೂಲತಃ ಪಶ್ಚಿಮ ಏಶಿಯಾ ಮತ್ತು ಈಜಿಪ್ಟಿನ ಪ್ರಾಚೀನ ಸಂಸ್ಕೃತಿಗಳ ಸಂಪರ್ಕದಿಂದ ಪ್ರೇರಿತವಾದುದು. ಆದಾಗ್ಯೂ ವಿಶಿಷ್ಟತೆಗಳನ್ನು ಒಳಗೊಂಡ ಪ್ರತೀಕ ಮಿನೊಯಿನ್ ಕಲೆಯು ಅಲ್ಪಕಾಲದಲ್ಲೇ ರೂಪುಗೊಂಡಿತು. ಕ್ರಿ. ಪೂ. ೨೦೦೦ದ ಸುಮಾರಿಗೆ ಬಳಕೆಗೆ ಬಂದ ಕುಂಬಾರಿಕೆಯ ಚಕ್ರವು ಅತ್ಯಂತ ನಾಜೂಕಾದ, ಸೂಕ್ಷ್ಮ ಅಲಂಕಾರಗಳ ಸಂಪ್ರದಾಯಕ್ಕೆ ದಾರಿ ಮಾಡಿಕೊಟ್ಟಿತು. ಈ ಸಂಪ್ರದಾಯದ ಅರಮನೆ ಹಂತದ ಕಮರಿಸ್ ಪಾತ್ರೆಗಳಲ್ಲಿ ಕಡುಬಣ್ಣದ ಹಿನ್ನೆಲೆಯ ಮೇಲೆ ಕೆಂಪು, ಬಿಳಿ ಮತ್ತು ಹಳದಿ ವರ್ಣಗಳಿಂದ ಚಿತ್ರಿಸಿದ ನಕ್ಷೆಗಳು ಮನಸೂರೆಗೊಳ್ಳುವಂಥವು. ಇಲ್ಲಿನ ಅಲಂಕಾರಿಕ ನಕ್ಷೆಗಳಿಗೆ ನಿಸರ್ಗದಲ್ಲಿನ ಆಕೃತಿಗಳೇ ತಳಹದಿಯಾಗಿದ್ದು ಅವು ಅಮೂರ್ತತೆಯತ್ತ ಒಲಿದರೂ ಸತ್ವಯುತವಾದ ಆಕೃತಿಗಳನ್ನು ಒಳಗೊಂಡಿವೆ. ಅನಂತರ ಸಮಕಾಲೀನ ಭಿತ್ತಿಚಿತ್ರಗಳಿಂದ ಈ ಕುಂಭಕಾರಿ ಕಲೆಯು ಪ್ರಭಾವಿತವಾಯಿತು. ಆದರಿಂದಾಗಿ ನಕ್ಷೆಗಳು ಹೆಚ್ಚು ನೇರತೆಯನ್ನು ಹೊಂದಿದವು. ನಕ್ಷಾಕೃತಿಗಳು ಪ್ರಾತಿನಿಧಿಕ ಸಮೀಪವರ್ತಿಯಾಗಿ ರೂಪುಗೊಂಡವು. ಹೂವಿನ ನಕ್ಷೆಗಳಲ್ಲಿ ಸಸ್ಯಾಕೃತಿಗಳ ಪುನರಾವರ್ತನೆಯನ್ನು ಜಲಚರಾದಿ ನಕ್ಷೆಗಳಲ್ಲಿ ಅತ್ಯಂತ ನೈಜವಾದ ಸಿಂಪು, ಆಕ್ಟೋಪಸ್ ಮತ್ತು ಇನ್ನಿತರ ಜಲಚರಗಳನ್ನು ಬಳಸಿಕೊಳ್ಳಲಾಯಿತು.

ಕ್ರಿ. ಪೂ. ೧೫೦೦ರಿಂದ ಚಿತ್ರಿತವಾದ ಭಿತ್ತಿಚಿತ್ರಗಳು ಮಿನೋಯಿನ್ ಕಲೆಯ ಅತ್ಯಂತ

ಪ್ರಭಾವಶಾಲಿ ನಿದರ್ಶನಗಳಾಗಿವೆ. ಇವು ಮಿನೋೕಯಿನ್‌ರ ರಾಜಸಭೆ ಮತ್ತು ಧಾರ್ಮಿಕ ಸಮಾರಂಭಗಳ ವೈವಿಧ್ಯಮಯ ಚಿತ್ರರಚನೆಗಳನ್ನು ಒಳಗೊಂಡಿವೆ. ಹಗಿಯಾ ಟ್ರಿಯಾಡಾ ಸಾರ್ಕೋಫೇಗಸ್‌ನಲ್ಲಿ (ಕ್ರಿ. ಪೂ. ೧೪೦೦. ಹೆರಕ್ ಲ್ಯೂಮನ್ ಪ್ರಾಚ್ಯವಸ್ತು ಸಂಗ್ರಹಾಲಯ) ಫೆಲೋ ಕಾಫಿಯಾ ಮಿಲಾಸ್ ಚಿತ್ರದಲ್ಲಿನ ನೆಗೆದು ಹಾರುವ ಮೀನಿನ ಚಿತ್ರವು ಮಿನೋೕಯಿನ್‌ರ ವಿಶಿಷ್ಟವಾದ ನಿಸರ್ಗ ಮಧ್ಯದ ಸಂತೋಷವನ್ನು ವ್ಯಕ್ತಪಡಿಸುತ್ತದೆ.

ಮಿನೋೕಯಿನ್ ಸಮಾಜವು ಮೆರುಗಿನ ಪಿಂಗಾಣಿ ಶಿಲ್ಪಾಕೃತಿಗಳನ್ನು ಕೂಡ ನಿರ್ಮಿಸಿದೆ. ಇದಕ್ಕೆ ನೋಸಸ್‌ನ ನಾಗದೇವತೆಗಳು ನಿದರ್ಶನಗಳಾಗಿವೆ. ಇವುಗಳ ಆಭರಣಗಳು ಅತ್ಯಂತ ವೈಭವಪೂರ್ಣವಾಗಿ ಚಿತ್ರಿತವಾಗಿವೆ. ಚಿನ್ನದ ಕುಶಲ ಕಲೆಯು ಒಂದು ಉತ್ಕೃಷ್ಟ ಮಾದರಿಯದಾಗಿದೆ. ಲಂಡನ್ನಿನ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿರುವ 'ಅಗಿನಾ ಟ್ರೇಜರ್'ನಲ್ಲಿಯ ಮುದ್ರಾಶಿಲ್ಪಗಳು ವೈವಿಧ್ಯಮಯವಾಗಿದ್ದು ಜ್ಯಾಮಿತಿಯ ಕೆತ್ತನೆಯ ನಕ್ಷೆಗಳನ್ನೊಳಗೊಂಡು ಪ್ರಾಣಿಗಳ ಸಜೀವ ಚಿತ್ರಣಗಳಿಂದ ಕೂಡಿವೆ.

ಅ.ಜಾ.

## ಮುಕ್ತಹಸ್ತ ಚಿತ್ರಲೇಖನ (Free hand drawing)

ಭೂಮಿತಿಯ(Geometrical) ಯಾವುದೇ ಉಪಕರಣಗಳು ಅಂದರೆ ಸ್ಕೇಲು ಇಂಚುಪಟ್ಟಿ, ಅಡಿಪಟ್ಟಿ ಕಂಪಾಸು ಅಥವಾ ಕೈವಾರ ಮುಂತಾದವುಗಳನ್ನು ಬಳಸದೇ ನಕ್ಷೆಗಳನ್ನೂ ವಿವಿಧ ವಸ್ತುಗಳನ್ನೂ ಕೇವಲ ಕೈಯಿಂದಲೇ ಚಿತ್ರಿಸುವುದನ್ನು ಮುಕ್ತ ಹಸ್ತ ಚಿತ್ರಲೇಖನವೆಂದು ಕರೆಯುತ್ತಾರೆ. ಸ್ಮರಣ ಚಿತ್ರ ನಿಸರ್ಗ ಚಿತ್ರಲೇಖನಗಳೂ ಒಂದು ರೀತಿಯಲ್ಲಿ ಮುಕ್ತಹಸ್ತ ಚಿತ್ರಗಳೇ ಆಗಿರುತ್ತದೆಯಾದರೂ ಉದ್ದೇಶವು ಬೇರೆಯಾಗಿರುತ್ತದೆ. ಮುಕ್ತಹಸ್ತ ಚಿತ್ರಲೇಖನದಲ್ಲಿ ಕೈ ಮತ್ತು ತೋಳುಗಳ ಮಾಂಸಖಂಡಗಳಿಗೆ ಸುಲಭವಾಗಿ ಓಡಾಡುವಂತೆ ವ್ಯಾಯಾಮ ನೀಡಬೇಕಾಗುತ್ತದೆ. ಸ್ಮರಣಶಕ್ತಿ ಹಾಗೂ ಬುದ್ಧಿಯ ಬೆಳವಣಿಗೆಯೊಂದಿಗೆ ಕೈಯನ್ನೂ ತರಬೇತುಗೊಳಿಸುವುದೇ ಮುಕ್ತಹಸ್ತ ಚಿತ್ರಲೇಖನದ ಉದ್ದೇಶವಾಗಿದೆ. ವಿವಿಧ ವಸ್ತುಗಳ ಆಕಾರ, ಸ್ಥಿತಿ; ಪ್ರಮಾಣಗಳ ನಿರೀಕ್ಷಣೆ ಹಾಗೂ ನಕ್ಷೆಯ ಸುಳಿದಾಟದೊಂದಿಗೆ ಸುಲಭವಾಗುವಂತೆ-ಕೈಗಳ ಹರಿದಾಟವನ್ನೂ ಸ್ಥಿರಪಡಿಸಿಕೊಳ್ಳಬೇಕಾಗುತ್ತದೆ. ದೇವಾಲಯಗಳಲ್ಲಿರುವ ಕಲ್ಲಿನ ಕೆತ್ತನೆಯ ನಕ್ಷೆಗಳನ್ನೂ ಪಾತ್ರೆಗಳ ಮೇಲಿನ ಬೇರೆ ಬೇರೆ ರೀತಿಯ ಕೆತ್ತನೆಯ ಕೃತಿಗಳನ್ನೂ ನಕಲು ಮಾಡುವುದರಿಂದ ಮುಕ್ತಹಸ್ತ ಚಿತ್ರಲೇಖನಕ್ಕೆ ಹೆಚ್ಚು ಪ್ರಯೋಜನವಾಗುತ್ತದೆ.

ಎ.ಟ.ಶಾ.

## ಮುಖ ಮಂಟಪ

ಆಲಯದ ನವರಂಗ ಅಥವಾ ನೃತ್ಯಮಂಟಪ (ಮಹಾಮಂಟಪ)ಕ್ಕೆ ಅಭಿಮುಖವಾಗಿ ಹೊಂದಿಕೊಂಡಂತೆ ಅಲಂಕೃತವಾದ ಕಂಬಗಳು ಹಾಗೂ ವಿತಾನ (ಮುಚ್ಚಿಕೆ)ದಿಂದ ಕೂಡಿದ ಮಂಟಪವು,ಆಲಯದ ತಿರ್ಯನ್ಮುಖದಲ್ಲಿ ಕೊನೆಯ ಭಾಗವಾಗಿದ್ದು 'ಅಗ್ರಮಂಟಪ' ಅಥವಾ 'ಮುಖಮಂಟಪ' ಎಂದು ಕರೆಯಲ್ಪಡುತ್ತದೆ. ಇದು ಸಾಮಾನ್ಯವಾಗಿ ತೆರೆದ ಮಂಟಪವಾಗಿರುತ್ತದೆ.

ಅಂತೆಯೇ ದ್ವಾರಗಳಿರುವುದಿಲ್ಲ. ಆದರೆ ಕೆಲವೊಮ್ಮೆ ಇಕ್ಕೆಡೆಗಳಲ್ಲಿ ಕಕ್ಷಾಸನಗಳಿರುವುದುಂಟು. ಈ ಮಂಟಪಕ್ಕೆ ಪ್ರವೇಶಿಸಲು ಸುಂದರವಾದ, ವಿವಿಧ ಬಗೆಯ ಸೋಪಾನ (ಹಸ್ತಿಹಸ್ತ)ಗಳನ್ನು ಏರ್ಪಡಿಸಿರುವುದುಂಟು. ಚಾಳುಕ್ಯ ಮತ್ತು ಹೊಯ್ಸಳರ ಕಾಲದ ಕೆಲವು ಮುಖಮಂಟಪಗಳು ವೃತ್ತಾಕಾರವಾಗಿದ್ದು ಅಲಂಕಾರ ಭರಿತವಾಗಿರುವುದನ್ನು ಹಾನಗಲ್ಲು, ಬೆಳಗಾವಿ ಅರಸೀಕೆರೆ ಇತ್ಯಾದಿಯಲ್ಲಿರುವ ದೇವಾಲಯಗಳಲ್ಲಿ ಕಾಣಬಹುದು.

ಪಿ.ವಿ.ಕೆ.

## ಮುಡುಕುತೊರೆ

ತಲಕಾಡು ಬಳಿ ಇರುವ ಮುಡುಕುತೊರೆ ಅಥವ ಬೆಟ್ಟಹಳ್ಳಿಯ ಗುಡ್ಡದ ಮೇಲಿರುವ ಮಲ್ಲಿಕಾರ್ಜುನ ದೇವಾಲಯದ ಪ್ರಾಕಾರದಲ್ಲಿಯ ಚಿತ್ರ ಮಂಟಪದಲ್ಲಿ ಹಲವಾರು ಭಿತ್ತಿಚಿತ್ರಗಳಿವೆ. ಪ್ರಾಯಶಃ ಈ ದೇವಾಲಯ ೧೯ನೇ ಶತಮಾನದಲ್ಲಿ ಜೀರ್ಣೋದ್ಧಾರವಾಗಿದ್ದು ಚಿತ್ರಕಲೆಯೂ ಅದೇ ಕಾಲದ್ದಾಗಿರಬಹುದು. ಶಿವ ಪುರಾಣಕ್ಕೆ ಸಂಬಂಧಿಸಿದಂತೆ ಗಿರಿಜಾಕಲ್ಯಾಣದ ಚಿತ್ರಣವಿದ್ದು ದೇವಾನು ದೇವತೆಗಳು ಕಲ್ಯಾಣಕ್ಕೆ ನೆರೆದಿರುವುದು ವಿವರವಾಗಿ ಚಿತ್ರಿಸಲಾಗಿದೆ. ಬ್ರಹ್ಮ, ವಿಷ್ಣು ದಿಕ್ಪಾಲಕರು, ಇಂದ್ರ , ಸರಸ್ವತಿ, ಋಷಿ ಮುನಿಗಳು ಮುಂತಾದವರು, ನಟರಾಜ, ಹುಲಿಯನ್ನು ಕಟ್ಟಿದ ರಥದಲ್ಲಿ ಪಾರ್ವತಿ, ಯುದ್ಧದ ಭಂಗಿಯಲ್ಲಿ ನಿಂತಿರುವ ಮಹಿಷ, ರಾಜನಂತೆ ಕುಳಿತಿರುವ ಒಬ್ಬಾತ ಇತ್ಯಾದಿಗಳೂ ರಚಿಸಿದೆ. ಕೆಳಸಾಲಿನಲ್ಲಿ ದೊಡ್ಡ ಆಕಾರದಲ್ಲಿ ಕೋಲಾಟ ಆಡುತ್ತಿರುವ ಜೋಡಿ ಸ್ತ್ರೀಯರ ಸಮೂಹವಿದೆ. ಭಿತ್ತಿಚಿತ್ರದಲ್ಲಿ ಈ ಚಿತ್ರಣ ಕರ್ನಾಟಕ ಚಿತ್ರಕಲೆಯಲ್ಲಿ ಅಪರೂಪವಾದುದು. ಇವಲ್ಲದೆ ಅಲ್ಲಲ್ಲಿ ಗೂಡುಗಳಿದ್ದು ಕೆಲವು ಡಿಸೈನ್‌ಗಳೂ ಚಿತ್ರಿತವಾಗಿವೆ. ವಿಶೇಷವೆಂದರೆ ಇಡೀ ಚಿತ್ರಣದ ಅಂಚಿನಲ್ಲಿ ಚಿತ್ರಿತ ವಿಷಯವನ್ನು ಶಾಸನದಂತೆ ಬರೆದಿರುವುದು.

ಅಲನ

## ಮೃತ್ ಲೇಪಿತ ಕಾಗದ (Coated Paper)

ಇದು ಖನಿಜವಸ್ತು ಇಲ್ಲವೆ ಚೀನಿಮಣ್ಣಿನ ಹೊದಿಕೆಯನ್ನು ಹೊಂದಿರುವ ಕಾಗದವಾಗಿದೆ. ಆದುದರಿಂದ ಇದರ ಮೇಲ್ಮೈಯು ನಯವಾಗಿರುತ್ತದೆ. ಮಣ್ಣಿನ ಹೊದಿಕೆಯ ಕಾಗದಗಳು ಮೆರಗು ರಹಿತವಾಗಿರಬಹುದು ಮೆರಗಿನಿಂದ ಕೂಡಿರಬಹುದು. ಸಾಮಾನ್ಯವಾಗಿ ಹೊದಿಕೆಯನ್ನು ಕಾಗದದ ಒಂದೇ ಬದಿಗೆ ಮಾಡಲಾಗುವುದಾದರೂ ಎರಡು ಬದಿಗೂ ಹಚ್ಚುವುದುಂಟು. ವಿವಿಧ ಬಣ್ಣಗಳಲ್ಲಿ ಈ ಕಾಗದವನ್ನು ಸಿದ್ಧಪಡಿಸಬಹುದು. ಸೂಕ್ಷ್ಮಗೆರೆಗಳ ಚಿತ್ರಗಳನ್ನು ರಚಿಸಲು ಈ ಕಾಗದವು ಹೆಚ್ಚು ಪ್ರಯೋಜನಕಾರಿ. ಹೊದಿಕೆಯಿಲ್ಲದಿರುವ ಕಾಗದಗಳಿಗಿಂತ ಇದು ಹೆಚ್ಚು ಗಡುಸಾಗಿರುತ್ತದೆ. ಇದರಿಂದಾಗಿ ಸೀಳುವ ಸಂಭವವೂ ಹೆಚ್ಚು. ಇದನ್ನು ಮಾರುಕಟ್ಟೆಯಲ್ಲಿ ವ್ಯಾವಹಾರಿಕವಾಗಿ 'ಆರ್ಟ್ ಪೇಪರ್'(Art Paper) ಎಂದು ಕರೆಯುತ್ತಾರೆ.

ಶಿ. ಹ.

## ಮೃದು ಶಿಲ್ಪ ಕಲೆ (Soft Sculpture)

ಕ್ರಿ.ಶ. ೨೦ನೆಯ ಶತಮಾನದ ವ್ಹಿನಿಲ್(Vinyl) ರಬ್ಬರಿನ ನೊರೆ(Foam rubber) ಅಥವಾ ಬಟ್ಟೆಗಳಂತಹ ಮಣಿಯುವ ವಸ್ತುಗಳಿಂದ ತಯಾರಿಸಲ್ಪಟ್ಟ ಒಂದು ವಿಧದ ಕಲಾ ಪ್ರಕಾರವಾಗಿದೆ. ಒಳಭಾಗದಲ್ಲಿ ಕಟ್ಟಿಗೆ ಅಥವಾ ಲೋಹದ ಆಧಾರವನ್ನು ಅಳವಡಿಸಲಾಗಿರುತ್ತದೆ. ಕ್ಲೇಸ್ ಒಲ್ಡನ್‌ಬರ್ಗನ(Claes oldenburg) ಜೇಂಟ್ ಸಾಫ್ಟ್‌ಫ್ಯಾನ್ ಘೋಸ್ಟ್ ವರ್ಶನ್ (೧೯೬೭) ಇತ್ಯಾದಿ ಕಲಾಕೃತಿಗಳಲ್ಲಿ ಬಿಳಿಯ ವಿದ್ಯುತ್ ಬೀಸಣಿಗೆಯು ಮಿದುವಾದ ಬಟ್ಟೆಯಿಂದಲೇ ತಯಾರಾಗಿದ್ದು ಒಳಗಡೆ ಆಧಾರಕ್ಕಾಗಿ ಸೀಸದ ಲೋಹವನ್ನು ಅಳವಡಿಸಲಾಗಿದೆ.

ಅ.ಜಾ.

## ಮೆಕ್ಕಿಕಟ್ಟೆ

ಉಡುಪಿಯ ಶಿರಿಯಾರ ಗ್ರಾಮದ ಬಳಿಯಿರುವ ಮೆಕ್ಕಿಕಟ್ಟೆ ಊರಿನಲ್ಲಿ ವಿವಿಧ ರೀತಿಯ ಉರುಗಳಿದ್ದು, ಅವು ಬೃಹದಾಕಾರದಲ್ಲಿದ್ದು ವರ್ಣ ರಂಜಿತವಾಗಿವೆ. ಈ ಉರುಗಳು ಶೈವ ಸಂಪ್ರದಾಯಕ್ಕೆ ಸೇರಿದ್ದು, ಇಲ್ಲಿನ ಪರಿಸರದಲ್ಲಿ ಬೆಣ್ಣೆ ಕುದುರು, ಮಾನ್ಯಕಟ್ಟೆ, ನಂದಳಿಕೆ ಮತ್ತು ಬಸರೂರುಗಳು ಮುಖ್ಯವಾದವು. ಮೆಕ್ಕಿಕಟ್ಟೆಯ ಉರುಗಳು ರೂಪ ಮತ್ತು ಬಣ್ಣದಲ್ಲಿ ಉತ್ಕೃಷ್ಟವಾಗಿದ್ದು, ದುಂಡನೆಯ ಮುಖ, ಉದ್ದನೆಯ ಹಾಗೂ ಮೀನಿನಾಕಾರದ ಕಣ್ಣುಗಳು, ಉಡುಪುಗಳನ್ನು ತೊಡಿಸಲಾಗಿದೆ. ಕೆಲವು ಉರುಗಳಲ್ಲಿ ಪಾಶ್ಚಾತ್ಯ ಮಾದರಿಯ ಉಡುಪುಗಳನ್ನು ಕಾಣಬಹುದು. ಕೆಲವು ವಿಗ್ರಹಗಳು ಮುಸ್ಲಿಂ ಪ್ರಭಾವಕ್ಕೆ ಒಳಗಾಗಿದ್ದು ಇವು ವಿಜಯನಗರದ ಪತನದ ಅನಂತರ ಸ್ಥಳೀಯರಿಂದ ರಚಿತವಾಗಿರಬೇಕು. ಕೆಲವು ಗೊಂಬೆಗಳು ಉಗ್ರರೂಪವನ್ನು ಹೊಂದಿದ್ದು, ತಾಂತ್ರಿಕ ಪಂಥದ ಪ್ರಭಾವ ಕಾಣಬಹುದು. ಉರುಗಳಲ್ಲಿ ಒಂದು ವಿಗ್ರಹವಾದರೂ ಸಾಮಾನ್ಯ ಮನುಷ್ಯರಂತೆ ಇರದೆ, ಅಸಮಾನ್ಯವಾಗಿರುತ್ತವೆ. ಕೆಲವು ಭಯಾನಕವಾಗಿದ್ದು, ಇರುವುದಕ್ಕಿಂತ ಅತಿಶಯಿಸಿ ತೋರಿಸಲಾಗಿದೆ. ಸ್ತ್ರೀಯರ ಮೊಲೆಗಳನ್ನು ಅತಿ ದೊಡ್ಡದಾಗಿ ರಚಿಸಿದ್ದು, ಸಪ್ತ ಮಾತೃಕೆಯರ ಕೇಶಾಲಂಕಾರ ಸೂಕ್ಷ್ಮವಾಗಿದೆ. ಉರುಗಳು ೧೧-೧೨ನೆಯ ಶತಮಾನಕ್ಕೆ ಸೇರಿರಬೇಕು ಎಂದು ಅಭಿಪ್ರಾಯ ಪಡಲಾಗಿದೆ. ಮೆಕ್ಕಿಕಟ್ಟೆಯಲ್ಲಿ ೨ ಅಡಿಯಿಂದ ೨೦ ಅಡಿಯವರೆಗೆ ಎತ್ತರವಿರುವ ನೂರಾರು ವಿಗ್ರಹಗಳಿವೆ. ಈ ಶಿಲ್ಪಗಳನ್ನು ರಚಿಸಲು ಮರವನ್ನು ಬಳಸಿದ್ದು ಎಲ್ಲ ಕಡೆಗಳಲ್ಲಿ ಕಡುಕೆಂಪು ಬಣ್ಣವನ್ನೇ ಲೇಪಿಸಿದ್ದಾರೆ. ಹುಲಿಯನ್ನು ಅರಿಸಿನ ಬಣ್ಣದಲ್ಲಿ ರಚಿಸಿದ್ದು ಉರುಗಳ ಬಣ್ಣಗಾರಿಕೆಗೆ ಸರಳವಾಗಿರುತ್ತದೆ.

ಮರಿ

## ಮೇಣವರ್ಣ ಚಿತ್ರಣ(Encaustic) ವಿಧಾನ

ಗ್ರೀಕ್ ಮತ್ತು ರೋಮನ್ನರು ಈ ವಿಧಾನದಲ್ಲಿ ವರ್ಣಚಿತ್ರಣವನ್ನು ಮಾಡುವುದನ್ನು ಬಳಕೆಯಲ್ಲಿ ತಂದಿದ್ದರು. ಮೇಣವನ್ನು ಕುದಿಸಿ ನೀರಾಗುವಂತೆ ಮಾಡಿ ಈ ಮೇಣದ ನೀರು ಇನ್ನೂ ಬಿಸಿಯಾಗಿರುವಾಗಲೇ ಬಣ್ಣಗಳನ್ನು ಅದರಲ್ಲಿ ಬೆರೆಸುತ್ತಿದ್ದರಲ್ಲದೇ ಈ ಬಣ್ಣದ

ಮೇಣದ ದ್ರವವು ಬಿಸಿಯಾಗಿರುವಾಗಲೇ ತಾವು ಚಿತ್ರಿಸಲಿರುವ ಚಿತ್ರದ ಮೇಲೆ ಲೇಪಿಸಿ ಚಿತ್ರವನ್ನು ಪೂರ್ಣಗೊಳಿಸುತ್ತಿದ್ದರು. ಈ ವಿಧಾನದಲ್ಲಿ ಚಿತ್ರಿಸಿದ ಕೆಲವೇ ಗ್ರೀಕ್ ಮತ್ತು ರೋಮನ್ ಕಲಾಕೃತಿಗಳು ಈವರೆಗೂ ಉಳಿದುಕೊಂಡಿದ್ದು ಇಂದಿಗೂ ವರ್ಣಗಳ ಉಜ್ವಲತೆಯನ್ನು ಗುರುತಿಸಬಹುದಾಗಿದೆ.

ವಿ.ಟಿ.ಶಾ.

## ಮೇಲುಕೋಟೆ

ಮೇಲುಕೋಟೆಯ ಶ್ರೀಯತಿರಾಜ ಮಠದಲ್ಲಿ, ನಾಲ್ಕು ದಿವ್ಯ ದೇಶಗಳ ದೇವರುಗಳು, ಮದರಾಸು ತಿರುವಳ್ಳಿ ಕೇಣಿಯ ಪಾರ್ಥಸಾರಥಿ, ಶ್ರೀರಾಮ ಪಟ್ಟಾಭಿಷೇಕ, ಆಚಾರ್ಯರುಗಳು, ವಟಪತ್ರಶಾಯಿ ಕೃಷ್ಣ, ರಾಮಾನುಜ, ಸಂಪತ್ಕುಮಾರ ಮುಂತಾದ ವರ್ಣಚಿತ್ರಗಳಿವೆ. ಇವು ೧೯೧೧ರಲ್ಲಿ ಆಗಿನ ಮಠಾಧಿಪತಿಗಳಾಗಿದ್ದ ಶ್ರೀದಾಮೋದರಂ ಆಳಸಿಂಗ ಜೀಯರ್ ಸ್ವಾಮಿಗಳ ಕಾಲದಲ್ಲಿ ರಚಿತವಾದವು. ಚಿತ್ರಗಳಲ್ಲಿ ಆಭರಣಗಳು ಇರುವ ಭಾಗಕ್ಕೆ ಚಿನ್ನದ ಬಣ್ಣದ ಕಾಗದವನ್ನು ಕತ್ತರಿಸಿ ಅಂಟಿಸಿರುವುದು ಇಲ್ಲಿಯ ವಿಶೇಷ. ಈಚೆಗೆ ಇದರ ಜೀರ್ಣೋದ್ಧಾರಕ್ಕಾಗಿ ಪ್ರಯತ್ನಿಸಲಾಯಿತು. ಇದಲ್ಲದೆ ಊರಿನಲ್ಲಿರುವ ಹಳೆಯ ಮನೆಗಳಲ್ಲಿ ಮೈಸೂರು ಸಾಂಪ್ರದಾಯಿಕ ಚಿತ್ರಗಳನ್ನು ಕಾಣಬಹುದು.

ಅಲಸ

## ಮೈಸೀನಿಯನ್ ಕಲೆ (Mycenean Art)

ಹೆಲಾಡಿಕ್ ಅಥವಾ ಮೈಸೀನಿಯನ್ ಕಾಲದ (ಕ್ರಿ. ಪೂ. ೧೫೫೦-೧೨೦೦) ಗ್ರೀಕ್ ಕಲೆಯೇ, ಮೈಸೀನಿಯನ್ ಕಲೆ. ಪೂರ್ವ ಹಾಗೂ ದಕ್ಷಿಣ ಗ್ರೀಸದ (ಮಿಸೆನಿ, ಟಿರಿನ್ಸ ಮತ್ತು ಪೈರಾಸ್ ನಗರಗಳಲ್ಲಿ) ಅರಮನೆಗಳ ಕೋಟೆಗೋಡೆಗಳ ಮೇಲೆ ಈ ಶೈಲಿಯ ಉಗಮವನ್ನು ಕಾಣಬಹುದು. ಆದರೆ ಕ್ರಿ. ಪೂ. ೧೪೦೦ ರಿಂದ 'ಏಜಿಯನ್'ದ ತುಂಬೆಲ್ಲ ಈ ಕಲೆ ಹರಡಿತು. ಮೈಸೀನಿಯನ್‌ರು 'ಮಿನಾನ ಕಲೆ'ಯಿಂದ ತುಂಬಾ ಪ್ರಭಾವಿತರಾಗಿದ್ದರು ಮತ್ತು ಮೈಸೀನಿಯಾದ ಸಮಾಧಿಗಳಲ್ಲಿ ದೊರಕಿದ ಅಲಂಕೃತ ಹಸ್ತಿದಂತ ಮತ್ತು ಲೋಹದ ಆಕೃತಿಗಳನ್ನು ಬಹುಶಃ ಕೆಟನ್ನರು ಸಿದ್ಧಪಡಿಸಿರಬಹುದಾಗಿದೆ. ಅದರಂತೆ ಅವರ ಅರಮನೆಗಳ ಮೇಲೆ ಭಿತ್ತಿ ಚಿತ್ರಗಳ 'ಮೆನಾನ್'ದ ಪ್ರಭಾವವೂ ದಟ್ಟವಾಗಿದೆ. ಇದಕ್ಕೆ ಥೇಬ್ಸದ ಉಡುಗೊರೆ ಹಿಡಿದ ಸ್ತ್ರೀಯರ ಚಿತ್ರ, ಮೈಸೀನಿಯಾದ ಲಾಯನ್‌ಗೇಟ್‌ಗಳ ಮೇಲೆ ಎದುರು ಬದರಾಗಿರುವ ಪ್ರಾಣಿಗಳ ಚಿತ್ರ ಇವು ನಿದರ್ಶನವಾಗಿವೆ. ಮೈಸೀನಿಯಾದ ಕುಂಬಾರಿಕೆಯಲ್ಲಿ ಮಿನಾನ ಕಲೆಯ ಆಕೃತಿಗಳ ಅನುಕರಣೆ ಕಂಡು ಬರುತ್ತದೆ. ಆದರೆ ಅದರ ಸಹಜ ವೈವಿಧ್ಯತೆಯ ಕೊರತೆಯಿದೆ. ಸಾಮಾನ್ಯವಾಗಿ ಮೈಸೀನಿಯನ್ ಕಲೆಯು ಶೈಲೀಕರಣ ಮತ್ತು ಆಕೃತೀ ಕರಣದತ್ತ ವಾಲಿರುವುದನ್ನು ಕಾಣಬಹುದು.

ಅ.ಜಾ.

## ಮೈಸೂರು

ಮೈಸೂರು, ಒಡೆಯರ ರಾಜಧಾನಿಯಾದ ಮೇಲೆ ೧೯ನೇ ಶತಮಾನದ ಆದಿಯಿಂದ ಅಂತ್ಯದವರೆಗೆ ರಚಿತವಾದ ಹಲವಾರು ಭಿತ್ತಿಚಿತ್ರಗಳನ್ನು ಊರೊಳಗಿನ ದೇವಾಲಯಗಳಲ್ಲಿ ಕಾಣಬಹುದು. ಜಗನ್ಮೋಹನ ಚಿತ್ರಶಾಲೆ ಮುಮ್ಮಡಿಯವರಿಂದ ರಚಿತವಾಗಿ ಎರಡನೇ ಮಾಳಿಗೆಯಲ್ಲಿ ಕೋಣೆ ಮತ್ತು ಹಜಾರಗಳ ತುಂಬಾ ಭಿತ್ತಿಚಿತ್ರಗಳಿವೆ. ವಿಶಾಲವಾದ ಹರಹಿನಲ್ಲಿ ರಾಜರ ಮೆರವಣಿಗೆಯ ಚಿತ್ರಣವಲ್ಲದೆ ಹಿಂದಿನ ರಾಜರು ಮತ್ತು ರಾಜಪರಿವಾರದವರು ಖೆಡ್ಡಾ ಹಲವಾರು ಬಗೆಯ ಆಟಗಳು, ವಸಂತೋತ್ಸವ, ವಂಶಾವಳಿ ಇತ್ಯಾದಿಗಳನ್ನು ಕಾಣಬಹುದು. ಹತ್ತಿರದಲ್ಲೇ ಇರುವ ಪ್ರಸನ್ನ ವೆಂಕಟರಮಣಸ್ವಾಮಿ ದೇವಾಲಯದ ಮಾಳಿಗೆಯ ಮೇಲಿನ ಪುಟ್ಟ ಕೊಠಡಿಯೊಂದರಲ್ಲಿ ಮೈಸೂರು ಅರಸರ ಭಾವಚಿತ್ರಗಳಲ್ಲದೆ ಭಾರತದ ಹಲವಾರು ಪುಣ್ಯಕ್ಷೇತ್ರಗಳ ನಕ್ಷೆಗಳಿವೆ. ಅರಮನೆಯಲ್ಲಿರುವ ವರಾಹಸ್ವಾಮಿ ಮತ್ತು ಕೃಷ್ಣಸ್ವಾಮಿ ದೇವಾಲಯದಲ್ಲಿ ಕೃಷ್ಣನ ಬಾಲಲೀಲೆಗೆ ಸಂಬಂಧಿಸಿದ ಚಿತ್ರಣಗಳಿವೆ. ವೆಂಕಟರಮಣ ದೇವಾಲಯದ ಚಿತ್ರಗಳನ್ನು ಮರದ ಹಲಗೆಯ ಮೇಲೆ ಬಟ್ಟೆಯನ್ನು ಅಂಟಿಸಿ ಅದರ ಮೇಲೆ ರಚಿಸಿದೆ. ವರಾಹ ಸ್ವಾಮಿ ದೇವಾಲಯದ ದೇವಿ ಸನ್ನಿಧಿಯಲ್ಲಿ ಕನ್ನಡಿಗೆ ಹಾಕಿರುವ ಮರದ ಬಾಗಿಲಿನ ಎರಡೂ ಬದಿಗಳಲ್ಲಿ ಚಿತ್ರಿಸಿದೆ.

ಮೈಸೂರು ಊರಿನಲ್ಲಿರುವ ಎಲ್ಲ ಭಿತ್ತಿಚಿತ್ರಗಳೂ ಮೈಸೂರು ಸಾಂಪ್ರದಾಯಿಕ ಶೈಲಿಗೆ ಸೇರಿದವಾಗಿವೆ. ಅರಮನೆಯ ಒಳಗಿನ ಕಲ್ಯಾಣ ಮಂಟಪದಲ್ಲಿ ಈ ಶತಮಾನದ ನಾಲ್ಕನೇ ದಶಕದಲ್ಲಿ ರಚಿಸಿದ ದಸರಾ ಮೆರವಣಿಗೆಯ ಚಿತ್ರಗಳಿವೆ. ಇವು ಕ್ಯಾನ್‌ವಾಸ್ ಮೇಲೆ ತೈಲವರ್ಣದಲ್ಲಿ ರಚಿತವಾದವು. ಮೈಸೂರಿನಲ್ಲಿ ಕಳೆದ ಶತಮಾನದಲ್ಲೆ ಆರಂಭವಾದ ಚಾಮರಾಜೇಂದ್ರ ತಾಂತ್ರಿಕ ಶಾಲೆ ಮುಂಬಯಿ ಪ್ರೇರಿತ ಪಠ್ಯವಸ್ತುವನ್ನು ಭೋದಿಸುತ್ತಿದ್ದು ನೂರಾರು ರಮ್ಯ ಶೈಲಿಯ ಕಲಾವಿದರನ್ನು ರೂಪಿಸಿದೆ.

ಅಲನ

## ಮೊಗಲ ಚಿತ್ರಕಲೆ

ಹದಿನೈದನೆಯ ಶತಮಾನದಲ್ಲಿ ತೈಮೂರ ಅರಸರ ಆಳ್ವಿಕೆಯಲ್ಲಿ ಪರ್ಶಿಯಾ ಚಿತ್ರ ಕಲೆಯು ಪ್ರೌಢಿಮೆಯನ್ನು ಪಡೆದಿತ್ತು. ಮೊಗಲರಾಜರ ಮೂಲ ಪುರುಷ ಬಾಬರನು ಆ ತೈಮೂರ ವಂಶದವನು. ಆತನೊಡನೆ ಭಾರತಕ್ಕೆ ಪರ್ಶಿಯಾದ ಕಲಾವಿದರು ಬಂದರು.

ಮೊಗಲರ ಆಗಮನಕ್ಕಿಂತ ಮುಂಚೆಯೇ ಭಾರತದ ಚಿತ್ರಶೈಲಿಯು ಸಮೃದ್ಧವಾಗಿತ್ತು. ಜೈನ, ಪಾಲಿ ಮತ್ತು ವಿವಿಧ ಶಾಖೆಗಳೊಂದಿಗೆ ರಾಜಸ್ಥಾನದ ಶೈಲಿಯು ದೇಶದಲ್ಲಿ ಹಬ್ಬಿಕೊಂಡಿತ್ತು. ಅದರಲ್ಲಿ ಅಜಂತಾದ ಉತ್ಕೃಷ್ಟತೆ ಇಲ್ಲವಾದರೂ ಸಾಕಷ್ಟು ಪ್ರೌಢತೆಯಿತ್ತು. ಭಾರತಕ್ಕೆ ಮೊಗಲರೊಡನೆ ಪರ್ಶಿಯಾ ಯಾನೆ ಇರಾನಿ ಕಲೆಯು ಕೂಡ ಬಂದು ನೆಲೆಸಿತು. ಮೊಗಲರು ಭಾರತೀಯ ಕಲಾವಿದರಿಗೂ ಆಸ್ಥಾನದಲ್ಲಿ ಆಶ್ರಯವಿತ್ತರು. ಹೀಗೆ ಸಹಾನುಭೂತಿ ಪರ ವಾತಾವರಣದಲ್ಲಿ ಭಾರತೀಯ ಹಾಗೂ ಪರ್ಶಿಯಾದ ಕಲಾವಿದರು ಜೊತೆಯಾಗಿ ಕೆಲಸ



ಮಾಡುತ್ತಿದ್ದರು. ಪರಿಣಾಮವಾಗಿ 'ಇಂಡೋಪರ್ಶಿಯಾ' ಎನ್ನಬಹುದಾದ ಭಾರತ ಮತ್ತು ಪರ್ಶಿಯಾದ ಮಿಶ್ರ ಚಿತ್ರ 'ಮೊಗಲ ಶೈಲಿ' ಜನ್ಮ ತಾಳಿತು.

ಅಕ್ಬರನ ಕಾಲದಲ್ಲಿ ಮೊಗಲ ಕಲೆಯು ಉನ್ನತ ಸ್ಥಿತಿಗೇರಿತು. ಸಂಸ್ಕೃತ ಮತ್ತು ಪರ್ಶಿಯಾದ ಸಾಹಿತ್ಯ ಗ್ರಂಥಗಳಿಗಾಗಿ ಉತ್ತಮ ಚಿತ್ರ ಮಾಡಿಸಿದನು. ಮಹಾಭಾರತವನ್ನು ಪರ್ಶಿಯನ್ ಭಾಷೆಗೆ ಭಾಷಾಂತರ ಮಾಡಿಸಿ ರಜಮ್‌ನಾಮಾ ಎಂದು ಹೆಸರುಕೊಟ್ಟನು. ಅದರಲ್ಲಿ ಮುಖ್ಯ ಘಟನೆಗಳನ್ನು ನಿದರ್ಶಿಸುವ ೧೬೯ ಚಿತ್ರಗಳಿವೆ.

ಜಹಾಂಗೀರನು ಚಿತ್ರಕಲಾ ಪೋಷಕನಾಗಿದ್ದನು. ಚಿತ್ರವನ್ನು ನೋಡಿ ಯಾವ ಕಲಾವಿದನು ರಚಿಸಿದನೆಂದು ಹೇಳಬಲ್ಲವನಾಗಿದ್ದನು. ಸಾಮ್ರಾಟನನ್ನು ನೋಡಲು ಬರುವವರಿಗಿಂತ ಜಹಾಂಗೀರನ ಅರಮನೆಯಲ್ಲಿದ್ದ ಚಿತ್ರರತ್ನಗಳನ್ನು ನೋಡಲು ಅಧಿಕ ಸಂಖ್ಯೆಯಲ್ಲಿ ರಾಜಮಹಾರಾಜರು ಬರುತ್ತಿದ್ದರೆಂದು ಹೇಳುತ್ತಾರೆ. ಮೊಗಲರು ರಾಣಿವಾಸ, ಅರಮನೆಯ ಜೀವನ, ಪ್ರಾಣಿ, ಪಕ್ಷಿ ಉದ್ಯಾನಗಳ ಚಿತ್ರ ಮಾಡಿಸುತ್ತಿದ್ದರು.

ಷಾಹಜಾನನ ಕಲಾಪ್ರೇಮವು ವಾಸ್ತುಶಿಲ್ಪದ ಕಡೆ ತಿರುಗಿತು. ಔರಂಗಜೇಬನ ಕಾಲದಲ್ಲಿ ಮೊಗಲ ಶೈಲಿಯು ಕೊನೆಗೊಂಡಿತು. ಆತನು ತನ್ನ ಆಸ್ಥಾನದ ಕಲಾವಿದರು, ಸಂಗೀತಗಾರರು ಎಲ್ಲರನ್ನೂ ಉದ್ಯೋಗದಿಂದ ತೆಗೆದುಹಾಕಿ ಹೊರಡಿಸಿ ಬಿಟ್ಟನು. ಹದಿನೆಂಟನೆಯ ಶತಮಾನದ ವೇಳೆಗೆ ಅವರು ಆಶ್ರಯಾಕಾಂಕ್ಷಿಗಳಾಗಿ ನಾಲ್ಕೂ ದಿಕ್ಕುಗಳಿಗೆ ನಿರ್ಗಮಿಸಬೇಕಾಯಿತು.

ಬಿ.ಪಿ.ಬಾ.

## ಯಥಾದೃಶ್ಯರೂಪಣ (Perspective)

ಒಂದು ನಿರ್ದಿಷ್ಟ ಸ್ಥಳ ಅಥವಾ ಬಿಂದುವಿನಿಂದ ಒಂದು ವಸ್ತು ಅಥವಾ ಸ್ಥಳಾವಕಾಶವನ್ನು(Space) ಅಂದರೆ ಕಣ್ಣು ಒಂದು ನಿರ್ದಿಷ್ಟ ಸ್ಥಾನದಲ್ಲಿದ್ದು ವಸ್ತುವಿನ ಕಾಣುವ ಮುಖವನ್ನು ಬಿಂಬಿಸುವ ರೀತಿಯಾಗಿದೆ. ಇದೊಂದು ದೃಶ್ಯ ವಿಶೇಷ ಚಿತ್ರಣವಾಗಿದೆ.

ಮಾರ್ಗ ಸಂಪ್ರದಾಯದ ಮೂಲಭೂತ ಅಂಗವಾದ ಯಥಾದೃಶ್ಯರೂಪಣ(ದೃಗ್ದರ್ಶನ)ವನ್ನು ಚಿತ್ರರಚನೆ ಮಾಡುವ ಕಲಾವಿದ ಒಂದಿಲ್ಲೊಂದು ರೀತಿಯಲ್ಲಿ ಬಳಸಿಕೊಳ್ಳುತ್ತಾನೆ. ಪಾಶ್ಚಾತ್ಯ ಮಧ್ಯಕಾಲೀನ ಕಲೆಯಲ್ಲಿ ಯಥಾದೃಶ್ಯರೂಪಣವನ್ನು ಅಲಕ್ಷಿಸಲಾಯಿತು. ಆದರೂ ಜಿಯತ್ತೋನು ಅದನ್ನು ವ್ಯವಸ್ಥಿತವಾಗಿ ಬಳಸಿಕೊಂಡ ಪರಿಣಾಮವಾಗಿ ೧೪ನೆಯ ಶತಮಾನದ ಇಟಲಿ, ಫ್ರಾನ್ಸ ಮತ್ತು ನೆದರ್‌ಲ್ಯಾಂಡ್‌ಗಳಲ್ಲಿ ಈ ಬಗ್ಗೆ ಪ್ರತಿವಾದ ಬೆಳೆಯಿತು.

ಆಳಕ್ಕೆ ಸರಿದಂತಿರುವ ರೇಖೆಗಳು ಒಂದೆ ಬಿಂದು(ವ್ಯಾನಿಶಿಂಗ್ ಪಾಯಿಂಟ್)ವಿನಲ್ಲಿ ಸೇರುತ್ತವೆ ಎಂಬುದಾಗಿ ಬ್ರುನೆಲೆಸ್ಕಿ ಮತ್ತು ಆಲ್ಬರ್ಟಿ ಎಂಬ ಪ್ರಮೇಯಕಾರರು ಪ್ರತಿವಾದಿಸಿದರೂ ಕಲಾವಿದರು ಸಾಮಾನ್ಯವಾಗಿ ಇದನ್ನು ಅನುಸರಿಸಲಿಲ್ಲ. ೧೬ನೆಯ ಶತಮಾನದಲ್ಲಿ ಉದ್ದನೆಯ ಯಥಾದೃಶ್ಯ ರೂಪಣವು ವಿಪುಲವಾಯಿತಾದರೂ ಇದರಲ್ಲಿ ಪ್ರಾವೀಣ್ಯ ಪಡೆದ ಸಂಪ್ರದಾಯವು ಕೊಡ್ರಾಚುರಾ(Quadrachura) ಎಂದು ಕರೆಯಲ್ಪಟ್ಟಿತು. ಇದು ಕಲ್ಪನಾತ್ಮಕ ವಾಸ್ತುರಚನೆ ಹಾಗೂ ಬಾರೋಕ್ ಕಲೆಯ ಭ್ರಾಮಕ ಒಳಮಾಳಿಗೆ ರಚನೆಗಳಿಗೆ ಅಗತ್ಯವಾಯಿತು. ೧೯ನೆಯ ಶತಮಾನದ ಹೊತ್ತಿಗೆ ಯಥಾದೃಶ್ಯ ರೂಪಣವು ಕಲಾಧ್ಯಯನದ ಒಂದು ಅತ್ಯಗತ್ಯ ಭಾಗವೇ ಆಯಿತು. ಆದರೆ ಪೋಸ್ಟ ಇಂಪ್ರೆಷನಿಸ್ಟರು ಕ್ಯೂಬಿಸ್ಟರು ಯಥಾದೃಶ್ಯರೂಪಣವು ವಸ್ತು ಅಥವಾ ಬಿಂದುವಿನಿಂದ ಕಾಣುವ ಒಂದು ಮುಖವನ್ನು ಮಾತ್ರ ಚಿತ್ರಿಸಬಲ್ಲುದು ಎಂದು ವಾದಿಸಿ ಅದರ ಅತ್ಯಗತ್ಯದ ಅಂಶವನ್ನು ತಳ್ಳಿಹಾಕಿದರು.

ಆದರೆ, ಈಚಿನ ದಿನಗಳಲ್ಲಿ ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳಲ್ಲಿ ತುಂಬಾ ಅಗತ್ಯವಾದ ಅಧ್ಯಯನ ಎಂಬುದನ್ನು ಅಲ್ಲಗಳೆಯಲಾಗದು.

ಶಂ.ಮೂ.

## ಯಥಾಸ್ಥಾಪನೆ ಮತ್ತು ರಕ್ಷಣೆ (Restoration and Conservation)

ಇದು ಕಲಾಕೃತಿಗಳ ಯಥಾಸ್ಥಾಪನೆ ಅಥವಾ ದುರಸ್ತಿ ಹಾಗೂ ರಕ್ಷಣೆಯ ಕಾರ್ಯವಾಗಿದೆ. ಕಲಾಕೃತಿಗಳ ಅಳಿದುಹೋದ ಭಾಗಗಳ ಪುನರ್‌ರಚನೆ ಎಂಬ ಅರ್ಥದಲ್ಲಿ Restoration ಶಬ್ದ ಬಳಕೆಯಾಗುತ್ತಿದ್ದು, ಈ ಮೊದಲು Conservation ಎಂಬ ಅರ್ಥದಲ್ಲಿಯೇ ಬಳಕೆಗೊಳ್ಳುತ್ತಿತ್ತು. ಆದರೆ ಈಗ Conservation ಶಬ್ದವು 'ಕಲಾಕೃತಿಗಳ ಪುನರುಜ್ಜೀವನ ಮತ್ತು ರಕ್ಷಣೆ' ಎಂಬ ಅರ್ಥದಲ್ಲಿ ಬಳಕೆಗೊಳ್ಳುತ್ತಲಿದೆ. ಯಥಾಸ್ಥಾಪನೆ ಅಥವಾ ರೆಸ್ಟೋರೇಶನ್ ಎಂಬುದು ನೀತಿಶಾಸ್ತ್ರದ ಹಿನ್ನೆಲೆಯಲ್ಲಿ ವಿವಾದಾತ್ಮಕವಾದ ಎರಡು ವಿಭಿನ್ನ ಚಟುವಟಿಕೆಗಳನ್ನು ಸೂಚಿಸುತ್ತದೆ. ಒಂದು, ರಕ್ಷಕನು ತಾನು ರಕ್ಷಿಸುವ ಕಲಾಕೃತಿಗಳ ಮೇಲೆ ತನ್ನ ಕಾಲದ ಅಭಿರುಚಿ ಹಾಗೂ



ರಂಗೋಲಿಯಾಗಿ ಬಿಡಿಸುತ್ತಾರೆ. ಬಣ್ಣ ಹಾಕುವುದೂ ಉಂಟು, ದೇವಾಲಯಗಳಲ್ಲಿ ನಿತ್ಯವೂ ರಂಗೋಲಿ ಹಾಕಲು ಉಂಬಳಿ ಬಿಟ್ಟಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಮನೆಯ ಮುಂದೆ ರಂಗೋಲಿ ಹಾಕದಿದ್ದರೆ ಆ ದಿನ ಆ ಮನೆಯಲ್ಲಿ ಏನೋ ಅಮಂಗಲ ಸಂಭವಿಸಿದೆ ಎಂದು ಭಾವಿಸಿ ಭಿಕ್ಷುಕರು ಅಂದು ಆ ಮನೆಗೆ ಭಿಕ್ಷೆಗಾಗಿ ಹೋಗುತ್ತಿರಲಿಲ್ಲ. ರಂಗೋಲಿ ಮನೆಗೆ ಮಹಾತ್ಮರನ್ನು ಸ್ವಾಗತಿಸುವ ಚಿಹ್ನೆಯೂ ಆಗಿದೆ.

ಮಹಿಳೆಯರು ನಿತ್ಯವೂ ಮುಂಜಾವಿನಲ್ಲಿ ಎದ್ದು ಶುಚಿರ್ಭೂತೆಯರಾಗಿ ಸೆಗಣಿ ನೀರನ್ನು ಚಿಮುಕಿಸಿ ಮನೆಯನ್ನು ಶುಚಿಮಾಡಿ ಉತ್ಸಾಹದಿಂದ ಒಬ್ಬರಿಗಿಂತ ಮತ್ತೊಬ್ಬರು ಅಂದ ಚಂದದ ರಂಗೋಲಿ ಹಾಕುತ್ತಿದ್ದರು. ಆದುದರಿಂದಲೇ ಮಹಿಳೆಯನ್ನು 'ಮನೆಗೆ ಮಂಗಲವ ಬರೆಯುವಾಕೆ' ಎಂದು ಹೇಳುತ್ತಿದ್ದರು. ಹೀಗೆ ರಂಗೋಲಿಯು ಭಾರತೀಯ ಸಂಸ್ಕೃತಿಯಲ್ಲಿ ಮಾಂಗಲ್ಯದ ಕುರುಹು, ನೈರ್ಮಲ್ಯದ ಸಂಕೇತ, ಕಲಾಭಿರುಚಿಯ ಕೈಗನ್ನಡಿಯಾಗಿದೆ.

ವಿಶೇಷ ದಿನಗಳಲ್ಲಿ ಕಲಾತ್ಮಕ ರಂಗೋಲಿ ರಚಿಸಿ ಅದರ ಮೇಲೆ ಮಣೆಗಳನ್ನಿಟ್ಟು ವಸ್ತ್ರ ಹಾಸಿ ಮದುಮಕ್ಕಳಿಗೆ ಬಂದು ಕೂಡಲು ಹೇಳುತ್ತಿದ್ದರು. ಅದಕ್ಕೆ 'ಹಸೆಮಣೆ' ಎಂದು ಹೆಸರು, ಆರತಿ ರಂಗೋಲಿ, ನಾಗಮಂಡಲ, ಮದುವೆ ರಂಗೋಲಿ, ವ್ಯಾಧಿ ನಿವಾರಣಾ ರಂಗೋಲಿ ಹಾಗೂ ಇತರ ಪೂಜೆ, ವ್ರತಗಳಿಗೆ ಹೇಳಿಸಿದ ರಂಗೋಲಿಗಳೇ ಇವೆ. ಹಿಂದೆ ಹಾಡು ಹಸೆ ಹೆಚ್ಚಾಗಿ ತಿಳಿದವಳೆಂದರೆ ಆ ವಧುವನ್ನು ಇತರರಿಗಿಂತ ಹೆಚ್ಚಾಗಿ ಗೌರವಿಸುತ್ತಿದ್ದರು. ಈ ಆಧುನಿಕ ಯುಗದಲ್ಲಿ ಈ ಜಾನಪದ ಕಲೆಯು ನಶಿಸುತ್ತಿದೆ. ಇದನ್ನು ಉಳಿಸುವ ಕೆಲಸ ಮಾಡುವುದು ಸುಸಂಸ್ಕೃತರ ಕರ್ತವ್ಯವಾಗಿದೆ.

## ರಜಪೂತ ಕಲೆ

ರಜಪೂತ ಮತ್ತು ಮೊಗಲ ಕಲೆಗಳು ಸಮಕಾಲೀನದವು. ರಜಪೂತ ಕಲೆಯು ೧೬ನೇ ಶತಮಾನದ ಉತ್ತರಾರ್ಧದಿಂದ ೧೯ನೇ ಶತಮಾನದ ತನಕ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಇದಕ್ಕೆ ರಾಜಸ್ತಾನಿ ಶೈಲಿ ಎಂಬುದಾಗಿಯೂ ಹೇಳುತ್ತಾರೆ. ಇದರ ವಿಕಾಸವು ರಾಜರ ಆಸ್ಥಾನದಲ್ಲಾಯಿತು. ಈ ಶೈಲಿಯು ಕ್ರಮೇಣ ದಕ್ಷಿಣ ಭಾರತದ ತಂಜಾವೂರು, ರಾಮೇಶ್ವರದ ತನಕವೂ ವಿಸ್ತರಿಸಿತು.

ರಜಪೂತ ಕಲೆಯಲ್ಲಿ ಮುಖ್ಯವಾಗಿ ಎರಡು ಶಾಖೆಗಳು ಕಂಡುಬರುತ್ತವೆ. ಒಂದು ಪಹಾಡಿ ಶೈಲಿ ಅಥವಾ ಪರ್ವತ ಸಂಪ್ರದಾಯ, ಇದು ಹಿಮಾಲಯ ಪರ್ವತಗಳ ಕೆಳಗಣ ಚಂಬಾ, ಬಸೋಲಿ, ಕಾಂಗ್ರಾ, ಜಮ್ಮುಗಳಲ್ಲಿ ಬಳಕೆಯಲ್ಲಿತ್ತು, ಮತ್ತೊಂದು ಜಯಪುರ ಶೈಲಿ. ಜಯಪುರವು ರಜಪೂತರ ಒಂದು ಪ್ರಭಾವಶಾಲಿ ರಾಜ್ಯವಾಗಿತ್ತು. ಅದು ಈ ರಜಪೂತ ಕಲೆಗೆ ಕೇಂದ್ರವೆನಿಸಿತು. ಆದುದರಿಂದ ರಾಜಸ್ತಾನೀ ಶೈಲಿ ಎನಿಸಿಕೊಂಡ ಚಿತ್ರ ಕಲೆಗೆ ಜಯಪುರ ಶೈಲಿ ಎಂಬುದಾಗಿಯೂ ಹೇಳುತ್ತಾರೆ. ಮೊಗಲರು ಬಂದು ನೆಲೆನಿಂತು ಅವರು ಕಲಾ ಪ್ರೋತ್ಸಾಹಕರೆಂದು ತಿಳಿದಾಗ ಅನೇಕ ಕಲಾವಿದರು ಆಕರ್ಷಿತರಾದರು. ರಜಪೂತ ಚಿತ್ರಕಲೆಯು ಭಾರತದ ದೇಶೀಯ ಪರಂಪರೆಯ ಕಲೆಯಾಗಿದೆ.

ಎಂಟನೇ ಶತಮಾನದ ಆರಂಭದಲ್ಲಿ ಅರಬ ದೇಶದ ಮಹಮ್ಮದ ಕಾಸಿಮನು ಸಿಂಧ ರಾಜ್ಯವನ್ನು ಗೆದ್ದಾಗ ಹಿಂದೂಗಳ ಒಂದು ನಿಯೋಗ ಮಂಡಳಿಯು ಹೋಗಿ 'ಆತನ ಮತ್ತು ಆತನ ಅಧಿಕಾರಿ ವರ್ಗದವರ ಚಿತ್ರಗಳನ್ನು ರಚಿಸಬಹುದೇ?' ಎಂದು ಅನುಮತಿ ಕೇಳಿದ್ದರೆಂಬುದಾಗಿ ಆ ಕಾಲದ ಇತಿಹಾಸಕಾರರು ಹೇಳಿದ್ದಾರೆ. ಕ್ರಮೇಣ ವರ್ಣಚಿತ್ರಕ್ಕಿಂತಲೂ ವಿಗ್ರಹ ವಾಸ್ತು ಕಲೆಗಳಲ್ಲಿ ಅವರ ಕಲಾರಾಧನೆಯು ವ್ಯಕ್ತವಾಯಿತು. ರಜಪೂತ ಶೈಲಿಯ ವಿಕಾಸವು ಮೊಗಲ ಶೈಲಿಯ ಕಾಲದಲ್ಲೇ ಆಗಿದ್ದು ಒಂದರ ಪ್ರಭಾವವು ಮತ್ತೊಂದರ ಮೇಲೆ ಬಿದ್ದಿತ್ತು.

ಬಿ.ಪಿ.ಬಾ.

## ರಥವಾ ಚಿತ್ರಗಳು

ಭಾರತದಲ್ಲಿ ಅನೇಕ ಪರಿಶಿಷ್ಟ ಜಾತಿಗಳಿದ್ದು ಅವು ಸಾಮಾಜಿಕವಾಗಿ ಹಿಂದುಳಿದಿವೆ. ಅಂತಹವರಲ್ಲಿ ಗುಜರಾತಿನ ರಥವಾ ಜನಾಂಗವು ಒಂದು. ಅವರು ಸಾಮಾಜಿಕವಾಗಿ ಹಿಂದುಳಿದಿದ್ದರೂ, ಅವರ ಸಾಂಸ್ಕೃತಿಕ ಪರಂಪರೆಯ ಜನಪದ ಕಲೆ ಸಮೃದ್ಧವಾದುದು. ಗುಜರಾತಿನ ಕೆಲವು ಭಾಗಗಳಲ್ಲಿ ರಥವಾ ಜನಾಂಗದವರು ರಚಿಸಿರುವ ಚಿತ್ರಗಳನ್ನು ಕಾಣಬಹುದು. ಅವರ ಮನೆಯ ಗೋಡೆಯ ಮೇಲಿರುವ ವರ್ಣಚಿತ್ರಗಳು ರಚನಾತ್ಮಕ ಪುರಾಣಗಳಿಗೆ ಹಾಗೂ ಪಿಥೋರೀಗೆ ಅಥವಾ ಪಿತೋರಾಗೆ ಸಂಬಂಧಿಸಿದ ಚಿತ್ರಗಳನ್ನೂ ದೇವರುಗಳು, ಆತ್ಮಗಳು ಮತ್ತು ಪ್ರೇತಾತ್ಮ ಚಿತ್ರಗಳೊಂದಿಗೆ ಹಜಾರದ ಪಾರ್ಶ್ವಗೋಡೆಗಳ ಮೇಲೆ ರಚಿಸುತ್ತಾರೆ. ಅವರ ಅಡುಗೆ ಮನೆಯು ಮತ್ತೊಂದು ಶ್ರೇಷ್ಠವಾದ ಸ್ಥಳವಾಗಿದ್ದು,

ಅಲ್ಲಿನ ಗೋಡೆಯ ಮೇಲೆ ಕುಂಕುಮ ಬಣ್ಣದ ಗುರುತಿನಿಂದ ಗುರುತಿಸಬಹುದಾದ ಗೋತಾರದೇವಿಯ ಪ್ರತಿಷ್ಠಾಪನೆ ಮಾಡುತ್ತಾರೆ.

ಅಲ್ಲಿನ ವರ್ಣಚಿತ್ರಗಳು ಸೃಷ್ಟಿಯ ಪುರಾಣಗಳನ್ನು, ಪ್ರಮುಖ ದೇವರುಗಳ ಆರಾಧನಾ ಪದ್ಧತಿಗಳನ್ನು ಒಳಗೊಂಡಿದೆ. ಪೂರ್ವಿಕರಿಗೆ ಸಂಬಂಧಿಸಿದ ಘಟನೆಗಳನ್ನು ಹಾಗೂ ಈ ಲೌಕಿಕ ಘಟನೆಗಳನ್ನು ವರಾಂಡದ ಹಲವು ಗೋಡೆಗಳ ಮೇಲೆ ಚಿತ್ರಿಸಿದ್ದಾರೆ. ರಥವಾಗಳ ರೇಖಾರಚನೆ ಮತ್ತು ಪುರಾಣದ ಸಚಿತ್ರ ವರ್ಣನೆಗಳನ್ನು ಅವರ ಮನೆಯ ಪೂಜಾಸ್ಥಳಗಳಲ್ಲಿರುತ್ತವೆ ಪಿಥ್ರೋವಿನ ವಿವಾಹದ ವರ್ಣಚಿತ್ರಗಳಲ್ಲಿ ವಿವರವಾದ ವರ್ಣನೆಯಿದ್ದು, ಎಂಟು ಕುದುರೆಗಳ ಮೆರವಣಿಗೆಯನ್ನು ವೂಲಿ ಮತ್ತು ಗಾಡ್ಲಿ ಹಳ್ಳಿಗಳಲ್ಲಿನ ಹೆಚ್ಚು ಚಿತ್ರಗಳಲ್ಲಿ ಕಾಣಬಹುದು. ಚೋಟಾ ಉದಯಪುರದ ಕೃಷಿ ರಾಜ್ಯದ ದಸರಾ ದಹಾರಾನಿ ಸವಾರಿಯ ಮೆರವಣಿಗೆಯ ಚಿತ್ರಗಳು ಉತ್ತಮ ನಿರೂಪಣೆಯಿಂದ ಕೂಡಿವೆ. ಕುದುರೆಗಳು, ಆನೆಗಳು, ಅವರ ಉಡುಗೆ ತೊಡುಗೆಗಳು, ಹಲವು ಬಗೆಯ ಆಭರಣಗಳು ಮತ್ತು ರಾಜನಂತೆ ಕಾಣುವ ವೇಷಗಳಿಂದ ರಜಪೂತ ಮುಖ ಲಕ್ಷಣಗಳನ್ನು ಹೊಂದಿರುತ್ತವೆ.

ಮರಿ

## ರಸಚಿತ್ರ, ಧೂಳೀಚಿತ್ರ

'ರಸಚಿತ್ರ, ಧೂಳೀಚಿತ್ರದೋಜೆಯುಮಂ' (ಮಲ್ಲಿನಾಥ ಪುರಾಣ) 'ರಸಚಿತ್ರ, ಧೂಳೀಚಿತ್ರ ಎಂಬ ಎರಡು ಓಜೆಯೊಳಂ'(ಚಂದ್ರಪ್ರಭ ಪುರಾಣ) 'ರಸಚಿತ್ರ, ಧೂಳೀಚಿತ್ರದ ಕಡುಬಿನ್ನಾಣದೆರಡು ತೆರಂ'(ಜಯನೃಪ ಕಾವ್ಯ) ಎಂದು ಕಾವ್ಯಗಳಲ್ಲಿ ಪ್ರಯೋಗವಾಗಿದೆಯಲ್ಲದೆ ಅಭಿಲಷಿತಾರ್ಥ ಚಿಂತಾಮಣಿಯಲ್ಲೂ ರಸಚಿತ್ರ, ಧೂಳೀಚಿತ್ರಗಳನ್ನು ಹೆಸರಿಸುತ್ತದೆ. ಇವು ಹೆಸರಿಗೆ ತಕ್ಕಂತೆ ನೀರಿನಲ್ಲಿ ಕರಗುವ ದ್ರವವರ್ಣದ ಚಿತ್ರ ಮತ್ತು ರಂಗೋಲೆಯಂತಹ ಪುಡಿಗಳಿಂದ ಬರೆದ ಚಿತ್ರ ಎಂದು ಬಹುಜನರ ಅಭಿಪ್ರಾಯ. ಚಿತ್ರ ಲಕ್ಷಣದ ವ್ಯಾಖ್ಯಾನಕಾರರೂ ಇದೇ ಅರ್ಥ ನೀಡಿ 'ರಸಚಿತ್ರವು ಕನ್ನಡಿಯಲ್ಲಿ ಪ್ರತಿಫಲಿತವಾದಂತೆ ಮೂಲದೊಂದಿಗೆ ನೈಜವಾಗಿರಬೇಕೆಂದೂ, ಶೃಂಗಾರ ರಸಭರಿತವಾಗಿ ಕಣ್ಣು; ಮನಸ್ಸು ತುಂಬುವಂತೆ ಭಿತ್ತಿಯಲ್ಲಿ ರಚಿಸಬೇಕೆಂದು' ಹೇಳುತ್ತಾರೆ. ಬಾಲಾಸಾಹೇಬ ಪಂತರು 'ಕನ್ನಡಿಯಲ್ಲಿ ಪ್ರತಿಬಿಂಬಿತವಾದಂತೆ ತೋರುವಚಿತ್ರ ಚಿತ್ರಾಭಾಸವೆಂದೂ, ಇದರಲ್ಲಿ ಧೂಳೀಚಿತ್ರ, ಪುಷ್ಪಚಿತ್ರ ಮತ್ತು ರಸಚಿತ್ರ ಎಂದು ಮೂರು ವಿಧಗಳೆ'ಂದು ತಿಳಿಸುತ್ತಾರೆ

ರಸಚಿತ್ರಕ್ಕೆ tasteful ornament (in composition) ಎಂದು ಶಬ್ದಮಣಿ ದರ್ಪಣದ ಪ್ರಯೋಗವೊಂದನ್ನು ಕುರಿತು ಕಿಟ್ಟೆಲ್ ಅವರು ತಮ್ಮ ನಿಘಂಟಿನಲ್ಲಿ ತಿಳಿಸುತ್ತಾರೆ. ರಸ ಚಿತ್ರವೆಂದರೆ ಭಿನ್ನ ಭಿನ್ನ ರಸಗಳ ಅಭಿವ್ಯಕ್ತಿ ಎಂಬ ಕಲ್ಪನೆಯೂ ಇದೆ. ಧೂಳೀಚಿತ್ರವೆಂದರೆ ತಮಿಳಿನ 'ಕೋಲಮ್'. ಮನೆಗಳ ಮುಂದೆ ಬಿಳಿಯ ಹಿಟ್ಟು ಅಥವಾ ಚೂರ್ಣ ಬಳಸಿ ಬರೆಯುವ ರಂಗೋಲಿ. ಇವು ಬೇಗ ಅಳಿಸಿ ಹೋಗುವುದರಿಂದ ಶ್ರೀಕುಮಾರನ ಶಿಲ್ಪರತ್ನದಲ್ಲಿ 'ಕ್ಷಣಿಕ' ಎಂದು ಕರೆದಿದೆ. ಇವು ಹೆಚ್ಚಾಗಿ ನೆಲದ ಮೇಲೆ ರಚಿಸುವುದರಿಂದ ನಾರದ ಸೂತ್ರದಲ್ಲಿ 'ಭೌಮ' ಎಂದು ಕರೆಯಲಾಗಿದೆ ಎಂದು ರಾಘವನ್ ಅವರು ತಿಳಿಸುತ್ತಾರೆ.

ವಿಧಿಕ್ರಿಯೆ ಹಾಗೂ ಆಚರಣೆಗಳಲ್ಲಿ ನೆಲದ ಮೇಲೆ ಹಲವಾರು ಬಣ್ಣದ ಪುಡಿಗಳಿಂದ ಆಕಾರಗಳನ್ನು ಬಿಡಿಸುವುದನ್ನೂ ಧೂಳೀಚಿತ್ರವೆಂದು ಕರೆಯಬಹುದು.

ಆಲಸ

## ರಾಗಮಾಲಾ ಚಿತ್ರಗಳು

ರಾಗಮಾಲಾ ಎಂದರೆ ಸಂಗೀತರಾಗಗಳ ಹಾರ ಎಂದರ್ಥ. ಇವು ರಾಗಗಳ ದೃಶ್ಯ ನಿರೂಪಣೆಗಳು. ಸಂಗೀತಗಾರರು ಹಾಡಿದ ರಾಗಗಳು ಶ್ರಾವಕರ ಮನಸ್ಸಿನ ಮೇಲೆ ಮೂಡಿಸುವ ಭಾವಗಳನ್ನು ತಮ್ಮ ಕುಂಚದಿಂದ ಚಿತ್ರಗಾರರು ಪ್ರೇಕ್ಷಕರ ಮನಸ್ಸಿನಲ್ಲಿ ಮೂಡುವಂತೆ ವರ್ಣಚಿತ್ರಗಳನ್ನು ರಚಿಸಿದರು. ಅವುಗಳಿಗೆ ರಾಗರಾಗಿಣಿಯರು ಅಥವಾ ರಾಗಮಾಲಾ ಚಿತ್ರಗಳೆನ್ನುತ್ತಾರೆ. ಇದು ರಜಪೂತ ಚಿತ್ರಕಲೆಯ ಒಂದು ಅಂಗ.

ವರ್ಣ ಮತ್ತು ಧ್ವನಿ, ಮನಸ್ಸಿನಲ್ಲಿ ರಸಭಾವನೆಗಳನ್ನುಂಟು ಮಾಡುವುದರಲ್ಲಿ ಕೆಲವು ಬಣ್ಣ ಮತ್ತು ಧ್ವನಿಗಳಲ್ಲಿ ಸಮಾನ ಗುಣಗಳಿವೆ ಎಂಬುದನ್ನು ವಿದೇಶಗಳಲ್ಲಿ ಆಧುನಿಕ ವಿಜ್ಞಾನಿಗಳು ಒಪ್ಪಿ ತತ್ಸಂಬಂಧ ಶೋಧನೆಗಳನ್ನು ಮಾಡುತ್ತಿದ್ದಾರೆ. ಯಾವ ವರ್ಣವಿನ್ಯಾಸಗಳು ಯಾವ ರಾಗಭಾವಗಳಿಗೆ ಸಮ ಎಂದು ತಿಳಿಯಲು ಹಲವು ಪ್ರಯೋಗಗಳನ್ನು ಮಾಡಿದ್ದಾರೆ. ಆ ದಿಶೆಯಲ್ಲಿ ಶೋಧಿಸುತ್ತಿರುವ ಆಧುನಿಕರಲ್ಲಿ ಅಮೆರಿಕದ ಥಾಮಸ್ ವಿಲ್‌ಫ್ರೆಡ್‌ನೂ ಒಬ್ಬನು. ಅವನಿಗಿಂತ ಹಿಂದಿನವರು ಸರಿಸಮಾನವೆಂದು ತೋರಿದ ಧ್ವನಿ ಮತ್ತು ವರ್ಣಗಳನ್ನು ಜೊತೆಗೂಡಿಸಿ ಪ್ರದರ್ಶಿಸಿದ್ದರು. ಅದಕ್ಕೆ Glarrilux ಎಂದು ಹೆಸರು. ಆದರೆ ಅದು ಸಾಕಷ್ಟು



ಸಫಲತೆ ಪಡೆಯಲಿಲ್ಲ. ನಮ್ಮ ರಾಗಮಾಲಾ ಚಿತ್ರಗಳು ಮೂರು ಶತಮಾನಗಳ ಹಿಂದೆ ಇಂತಹುದೇ ಒಂದು ಪ್ರಯೋಗವಾಗಿತ್ತು.

ರಾಗಗಳಲ್ಲಿ ಮೆಚ್ಚುಗೆಯ ಒಂದು ರಾಗವು 'ಭೈರವಿ' ಆಗಿದೆ. ಅದರಲ್ಲಿ ಕನ್ಯೆಯೊಬ್ಬಳು ತನ್ನ ಪ್ರಿಯಕರನಿಗಾಗಿ ಧ್ಯಾನ ಮಗ್ನಳಾದಂತೆ ಚಿತ್ರಿಸಲಾಗಿದೆ. ಒಬ್ಬ ಲಲನೆಯು ತನ್ನ ಪ್ರಿಯತಮನ ಪ್ರೇಮ ಪ್ರಾಪ್ತಿಗಾಗಿ ಮಂದಿರದಲ್ಲಿ ದೇವರ ಪೂಜೆ ಮಾಡುತ್ತಿದ್ದಾಳೆ. ದೇವರಿಗೆ ಪುಷ್ಪಮಾಲೆಯನ್ನು ಸಮರ್ಪಿಸುವಂತಿದೆ. ಸಖಿಯರು ವಾದ್ಯವಾದನಗಳನ್ನು ನುಡಿಸುತ್ತಿದ್ದಾರೆ.

ವಸಂತರಾಗವನ್ನು ಕೊಳಲನ್ನೂದುವ ಕೃಷ್ಣನು ಗೋಪಿಯರೊಡನೆ ವಿನೋದವಾಡುತ್ತಿರುವಂತೆ ಚಿತ್ರಿಸಲಾಗಿದೆ. ಹೀಗೆ ರಾಗಮಾಲಾ ಚಿತ್ರಗಳು ಸಂಗೀತ, ಸಾಹಿತ್ಯ ಮತ್ತು ಚಿತ್ರಗಳನ್ನು ಒಂದಾಗಿಸುತ್ತಿವೆ. ಪ್ರೇಮ, ವಿರಹ, ವಾತ್ಸಲ್ಯ, ಸಂಭ್ರಮ ಯಾವುದಾದರೂ ರಸಭಾವವನ್ನು ಮೂಡಿಸುತ್ತದೆ.

ಬಿ.ಪಿ.ಬಾ.

## ರಾಜವಂಶಗಳು ಮತ್ತು ಪಾಳೆಯಗಾರರ ಕಾಲದ ವಾಸ್ತುಶಿಲ್ಪ

ಕರ್ನಾಟಕದಲ್ಲಿ ವಿಜಯನಗರದ ಪತನಾನಂತರದಲ್ಲಿ ಹೇಳಿಕೊಳ್ಳಬಹುದಾದ ವಾಸ್ತುಶಿಲ್ಪದ ಬೆಳವಣಿಗೆ ಕಂಡುಬರುವುದಿಲ್ಲವಾದರೂ ಕೆಳದಿ ಅರಸರು, ಮೈಸೂರಿನ ಒಡೆಯರು, ಚಿತ್ರದುರ್ಗದ, ಮಾಗಡಿಯ ಪಾಳೆಯಗಾರರು ತಮ್ಮ ತಮ್ಮ ಮಿತಿಯಲ್ಲಿಯೇ ವಾಸ್ತುಕಲೆಯನ್ನು ಪೋಷಿಸಿ ಬೆಳೆಸಿದ್ದಾರೆ. ಕೆಳದಿಯ ಅರಸರು ವಿಜಯನಗರದ ಶೈಲಿಯಿಂದ ಸ್ಫೂರ್ತಿಯನ್ನು ಪಡೆದರೂ ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ರೂಪಿಸಿಕೊಂಡರು. ಗಟ್ಟಿಕಲ್ಲಿನಲ್ಲಿ ನಿರ್ಮಿಸಿರುವ ಇವರ ದೇವಾಲಯಗಳಲ್ಲಿ ದ್ರಾವಿಡ, ಹೊಯ್ಸಳ ಶೈಲಿಗಳೆರಡು ಹೊಂದಿಕೊಂಡಿವೆ. ಹಾಗೂ ಮುಸ್ಲಿಂ ಶೈಲಿಯ ಪ್ರಭಾವವನ್ನು ಕಾಣಬಹುದಾಗಿದೆ.

ಇಕ್ಕೇರಿಯ ಅಘೋರೇಶ್ವರ ದೇವಾಲಯ, ಕೆಳದಿಯ ವೀರಭದ್ರ ದೇವಾಲಯ ಈ ಮಾದರಿಗೆ ಉತ್ತಮ ಉದಾಹರಣೆಗಳಾಗಿವೆ. ಇವರ ಕಾಲದಲ್ಲಿ ಹಲವೆಡೆಗಳಲ್ಲಿ ಕಟ್ಟಿರುವ ಸಣ್ಣ ಸಣ್ಣ ಗುಡಿಗಳು ಆ ಕಾಲದ ವಾಸ್ತುಕಲೆಯ ವೈಶಿಷ್ಟ್ಯವನ್ನು ಪ್ರತಿಬಿಂಬಿಸುತ್ತವೆ. ಈ ದೇವಾಲಯಗಳಲ್ಲಿ ಎತ್ತರವಾದ ಜಗತಿಯ ಮೇಲೆ ಸಣ್ಣಪ್ರಮಾಣದ ಗರ್ಭಗೃಹ. ಇದೇ ಪ್ರಮಾಣದ ಸುಕನಾಸಿ ಮಾತ್ರ ಇದ್ದು ಮುಂದೆ ಜಗತಿಯಿಲ್ಲದೆ ನೆಲದಿಂದ ಮೇಲೆದ್ದ ನೀಳವಾದ ಕಂಬಗಳ ಮೇಲೆ ನಿಂತಿರುವ ಮುಖಭದ್ರವಿರುತ್ತದೆ. ದೀರ್ಘಚತುರಸ್ರಾಕಾರದ ಈ ಗುಹೆಗಳ ಹೊರಗೋಡೆಗಳ ಮೇಲೆ ಮೂರ್ತಿಶಿಲ್ಪಗಳಿರುತ್ತವೆ. ಉದಾ: ತೀರ್ಥಹಳ್ಳಿ ನಗರ, ಸಾಲಿಗೆರೆ, ಶೃಂಗೇರಿ, ಜಂಬಿಟ್ಟಿಗೆ ಮೊದಲಾದ ಕಡೆ ಇವರ ಕಾಲದ ಕಿರುದೇವಾಲಯಗಳನ್ನು ಕಾಣಬಹುದಾಗಿದೆ.

ಮೈಸೂರಿನ ಒಡೆಯರು ಹಲವಾರು ದೇವಾಲಯಗಳನ್ನು ಕಟ್ಟಿಸಿದ್ದಾರೆ. ಜೀರ್ಣೋದ್ಧಾರ ಮಾಡಿಸಿದ್ದಾರೆ. ಇವುಗಳು ದ್ರಾವಿಡ ಶೈಲಿಯಲ್ಲಿವೆ ಇವುಗಳಲ್ಲಿ ಭವ್ಯತೆ, ನಯನಾಜೂಕು, ಅಷ್ಟಾಗಿ ಕಂಡು ಬರುವುದಿಲ್ಲ. ಗುಂಡ್ಲುಪೇಟೆಯ ಪರವಾಸು ದೇವಾಲಯ, ಚಾಮರಾಜನಗರದ

ಚಾಮರಾಜೇಶ್ವರ, ನಂಜನಗೂಡಿನ ನಂಜುಂಡೇಶ್ವರ, ಹರದನಹಳ್ಳಿಯ ಗೋಪಾಲಕೃಷ್ಣ, ಶ್ರೀರಂಗಪಟ್ಟಣದ ನರಸಿಂಹಸ್ವಾಮಿ ದೇವಾಲಯ, ಮೈಸೂರಿನ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ ಮೊದಲಾದವುಗಳು ಪ್ರಮುಖವಾಗಿವೆ.

ಮೈಸೂರು ಅರಮನೆ ಈ ಶತಮಾನದ್ದೇ ಆದರೂ ವಾಸ್ತುವಿನ ದೃಷ್ಟಿಯಿಂದ ಸುಂದರವಾದುದು. ಚಿತ್ರದುರ್ಗದ ಪಾಳೆಯಗಾರರು ಹಾಗೂ ಹೈದರ್ ಮತ್ತು ಟಿಪ್ಪು ಕಟ್ಟಿಸಿದ ಹಲವಾರು ಕೋಟೆಗಳು ಕೂಡ ಗಮನಿಸತಕ್ಕವು. ಪಾಳೇಯಗಾರರು ಕಟ್ಟಿಸಿದ ವಾಸ್ತುಗಳಲ್ಲಿ ನೀರ್ತಡಿಯ ರಂಗನಾಥ ದೇವಾಲಯ, ಚಿತ್ರದುರ್ಗದ ಉಚ್ಚಂಗಮ್ಮ ದೇವಾಲಯ, ಮತ್ತು ರಾಮದುರ್ಗದಲ್ಲಿ ಗುಡ್ಡವನ್ನು ಕೊರೆದು ಸುಂದರವಾಗಿ ರಚಿಸಿರುವ ಗುಹಾದೇವಾಲಯಗಳು ಅಪೂರ್ವವಾಗಿವೆ.

ಮಲೆನಾಡು ಮತ್ತು ಕರಾವಳಿಯಲ್ಲಿ ವಾಸ್ತುಕಲೆಯು ಬೇರೆ ರೀತಿಯಲ್ಲಿ ಬೆಳೆದು ಬಂದಿದೆ. ಇಲ್ಲಿನ ದೇವಾಲಯಗಳು ನೇಪಾಳದ ತುರಾಯಿಗಳಂತೆ ಇರುವುದಾಗಿ ಕಂಡುಬರುತ್ತವೆ. ಈ ಭಾಗದ ಹೆಚ್ಚಿನ ದೇವಾಲಯಗಳನ್ನು ಜಂಬುಕಲ್ಲಿನಲ್ಲಿ ಕಟ್ಟಿರುವುದೇ ಹೆಚ್ಚು. ಆದುದರಿಂದ ಹೊರಗೋಡೆಯ ಮೇಲಿನ ಅಲಂಕರಣ ಹೆಚ್ಚಿರುವುದಿಲ್ಲ. ಹೆಚ್ಚಾಗಿ ಸುರಿಯುವ ಮಳೆಯಿಂದ ಕಟ್ಟಡಗಳನ್ನು ರಕ್ಷಿಸುವುದು ಅನಿವಾರ್ಯ ಆದುದರಿಂದಾಗಿ ಚಾವಣಿಗಳು ಇಳಿಜಾರಾಗಿರುತ್ತವೆ. ದೇವಾಲಯಗಳ ತಳವಿನ್ಯಾಸ ವೃತ್ತಾಕಾರವಾಗಿರುವುದುಂಟು. ಮೇಲ್ಛಾವಣಿಗಳಲ್ಲಿ ಎರಡು ಮೂರು ಅಂತಸ್ತುಗಳಿದ್ದು ಇಳಿಜಾರಾಗಿರುತ್ತವೆ. ಸಾಮಾನ್ಯವಾಗಿ ಇವುಗಳಿಗೆ ತಾಮ್ರದ ತಗಡನ್ನು ಹೊಂದಿಸಿರುತ್ತದೆ. ಮೂಡಬಿದರೆ, ಕಾರ್ಕಳ ಇತ್ಯಾದಿ ಕಡೆಗಳಲ್ಲಿ ಕಾಣಬಹುದು. ಇವಲ್ಲದೆ ಕರಾವಳಿಯಲ್ಲಿ ಮರದಿಂದ ರೂಪಿಸಿದ ಅರಮನೆಗಳು, ಮೂರ್ತಿಶಿಲ್ಪಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ. ಕೆಳದಿ ಅರಸರ ವಾಸ್ತು, ಶಿಲ್ಪಗಳು ಕೆಳದಿ, ನಗರ, ಇಕ್ಕೇರಿ ಇತ್ಯಾದಿ ಹಲವಾರು ಕಡೆಗಳಲ್ಲಿ ಕಂಡುಬಂದಿದ್ದು ಇವುಗಳನ್ನು ವಿಜಯನಗರದ ಮುಂದುವರಿದ ಶೈಲಿ ಎಂದು ಹೇಳಬಹುದು.

ಜೆ. ಟಿ. ಜ.

## ರಾಯಚೂರು

ರಾಯಚೂರು ಪೇಟೆಯ ಜನನಿಬಿಡ ಪ್ರದೇಶದಲ್ಲಿರುವ ಖಾಜಿಗೌಡರ ವಾಡೆ ಮೂರಂತಸ್ತಿನ ವಿಶಾಲವಾದ ಕಟ್ಟಡ. ಇದರ ಮಹಡಿಯ ಮೇಲಿನ ಮೂರು ಕೋಣೆಗಳಲ್ಲಿ ಭಿತ್ತಿಚಿತ್ರಗಳು ಕಂಡುಬರುತ್ತವೆ. ಚಿತ್ರಿತ ಆಕೃತಿಗಳಲ್ಲಿ ಮಾನವಾಕಾರಗಳಿಗಿಂತ ಪಶುಪಕ್ಷಿಗಳು, ಗಿಡಮರಗಳು ಅಧಿಕವಾಗಿವೆ. ಹೂ ಕುಂಡದಿಂದ ಹೊರಟ ನೇರನಿಂತಿರುವ ಪೊರೆಯಾಕಾರದ ಗಿಡದಲ್ಲಿ ತುಂಬಿರುವ ಹಸುರೆಲೆಗಳು ಕೆಂಪು ಹೂಗಳು. ಅಲ್ಲಲ್ಲಿ ಗಿಳಿ ಗೊರವಂಕಗಳು ಕೊಕ್ಕರೆ, ಹಂಸ ಇತ್ಯಾದಿಗಳಿಂದ ತುಂಬಿದ ರಚನೆ ಗೋಡೆಯ ಕೆಳಹಂತದಲ್ಲಿ ಸಾಲಾಗಿ ಚಿತ್ರಿಸಲಾಗಿದೆ. ಪ್ರತಿಕುಂಡದ ಅಕ್ಕಪಕ್ಕದಲ್ಲಿ ನವಿಲು ಇಲ್ಲವೆ ಕೊಕ್ಕರೆ, ಕಾಮಧೇನು, ಹಂಸ, ಜಿಂಕೆ, ಸಾರಂಗ, ಇತ್ಯಾದಿ ಯಾವುದಾದರೊಂದು ಪ್ರಾಣಿ ಪಕ್ಷಿಗಳು ಎದುರು ಬದುರು ನಿಂತಂತೆ ಚಿತ್ರಿತವಾಗಿವೆ. ಕೆಳಹಂತದಲ್ಲಿ ಒಂದಡಿಯಷ್ಟಿರುವ ಕುಂಡಗಳು ಮೇಲು ಹಂತದಲ್ಲಿ

ವಿಶಾಲವಾಗಿ ಮೂರು ಅಡಿಗಳಷ್ಟು ದೊಡ್ಡವಾಗಿವೆ. ಆಕಾರಕ್ಕೆ ತಕ್ಕಂತೆ ಪ್ರಾಣಿ ಪಕ್ಷಿಗಳು ಇವೆ. ಕೋತಿಗಳ ಚಿತ್ರಣವೂ ಕಡಿಮೆಯಿಲ್ಲ.

ಕಥಾಚಿತ್ರಣದಲ್ಲಿ ಕೃಷ್ಣನ ಬಾಲಲೀಲೆಗೆ ಸೇರಿದ ಚಿತ್ರಣಗಳೇ ಅಧಿಕವಾಗಿದೆ. ಗೆಳೆಯರ ನೆರವಿನಿಂದ ಬೆಣ್ಣೆ ಕಡಿಯುತ್ತಿರುವ, ತಾಯಿಗೆ ಬಾಯಲ್ಲೇ ಮೂರು ಲೋಕ ತೋರಿಸುತ್ತಿರುವ, ವೃಕ್ಷರೂಪದ ದೇವತೆಗಳಿಗೆ ಮೋಕ್ಷ ನೀಡುತ್ತಿರುವ ವಟಪತ್ರಶಾಯಿ ಕೃಷ್ಣ, ದಾಸರಂತೆ ತಂಬೂರಿ ಮೀಟುತ್ತ ಹಾಡುತ್ತಿರುವ ಒಬ್ಬ ವೃದ್ಧ, ತಂಬೂರಿ ಹಿಡಿದು ತಾಳ ಹಾಕುತ್ತಾ ನೃತ್ಯದ ಭಂಗಿಯಲ್ಲಿರುವ ಸ್ತ್ರೀಯರ ಚಿತ್ರಣ ಒಂದು ಬದಿಯಲ್ಲಿ ಕಾಣಬಹುದು. ಬಾಗಿಲೊಂದರ ಮೇಲೆ ವಿಶಾಲವಾದ ಅಂಕಣದಲ್ಲಿ ಅರ್ಜುನ ಹಂಸಧ್ವಜರ(?) ಕಾಳಗ; ಅರಸನೊಬ್ಬ ಅಂತಃಪುರದ ರಾಣಿ ವಾಸದೊಂದಿಗೆ ಕುಳಿತು ದಾಸರೊಬ್ಬರಿಂದ ಹಾಡು ಕೇಳುತ್ತಿರುವುದು ಇತ್ಯಾದಿ ಚಿತ್ರಿತವಾಗಿದೆ. ಗೋಪಿಕಾ ವಸ್ತ್ರಾಪಹರಣದ ದೃಶ್ಯ ಎರಡು ಕಡೆಗಳಲ್ಲಿ ಚಿತ್ರಿತವಾಗಿದೆ. ಎಲ್ಲ ಸ್ತ್ರೀಯರೂ ಮೈತುಂಬಾ ವಸ್ತ್ರಧರಿಸಿರುವುದು ಇಲ್ಲಿಯ ವಿಶೇಷ. ಪಾಶ್ಚಿಮಾತ್ಯ ಗಂಧರ್ವರನ್ನು (ಏಂಜಲ್ಸ್) ಹೋಲುವಂತಹ ಕೆಲವು ಚಿತ್ರಗಳೂ ಇಲ್ಲಿವೆ.

ಬಿಳಿಯ ಗೋಡೆಯ ಹಿನ್ನೆಲೆಯಲ್ಲಿ ಹಳದಿ, ನೀಲಿ, ಹಸಿರು, ಕೆಂಪು ಬಣ್ಣಗಳಿಂದ ರೇಖಾ ಪ್ರಧಾನವಾದ ಆಕೃತಿಗಳು ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ವಸ್ತ್ರಾಭರಣಗಳು ಮರಾಠರ ಶೈಲಿಯಲ್ಲಿದ್ದು ಮುದ್ದಾದ ಮುಖಗಳು ಮೈಸೂರು ಶೈಲಿಗೆ ಹತ್ತಿರವಾಗಿದೆ. ನುರಿತ ಕಲಾವಿದನ ಕಸಬುಗಾರಿಕೆಯಿದೆ. ಕಿಟಕಿ, ಕಂಬ, ಬಾಗಿಲುಗಳು ಮರದಲ್ಲಿ ಕಲಾತ್ಮಕವಾಗಿ ಕಡೆದಿದ್ದು ಬಣ್ಣದ ಗಾಜನ್ನು ಹದ್ದಿಸಲಾಗಿದೆ. ಶೈಯಾಗೃಹದ ಗೂಡೊಂದರಲ್ಲಿ ರಾಜ-ರಾಣಿಯರನ್ನು ಹೋಲುವ ಪ್ರತ್ಯೇಕ ಚಿತ್ರವಿದ್ದು ೧೮೨೮ ಎಂಬ ಬರಹವಿದೆ. ಆದುದರಿಂದ ಇವು ಕಳೆದ ಶತಮಾನದಲ್ಲಿ ರಚಿತವಾದ ಚಿತ್ರಗಳಿರಬಹುದು. ಖಾಜಿನ ಗೌಡರ ಪೂರ್ವಜರ ಬಗ್ಗೆ ಲಾವಣಿಯೊಂದಿರುವುದು ಕುತೂಹಲಕಾರಿಯಾಗಿದೆ.

ಅಲನ

## ರಾಯಲ್ ಅಕಾಡೆಮಿ ಆಫ್ ಆರ್ಟ್ಸ್

೧೭೬೮ರಲ್ಲಿ ಸ್ಥಾಪಿಸಲಾದ ಸ್ವಾವಲಂಬನೆಯುಳ್ಳ ಚಿತ್ರ, ಶಿಲ್ಪ, ವಾಸ್ತುಶಿಲ್ಪಗಳ ಮಟ್ಟವನ್ನು ಉತ್ತಮಗೊಳಿಸಲು ಲಂಡನ್‌ನಲ್ಲಿ ಸ್ಥಾಪಿತವಾದ ಸಂಸ್ಥೆ, ಮೂಲ ಸದಸ್ಯತ್ವವನ್ನು ನಲ್ವತ್ತು ವೃತ್ತಿಪರ ಕಲಾವಿದರಿಗೆ ಸೀಮಿತವಾಗಿತ್ತು. ಇಲ್ಲಿ ತಮ್ಮ ವೃತ್ತಿ ಮಟ್ಟವನ್ನು ಬಹುಮುಖ ತರಬೇತಿ ನೀಡುವುದರ ಮೂಲಕ ಉತ್ತಮಗೊಳಿಸಲು ವಿದ್ಯಾರ್ಥಿಗಳಿಗೆ ಅವಕಾಶವಿತ್ತು. ಇದರ ಪ್ರಥಮ ಅಧ್ಯಕ್ಷ ಜೋಷುವ ರೆನಾಲ್ಡ್ಸ್ ಅವರ ನೇತೃತ್ವದಲ್ಲಿ ಕಲೆಯಲ್ಲಿ ಶಿಕ್ಷಣ ನೀಡಲು ಸ್ಥಾಪಿತವಾಗಿ, ವಿಶ್ವದಲ್ಲೇ ಹೆಸರು ಪಡೆಯಿತು.ಈ ಅಕಾಡೆಮಿ ಇಂದಿಗೂ ಹವ್ಯಾಸಿ ಹಾಗೂ ವೃತ್ತಿಪರ ಕಲಾವಿದರಿಗೆ ವಾರ್ಷಿಕ ಕಲಾ ಪ್ರದರ್ಶನಗಳನ್ನು ನಡೆಸುತ್ತಿದ್ದು, ಅತ್ಯಂತ ಜನಪ್ರಿಯತೆ ಗಳಿಸಿದೆ.

ಶಾ

## ರಿಪೌಸೆ, ರಿಪೌಸೇಜ್, ರಿಪೌಸರ್ (Repousse, Repoussage, Repoussoir)

ಲೋಹದ ತಗಡಿನ ಒಂದು ಭಾಗವನ್ನು ಸುತ್ತಿಗೆಯಿಂದ ಬಡಿದು ಅಥವಾ ಒತ್ತಿ, ಅದರ ಇನ್ನೊಂದು ಭಾಗದಲ್ಲಿ ಉಬ್ಬು ನಕ್ಷೆಗಳನ್ನು ಮೂಡಿಸುವುದಕ್ಕೆ ರಿಪೌಸೆ ಎನ್ನುತ್ತಾರೆ.

ಲೋಹದ ತಗಡಿನ ಮೇಲೆ ಅಲಂಕಾರಿಕ ಚಿತ್ರಗಳನ್ನು ಕೆತ್ತಿ ಅಥವಾ ಕೊರೆದು ಅದರ ಹಿಂಭಾಗವನ್ನು ಸುತ್ತಿಗೆಯಿಂದ ಬಡಿದು, ಅಚ್ಚಿಗೆ ಅಣಿಗೊಳಿಸುವ ಪದ್ದತಿಗೆ ರಿಪೌಸೇಜ್ ಎನ್ನುತ್ತಾರೆ.

ಒಂದು ಚಿತ್ರಕ್ಕೆ ಆಳದ ಕಲ್ಪನೆಯನ್ನುಂಟು ಮಾಡಲು ಬಳಸುವ ತಂತ್ರಕ್ಕೆ ರಿಪೌಸರ್ ಎನ್ನುತ್ತಾರೆ. ಇದನ್ನು ಕಲಾಕೃತಿಯ ಮುನ್ನೆಲೆಯಲ್ಲಿ ಎಡ ಅಥವಾ ಬಲಕ್ಕೆ ಒಂದು ವಸ್ತು ಅಥವಾ ಆಕೃತಿಯನ್ನು ಇಟ್ಟಂತೆ ಉದ್ದೇಶಪೂರ್ವಕವಾಗಿ ಚಿತ್ರಿಸುವುದರ ಮೂಲಕ ಹಾಗೂ ಹಿನ್ನೆಲೆಯ ವಿವರಗಳನ್ನು ಮಸುಕುಗೊಳಿಸುವುದರ ಮೂಲಕ ಸಾಧಿಸಲಾಗುತ್ತದೆ. ಸಾಮಾನ್ಯವಾಗಿ ಈ ಉದ್ದೇಶಕ್ಕಾಗಿ ಚಿತ್ರಿಸಲಾದ ವಸ್ತುವು ಪ್ರೇಕ್ಷಕನ ದೃಷ್ಟಿಯನ್ನು ಚಿತ್ರದ ಮೂಲ ದೃಶ್ಯದತ್ತ ಕೊಂಡೊಯ್ಯುತ್ತದೆ.

ಅ.ಜಾ.

## ರಿಯಲಿಸಂ, ಸಮಾಜವಾದಿ (Socialist, Realism)

ಇದು ಸೋವಿಯತ್ ದೇಶದ ಮಾನ್ಯತೆ ಪಡೆದ ಕಲಾಶೈಲಿಯಾಗಿದೆ. ತಾತ್ವಿಕತೆ, ಆದರ್ಶ ಹಾಗೂ ಪರಾಕ್ರಮದಂತಹ ವಿಷಯಗಳ ನಿರೂಪಣೆ ಇಲ್ಲಿ ಸಾಮಾನ್ಯ ಕ್ರಿ. ಶ. ೧೯೩೨ರಲ್ಲಿ, ಪ್ರಾರಂಭಗೊಂಡ ಈ ಶೈಲಿಯ ಕಲಾವಿದರ ಸಿದ್ಧಾಂತ ಹಾಗೂ ಪದ್ಧತಿಯಲ್ಲಿ ಮಾರ್ಕ್ಸವಾದಿ ಸಿದ್ಧಾಂತದ ಬಗೆಗಿನ ಶ್ರದ್ಧೆ ಕಂಡು ಬರುತ್ತದೆ. ಇದು ದೈನಂದಿನ ಜೀವನಕ್ಕೆ ಹೆಚ್ಚು ಒತ್ತು ನೀಡುವ ಸೈದ್ಧಾಂತಿಕ ಪಂಥವಾಗಿದೆ. ಕಮ್ಯುನಿಸ್ಟ್ ಪಾರ್ಟಿಯ ತಾತ್ವಿಕ ನೆಲೆಗಟ್ಟಿಗೆ ಅಂಟಿಕೊಂಡು ಬೆಳೆದು ಬಂದದ್ದಾಗಿದೆ. ಇದೇ ಕಾರಣಕ್ಕಾಗಿ ಅನೇಕ ಕಲಾವಿದರು ಕಟ್ಟುನಿಟ್ಟಿನ ನಿಯಮಗಳನ್ನು, ಸೂತ್ರಗಳನ್ನು ಅನುಸರಿಸತೊಡಗಿದರು. ಇದರಿಂದ ಕಲಾವಿದನು ವ್ಯಕ್ತಿಗತ ಜವಾಬ್ದಾರಿಯಿಂದ ಬೇರ್ಪಟ್ಟಂತಾಯಿತು. ಇದರ ಪರಿಣಾಮವಾಗಿ ಪಶ್ಚಿಮ ಯುರೋಪಿನ ದೇಶಗಳಲ್ಲಿ 'ಸೋಷಿಯಲಿಸ್ಟ್ ರಿಯಲಿಜಂ' ಬಗೆಗೆ ಸಂಶಯಾತ್ಮಕ ಪ್ರತಿಕ್ರಿಯೆ ವ್ಯಕ್ತವಾಯಿತು. ೧೯೩೦ರ ಸುಮಾರಿಗೆ 'ಸೋಸಿಯಲಿಸ್ಟ್ ರಿಯಲಿಜಂ'ನಿಂದ ಪ್ರಭಾವಿತರಾದ ಕಲಾವಿದರಲ್ಲಿ ದಿನೇಕಾ ಮತ್ತು ಯೂರಿ ಪ್ರಮುಖರೆನಿಸಿದ್ದಾರೆ. ಈ ಪಂಥದ ಹೆಚ್ಚಿನ ಕೃತಿಗಳು ಕಮ್ಯುನಿಸ್ಟ್ ಪಕ್ಷವನ್ನು ವೈಭವೀಕರಿಸುವ ದಿಶೆಯಲ್ಲಿ ಸಫಲವೆನಿಸಿವೆ.

ಎಸ್. ಎಂ. ಮಿ.

## ರಿಯಲಿಸಂ, ಸಾಮಾಜಿಕ (Social Realism)

ಈ ಪಂಥದ ಕಲಾವಿದರ ಚಿತ್ರಗಳು ಕೇವಲ ಯಥಾರ್ಥ ಚಿತ್ರಕಲೆ ಆಗಿರದೆ ಅದು ಸಾಮಾಜಿಕ ವಿವರಣೆಯೂ ಆಗಿರುತ್ತದೆ. ೧೯ನೆಯ ಶತಮಾನದ ಮಧ್ಯಭಾಗದ ರಿಯಲಿಸ್ಟು

ಆಂದೋಲನದಲ್ಲಿಯೇ ಇದನ್ನು ಕಾಣಬಹುದು. ಫ್ರಾನ್ಸದೇಶದ ಮಿಲೆಟ್ ಮತ್ತು ಕೌರಬೆಟ್ (Courbet) ಅಂತೆಯೇ ಬ್ರಿಟನ್‌ದ ಫೀಲ್ಡ್ಸ್ ಹಾಗೂ ಫ್ರೆಡ್‌ವಾಕರ್ ಚಿತ್ರಕಾರರು ಈ ಪಂಥದವರಾಗಿದ್ದಾರೆ. ಸೋವಿಯತ್ ಯುನಿಯನ್ ದೇಶದಲ್ಲಿ ೨೦ನೆಯ ಶತಮಾನದಲ್ಲಿ ಈ ಪದ ಬಳಕೆಗೆ ಬಂದರೂ ಅದು ಕೇವಲ ರಾಜಕೀಯ ಪ್ರವೃತ್ತಿಯದು. ಇಪ್ಪತ್ತನೆಯ ಶತಮಾನದ ಪ್ರಾರಂಭದ ವರ್ಷಗಳಲ್ಲಿ ನಿರ್ಮಾಣಗೊಂಡ ಅಮೆರಿಕಾದ ಅಶ್ಕನ್ ಸ್ಕೂಲ್(Ashcan School) ಹಾಗೂ ೧೯೫೦ರ ದಶಕದ ಬ್ರಿಟಿಶ್ ಕಿಚನ್ ಸಿಂಕ್ ಸ್ಕೂಲ್(British Kithen Sink School)ನ ಚಿತ್ರಕಲಾಕೃತಿಗಳು ಸೋಷಿಯಲ್ ರಿಯಲಿಜಂನ ಉದಾಹರಣೆಗಳೆನಿಸಿವೆ.

ಎಸ್. ಎಂ. ಪಿ.

## ರೂಪ (Form)

ಒಂದು ವಸ್ತುವಿನ 'ಸಂಪೂರ್ಣತೆ'ಯನ್ನು ಒಂದು ರೇಖಾ ಚಿತ್ರದಲ್ಲಿ ನಮಗೆ ದೊರಕಿಸಿಕೊಡುವ ಪರಿಕರವನ್ನು 'ರೂಪ' ಎನ್ನುತ್ತೇವೆ. ಆದ್ದರಿಂದ ಮೂಲಭೂತವಾಗಿ ಆಕಾರ(Shape)ಕ್ಕಿಂತಲೂ ರೂಪ ಭಿನ್ನವಾದುದು. ಆಕಾರವು ಕೇವಲ ಸಮತಟ್ಟು(Flat) ಎರಡು ಆಯಾಮದ ಗುಣಗಳನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ನಾವು ಪ್ರಕೃತಿಯಲ್ಲಿನ 'ಸಂಪೂರ್ಣತೆಯನ್ನು ರೇಖಾಚಿತ್ರಗಳಲ್ಲಿಯೂ ಮೂಡಿಸಬಯಸುತ್ತೇವೆ. ರೂಪವನ್ನು ಕಲಾಕೃತಿಯೊಂದರಲ್ಲಿ ನೋಡಿದಾಗ ಅದರ ಮುಂದಿನ ವಿವರಗಳನ್ನು ತಿಳಿಯಲು ನಮ್ಮಲ್ಲಿ ಕುತೂಹಲವೇರ್ಪಡುತ್ತದೆ. ಇದು 'ರೂಪ'ದ ಮೂಲಭೂತ ಕಾರ್ಯ.

ರೂಪವನ್ನು ಕೇವಲ ಒಂದು ವಸ್ತುವನ್ನು ಚಿತ್ರಿಸುವ ತಂತ್ರ ಎಂದು ಬಗೆಯದೆ ಅದರದೇ ಆದ 'ಭ್ರಮಾತ್ಮಕ' ಗುಣದ-ಸಾಧ್ಯತೆಯ ಕಡೆ ಗಮನ ನೀಡಿದರೆ ದೃಶ್ಯ-ಅರ್ಥವನ್ನು ವಿಶೇಷವಾಗಿ ಗಮನಿಸುವ ಸಾಧ್ಯತೆಯುಂಟು. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ. ಆಕಾರವನ್ನು ಅದು ನಿರ್ಧರಿಸುವ ವಸ್ತು-ವಿಷಯವನ್ನು ಹೊರತು ಪಡಿಸಿ ಶುದ್ಧ ಆಕಾರವನ್ನಾಗಿ ಗ್ರಹಿಸಿದಾಗ್ಯೂ ಅದು ಆಕರ್ಷಕವಾಗಬಹುದು. ಒಮ್ಮೊಮ್ಮೆ ವಿಷಯ ರಹಿತವಾಗಿಯೂ ಆಕಾರ ಕಲೆಯ ಕೇಂದ್ರವಾಗಬಹುದು. ಆಗ ವಿಷಯ ಹಾಗೂ ಆಕಾರಗಳು ಗೌಣವೂ ಆಗಬಹುದು.

ಆಕಾರವು ವಸ್ತುವೊಂದನ್ನು ಸಂಕೇತಿಸುವಾಗ ಆಕಾರಕ್ಕೆ ಎರಡನೇ ಪ್ರಾಮುಖ್ಯತೆ ದೊರಕುತ್ತದೆ. ವಿಷಯರಾಹಿತ್ಯ ಆಕಾರವಾದರೆ ಅದು ಸೌಂದರ್ಯಮೀಮಾಂಸೆಗೆ ಹಾಗೂ ದೃಶ್ಯಾಕರ್ಷಕ ಕೇಂದ್ರವಸ್ತುವಾಗುತ್ತದೆ.

ಒಂದು ವಸ್ತುವನ್ನು ಚಿತ್ರಿಸುವಾಗ ಅದರ ಮೇಲೆ ಬೀಳುವ ನೆರಳು-ಬೆಳಕು ಆ ವಸ್ತುವಿನ ಚಿತ್ರಾಕಾರವನ್ನು ನಿರ್ಧರಿಸುವ ಅತ್ಯಂತ ಪ್ರಮುಖ ಅಂಶವಾಗುತ್ತದೆ. ಒಂದೇ ದಿಕ್ಕಿನಿಂದ ಬೆಳಕು ಬಿದ್ದಾಗ ಆಕಾರವು ಮತ್ತೊಂದರ್ಥದಲ್ಲಿ ಕಪ್ಪಾಗಿದು ಅತ್ಯಂತ ನಾಟಕೀಯತೆಯನ್ನು ಪಡೆಯುತ್ತದೆ.

ಮೃದುವಾದ ಬೆಳಕು ಎಲ್ಲಾ ದಿಕ್ಕಿನಿಂದಲೂ ಬಿದ್ದಾಗ ಆ ಆಕಾರ ಸೌಮ್ಯರೂಪ ಹೊಂದುತ್ತದೆ. ಅಂದರೆ ಆಕಾರದ ತೋರಿಕೆಗೆ/ಸ್ಪಷ್ಟತೆಗೆ ನೆರಳು ಬೆಳಕಿನ ಚಿತ್ರಣ ಅನಿವಾರ್ಯ.

ರೆಂಬ್ರಾಂಟ್‌ನ ಕೃತಿಗಳಲ್ಲಿ ಆಕಾರಗಳು ನಾಟಕೀಯವಾಗಿರುತ್ತವೆ (ಬೆಳಕು ಒಂದೇ

ದಿಕ್ಕಿನಿಂದ ಬೀಳುವುದರಿಂದ). ವರ್ಮೀರ್(Vermeer) ಸರ್‍ಯ(Seurai); ಚೀನಿ ನಿಸರ್ಗಕೃತಿಗಳಲ್ಲಿ ಆಕಾರದ ತೆಳು-ಬೆಳಕಿನಿಂದ ರೂಪುಗೊಂಡಿದ್ದು ಲಘುವಾಗಿ ಮೂಡಿಬರುತ್ತವೆ.

ಕೆ. ವೆಂಕಟಪ್ಪನವರ ಕೃತಿಗಳಲ್ಲಿ ಆಕಾರಗಳು ಸ್ಪಷ್ಟತೆ ಹೊಂದಿದ್ದರೂ ನಾಟಕೀಯ ಗುಣಗಳಿಲ್ಲ

**ಎಚ್.ಎ.ಅ.**

## ರೆಪ್ರೆಸೆಂಟೇಶನಲ್ (Representational)

ಜನಸಮೂಹ, ಆಕೃತಿ ಹಾಗೂ ನಿಸರ್ಗಗಳನ್ನು ಕಂಡಂತೆಯೇ ಚಿತ್ರಿಸುವ ಕಲೆಗೆ 'ನೈಜಕಲೆ' ಅಥವಾ 'ರೆಪ್ರೆಜೆಂಟೇಶನಲ್' ಎನ್ನುತ್ತಾರೆ. ಇದು ಆದರ್ಶವಾದ ಅಥವಾ ಅಮೂರ್ತ(Idealistic or abstract) ಕಲೆಗಿಂತ ಭಿನ್ನವಾದುದು.

**ಅ.ಜಾ.**

## ರೇಖೆ

ರೇಖೆ ಅನೇಕ ಬಿಂದುಗಳಿದ ರಚಿತವಾಗುತ್ತದೆ. ಇದು ನಿರ್ಮಿತ ಜಾಗದಲ್ಲೇ ವರ್ಣದಲ್ಲಿ ಅಥವಾ ಛಾಯೆಯಲ್ಲಿ ತನ್ನ ಮಿತಿಯಲ್ಲೇ ಇರುತ್ತದೆ. ತನ್ನ ಮಿತಿಯಲ್ಲೇ ಇರುವ ಜಾಗಕ್ಕೆ ರೇಖೆ ಎನ್ನುತ್ತಾರೆ. ಕ್ರಮವಾದ ಜಾಮಿತಿಕ ಆಕಾರಗಳು ಸರಳವಾಗಿ ರೇಖೆಗಳಿಂದ ರಚಿಸಲ್ಪಡುತ್ತವೆ. ರೇಖೆಗಳ ವಿಧಾನಗಳು, ಅತಿ ನವಿರಾದ ರೇಖೆ, ವೀರ್ಯವತ್ತಾದ ರೇಖೆ, ಲಂಬರೇಖೆ, ಓರೆಯಾದರೇಖೆ, ಸಮಾಂತರರೇಖೆ, ವಕ್ರರೇಖೆ, ಲಯಬದ್ಧ ವಕ್ರಾಕೃತಿರೇಖೆ ವತ್ರ[illegible]



ನಂದಲಾಲ್ ಬೋಸ್



ಶಿವಾಕ್ಸ್ ಚಾವ್ಡ

ಯಾವುದೇ ರೇಖಾ ಅಥವಾ ವರ್ಣಚಿತ್ರದ ಪೂರ್ಣ ವಿವರಗಳಿಂದ ಕೂಡಿರದಿದ್ದರೆ ಮತ್ತು ಉದ್ದೇಶಿತ ದೃಶ್ಯ, ಯೋಜಿತ ವಿಷಯದ ಸಾಮಾನ್ಯ ಕಲ್ಪನೆಯ ಅಭಿವ್ಯಕ್ತಿಯೆ ರೂಪರೇಖೆ ಅಥವಾ ಸ್ಕೆಚ್ ಎನಿಸಿಕೊಳ್ಳುತ್ತದೆ.

ರೇಖಾಚಿತ್ರ ಕಲಾವಿದರಿಗೆ ಮೂಲಭೂತವಾದ ಕಲೆಯಾಗಿದೆ. ಸೃಜನಶೀಲ ಅಭಿವ್ಯಕ್ತಿಯ ಕ್ಷೇತ್ರವಾಗಿದ್ದು, ಅದು ಸ್ವಯಂ ಪ್ರೇರಿತವಾಗಿರಬಹುದು. ಸಮಯಕ್ಕೆ ತೋಚಿದುದಾಗಿರಬಹುದು. ಕಾಲ್ಪನಿಕ ಅಥವಾ ಅಮೂರ್ತವಾಗಿರಬಹುದು. ರೇಖಾ ಚಿತ್ರಗಳ ಮೂಲಕ ಕಲಾವಿದ ತನ್ನ ಅಭಿವ್ಯಕ್ತಿ, ಭಾವನಾ ಲಕ್ಷಣವನ್ನು ವ್ಯಕ್ತಗೊಳಿಸುತ್ತಾನೆ. ರೇಖೆಗಳಿಂದ ರೂಪಿತವಾಗಿದ್ದು, ಅವು ಜೀವಂತಿಕೆಯಿದ್ದು, ಎರಡು ವಿಧವಾಗಿ ವಿಂಗಡಿಸಬಹುದು. ಒಂದು ಸಾಂಪ್ರದಾಯಿಕ ಮತ್ತೊಂದು ಅಭಿವ್ಯಕ್ತವಾದ.

ಆಧುನಿಕ ಕಾಲದಲ್ಲಿ ರೇಖಾಚಿತ್ರದಲ್ಲಿ ನವ್ಯತೆ ಮತ್ತು ಮನೋವೈಜ್ಞಾನಿಕತೆಯ ಭಾವನೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ಮನೋವಿಲಾಸಿ ಪಂಥದ ಕೊನೆ ಯಾವುದೆಂದರೆ ಫ್ಯಾಂಟಸೀ ಅಥವಾ ಸರ್ರಿಯಲಿಸಂ, ಇದರ ವಿವರಣೆಯೆಂದರೆ ವಿನ್ಯಾಸ. ಅಲಂಕರಣವನ್ನು ವಾಸ್ತವಿಕ ಎಂದೂ ಹೇಳಿದರೂ ಸ್ಪಷ್ಟ ವಿನ್ಯಾಸ ಶೈಲಿಯಿಂದ ಮತ್ತು ಪ್ರಕೃತಿಯಲ್ಲಿ ಕಾಣದಂತಹ ಆಕಾರಗಳನ್ನು ನಿರೂಪಿಸಬಹುದು. ಇಲ್ಲಿ ಕಲಾವಿದ ಸೌಂದರ್ಯವನ್ನು ಕಂಡಿರುತ್ತಾನೆ. ಕೆಲವೊಮ್ಮೆ ಅಲಂಕೃತಿಯಲ್ಲಿ ಆಕಾರವನ್ನು ವಿಕೃತ ರೂಪಗೊಳಿಸಬಹುದು.

**ಮರಿ**

## ರೋಮನ್ ಕಲೆ

ಕ್ರಿ.ಪೂ. ೭೩೫ರಿಂದ ಕ್ರಿ.ಶ. ೪೭೬ರ ಅವಧಿಯಲ್ಲಿ ರೋಮನ್ ಸಂಸ್ಕೃತಿಯು ಪರಮೋಚ್ಚ ಸ್ಥಾನವನ್ನು ತಲುಪಿತ್ತು. ರೋಮನ್ನರು ರೋಮ ಪಟ್ಟಣದಿಂದ ಪಶ್ಚಿಮಕ್ಕೆ ಇಂಗ್ಲೆಂಡ್‌ವರೆಗೂ, ಪೂರ್ವಕ್ಕೆ ಮೆಸೋಪೊಟೇಮಿಯದವರೆಗೂ ವ್ಯಾಪಿಸಿ ನೆಲೆಗೊಂಡವರಾಗಿದ್ದರು. ರೋಮ್, ಪಾಂಪೇ ಮತ್ತು ಬೈಝಾಂಟಿಯನ್‌ಗಳು ಪ್ರಮುಖ ಪಟ್ಟಣಗಳಾಗಿದ್ದವು. ಕ್ರಿ.ಶ. ೩೯೫ರಲ್ಲಿ ರೋಮ್ ಸಾಮ್ರಾಜ್ಯವು ಇಬ್ಭಾಗವಾಯಿತು. ಪಾಶ್ಚಿಮಾತ್ಯ ರೋಮನ್ನರು ದಾಳಿಕಾರರಿಗೆ ಸುಲಭವಾಗಿ ತುತ್ತಾದರು ಪೌರ್ವಾತ್ಯ ರೋಮ್ ಸಾಮ್ರಾಜ್ಯವು ಕ್ರಿ.ಶ. ೧೪೫೩ರ ವರೆಗೂ ಮುಂದುವರಿಯಿತು.

ರೋಮನ್ ಕಲೆಯು ಪ್ರಮುಖವಾಗಿ ಎತ್ರುಸ್ಕನ್ ಮತ್ತು ಗ್ರೀಕ್‌ದ ಕೊನೆಯ ಹಂತದ ಕಲೆಗಳ ಪ್ರಭಾವದಲ್ಲಿಯೇ ಬೆಳೆದು ಬಂದಿತು. ರೋಮನ್ ಸಾಮ್ರಾಜ್ಯವು ವಿಸ್ತಾರಗೊಂಡಂತೆಲ್ಲ ರೋಮನ್ನರು ಆಕ್ರಮಿಸಿಕೊಂಡ ಗ್ರೀಕ್ ಮತ್ತು ಪೌರ್ವಾತ್ಯ ಭಾಗಗಳಲ್ಲಿ ರೋಮನ್ ಕಲೆಯು ಪರಿಣಾಮ ಬೀರಿತು. ರೋಮನ್ ವಾಸ್ತುಶಿಲ್ಪ ಹಾಗೂ ಮೂರ್ತಿ ಶಿಲ್ಪ ಕಲೆಗಳು ಅನ್ಯಾದೃಶವಾಗಿ ಬೆಳೆದಿದ್ದವು. ರೋಮನ್ ಕಲೆಯು ಬೇರೆ ಬೇರೆ ಮೂಲಗಳಿಂದ ಮೂಡಿ ಬಂದಿದ್ದರೂ ತನ್ನದೇ ಆದ ಗುಣಗಳನ್ನು ಮೈಗೂಡಿಸಿಕೊಂಡಿತ್ತು. ಗ್ರೀಕ್‌ವಾಸ್ತುಶಿಲ್ಪಕಲೆಗಿಂತ ರೋಮನ್ ವಾಸ್ತುಶಿಲ್ಪಕಲೆಯು ಶ್ರೇಷ್ಠತೆಯ ಪರಮ ಗುರಿಯನ್ನು ತಲುಪುವಲ್ಲಿ ರೋಮನ್ನರು ಸಂಶೋಧಿಸಿದ ಕಮಾನು(Arch) ಮತ್ತು ಮುಂದೆ ಚಾಚಿಕೊಂಡಿರುವ ಮಾಡು(Vault)ಗಳು



ಪ್ರಧಾನ ಪಾತ್ರ ವಹಿಸಿದ್ದವು. ಗ್ರೀಕರು ಕಲ್ಲಿನ ಬೆಟ್ಟಗಳನ್ನು ಕೊರೆದು ಕಟ್ಟಡಗಳನ್ನು ನಿರ್ಮಿಸಿದ್ದರೆ ರೋಮನ್ನರು ಇಟ್ಟಿಗೆ ಮತ್ತು ಗಾರೆಗಳನ್ನು ಬಳಸಿ ಕಟ್ಟಡಗಳನ್ನು ನಿರ್ಮಿಸಿದರು. ಪ್ರಪ್ರಥಮವಾಗಿ ಸೇತುವೆ ಮುಂತಾದ ಕಟ್ಟಡಗಳಲ್ಲಿ ಬಳಸಲಾದ ಕಮಾನು, ಮುಂದೆ ಚಾಚಿಕೊಂಡಿರುವ ಮಂಡುಗಳನ್ನು ಅರಮನೆಗಳು, ನಾಟಕ ಗೃಹಗಳು ಮತ್ತು ಬೇರೆ ಕಟ್ಟಡಗಳನ್ನು ಕಟ್ಟುವಾಗ ಬಳಸಲಾಯಿತು. 'ಪಾಂಪೇ' ಪಟ್ಟಣದ ರೋಮನ್ ಮನೆಗಳು, ಪ್ಯಾಲಟೈನ್ ಬೆಟ್ಟದ ಮೇಲೆ ಕಟ್ಟಲಾದ ಫ್ಲಾವಿಯನ್ ಅರಮನೆ, ಟಿವೋಲಿಯಲ್ಲಿರುವ ಹೇಡ್ರಿಯನ್‌ನ ಭವ್ಯ ಮಂದಿರಗಳು, ಬಸಿಲಿಕಾ, ನ್ಯಾಯಮಂದಿರ, ಸಾಮೂಹಿಕ ಸಭಾಗೃಹ ಅಥವಾ ವ್ಯಾಪಾರಿ ಹಜಾರ ಮುಂತಾದ ಕಟ್ಟಡಗಳಲ್ಲದೆ ಸರ್ವದೇವತೆಗಳ ಗೌರವಾರ್ಥವಾಗಿ ಸಾಮ್ರಾಟ್ ಹೇಡ್ರಿಯನ್‌ನು ಕಟ್ಟಿಸಿದ ಪ್ಯಾಂಥಿಯನ್ ಮುಂತಾದ ಭವ್ಯಕಟ್ಟಡಗಳು ರೋಮನ್ ವಾಸ್ತುಶಿಲ್ಪಕಲೆಯ ಉನ್ನತಿಯ ದ್ಯೋತಕಗಳಾಗಿವೆ. ಚಕ್ರವರ್ತಿಗಳಾದ ಆಗಸ್ಟಸ್ ಮತ್ತು ಹೇಡ್ರಿಯನ್‌ರ ಸಮಾಧಿಗಳು ಶ್ರಮಪೂರ್ಣವಾದ ಕಟ್ಟಡಗಳಾಗಿದ್ದು ಗಿಡ್ಡ ಗೋಡೆಗಳುಳ್ಳ ಎತ್ರುಸ್ಕನ್ ಸಮಾಧಿಗಳ ಪ್ರತಿರೂಪವನ್ನೇ ರೂಪಾಂತರಿಸಿ ಭವ್ಯ ಕಟ್ಟಡಗಳನ್ನಾಗಿ ಕಟ್ಟಲಾಗಿದೆ. ಕೊಠಡಿಗಳ ಮೇಲೆ ಅಲಂಕಾರಿಕ ನಕ್ಷೆಗಳನ್ನೂ ವರ್ಣಗಳಿಂದ ಚಿತ್ರಿಸಲಾಗುತ್ತಿತ್ತಲ್ಲದೇ ಪೌರಾಣಿಕ ದೃಶ್ಯಗಳನ್ನು ಚಿತ್ರಿಸುವಾಗ ಗ್ರೀಕ್ ಮಾದರಿಗಳ ನೆರವು ಪಡೆಯಲಾಗಿದ್ದರೂ ರೋಮನ್ನರು ತಮ್ಮದೇ ಆದ ರೀತಿಯ ಭೂದೃಶ್ಯ(Landscape) ಮತ್ತು ವಾಸ್ತು ಶಿಲ್ಪವನ್ನು

ಬಳಸಿಕೊಂಡಿದ್ದಾರೆ. ಮೊಸಾಯಿಕ್(Mosaic) ರೀತಿಯ ನಕ್ಷಾ ಮಾದರಿಗಳು ಮತ್ತು ಚಿತ್ರಗಳನ್ನು ಮೊದಮೊದಲು ನೆಲದ ಮೇಲೆ ಚಿತ್ರಿಸಲಾಗುತ್ತಿತ್ತು. ನಂತರ ಗೋಡೆಗಳ ಮೇಲೆ ವರ್ಣಚಿತ್ರಗಳ ಬದಲಾಗಿ ಮೊಸಾಯಿಕ್ ಚಿತ್ರಗಳನ್ನು ರಚಿಸಲಾಯಿತು. ಭಾವಪ್ರತಿಮಾ ನಿರ್ಮಾಣ ಕಲೆಯಲ್ಲಿ ರೋಮನ್ ಕಲೆಯ ವೈಶಿಷ್ಟ್ಯಪೂರ್ಣವಾದುದಾಗಿದೆ.

ಟೈಟಸ್(Titus), ಸೆಪ್ಟಿಮಿಯಸ್ ಸೆವರಸ್, ಕಾನ್ಸ್ಟಂಟಾಯಿನ್ ಮುಂತಾದ ಚಕ್ರವರ್ತಿಗಳ ವಿಜಯೋತ್ಸವ ಸ್ಮಾರಕಗಳ ಮೇಲೆಯೂ ಟ್ರಾಜನ್‌ನ ಸ್ತಂಭದ ಮೇಲೆಯೂ ಮಾರ್ಕಸ್ ಅರೇಲಿಯಸ್‌ನ ಸ್ತಂಭಗಳ ಮೇಲೆಯೂ ಐತಿಹಾಸಿಕ ಘಟನಾವಳಿಗಳ ಕೆತ್ತನೆ ಕಲಾಕೃತಿಗಳು ಭಾವಪೂರ್ಣವಾಗಿವೆ.

ವಿ.ಟಿ.ಕಾ.

## ಲಯ (Rhythm)

ಚಿತ್ರಗಳ ಜೋಡಣಾ ವಿಧಾನದಲ್ಲಿ ಬರುವ ಇನ್ನೊಂದು ಮುಖ್ಯ ಅಂಶ ಲಯ. ಪುನರಾವೃತ್ತಿ, ವೈವಿಧ್ಯತೆಗಳಂತೆ ಇದೂ ಸಂಗೀತದಲ್ಲಿ ಬರುವ ತಾಳವನ್ನು ಹೋಲುತ್ತದೆ. ಪ್ರಾಯಶಃ ಗೆರೆಯೋ, ಆಕಾರವೋ, ಅಥವಾ ಬಣ್ಣವೋ ಮತ್ತೆ ಮತ್ತೆ ಚಿತ್ರದ ಒಳ ಹೊರಗೆ ಓಲಾಡುವಂತೆ, ಚಿತ್ರಿಸಿದಾಗ ಕಣ್ಣಿಗೆ ಒಂದು ಬಗೆಯ ಆಲಂಕಾರಿಕ ವಿನ್ಯಾಸ ಗೋಚರಿಸುತ್ತದೆ. ಈ ವಿನ್ಯಾಸಗಳು ಸುಲಭವಾಗಿ ಗ್ರಹಿಸಬಲ್ಲವಾಗಿರಬಹುದು ಅಥವಾ ಕ್ಲಿಷ್ಟಸಂಯೋಜನೆಯಿರಬಹುದು. ಉದಾಹರಣೆಗೆ ಅಪ್ಸರೆಯ ಚಿತ್ರವನ್ನೇ ತೆಗೆದುಕೊಳ್ಳೋಣ. ಈ ಮತ್ಸ್ಯ ಕನ್ಯೆ ತನ್ನ ಕೆಳಗಿರುವ ಸಮುದ್ರದ ಅಲೆಗಳ ಭಾಗವೇನೋ ಅಥವಾ ಅವಳ ಕಿನ್ನರಿಯಿಂದ ಹೊರಬರುತ್ತಿರುವ ಸಂಗೀತದ ರಾಗವೇನೋ ಎನ್ನುವಷ್ಟರ ಮಟ್ಟಿಗೆ ಚಿತ್ರದ ಅವಿಭಾಜ್ಯ ಅಂಗವಾಗಿದ್ದಾಳೆ. ಅಲೆಯ ತರಂಗಗಳನ್ನು ಬಿಂಬಿಸುವ ಲಾಲಿತ್ಯ ಪೂರ್ಣ ರೇಖೆಗಳು ರಾಗದ ಮಾಧುರ್ಯವನ್ನು ಸೂಸುತ್ತಿದ್ದರೆ, ಬಿಲ್ಲಿನಾಕೃತಿಯ ಮೂಲೆಯ ರೇಖೆಗಳು ಚಿತ್ರಕ್ಕೆ ಬಲವನ್ನು ನೀಡುತ್ತವೆ.

ಜೀವನದ ನಾಡಿ ಮಿಡಿತವನ್ನು ಹಿಡಿದಿಡಬಲ್ಲ ಶಿಸ್ತು ಈ ಲಯ ವಿನ್ಯಾಸಕ್ಕೆ ಇರುತ್ತದೆ. ಮಧ್ಯಯುಗದ ಕಲಾವಿದ ಯುಗೋಲೀನೋ ಡಿ ನೀರೋನ ಚಿತ್ರ ಲಾಸ್ಟ್ ಸಪ್ಪರ್‌ನಲ್ಲಿ ಯೇಸುವಿನ ಅನುಯಾಯಿಗಳ ತಲೆಯ ಮೇಲೆ ಚಿತ್ರಿಸಿರುವ ಪ್ರಭಾವಳಿಯು ಒಂದು ಸಂಗೀತ ಕೃತಿಯ ತಾಳದಂತೆ ಕರಾರುವಾಕ್ಕಾಗಿದೆ ಮತ್ತು ಲಯಬದ್ಧವಾಗಿದೆ. ಇದರಿಂದ ನಿರ್ಮಿತವಾಗಬಹುದಿದ್ದ ಏಕತಾನತೆಯು ಪ್ರತ್ಯೇಕ ಸ್ಥಾನದಲ್ಲಿ ನಿಂತಿರುವ ಕ್ರಿಸ್ತ ಹಾಗೂ ಪ್ರಭಾವಳಿಯಿಲ್ಲದಿರುವ ಜುಡಾಸನಿಂದಾಗಿ ದೂರವಾಗಿದೆ. ಈ ಸಂಗತಿಗಳು ಹಾಗೂ ಬಿಟ್ಟು ಬಿಟ್ಟು ಬಳಿದ ಕೆಂಪು ಬಣ್ಣ, ಅದ್ದ ತಾಳದಂತೆ ರಂಜಿಸುತ್ತವೆ.

ರ.ಕಾಶಿ

## ಲಿಪಿಕಾರರು

ಮುಖೋದ್ಗತವಾದ ಅಥವಾ ಬಾಯಿಂದ ಬಾಯಿಗೆ ಪ್ರಚಾರಗೊಳ್ಳುತ್ತ ಬಂದ

ಆಲೋಚನೆ, ವಿಚಾರ, ವಿಷಯಗಳನ್ನು ಬರಹಕ್ಕೆ ಇಳಿಸುವವನನ್ನು ಲಿಪಿಕಾರ ಎನ್ನುತ್ತಾರೆ. ಇವನು ಶ್ರವಣ (ಕೇವಲ ಕೇಳಬಹುದಾದ) ರೂಪದ ಧ್ವನಿಯನ್ನು ಚಾಕ್ಷುಷ (ಕಣ್ಣಿಗೆ ಕಾಣುವ) ರೂಪಕ್ಕಿಳಿಸುತ್ತಾನೆ. ಬರವಣಿಗೆಯನ್ನೇ ಒಂದು ವೃತ್ತಿ ಇಲ್ಲವೆ ಹವ್ಯಾಸವನ್ನಾಗಿ ಮಾಡಿಕೊಂಡ ಇವರು ಸುಂದರ ಲೇಖನ, ಅಲಂಕಾರ ಲೇಖನ, ಸಣ್ಣ ಮತ್ತು ಶೀಘ್ರ ಲಿಪಿ ಲೇಖನ ಮಾಡುವಲ್ಲಿ ವಿಶೇಷವಾದ ಕುಶಲತೆಯನ್ನು ಸಂಪಾದಿಸಿರುತ್ತಾರೆ. ಇಂಥ ಕಲೆಯನ್ನು ಆಂಗ್ಲ ಭಾಷೆಯಲ್ಲಿ ಕ್ಯಾಲಿಗ್ರಫಿ (Callygraphy) ಎನ್ನುತ್ತಾರೆ.

ಅಕ್ಷರಗಳಲ್ಲಿ ವಿವಿಧ ಪಕ್ಷಿ-ಪ್ರಾಣಿ ಚಿತ್ರಗಳನ್ನು ರಚಿಸುವ, ಅದರಂತೆ ಅಕ್ಷರಗಳಲ್ಲಿ ಸುಂದರ ಸುಳುಹು- ನಕ್ಷೆಗಳನ್ನು ಅಳವಡಿಸುವ ಕಲಾವಂತಿಕೆಯನ್ನು ಇವರು ತೋರಿದ್ದಾರೆ. ಮುದ್ದಾಗಿ,, ದುಂಡಾಗಿ ಅಲಂಕಾರಿಕವಾಗಿ ಬರೆಯಲಾದ ಲಿಪಿಕಾರರ ಹಸ್ತ ಕೌಶಲವನ್ನು ಶಾಸನಗಳಲ್ಲಿ ಹಾಗೂ ಹಸ್ತಪ್ರತಿಗಳಲ್ಲಿ ಪ್ರಶಂಸಿಸಲಾಗಿದೆ. ಶಾಸನ ಲಿಪಿಕಾರರು ಹಸ್ತಪ್ರತಿಗಳ ಲಿಪಿಕಾರರೂ ಆಗಿರಬಹುದಾಗಿದೆ. ಚಿತ್ರದುರ್ಗ ಜಿಲ್ಲೆಯ 11ನೇ ಶತಮಾನದ ಲಿಪಿಕಾರನೊಬ್ಬ ತಾನು ಅಕ್ಷರಗಳನ್ನು ವಿವಿಧ ರೀತಿಯ ಪ್ರಾಣಿ ಪಕ್ಷಿಗಳಾಗಿ ವಿನ್ಯಾಸಗಳನ್ನು ರೂಪಿಸುವುದಾಗಿ ಹೇಳಿಕೊಂಡಿದ್ದಾನೆ.

ಕನ್ನಡ ಹಸ್ತಪ್ರತಿಗಳಲ್ಲಿ ಪ್ರತಿಕಂಠಚಂದ, ಪ್ರತಿಕಂಠ ಭಾಸ್ಕರಯ್ಯ, ರೇವ ಹಾಗೂ ನವಿಲಗುಂದದ ಮಾದಿರಾಜ ಎಂಬವರ ಹೆಸರುಗಳು ಸುಂದರ ಹಸ್ತಪ್ರತಿ ಬರಹಕ್ಕಾಗಿ ಪ್ರಖ್ಯಾತವೆನಿಸಿವೆ. ಮಹಮ್ಮದೀಯ ದೊರೆಗಳು ಕೂಡ ಕಲಾತ್ಮಕವಾಗಿ ಬರೆಯುವ ಈ ಕಲೆಯನ್ನು ವಿಶೇಷವಾಗಿ ಪ್ರೋತ್ಸಾಹಿಸಿದ್ದಾರೆ. ಲಿಪಿಕಾರರಿಗೆ ಸುಲ್ತಾನ್-ಎ-ಕಲಮ್ ಮೊದಲಾಗಿ ಬಿರುದು ಕೊಟ್ಟಿರುವುದು ಈ ಕಲೆಯನ್ನು, ಕಲಾವಿದರನ್ನು ಪ್ರೋತ್ಸಾಹಿಸಿದ್ದರ, ಗೌರವಿಸಿದ್ದರ ನಿದರ್ಶನವಾಗಿದೆ.

ಬಿ.ಕೆ.ಹಿ.

## ಲುಮಿನಿಸಂ (Luminism)

ಇದು ೧೯ನೆಯ ಶತಮಾನದ ಅಮೆರಿಕನ್ ನಿಸರ್ಗ ಚಿತ್ರಕಾರರ, ಮುಖ್ಯವಾಗಿ ಅಲ್ಲಿಯ ಫಿಝ್ ಹುಗ್ ಲೇನ್ ಮತ್ತು ಎಂ.ಜೆ. ಹೆಡ್‌ರ ಕೆಲಸವನ್ನು ವರ್ಣಿಸುವ ಪದವಾಗಿದೆ. ಲುಮಿನಿಸ್ಟರು ಸಮುದ್ರ, ನಿರ್ಮಲ ಆಕಾಶ ಮುಂತಾದ ನಿಸರ್ಗದ ಇಡಿಯಾದ, ಸುಂದರ, ಸೌಮ್ಯ ದೃಶ್ಯಗಳನ್ನು ತಮ್ಮ ರಚನೆಯಲ್ಲಿ ಸೆರೆಹಿಡಿದಿದ್ದಾರೆ. ಅವರ ರಚನೆಗಳಲ್ಲಿ ಅದ್ಭುತ ಕಲೆ ವ್ಯಕ್ತವಾಗುತ್ತದೆ. ನಿಸರ್ಗ ದೃಶ್ಯಗಳಲ್ಲಿ ವಾಸ್ತವಿಕತೆಯ ಉತ್ಕೃಷ್ಟತೆ ಪರಿಣಾಮಕಾರಿಯಾಗಿದೆ. ಅಲ್ಲಿ ಗಗನ, ಬೆಳಕು, ಪ್ರವಾಹ, ವಾತಾವರಣಗಳ ಭವ್ಯತೆ ಚಿತ್ರಿತವಾಗಿದೆ. ಇಂತಹ ಅಲೌಕಿಕ ಕಲ್ಪನೆಗಳನ್ನೊಳಗೊಂಡ ಲುಮಿನಿಸ್ಟರುಗಳಲ್ಲಿ ರಾಲ್ಫವಾಲ್ಡೋ ಎಮರಸನ್ ಮತ್ತು ಹೆನ್ರಿ ಥೋರಿಯೋ ತಮ್ಮ ಕೃತಿಗಳ ಮೂಲಕ ವೀಕ್ಷಕನಿಗೆ ನಿಸರ್ಗ ಸೌಂದರ್ಯದ ಚಿಂತನೆಯಲ್ಲಿ ತಲ್ಲೀನತೆಯ ಅನುಭವವನ್ನುಂಟು ಮಾಡುತ್ತಾರೆ.

ಅ.ಜಾ.



## ಲೇಪಾಕ್ಷಿ

ಲೇಪಾಕ್ಷಿ ಆಂಧ್ರಪ್ರದೇಶದ ಹಿಂದೂಪುರಕ್ಕೆ ಸಮೀಪದಲ್ಲಿದೆ. ವಿಜಯನಗರದ ಬಸಿಮಗೊಂಡದಲ್ಲಿದ್ದ ವಿರುಪಣ್ಣನೆಂಬ ಭಂಡಾರಿ ತನ್ನ ಅಭಿಮಾನ ದೇವರಾದ ವೀರಭದ್ರಸ್ವಾಮಿಯ ಗುಡಿಯನ್ನು ಲೇಪಾಕ್ಷಿ ಎಂಬ ಗ್ರಾಮದಲ್ಲಿ ಕಲಾತ್ಮಕವಾಗಿ ಕಟ್ಟಿಸಿದ. ವಿಜಯನಗರ ಕಾಲದ ಶಿಲ್ಪ ಹಾಗೂ ಚಿತ್ರಕಲೆ ಇಲ್ಲಿ ಉನ್ನತ ಮಟ್ಟದಲ್ಲಿದೆ. ಶಿಲ್ಪಕಲೆಗೆ ಕೊಟ್ಟ ಪ್ರಾಶಸ್ತ್ಯವನ್ನು ವಿರುಪಣ್ಣ ಇಲ್ಲಿ ಚಿತ್ರಕಲೆಗೆ ನೀಡಿದ್ದಾನೆ. ಇಲ್ಲಿರುವ ಚಿತ್ರಗಳು ಒಂದೊಂದು ವೈಶಿಷ್ಟ್ಯದಿಂದ ಕೂಡಿ ತನ್ನದೇ ಆದ ಸೊಬಗನ್ನು ಬೀರುತ್ತಿದೆ. ಹದಿನಾರು ಸ್ತಂಭಗಳ ಮೂಲಾಂಕಣದ ಚಾವಣಿಯಲ್ಲಿ ೨೦ ಅಡಿಯ ಬೃಹದಾಕಾರದ ವೀರಭದ್ರ ಸ್ವಾಮಿಯ ಚಿತ್ರ ಯಾರನ್ನಾದರೂ ಬೆರಗುಗೊಳಿಸದಿರದು.

ಶ್ರೀರಾಮಚಂದ್ರನ ದೇವಾಲಯದಲ್ಲಿ ದಶಾವತಾರದ ಚಿತ್ರಗಳನ್ನು ಬಹು ರಮ್ಯವಾಗಿ ಚಿತ್ರಿಸಲಾಗಿದೆ. ಅಗಸ್ತ್ಯರು ತಪಸ್ಸು ಮಾಡಿದ್ದ ಸ್ಥಳವೆಂದು ನಿರ್ದೇಶಿಸಲಾದ ದೇವಾಲಯದ ಮೂಲೆಯ ಕತ್ತಲು ಕೋಣೆಯ ಚಾವಣಿಯಲ್ಲಿ ವಿವಿಧ ಕೃತಿಗಳನ್ನು ಕಾಣಬಹುದು. ದೇವಾಲಯದ ಹೊರಾಂಗಣದ ಚಾವಣಿಯಲ್ಲೂ ಸ್ಕಾಂದ ಪುರಾಣದಲ್ಲಿನ ಶಿವಲೀಲೆ, ವಿನೋದವನ್ನು ಮೋಹಕವಾಗಿ ಚಿತ್ರಿಸಲಾಗಿದೆ. ಇಲ್ಲಿನ ಚಿತ್ರಗಳಲ್ಲಿ ಕೆಲವು ವಿಶೇಷಗಳನ್ನು ಕಾಣಬಹುದು. ಮಾನವಾಕೃತಿಗಳಲ್ಲೂ ಮುಖ ಓರೆಯಾಗಿರಲಿ ಎರಡು ಕಣ್ಣುಗಳನ್ನು ಚಿತ್ರಿಸಿರುವುದನ್ನು ಇಲ್ಲಿ ಮಾತ್ರ ಕಾಣಬಹುದು. ಎಲ್ಲಾ ಪುರುಷರ ಚಿತ್ರಗಳಲ್ಲೂ ಮೀಸೆಯ ಅಂಚನ್ನು ಕೆಳಮುಖವಾಗಿ ಬಿಡಿಸಿದ್ದರೆ, ವೀರಭದ್ರನ ಮೀಸೆಯನ್ನು ಮಾತ್ರ ಮೇಲು

ಮುಖವಾಗಿ ಬಿಡಿಸಲಾಗಿದೆ. ಪ್ರತಿ ಸ್ತ್ರೀ ಚಿತ್ರದ ವಸ್ತ್ರಾಭರಣ ಸೌಂದರ್ಯದ ವರ್ಣವೈಖರಿ, ಕುಸುರಿ ಕೆಲಸ ಮೋಹಕವಾಗಿದೆ.

ಲೇಪಾಕ್ಷಿಯ ಚಿತ್ರಗಳ ರಚನೆಯಲ್ಲಿ ಕಲಾವಿದರು ಅತ್ಯಂತ ಕೌಶಲವನ್ನು ಮೆರೆದಿದ್ದಾರೆ. ವಿಶಿಷ್ಟ ಕಲ್ಪನಾ ಶಕ್ತಿಯನ್ನು ತೋರಿದ್ದಾರೆ. ಪರಂಪರಾಗತವಾಗಿ ಬಂದ ನಮ್ಮ ಸಂಪ್ರದಾಯಗಳನ್ನು ಅರಿತು ನುರಿತ ಅದ್ಭುತ ಕಲೆಯನ್ನು ಸೃಷ್ಟಿಸಿದ್ದಾರೆ. ಈ ಚಿತ್ರಗಳಲ್ಲಿ ಕಲ್ಲಿನ ಮೇಲೆ ಕಟುವಾಗಿ ಮೆತ್ತಿರುವ ನಯವಾದ ಗಾರೆಯ ಮೇಲೆ ರಚಿತವಾಗಿದೆ. ವರ್ಣಗಳ ವೈಖರಿಯೂ ಕುಂಚಗಳ ಸೂಕ್ಷ್ಮತೆಯೂ ಗಮನಾರ್ಹವಾದವು. ಮೂಲ ವರ್ಣಗಳಾದ ಬಿಳುಪು, ಹಳದಿ, ಕೆಂಪು, ನೀಲಿ ಇವುಗಳ ಪರಸ್ಪರ ಮಿಶ್ರಣದಿಂದ ನಾನಾ ವರ್ಣಗಳನ್ನು ಬಳಸಿದ್ದಾರೆ. ಶಿಲ್ಪ ಹಾಗೂ ಚಿತ್ರಕಲೆಗಳ ಒಂದು ಅಪೂರ್ವ ಸಂಗಮವನ್ನು ನಾವು ಇಲ್ಲಿ ಮಾತ್ರ ಕಾಣಬಹುದು.

ಪಿ. ಆರ್. ತಿ.

## ಲೈಂಗಿಕ ಚಿತ್ರ, ಶಿಲ್ಪಗಳು

ಪ್ರಪಂಚದಾದ್ಯಂತ ಸಾಮಾನ್ಯವಾಗಿ ಎಲ್ಲ ನಾಗರೀಕತೆಗಳಲ್ಲೂ ಲೈಂಗಿಕ ಪ್ರಧಾನ ಚಿತ್ರ, ಶಿಲ್ಪಗಳು ದೊರೆಯುತ್ತವೆ. ಇಂದಿನ ಸಾಮಾಜಿಕ ದೃಷ್ಟಿ ಕೋನದಿಂದ ಇವು ಅಸಭ್ಯ ಅಥವ ಅಶ್ಲೀಲವೆನಿಸಿದರೂ ಈ ಬಗೆಯ ಚಿತ್ರಣಗಳಿಗೆ ಧಾರ್ಮಿಕ ಭಾವನೆಯನ್ನು ಆರೋಪಿಸಿ ಸಮಾಜ ಒಪ್ಪಿಕೊಂಡಿತ್ತು. ಲೈಂಗಿಕ ಚಿತ್ರಣಗಳಲ್ಲಿ ಎರಡು ರೀತಿಯ ರಚನೆಗಳನ್ನು ಕಾಣಬಹುದು.



ಖಜರಾಹೋ

ಒಂದು ನಗ್ನ ಸ್ತ್ರೀ ಪುರುಷರದಾದರೆ ಇನ್ನೊಂದು ಕ್ರಿಯೆಯಲ್ಲಿ ತೊಡಗಿರುವ ವ್ಯಕ್ತಿಗಳು. ಭೈರವಿ ಹಾಗೂ ಕೆಲವು ಕ್ಷುದ್ರ ದೇವತೆಗಳು ನಗ್ನವಾಗಿರುತ್ತವೆ. ಮುಖದ ಭಾಗದಲ್ಲಿ ಕಮಲದ ಹೂವಿರುವಂತೆ ಕಾಲುಗಳನ್ನು ಅಗಲಿಸಿ ಕುಳಿತಿರುವ ನಗ್ನ ಸ್ತ್ರೀಯ ದೊಡ್ಡ ಆಕಾರದ ಫಲಕಗಳು ಭಾರತದ ಅನೇಕ ಕಡೆಗಳಲ್ಲಿ ದೊರೆತಿದ್ದು ಇವುಗಳಿಗೆ 'ಲಜ್ಜಾಗೌರಿ' ಎಂದು ಕರೆಯುತ್ತಾರೆ. ಅಂತೆಯೆ ಭೈರವ ಹಾಗೂ ಒಂದು ವಿಶೇಷ ನೃತ್ಯ ಭಂಗಿಯಲ್ಲಿ ಶಿವ ನಗ್ನರಾಗಿ ಚಿತ್ರಿತರಾಗಿರುತ್ತಾರೆ. ಶಿವನ ಭಿಕ್ಷಾಟನಾ ಕಥೆಯಲ್ಲಿ ಹಾಗೂ ವಿಷ್ಣುವಿನ ಮೋಹಿನಿ ಅವತಾರದಲ್ಲಿ ಸ್ತ್ರೀಪುರುಷರ ಸಮೂಹ ನಗ್ನರಾಗಿರುವ ಹಲವಾರು ಚಿತ್ರಶಿಲ್ಪಗಳು ದೊರೆಯುತ್ತವೆ. ಕೃಷ್ಣನ ವಸ್ತ್ರಾಪಹರಣ ದೃಶ್ಯದ ನಗ್ನ ಸ್ತ್ರೀ ಸಮೂಹದ ರಚನೆ ಕಲಾವಿದನಿಗೆ ಪ್ರಿಯವಾದ ವಸ್ತು. ಜೈನ ಯತಿಗಳು, ತೀರ್ಥಂಕರರು ಇಂದಿಗೂ ನಿರ್ವಾಣದಲ್ಲಿರುತ್ತಾರಲ್ಲದೆ ಅವರ ಪೂಜಾರ್ಹ ಶಿಲ್ಪಗಳೂ ಅಂತೆಯೇ ಇರುತ್ತವೆ. ಬೆತ್ತಲೆ ಸೇವೆಯಂತಹ ಹಲವಾರು ಸೇವೆಗಳು ಇಂದೂ ಆಚರಣೆಯಲ್ಲಿವೆ.

ಲೈಂಗಿಕ ಕ್ರಿಯೆಯಲ್ಲಿ ತೊಡಗಿರುವ ಶಿಲ್ಪಗಳು ದೇವಾಲಯ, ಮಂಟಪ, ಬಯಲು ಬಂಡೆಗಳು ಇತ್ಯಾದಿ ಕಡೆಗಳಲ್ಲಿ ಕಂಡು ಬರುತ್ತವೆ. ಕೆಲವೊಮ್ಮೆ ಮೂರನೆಯ ವ್ಯಕ್ತಿಯೊಬ್ಬ ತುಂಟಾಟ ನಡೆಸುತ್ತಿದ್ದು ಹಾಸ್ಯರಸಕ್ಕೆ ಕಾರಣವಾಗುತ್ತದೆ. ಈ ಬಗೆಯ ಚಿತ್ರ, ಶಿಲ್ಪಗಳ ಉದ್ದೇಶ. ಲೈಂಗಿಕ ವಿದ್ಯಾಭ್ಯಾಸ ಎಂದೂ, ಕೆಟ್ಟ ಕಣ್ಣುಗಳ ದೃಷ್ಟಿದೋಶ ಪರಿಹಾರವೆಂದೂ, ಹಲವಾರು ಮನೋಭಾವದ ಜನರಿಗೆ ಎಂದೂ, ಅತಿರೇಕಿಸಿದ ಶೃಂಗಾರವೆಂದೂ, ಹಲವಾರು ಬಗೆಯ ವ್ಯಾಖ್ಯಾನ ನೀಡಲಾಗಿದೆ. ಮಳೆ-ಬೆಳೆ ಇತ್ಯಾದಿ ಫಲ ಸಂವೃದ್ಧಿಯೊಂದಿಗೆ ಸಮೀಕರಿಸಲಾಗಿದೆ. ಆದರೆ ಶಾಕ್ತ ಪಂಥವೊಂದರ ಪಂಚ'ಮ'ಕಾರಗಳ ಸಾಧನೆಯಲ್ಲಿ ಮಿಥುನ ಕ್ರಿಯೆಯೂ ಪ್ರಧಾನವಾಗಿದ್ದು (ಉಳಿದವು ಮತ್ಸ್ಯ, ಮಾಂಸ, ಮಧ್ಯ, ಮುದ್ರೆ) ಈ ಪಂಥದವರ ಧಾರ್ಮಿಕ ಕ್ರಿಯೆಯ ಚಿತ್ರಣ ಇದೆಂದು ಹಲವಾರು ವಿದ್ವಾಂಸರು ಸೋದಾಹರಣವಾಗಿ ವಿಮರ್ಶಿಸಿದ್ದಾರೆ. ಪುರುಷಾರ್ಥ (ಧರ್ಮ, ಅರ್ಥ, ಕಾಮ, ಮೋಕ್ಷ)ಗಳಲ್ಲಿ ಒಂದೆಂದೂ ಹೇಳಿದ್ದಾರೆ.

ಅಂಜ

## ವರ್ಣಗಳ ಸಾಂಕೇತಿಕ ಅರ್ಥ

ನಾವು, ಯಾವುದೇ ಬಣ್ಣವನ್ನು ಪ್ರತ್ಯೇಕವಾಗಿ ನೋಡಿದಾಗ, ಅದು ಪ್ರತ್ಯೇಕವಾದ ಒಂದು ರೀತಿಯ ಭಾವೋದ್ವೇಗವನ್ನು ಮನಸ್ಸಿನಲ್ಲಿ ಮೂಡಿಸುತ್ತದೆ ಮತ್ತು ಅವು ತಮ್ಮದೇ ಆದ ಸಾಂಕೇತಿಕ ಅರ್ಥವನ್ನು ವ್ಯಕ್ತಗೊಳಿಸುತ್ತದೆ. ಸಾಮಾನ್ಯವಾಗಿ ಬಣ್ಣಗಳ ಸಾಂಕೇತಿಕ ಅರ್ಥವನ್ನು ಹೀಗೆ ವಿಂಗಡಿಸಬಹುದು.

ಕೆಂಪು-ಅಪಾಯ, ಬೆಂಕಿ, ಕೋಪ
ಹಳದಿ- ಅಭಿವೃದ್ಧಿ, ಸಮೃದ್ಧಿ, ಸಂತೋಷ
ಕಿತ್ತಳೆ-ತ್ಯಾಗ, ಸಮರ್ಪಣೆ
ನೀಲಿ-ಶಾಂತಿ, ವೈಭವ
ಹಸಿರು-ಸಮೃದ್ಧತೆ, ಶಾಂತಿ
ನೇರಳೆ ಬಣ್ಣ- ಗಾಂಭೀರ್ಯ

ಬಿಳಿ-ನಿಷ್ಠೆ, ಪವಿತ್ರತೆ.
ಕಪ್ಪು-ನೋವು, ದುಃಖ

ಮರಿ

## ವರ್ಣಗಳು

ಚಿತ್ರಲೇಖನ ಕಲೆಯಲ್ಲಿ ಬಣ್ಣವು ಬಹುಮುಖ್ಯವಾದ ವಸ್ತುವಾಗಿದೆ. ಪ್ರತಿಯೊಂದು ಬಣ್ಣವೂ ವಿಶಿಷ್ಟ ಗುಣಸ್ವಭಾವವನ್ನು ಹೊಂದಿರುವದರಿಂದ ಬಣ್ಣದ ವಿಷಯವಾಗಿ ಆಳವಾದ ಅಭ್ಯಾಸವನ್ನು ಮಾಡಬೇಕಾಗುತ್ತದೆ.

ಜನಸಾಮಾನ್ಯರು ಹಸಿರು, ನೀಲಿ, ಕೆಂಪು, ಹಳದಿ, ಕೇಸರಿ, ಊದು ಹಾಗೂ ಶಾಮವರ್ಣಗಳು ಮೂಲ ಬಣ್ಣಗಳೆಂದು ತಿಳಿದಿರುತ್ತಾರೆ. ಆದರೆ ಚಿತ್ರಕಲೆಯಲ್ಲಿ ನೀಲಿ, ಹಳದಿ ಮತ್ತು ಕೆಂಪು ಮೂರು ಮಾತ್ರ ಮೂಲಬಣ್ಣಗಳೆಂದು ಪರಿಗಣಿಸಲಾಗುತ್ತದೆ. ಮೂಲ ಬಣ್ಣಗಳನ್ನು ಪ್ರಥಮ ವರ್ಣಗಳೆಂದೂ ಕರೆಯುತ್ತಾರೆ. ಹಸಿರು, ಕೇಸರಿ ಮತ್ತು ಶಾಮ ವರ್ಣಗಳು ಪ್ರಥಮ ವರ್ಣಗಳ ಮಿಶ್ರಣವಾಗಿರುತ್ತವೆ. ಇಂಥ ಹಲವಾರು ಮಿಶ್ರ ವರ್ಣಗಳಿಗೆ ಪ್ರಥಮ ವರ್ಣಗಳು ಜನಕ ವರ್ಣಗಳಾಗಿರುತ್ತವೆ ಬಣ್ಣಗಳ ಅಭ್ಯಾಸಕ್ಕೆ ಅನುಕೂಲವಾಗಲೆಂದು ಪ್ರಥಮವರ್ಗ(Primary), ದ್ವಿತೀಯ ವರ್ಗ(Secondary) ತೃತೀಯವರ್ಗ(Teritory) ಮತ್ತು ಚತುರ್ಥ ವರ್ಗ(Quarternery)ಗಳೆಂದು ನಾಲ್ಕು ವರ್ಗಗಳೆಂದು ವಿಂಗಡಿಸಲಾಗಿದೆ.

**೧. ನೀಲಿ, ಕೆಂಪು, ಹಳದಿ ಪ್ರಥಮ ವರ್ಗದ ಬಣ್ಣಗಳು**

ಎರಡು ಪ್ರಥಮವರ್ಗ ಬಣ್ಣಗಳನ್ನೂ ಸಮಪ್ರಮಾಣದಲ್ಲಿ ಬೆರೆಸಿದಾಗ ದ್ವಿತೀಯ ವರ್ಗದ ವರ್ಣಗಳು ಹುಟ್ಟಿಕೊಳ್ಳುತ್ತವೆ.

- ನೀಲಿ ಮತ್ತು ಕೆಂಪು ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಜಾಂಬಳಿ(ಶಾಮ) ಬಣ್ಣವು ಹುಟ್ಟಿಕೊಳ್ಳುತ್ತದೆ.
- ಕೆಂಪು ಮತ್ತು ಹಳದಿ ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಕೇಸರಿ ಬಣ್ಣವು ಹುಟ್ಟಿಕೊಳ್ಳುತ್ತದೆ.
- ಹಳದಿ ಮತ್ತು ನೀಲಿ ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಹಸಿರು ಬಣ್ಣವು ಹುಟ್ಟಿಕೊಳ್ಳುತ್ತದೆ.

**೨. ಜಾಂಬಳಿ, ಕೇಸರಿ ಮತ್ತು ಹಸಿರು ಬಣ್ಣಗಳು ದ್ವಿತೀಯ ವರ್ಗದ ಬಣ್ಣಗಳು.**

ಎರಡು ದ್ವಿತೀಯ ವರ್ಗದ ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ತೃತೀಯ ವರ್ಗದ ಬಣ್ಣಗಳು ಹುಟ್ಟಿಕೊಳ್ಳುತ್ತವೆ.

- ಜಾಂಬಳಿ ಮತ್ತು ಕೇಸರಿ ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಕಂದು ಗೆಂಪು ಬಣ್ಣವು ಹುಟ್ಟಿಕೊಳ್ಳುತ್ತದೆ.
- ಕೇಸರಿ ಮತ್ತು ಹಸಿರು ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಇಪ್ಪೆ ಎಲೆ ಬಣ್ಣವು ಹುಟ್ಟಿಕೊಳ್ಳುತ್ತದೆ.

ಹಸಿರು ಮತ್ತು ಜಾಂಬಳಿ ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಪಾಟಿಯು ಬಣ್ಣವು ಹುಟ್ಟಿಕೊಳ್ಳುತ್ತವೆ.

**೩. ಕಂದುಗೆಂಪು, ಇಷ್ಟೆ ಎಲೆ ಬಣ್ಣ ಹಾಗೂ ಪಾಟಿಯು ಬಣ್ಣಗಳು ತೃತೀಯು ವರ್ಗದ ಬಣ್ಣಗಳು**

ಹೀಗೆಯೇ ತೃತೀಯ ವರ್ಗದ ಎರಡು ಬಣ್ಣಗಳ ಸಮಪ್ರಮಾಣದ ಮಿಶ್ರಣದಿಂದ ಚತುರ್ಥವರ್ಗದ ವರ್ಣಗಳು ಹುಟ್ಟಿಕೊಳ್ಳುತ್ತವೆ. ಇವುಗಳನ್ನು ಮಿಶ್ರವರ್ಣಗಳೆಂದೂ ಕರೆಯುತ್ತಾರೆ ಮಿಶ್ರವರ್ಣಗಳು ಸಾವಿರಾರು ಮುಂದೆ ಹೆಸರಿಸದಷ್ಟು ವರ್ಣಗಳ ಉತ್ಪತ್ತಿಯಾಗುತ್ತ ಹೋಗುತ್ತದೆ.

ಬಿಳಿ ಮತ್ತು ಕಪ್ಪು(Black & White) ಬಣ್ಣಗಳು ಎಲ್ಲ ಬಣ್ಣಗಳ ನೆಳಲು ಬೆಳಕುಗಳನ್ನು ವಿಂಗಡಿಸುವ ಬಣ್ಣಗಳಾಗಿರುವದರಿಂದ ಅವುಗಳನ್ನು ಬಣ್ಣಗಳೆಂದು ಪರಿಗಣಿಸುವದಿಲ್ಲ.

ವರ್ಣಗಳಲ್ಲಿ 'ಪ್ರಖರ ವರ್ಣಗಳು' ಮತ್ತು 'ಸೌಮ್ಯವರ್ಣ'ಗಳೆಂದು ಎರಡು ಬಗೆಯ ಬಣ್ಣಗಳನ್ನು ವಿಂಗಡಿಸಲಾಗಿದೆ. ಕಣ್ಣಿಗೆ ಚುಚ್ಚುವಂತೆಯೂ ಬಿಸಿಯಾಗಿಯೂ ಕಾಣಿಸುವ ಬಣ್ಣಗಳು ಪ್ರಖರ ವರ್ಣಗಳು(Warm Colours) ಕಣ್ಣಿಗೆ ಸೌಮ್ಯವಾಗಿಯೂ ತಂಪಾಗಿಯೂ ಕಾಣಿಸುವ ವರ್ಣಗಳು ಸೌಮ್ಯ ವರ್ಣಗಳು(Cold Colours)

ಉದಾ:- ೧. ಕೆಂಪು, ಕೇಸರಿ ಮತ್ತು ಹಳದಿ ವರ್ಣಗಳು ಪ್ರಖರ ವರ್ಣಗಳು
೨. ನೀಲಿ, ಜಾಂಬಳಿ ಮತ್ತು ಪಾಟಿಯ ವರ್ಣಗಳು ಸೌಮ್ಯ ವರ್ಣಗಳು

**ಪಾರದರ್ಶಕ ವರ್ಣಗಳು (Transparent Colours)**

ಗಾಜಿನಂತೆ ಹಿಂಭಾಗವನ್ನೂ ತೋರಿಸುವ ವರ್ಣಗಳು ಪಾರದರ್ಶಕ ವರ್ಣಗಳು. ಸಾಮಾನ್ಯವಾಗಿ ವರ್ಣಗಳೆಲ್ಲವೂ ಪಾರದರ್ಶಕ ವರ್ಣಗಳೇ ಆಗಿವೆ. ಯಾವುದೇ ವರ್ಣದಲ್ಲಿ ನೀರನ್ನು ಬೆರೆಸಿ ಕಾಗದದ ಮೇಲೆ ಬಳಿದಾಗ ವರ್ಣ ಪಾರದರ್ಶಿಕೆಯನ್ನು ಕಾಣಬಹುದು.

**ಅಪಾರ ದರ್ಶಕ ವರ್ಣಗಳು(Opaque Colours)**

ಬಿಳಿಯ ಬಣ್ಣವು ಅಪಾರದರ್ಶಕ ವರ್ಣವಾಗಿದೆ. ಪಾರದರ್ಶಕ ವರ್ಣದಲ್ಲಿ ಬಿಳಿಯ ಬಣ್ಣವನ್ನು ಬೆರೆಸುವದರಿಂದ ಅಪಾರದರ್ಶಕ ವರ್ಣಗಳು ಹುಟ್ಟಿಕೊಳ್ಳುತ್ತವೆ. ಬಣ್ಣದ ಪುಡಿಯಲ್ಲಿ ಅಂಟಿನ(ಗೋಂದು) ನೀರು, ವಜ್ರ(ಮೀನಸರಿ), ಗ್ಲಿಸರೀನ್ ಮುಂತಾದವುಗಳನ್ನು ಬೆರೆಸುವುದರಿಂದಲೂ ಅಪಾರದರ್ಶಕ ವರ್ಣಗಳು ಸಿದ್ಧವಾಗುತ್ತವೆ.

**ವಿರೋಧ ವರ್ಣಗಳು(Contrasting Colours)**

ಪ್ರಥಮ ವರ್ಗದ ಮೂರೂ ಬಣ್ಣಗಳು ಒಂದಕ್ಕೊಂದು ವಿರೋಧಿ ಬಣ್ಣಗಳಾಗಿವೆ. ಅದರಂತೆ-ಕೆಂಪು-ಕಪ್ಪು, ಹಸಿರು-ಕೆಂಪು, ಕಪ್ಪು-ಹಳದಿ, ಹಾಗೂ ಕಪ್ಪು-ಬಿಳಿ ಬಣ್ಣಗಳೂ ಸಹ ಪರಸ್ಪರ ವಿರೋಧಿ ವರ್ಣಗಳಾಗಿವೆ.

**ಪೂರಕ ವರ್ಣಗಳು(Complementary Colours)**

ಯಾವುದಾದರೂ ಒಂದು ವಿರೋಧ ಬಣ್ಣಕ್ಕೆ ಬೇರೆ ಬೇರೆ ಎರಡು ಮೂಲ ಬಣ್ಣಗಳ ಮಿಶ್ರಣದಿಂದ ಉಂಟಾದ ದ್ವಿತೀಯ ವರ್ಗದ ಬಣ್ಣವು ಪೂರಕ ವರ್ಣವಾಗುತ್ತದೆ.

ಉದಾ: ೧. ಕೇಸರೀ ದ್ವಿತೀಯ ವರ್ಗದ ಬಣ್ಣವು ಪ್ರಥಮ ವರ್ಗದ ನೀಲಿ ಬಣ್ಣಕ್ಕೆ ಪೂರಕ ಬಣ್ಣವಾಗಿದೆ.

೨. ಹಸಿರು ದ್ವಿತೀಯ ವರ್ಗದ ಬಣ್ಣವು ಪ್ರಥಮ ವರ್ಗದ ಕೆಂಪು ಬಣ್ಣಕ್ಕೆ ಪೂರಕ ಬಣ್ಣವಾಗಿದೆ.

೩. ಜಾಂಬಳಿ ದ್ವಿತೀಯ ವರ್ಗದ ಬಣ್ಣವು ಪ್ರಥಮ ವರ್ಗದ ಹಳದಿ ಬಣ್ಣಕ್ಕೆ ಪೂರಕ ಬಣ್ಣವಾಗಿದೆ.

**ಸಾದೃಶ್ಯ ವರ್ಣಗಳು(Anelogous Colours)**

ಎರಡು ದ್ವಿತೀಯ ವರ್ಗದ ಬಣ್ಣಗಳಿಗೆ ಅವುಗಳ ಜನಕ ವರ್ಣವು ಸಾಮಾನ್ಯವಾದ(Common) ಮೂಲ ವರ್ಣದ ಜೊತೆಗೆ ಹೊಂದಿಕೊಳ್ಳುವದರಿಂದ ಅಂಥ ವರ್ಣಗಳನ್ನು ಸಾದೃಶ್ಯವರ್ಣಗಳೆಂದು ಕರೆಯುತ್ತಾರೆ.

೧. ಹಸಿರು ಹಾಗೂ ಜಾಂಬಳಿ ಎರಡು ದ್ವಿತೀಯ ವರ್ಗದ ಬಣ್ಣಗಳು. ನೀಲಿ ಬಣ್ಣವು ಈ ಎರಡೂ ಬಣ್ಣಗಳಲ್ಲಿ ಬೆರೆತಿರುವದರಿಂದ ಈ ಎರಡೂ ಬಣ್ಣಗಳಿಗೆ ನೀಲಿ ಬಣ್ಣವು ಸಾಮಾನ್ಯವಾಗಿದೆ.

೨. ಕೇಸರಿ ಹಾಗೂ ಜಾಂಬಳಿ ಎರಡು ದ್ವಿತೀಯ ವರ್ಗದ ಬಣ್ಣಗಳು ಕೆಂಪು ಬಣ್ಣವು ಈ ಎರಡೂ ಬಣ್ಣಗಳಲ್ಲಿ ಬೆರೆತಿರುವದರಿಂದ ಈ ಎರಡೂ ಬಣ್ಣಗಳಿಗೆ ಕೆಂಪು ಬಣ್ಣವು ಸಾಮಾನ್ಯವಾಗಿದೆ.

೩. ಹಸಿರು ಮತ್ತು ಕೇಸರಿ ಎರಡು ದ್ವಿತೀಯ ವರ್ಗದ ಬಣ್ಣಗಳು ಹಳದಿ ಬಣ್ಣವು ಈ ಎರಡೂ ಬಣ್ಣಗಳಲ್ಲಿ ಬೆರೆತಿರುವದರಿಂದ ಈ ಎರಡೂ ಬಣ್ಣಗಳಿಗೆ ಹಳದಿ ಬಣ್ಣವು ಸಾಮಾನ್ಯವಾಗಿದೆ.

ಇದರಿಂದ ತಿಳಿಯುವದೇನೆಂದರೆ-

(ಅ) ಹಸಿರು, ಜಾಂಬಳಿ ಹಾಗೂ ನೀಲಿ ಬಣ್ಣಗಳು ಸಾದೃಶ್ಯವರ್ಣಗಳು.
(ಬ) ಕೇಸರಿ, ಜಾಂಬಳಿ ಹಾಗೂ ಕೆಂಪು ಬಣ್ಣಗಳು ಸಾದೃಶ್ಯ ವರ್ಣಗಳು.
(ಕ) ಹಸಿರು, ಕೇಸರಿ .ಹಾಗೂ ಹಳದಿ ಬಣ್ಣಗಳು ಸಾದೃಶ್ಯ ವರ್ಣಗಳು.

ವರ್ಣಯೋಜನೆಯಲ್ಲಿ ಬಳಸುವ ಕೆಲವು ತಾಂತ್ರಿಕ ಪದಗಳು-

೧. **ಛಾಯೆ(Tone)** ಬಣ್ಣಗಳ ಏರಿಳಿತಗಳನ್ನು ಛಾಯೆ ಇಲ್ಲವೆ ಟೋನ್ ಎನ್ನುವರು. ದಟ್ಟಛಾಯೆ, ತಿಳಿಛಾಯೆ ಮುಂತಾಗಿ ಏರಿಳಿತಗಳಾಗುತ್ತವೆ.

೨. **ತೆಳುವರ್ಣ (Tint)** ಯಾವುದಾದರೂ ಒಂದು ಬಣ್ಣದಲ್ಲಿ ಬಿಳಿಬಣ್ಣವನ್ನು ಬೆರೆಸುವದರಿಂದ ಉಂಟಾಗುವ ಬಣ್ಣವನ್ನು ತೆಳುವರ್ಣ ಇಲ್ಲವೆ ಟಿಂಟ್ ಎನ್ನುತ್ತಾರೆ.

೩. **ದಟ್ಟ ವರ್ಣ (Shades)** ಕಪ್ಪು ಬಣ್ಣದಿಂದ ಕೂಡಿದ ವರ್ಣಗಳು.

೪. ದಟ್ಟ ಛಾಯೆ(Shaded Tint) ಯಾವುದಾದರೂ ಒಂದು ಬಣ್ಣದಲ್ಲಿ ಕಪ್ಪು ಬಣ್ಣವನ್ನು ಬೆರೆಸುವದರಿಂದ ಉಂಟಾಗುವ ಬಣ್ಣಗಳಿಗೆ ದಟ್ಟಛಾಯೆ ಎನ್ನುವರು.

**೫. ಸಂಕರವರ್ಣ**(Hue) ಬೇರೆ ಬೇರೆ ರೀತಿಯ ಬಣ್ಣಗಳ ಮಿಶ್ರಣ ಮಧ್ಯಭಾಗವನ್ನು ಸಂಕರವರ್ಣ ಎನ್ನುವರು.

**೬. ತರತಮ ವರ್ಣ**(Value) ಯಾವುದಾದರೂ ಒಂದು ಇಲ್ಲವೆ ಹಲವು ವರ್ಣಗಳಲ್ಲಿ ಏರಿಳಿತವನ್ನು ತೋರಿಸುವದನ್ನು ತರತಮ ವರ್ಣವೆನಿಸುವದು. ಒಂದೇ ವರ್ಣದಲ್ಲಿ ಬಿಳಿ-ಕಪ್ಪು ಬಣ್ಣಗಳನ್ನು ಬೆರೆಸುವದರಿಂದ ವರ್ಣ ತಾರತಮ್ಯವನ್ನು ತೋರಿಸಬಹುದು.

**ವರ್ಣಗಳ ತಯಾರಿಕೆ**

ಖನಿಜಗಳು, ಸಸ್ಯಗಳು ಇಲ್ಲವೇ ಪ್ರಾಣಿಗಳಿಂದ ವರ್ಣಗಳನ್ನು ತಯಾರಿಸುತ್ತಾರೆ. ಕಾಡಿಗೆ ಅಥವಾ ಇಂಗಾಲದಿಂದ ಕಪ್ಪು ಬಣ್ಣವನ್ನು ಮಣ್ಣು ಮತ್ತು ಖನಿಜಗಳಿಂದ ಹಳದಿ ಮತ್ತು ಹಸಿರು ಬಣ್ಣಗಳನ್ನೂ ಒಂದು ಜಾತಿಯ ಕಾಚಿ ನೀಲಿ ಎಂಬ ಕೀಟದಿಂದ ಕಡುಗೆಂಪು ಅಥವಾ ರಕ್ತವರ್ಣವನ್ನೂ ನಸುಹಳದಿಯ ಹೂವು ಬಿಡುವ ಒಂದು ಜಾತಿಯ ಅಡರು ಬಳ್ಳಿಯ ಬೇರುಗಳಿಂದ "ಮ್ಯಾಡರ್" ವರ್ಣವನ್ನೂ ತಯಾರಿಸಲಾಗುತ್ತದೆ. ಅಲ್ಲದೆ ಈಗ ರಾಸಾಯನಿಕವಾಗಿಯೂ ಬಣ್ಣಗಳನ್ನು ತಯಾರಿಸುತ್ತಾರೆ.

ಕಾಲಾನುಕ್ರಮದಲ್ಲಿ ಬಣ್ಣಗಳ ಬಳಕೆಯ ವಿಧಾನವು ಬೇರೆ ಬೇರೆ ಮಾಧ್ಯಮಗಳಲ್ಲಿ ರೂಢಿಗೆ ಬಂದಿತು. ಆಯಾ ಮಾಧ್ಯಮಗಳಿಗನುಸಾರವಾಗಿ ವರ್ಣಚಿತ್ರಣ ವಿಧಾನ (Painting method)ವನ್ನು ಗುರುತಿಸಲಾಗುತ್ತದೆ. ಉದಾಹರಣೆಗೆ ಮೇಣವರ್ಣ ವಿಧಾನ, ಮೊಟ್ಟೆ, ತೈಲವರ್ಣವಿಧಾನ, ಜಲವರ್ಣವಿಧಾನಗಳು. ಬಣ್ಣವನ್ನು ಕುಟ್ಟಿ ಇಲ್ಲವೇ ಅರೆದು, ನುಣ್ಣಗೆ ಮಾಡಿದ ಬಣ್ಣದ ಹುಡಿಗಳನ್ನು ಇಂಥ ಮಾಧ್ಯಮಗಳಲ್ಲಿ ಬೆರೆಸಿ ಚಿತ್ರಿಸಲಾಗುತ್ತದೆ.

ವಿ.ಟಿ.ಕಾ.

## ವಾರ್ನಿಷ್ (ಮೆರುಗೆಣ್ಣೆ) (Varnish)

ಕಲಾಕೃತಿಯನ್ನು ರಕ್ಷಿಸಲು ಹಾಗೂ ಅದರ ಹೊಳಪು ವರ್ಧಿಸಲು ಅದರ ಹೊರಮೈಗೆ ವಾರ್ನಿಷನ್ನು ಲೇಪಿಸುತ್ತಾರೆ. ವಾರ್ನಿಷದಲ್ಲಿ ಅನೇಕ ಪ್ರಕಾರಗಳಿವೆ. ನೈಸರ್ಗಿಕ ಅಥವಾ ಕೃತಕ ರಾಳವನ್ನು ಎಣ್ಣೆಯಲ್ಲಿ ಕುದಿಸಿ, ನಂತರ ಟರಪಂಟೈನ ಅಥವಾ ಅದರಂತಹುದೇ ಸಮಾನಗುಣವುಳ್ಳ ಎಣ್ಣೆಯೊಡನೆ ತೆಳುಗೊಳಿಸಲಾಗುತ್ತದೆ. "ಸೆಲ್ಲಿನಿ"ಯಿಂದ ನಮೂದಿಸಲ್ಪಟ್ಟ ಹಾಗೂ ಮಧ್ಯಕಾಲದಿಂದಲೂ ಬಳಕೆಯಲ್ಲಿರುವ ಇದನ್ನು ಆಯಿಲ್ ವಾರ್ನಿಷ್ (Oil Varnish)ಎನ್ನುತ್ತಾರೆ. ರಾಳವನ್ನು ಕರಗಿಸುವ ದ್ರವದಲ್ಲಿ ಕರಗಿಸಿ ಈಥರಲ್(Etheral) ವಾರ್ನಿಷ್‌ಗಳನ್ನು ತಯಾರಿಸಬಹುದು. ಡೇಮರ್(Damar)ಹಾಗೂ ಶೆಲಾಕ್(Shellac) ವಾರ್ನಿಷ್‌ಗಳನ್ನು ಕ್ರಮವಾಗಿ ಟರಪೆಂಟೈನ, ಮಧ್ಯಸಾರಗಳಲ್ಲಿ ರಾಳ ಅಥವಾ ಅರಗನ್ನು ಕರಗಿಸುವುದರ ಮೂಲಕ ತಯಾರಿಸುತ್ತಾರೆ. ಅಲ್ಬುಮೆನ್(Albumen) ವಾರ್ನಿಷನ್ನು ತತ್ತಿಯ ಬಿಳಿಲೋಳೆಯಿಂದ ತಯಾರಿಸಬಹುದಾದರೂ ವಾರ್ನಿಷ್ ಪರಿಶುದ್ಧವಾಗುವ ಪೂರ್ವದಲ್ಲಿಯೇ ಲೋಳೆಯನ್ನು ಹೊರತೆಗೆಯಬೇಕು. ಸ್ಪಿರಿಟ್(Spirit)

ವಾರ್ನಿಷವು ೧೭ನೆಯ ಶತಮಾನದ ಹೊತ್ತಿಗೆ ಪೌರ್ವಾತ್ಯದಿಂದ ಯುರೋಪದ ಸುತ್ತೆಲ್ಲ ಬಳಕೆಯಲ್ಲಿತ್ತು. ವರ್ಣ ಅಥವಾ ಹುಡಿವರ್ಣವನ್ನು ಸ್ಥಿರಗೊಳಿಸುವುದಕ್ಕಾಗಿ ಇದನ್ನು ಉಪಯೋಗಿಸುತ್ತಿದ್ದರು. ಮೇಣ(Wax) ವಾರ್ನಿಷು, ಶುದ್ಧ ಬಿಳಿ ಜೇನು ಮೇಣ ಅಥವಾ ಕೊಬ್ಬಿನ ಮೇಣದಿಂದ ತಯಾರಿಸುತ್ತಾರೆ. ಇದು ಕಲಾಕೃತಿಗೆ ರಕ್ಷಣೆಯನ್ನೊದಗಿಸುತ್ತದೆ. ಪೌರ್ವಾತ್ಯ ನೈಸರ್ಗಿಕ ಹೊಂಬಣ್ಣದ ವಾರ್ನಿಷು ಗಿಡದಿಂದ ಉತ್ಪತ್ತಿಯಾಗುತ್ತದೆ. ಇದನ್ನು ಚೀನಾ, ಜಪಾನ, ಶ್ರೀಲಂಕಾ, ಬರ್ಮಾದ ತಯಾರಕರು ಸ್ಥಳೀಯವಾಗಿ ಮೆರಗಿನ ವಸ್ತುಗಳನ್ನು ತಯಾರಿಸಲು ಉಪಯೋಗಿಸುತ್ತಾರೆ.

ಅ.ಜಾ.

## ವಸ್ತುಚಿತ್ರಲೇಖನ(Model drawing)

ಚಿತ್ರಕಲೆಯ ಅಭ್ಯಾಸಕ್ರಮದಲ್ಲಿ ವಸ್ತುಚಿತ್ರಲೇಖನ ಕಲೆಯು ಮಹತ್ವದ ವಿಷಯವಾಗಿ ತಾಂತ್ರಿಕ ಕಟ್ಟಳೆಗಳಿಂದ ಕೂಡಿದ ಕ್ಲಿಷ್ಟ ವಿಷಯವಾಗಿದೆ. ಕೊಡ, ಬಕೆಟ್, ತಂಬಿಗೆ ಮೊದಲಾದ ವಸ್ತುಗಳನ್ನು ಎದುರಿಗಿಟ್ಟು ಅವುಗಳ ಆಕಾರ, ಪ್ರಮಾಣಗಳಿಗನುಸಾರವಾಗಿ ಇದ್ದಕ್ಕಿದ್ದಂತೆ ಚಿತ್ರಿಸಬೇಕಾಗುತ್ತದೆ; ಛಾಯಾವರಣವನ್ನೂ ಮಾಡಬೇಕಾಗುತ್ತದೆ.

ನೇರವಾಗಿ ಈ ವಿಷಯದ ಚಿತ್ರಣಕ್ಕೆ ತೊಡಗುವದಕ್ಕಿಂತ ಮೊದಲು ಯಥಾದರ್ಶನ(Perspective)ದ ಮೂಲತತ್ವಗಳ ತಿಳುವಳಿಕೆಯು ಅಗತ್ಯವಾಗಿರುತ್ತದೆ ಇದರಿಂದಾಗಿ ಯಾವುದೇ ವಸ್ತುವಿನ ಮೂರೂ ಪರಿಮಾಣಗಳನ್ನು ರೂಪಿಸಲು ಸುಲಭವಾಗುತ್ತದೆ. ಯಥಾದರ್ಶನದಲ್ಲಿ ಬಳಸುವ ಕೆಲವು ಪದಗಳ ಅರ್ಥವನ್ನು ತಿಳಿದಿರಲೇಬೇಕಾಗುತ್ತದೆ. ಉದಾಹರಣೆಯಾಗಿ

ಚಿತ್ರಪಾತಳಿ(Picture Plane), ಸ್ಥಿರದೃಷ್ಟಿ ಬಿಂದು(Station Point) ಭೂ ಪಾತಳಿ (Ground Plane) ಎದುರಿನಿಂದ ನೋಡಿದ ನೋಟ(Front Elevation), ಬದಿಯಿಂದ ನೋಡಿದ ನೋಟ(Side Elevation) ಮತ್ತು ಮೇಲಿನಿಂದ ನೋಡಿದ ನೋಟ (Plan)ಮುಂತಾದವುಗಳ ಅರ್ಥವನ್ನು ಅರಿತಿರುವದು ಅವಶ್ಯವಾಗಿದೆ. ಆದರೆ ನಾವು ಚಿತ್ರಿಸಲಿರುವ ವಸ್ತು ನಮ್ಮೆದುರಿನಲ್ಲಿಯೇ ಇರುವುದರಿಂದ ಮೇಲ್ಕಾಣಿಸಿದ ಎಲ್ಲ ಪಾತಳಿಗಳನ್ನೂ ಊಹೆಯಿಂದಲೇ ಗ್ರಹಿಸಬೇಕಾಗುತ್ತದೆ. ವಸ್ತುಚಿತ್ರವನ್ನು ರಚಿಸುವಾಗ ಕೆಳಗೆ ಕಾಣಿಸಿದ ಸೂಚನೆಗಳು ಹೆಚ್ಚು ಉಪಯುಕ್ತವಾಗಿವೆ.

೧. ವಸ್ತು ಚಿತ್ರಲೇಖನಕ್ಕೆ H ಮತ್ತು H.B ಗುರುತಿನ ಸೀಸುಕಡ್ಡಿಗಳನ್ನೇ ಬಳಸಿ.

೨. ಮಾದರಿಯಾಗಿ ಎದುರಿಗಿಟ್ಟ ವಸ್ತು ಇಲ್ಲವೆ ವಸ್ತುಸಮೂಹಗಳ ನಿರ್ದಿಷ್ಟ ಆಕಾರ, ಪ್ರಮಾಣ ಮೊದಲಾದವುಗಳ ಕೋನಗಳನ್ನಾಗಲೀ ಪ್ರಮಾಣಗಳನ್ನಾಗಲೀ ಪರೀಕ್ಷಿಸುವಾಗ ಒಂದು ಕಣ್ಣನ್ನು ಮುಚ್ಚಿ ಒಂದೇ ಕಣ್ಣಿನಿಂದ ನೋಡಿ ನಿರ್ಧರಿಸಿಕೊಳ್ಳಿ.

೩. ವಸ್ತುಗಳ ತುಲನಾತ್ಮಕ ಪ್ರಮಾಣಗಳನ್ನು ನಿರ್ಧರಿಸಿಕೊಳ್ಳಲು ಸುಮಾರು ಒಂದು ಅಡಿ ಉದ್ದದ ಅಂಕುಡೊಂಕಾಗಿರದ ಅಳತೆ-ಕಡ್ಡಿಯನ್ನು ಉಪಯೋಗಿಸಿ.

೪. ಅಳತೆ ಕಡ್ಡಿಯನ್ನು ದೇಹಕ್ಕೆ ಲಂಬಕೋನವಾಗುವಂತೆ ಪೂರ್ಣತೋಳನ್ನು ಚಾಚಿ ಕಡ್ಡಿಯು ತೋಳಿಗೆ ಲಂಬಕೋನವಾಗಿರುವಂತೆ ಹಿಡಿಯಿರಿ.

೫. ಎದುರಿಗೆ ಜೋಡಿಸಿಟ್ಟ ವಸ್ತು ಇಲ್ಲವೆ ವಸ್ತುಸಮೂಹದಿಂದ ತೀರ ಸಮೀಪದಲ್ಲಾಗಲೀ ಎಡ ಬಲಗಳ ತೀರ ಪಕ್ಕದಲ್ಲಾಗಲೀ ಕುಳಿತುಕೊಳ್ಳಬೇಡಿ.

ವಸ್ತುಚಿತ್ರ ಬಾಹ್ಯರೇಖೆಯು ಸಿದ್ಧಗೊಂಡನಂತರ ಛಾಯಾವರಣ ಇಲ್ಲವೆ ನೆಳಲು-ಬೆಳಕುಗಳನ್ನು ರೂಪಿಸಲು 2B ಅಥವಾ 4B ಮುಂತಾದ ಸೀಸುಕಡ್ಡಿಗಳನ್ನು ಬಳಸಬೇಕಾಗುತ್ತದೆ. ನೆಳಲು-ಬೆಳಕುಗಳ ಭಾಗಗಳನ್ನು ಸೂಕ್ಷ್ಮವಾಗಿ ನಿರೀಕ್ಷಣೆ ಮಾಡುವದರಿಂದ ನಿರ್ಧಾರ ಸುಲಭವಾಗುತ್ತದೆ. ಈ ನಿರೀಕ್ಷಣೆಯಿಂದ ಮಿಂಚುವ ಇಲ್ಲವೆ ಹೊಳಪುಳ್ಳ ಭಾಗ, ಬೆಳಕಿನ ಭಾಗ, ನೆಳಲು ಮಿಶ್ರಿತ ಬೆಳಕು, ನೆಳಲು ದಟ್ಟನೆಳಲು ಪ್ರತಿಫಲಿತ ಬೆಳಕು(Reflected Light) ಮತ್ತು ಕವಿನೆಳಲುಗಳ ಭಾಗಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

ವಿ.ಚಿ.ಶಾ.

## ವಸ್ತು ಸಂಗ್ರಹಾಲಯ

ವಸ್ತು ಸಂಗ್ರಹಾಲಯ ಒಂದು ಶೈಕ್ಷಣಿಕ ಸಂಸ್ಥೆಯಾಗಿದ್ದು, ಇವುಗಳನ್ನು ನೋಡುವುದರಿಂದ ಬೇರೆ ಕಡೆ ಸಾಧ್ಯವಾಗದದ್ದನ್ನು ಅರಿತುಕೊಳ್ಳಬಹುದು. ಅಲ್ಲದೆ ಈ ವಸ್ತು ಸಂಗ್ರಹಾಲಯಗಳು ನಮ್ಮ ಕಲಾ ನಿಕ್ಷೇಪಗಳನ್ನು ಪರಂಪರಾಗತ ಮೌಲ್ಯಗಳನ್ನು ಉಳಿಸುವ ಮತ್ತು ಸಂಗ್ರಹಿಸುವ ಕೆಲಸವನ್ನು ಮಾಡುತ್ತವೆ ಹಾಗೂ ಶ್ರೀಮಂತವಾದ ಕಲೆಗಳನ್ನು ಸಾಮಾನ್ಯ ಜನರು ಅತಿ ಸಮೀಪದಿಂದ ನೋಡಿ ಸಂತೋಷ ಪಡುವುದಲ್ಲದೆ, ಅದರ ಇತಿಹಾಸವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದು.

ನಮ್ಮ ಸರ್ಕಾರವು ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆಯನ್ನು ಸ್ಥಾಪಿಸಿದ್ದು, ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸಿದೆ. ಅಲ್ಲದೆ ಭಾರತದ ಪುರಾತತ್ವ ವಿಭಾಗದ ಮೇಲ್ವಿಚಾರಣೆಯಲ್ಲಿ ಹಲವು ವಸ್ತು ಸಂಗ್ರಹಾಲಯಗಳಿವೆ. ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಮಂಡಳಿಯು ಬೆಂಗಳೂರಿನಲ್ಲಿ ವಿಶ್ವೇಶ್ವರಯ್ಯ ಕೈಗಾರಿಕ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿದೆ. ರಾಜ್ಯದ ಕೆಲವು ವಿಶ್ವವಿದ್ಯಾಲಯಗಳು ಮತ್ತು ಖಾಸಗಿ ಸಂಸ್ಥೆಗಳು ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸಿದೆ.

ಬೆಂಗಳೂರಿನ ಕಸ್ತೂರಿ ಬಾ ರಸ್ತೆಯಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯ ೧೮೬೫ರಲ್ಲಿ ಬಾಡಿಗೆ ಕಟ್ಟಡವೊಂದರಲ್ಲಿ, ಸಾರ್ವಜನಿಕರು ದಾನ ಮಾಡಿದ ವಸ್ತುಗಳಿಂದ ಪ್ರಾರಂಭವಾಯಿತು. ಅನಂತರ ಸರ್ಕಾರ ಕಬ್ಬನ್ ಪಾರ್ಕಿನಲ್ಲಿ ಸರ್ಕಾರಿ ವಸ್ತು ಸಂಗ್ರಹಾಲಯಕ್ಕಾಗಿ ಪ್ರತ್ಯೇಕ ಕಟ್ಟಡವನ್ನು ಕಟ್ಟಿಸಿ, ೧೮೭೭ರಿಂದ ಕಾರ್ಯಾರಂಭ ಮಾಡಿತು. ಈ ವಸ್ತು ಸಂಗ್ರಹಾಲಯದಲ್ಲಿ ಪುರಾತತ್ವ ಇಲಾಖೆಯವರು, ಶಿಲ್ಪಗಳು, ಶಾಸನಗಳು, ಉತ್ಖನನ ಮಾಡಿದ ನಾಣ್ಯಗಳು ಮುಂತಾದವುಗಳನ್ನು ಪ್ರದರ್ಶಿಸಲಾಯಿತು. ಕ್ರಮೇಣ ಕಲೆ ಮತ್ತು ಮಾನವಕುಲಶಾಸ್ತ್ರ, ಪ್ರಾಕೃತಿಕ ಚರಿತ್ರೆಗೆ ಸಂಬಂಧಿಸಿದ ಮಾದರಿಗಳನ್ನು ಈಗ ಸೇರಿಸಲಾಯಿತು. ಈಗ ಪ್ರಾಕೃತಿಕ ಚರಿತ್ರೆ, ಕಲೆ, ವಾಸ್ತುಶಿಲ್ಪ, ಮಾನವಕುಲ ಶಾಸ್ತ್ರಕ್ಕೆ, ಸಂಬಂಧಿಸಿದವುಗಳನ್ನು ವ್ಯವಸ್ಥಿತವಾಗಿ

ಜೋಡಿಸಲಾಗಿದೆ. ಈಗ ಈ ವಸ್ತು ಸಂಗ್ರಹಾಲಯವು ವಿವಿಧೋದ್ದೇಶ ಲಕ್ಷಣಗಳನ್ನು ಪಡೆದಿದೆ.

ಇದಲ್ಲದೆ ಜಿಲ್ಲೆಯಾದ್ಯಂತ ಪುರಾತತ್ವ ಇಲಾಖೆಯವರು ಹಲವಾರು ವಸ್ತುಸಂಗ್ರಹಾಲಯವನ್ನು ಸ್ಥಾಪಿಸಿ ಚಿತ್ರ, ಶಿಲ್ಪಗಳನ್ನು ವ್ಯವಸ್ಥಿತವಾಗಿ ಪ್ರದರ್ಶಿಸಿದ್ದಾರೆ. ಚಿತ್ರದುರ್ಗ, ಮಂಗಳೂರು, ಧರ್ಮಸ್ಥಳ, ಕೆಳದಿ ಮುಂತಾದೆಡೆಗಳಲ್ಲಿ ಖಾಸಗಿ ಸಂಗ್ರಹಾಲಯಗಳಿವೆ. ಶ್ರೀರಂಗಪಟ್ಟಣಗಳಲ್ಲಿ 'ಗಂಜೀಫ'ಗೆ ಸಂಬಂಧಿಸಿದ ಸಂಗ್ರಹಾಲಯವಿದೆ.

**ಮರಿ**

## ವಾರ್ನಿಷ್ ಕೊಪಲ್ (Copal Varnish)

ತೈಲಚಿತ್ರಕ್ಕೆ ಉಪಯೋಗಿಸುವ ಗಚ್ಚೆ ಎಣ್ಣೆಯು(Varnish) (ರಾಳದ ಮೆರುಗೆಣ್ಣೆ) ಒಂದು ರೀತಿ ಜಿಗುಟು ಹಾಗೂ ಮೆರುಗಿನಿಂದ ಕೂಡಿರುತ್ತದೆ. ಮರದ ರಾಳಕ್ಕೆ ಕೊಪಲ್ ಎನ್ನುತ್ತಾರೆ. ಇದನ್ನು ಬಿಸಿ ಅಗಸೆ ಎಣ್ಣೆಯಲ್ಲಿ ಕುದಿಸಿ ಮಾಡಲ್ಪಟ್ಟಿರುತ್ತದೆ. ಕಾಲಕಳೆದಂತೆ ಇದು ಬಿರಿಯುವ ಹಾಗೂ ಬಣ್ಣಗೆಡುವ ಪ್ರವೃತ್ತಿಯುಳ್ಳದ್ದಾಗಿದೆ.

**ಅ.ಜಾ..**

## ವಾಸ್ತವಿಕ ಕಲೆ (Objective Art)

ಇದು ಕಲಾವಿದನು ವಸ್ತುಗಳನ್ನು ಕೇವಲ ತಾನು ಅವಲೋಕಿಸಿದಂತೆಯೇ ಸರಳವಾಗಿ ಚಿತ್ರಿಸುವ ವಿಧಾನವಾಗಿದೆ. ಇಲ್ಲಿ ಕಲಾವಿದನು ತನ್ನ ಭಾವನೆ, ಕಲ್ಪನೆ, ಅನುಭೂತಿಗಳನ್ನಾಧರಿಸಿ ವಸ್ತುಗಳನ್ನು ವಿರೂಪಗೊಳಿಸುವುದಿಲ್ಲ; ಅಥವಾ ಯಾವುದೇ ವ್ಯಕ್ತಿಗತ ಅಭಿವ್ಯಕ್ತಿಗೆ ಆಸ್ಪದ ಕೊಡುವುದಿಲ್ಲ. ಬದಲಾಗಿ ವಸ್ತುಗಳನ್ನು ಅವು ನೈಜ ರೂಪದಲ್ಲಿದ್ದಂತೆಯೇ ಚಿತ್ರಿಸುತ್ತಾನೆ.

**ಶಂ.ಮೂ.**

## ವಾರ್ಲಿ ಚಿತ್ರಗಳು

ಮಹಾರಾಷ್ಟ್ರದ ಥಾನಾ ಜಿಲ್ಲೆಯಲ್ಲಿ (ಮುಂಬಯಿಗೆ ಸಮೀಪ) 'ವಾರ್ಲಿ' ಬುಡಕಟ್ಟು ಜನರು ವಾಸಿಸುತ್ತಿದ್ದು. ಅಲ್ಲಿನ ಗುಡಿಸಲುಗಳನ್ನು ಮಣ್ಣಿನಿಂದ ರಚಿಸಲಾಗಿದ್ದು ಅದರ ಮೇಲೆ ಚಿತ್ರಗಳನ್ನು ಚಿತ್ರಿಸುತ್ತಾರೆ. ಬೇಟೆಯಾಡುವ ಮತ್ತು ಆಹಾರ ಸಂಗ್ರಹಿಸುವ ಪ್ರಾಚೀನ

ಪ್ರವೃತ್ತಿಗಳಿಂದ ವಾರ್ಲಿ ಜನರು ಭೂಮಿಯನ್ನು ಉಳುವ ಕೂಲಿ ಕಾರ್ಮಿಕರಾಗಿದ್ದಾರೆ. ವಾರ್ಲಿಯ ಬುಡಕಟ್ಟು ಜನಾಂಗದ ಕಲಾವಿದ, ಹಾಡು ಮತ್ತು ನೃತ್ಯದ ಮೂಲಕ ಪ್ರಚೋದಿತವಾದ ಪ್ರತಿಮೆಗಳು, ಉತ್ಸವಗಳ ಸಂಭ್ರಮ ಮತ್ತು ತನ್ನ ಸುತ್ತಲೂ ಬದಲಾಗುತ್ತಿರುವ ಪರಿಸರದ ಮೂಲಕ ತನ್ನ ಪ್ರಾಚೀನ ಕುಲದ ನೆನಪುಗಳನ್ನು ಚಿತ್ರಿಸುವನು. ಅಲ್ಲಿನ ಕಲಾವಿದರು ಮದುವೆಗಳು, ನೃತ್ಯ ಮತ್ತು ಕೆಲವೊಮ್ಮೆ ಲೈಂಗಿಕತೆಗೆ ಸಂಬಂಧಿಸಿದ ಚಿತ್ರಗಳನ್ನು ರಚಿಸುತ್ತಾರೆ. ಅಲ್ಲದೆ ಹೊಗೆಯುಗುಳುವ ಎಂಜಿನ್ನುಗಳು, ರೈಲುಗಳು, ಮೋಟಾರು ಕಾರುಗಳು ಮತ್ತು ಎತ್ತಿನ ಗಾಡಿಗಳನ್ನು, ಪ್ರತಿಮೆಗಳನ್ನು ಅವರ ಜಾಯಮಾನಕ್ಕೆ ತಕ್ಕಂತೆ ಒಳಪಡಿಸಿಕೊಂಡಿದ್ದು, ಈ ಚಿತ್ರಗಳೆಲ್ಲಾ ಕಾಲ್ಪನಿಕವಾಗಿರುತ್ತವೆ.

ವಾರ್ಲಿಯ ಚಿತ್ರಗಳು ಭ್ರಾಮಕ ಲೋಕಕ್ಕೆ ಕೊಂಡೊಯ್ಯುತ್ತವೆ ಮತ್ತು ಕಲಾವಿದನು ರಚಿಸಿದ ರೇಖೆಗಳು ಸಮರ್ಥವಾದ ಸಂವೇದನಾಶೀಲ ಹಾಗೂ ಚಲನೆಯೊಂದಿಗೆ ಜೀವಂತವಾಗಿವೆ. ಅಲ್ಲಿನ ಚಿತ್ರಗಳು ಯಾವುದೂ ಜಡವಾಗಿಲ್ಲ. ಮರಗಳು, ಪ್ರಾಣಿಗಳು, ಮಾನವಾಕೃತಿಗಳು ಹಕ್ಕಿಗಳು ಪರಸ್ಪರ ಸವಾಲು ಹಾಕುವಂತೆ ಪ್ರತಿಸ್ಪಂದಿಸುತ್ತವೆ, ತುಡಿತಗಳನ್ನುಂಟು ಮಾಡುತ್ತವೆ. ಬುಡಕಟ್ಟು ಜನಾಂಗದ ಅಜಾಗೃತ ಮನಸ್ಥಿತಿಯ ಆಳದಿಂದ ಈ ರೇಖಾಚಿತ್ರಗಳಿಗೆ ಮಂಡಲದ ಆಕಾರ ಮತ್ತು ಪ್ರಾಮುಖ್ಯತೆಯನ್ನು ನೀಡುವಂಥ ಜ್ಞಾನವೃಕ್ಷದ ಮತ್ತು ಮತ್ಸ್ಯಜ್ಞಾನದ ಸಂಕೇತಗಳು ಹುಟ್ಟಿಕೊಂಡಿವೆ. ಐಂದ್ರಜಾಲಿಕ ಚೌಕದ ಸುತ್ತಲೂ ಎದ್ದುನಿಂತಿರುವ ಕಾಡಿನ ಮರಗಳು ಶುಭಸೂಚಕ ಚೈತನ್ಯಯುತ ಮತ್ತು ಶಕ್ತಿಯುತವಾದವು. ಮಾನವನ ಅಪೂರ್ವ ಹಾಗೂ ಆತ್ಮೀಯ ಸಂಬಂಧಗಳನ್ನು ಈ ಚಿತ್ರಗಳಲ್ಲಿ ಕಾಣಬಹುದಾಗಿದೆ.

ಕೆಲವು ಚಿತ್ರಗಳು ಹುಡುಗ ಹುಡುಗಿಯರ ಶಾಸ್ತ್ರೋಕ್ತವಾದ ಸಂಧಿಸುವಿಕೆ, ಅವರ ತೋಳುಗಳು ಪರಸ್ಪರ ಹೆಣೆದುಕೊಂಡಿರುವಿಕೆ, ಸಂತೋಷದ ಹಾಡು, ಅಡಕವಾದ ರಚನೆಗಳಿಗೆ ನಾದರೂಪ ಕೊಡುವ ಪಾದದ ತಾಳಬದ್ಧವಾದ ಸಂಘಟನೆಗಳಿವೆ. ಈ ವಾರ್ಲಿ ನೃತ್ಯಗಳು ಭಾರತೀಯ ಬುಡಕಟ್ಟು ಜನಾಂಗದ ನೃತ್ಯಗಳ ಅವಶೇಷಗಳಾಗಿವೆ.

ಬಿದುರಿನಿಂದ ಹೆಣೆದ ತಟಿಕೆಯ ಗೋಡೆಗಳ ಮೇಲೆ ಸಗಣಿಯಿಂದ ಸಾರಿಸಿ, ಅಕ್ಕಿಹಿಟ್ಟನಿಂದ ಬೊಂಬಿನ ಕುಂಚಗಳ ಮೂಲಕ ಚಿತ್ರರಚಿಸುವುದು ಇವರ ಸಾಮಾನ್ಯ ಪದ್ಧತಿಯಾಗಿದೆ.

ಮರಿ

## ವಾಸ್ತುನಿರ್ಮಾಣ ಕ್ರಮ

ಮಾನಸಾರ ಶಿಲ್ಪಶಾಸ್ತ್ರವು ಗ್ರಾಮ ಗೃಹಾದಿ ನಿರ್ಮಾಣ ಕ್ರಮವನ್ನು ಹೀಗೆ ತಿಳಿಸುತ್ತದೆ. ಮೊದಲನೆಯದಾಗಿ ಗ್ರಾಮ ನಗರಾದಿ ನಿರ್ಮಾಣಕ್ಕೆ ಆರಿಸಿಕೊಂಡ ಸ್ಥಳವನ್ನು ಅಳೆಯುವುದು. ಎರಡನೆಯದು ಕೆರೆ, ಉದ್ಯಾನವನ, ಬೀದಿ, ಆಲಯ, ಸಣ್ಣ ಸಂದಿಗಳು ಮೊದಲಾದವುಗಳಿಗೆ ಪಾದಗಳನ್ನು ವಿಭಜಿಸುವುದು. ಮೂರನೆಯದು ದೇವತಾ ಪ್ರೀತ್ಯರ್ಥಕ್ಕಾಗಿ ನೀಡುವ ಬಲಿ,ನಾಲ್ಕನೆಯದು ಗ್ರಾಮ ನಿರ್ಮಾಣ, ಐದನೆಯದು ಗೃಹ ವಿನ್ಯಾಸ ಎಂದರೆ ಮನೆಗೆ ಅವಶ್ಯಕವಾದ ಕೊಟಡಿಗಳಿಗೆ ಪ್ರತ್ಯೇಕ ಸ್ಥಳವನ್ನು ವಿಭಜಿಸಿ ಗೃಹಾಂತರ್ಭಾಗದಲ್ಲಿ

ಸುವರ್ಣ-ರತ್ನ-ಧಾನ್ಯಾದಿಗಳನ್ನು ನಿಕ್ಷೇಪಿಸುವುದು. ಆರನೇಯದು ಗೃಹಪ್ರವೇಶ. ಶುಭದಿನ ಶಾಂತಕರ್ಮಗಳನ್ನು ಮಾಡಿ ಗೃಹ ಪ್ರವೇಶ ಮಾಡುವುದು. ಕೆಲವು ಗ್ರಂಥಗಳಲ್ಲಿ ನಿರ್ಮಾಣ ಕ್ರಮ ಕೆಳಗೆ ವಿವರಿಸಿದಂತೆ ಹೇಳಿದೆ. ಕಾಮಿಕಾಗಮದಲ್ಲಿ ಕೆಳಗಿನ ಪ್ರಣಾಲಿಕೆ ತಿಳಿಸುತ್ತದೆ.

೧. ಕಟ್ಟಡಗಳ ನಿರ್ಮಾಣಕ್ಕೆ ಕಾಲ ನಿರ್ಣಯ
೨. ಕಟ್ಟಡಗಳ ಸ್ಥಳ ನಿರ್ಣಯ
೩. ಭೂ ಪರೀಕ್ಷೆ
೪. ಸ್ಥಳಕ್ಕೆ ಪ್ರವೇಶಿಸುವಾಗ ಬಲಿಕರ್ಮ ನಡೆಸುವುದು
೫. ಗ್ರಾಮ, ಮನೆ, ದೇವಾಲಯ, ಕಟ್ಟಡಗಳಿಗೆ ಸ್ಥಳವನ್ನು ಗ್ರಹಿಸುವುದು.
೬. ಸ್ಥಳ ಶುದ್ಧಿಗಾಗಿ ನೇಗಿಲಿನಿಂದ ಉಳುವುದು.
೭. ಶಂಕುಸ್ಥಾಪನ ಮಾಡುವ ದಿಕ್ಕುಗಳನ್ನು ನಿರ್ಣಯಿಸುವುದು.
೮. ಬುನಾದಿಗೆ ಸ್ಥಳ ನಿರ್ಣಯಿಸುವುದು.
೯. ಸೂತ್ರ ವಿನ್ಯಾಸ, ಪಾತಿಗಳನ್ನು ಅಗೆಯಲು ಅಳತೆ ಪ್ರಕಾರ ರಂಗೋಲಿ ಹಾಕುವುದು.
೧೦. ಗೃಹಾದಿ ನಿರ್ಮಾಣಾರಂಭಕ್ಕೆ ದೇವತಾ ಬಲಿಕರ್ಮ.
೧೧. ಗೃಹ-ಬೀದಿ-ಆಲಯಗಳ ನಿರ್ಮಾಣವನ್ನಾರಂಭಿಸುವುದು.
೧೨. ಗರ್ಭ ವಿನ್ಯಾಸ ಅಂದರೆ ಪಂಚಲೋಹ ಕಲಶವನ್ನು ಪ್ರಧಾನ ದ್ವಾರದ ಬಳಿಯಾಗಲೀ, ಕಟ್ಟಡದ ಮಧ್ಯದಲ್ಲಾಗಲೀ ಸ್ಥಾಪಿಸುವುದು.
೧೩. ತರುವಾಯ ದೇವತಾ ಪ್ರತಿಷ್ಠೆ-ಗ್ರಾಮ-ದೇವಾಲಯಗಳಿಗೆ ಸಂಪ್ರೋಕ್ಷಣೆ ಮತ್ತು ಗೃಹಶಾಂತಿ.

**ದೇಕೊರೆ**

## ವಾಸ್ತುಪುರುಷ

ವರಾಹ ಮಿಹಿರಾಚಾರ್ಯನ ಬೃಹತ್ಸಂಹಿತೆಯ ವಾಸ್ತು ವಿದ್ಯಾ ಪ್ರಕರಣದಲ್ಲಿ ವಾಸ್ತುಪುರುಷನನ್ನು ಕುರಿತು- ಆತನ ಗತಿಯನ್ನು ಕುರಿತು ವಿವರವಾಗಿ ಹೇಳಲಾಗಿದೆ. ಭೂಮ್ಯಾಕಾಶಗಳ ಮಧ್ಯೆ ಭೂಮಿಯನ್ನು ಆವರಿಸಿರುವ (ಅಚ್ಛಾದ), ಒಂದು ಮಹಾದ್ಭುತ ಅಮಾನುಷ ಮಹಾಶಕ್ತಿ ಭೂಮಿಗೆ ಅಡ್ಡವಾಗಿ ಬಿದ್ದಿತಂತೆ. ದೇವತೆಗಳು ಅವನನ್ನು ಹಿಡಿದು ತಲೆಕೆಳಗಾಗಿ ತಳ್ಳಿದರು. ಆ ಮಹಾವ್ಯಕ್ತಿ ಅಂಗಾಂಗಳಲ್ಲಿ ಯಾವುದನ್ನು ಯಾವ ದೇವತೆಗಳು ಹಿಡಿದುಕೊಂಡರೋ ಅವು ಆ ದೇವತೆಗಳ ಹೆಸರಿನಲ್ಲಿ ವ್ಯವಹರಿಸಲ್ಪಡುತ್ತಾ ಆ ವ್ಯಕ್ತಿ ವಾಸ್ತು ಪುರುಷನೆಂದು ಕರೆಯಲ್ಪಟ್ಟ. ಆತನು ಕೆಲವು ಪ್ರತ್ಯೇಕ ದಿನಗಳಲ್ಲಿ ಬಿಟ್ಟು ಉಳಿದ ಸಂವತ್ಸರದ ಪೂರ್ಣ ನಿದ್ರೆ ಹೋಗುತ್ತಾನೆ. ಅವನು ತಲೆಯನ್ನು ಎಡಭುಜಕ್ಕೆ ಆನಿಸಿಕೊಂಡು ಮಲಗಿರುತ್ತಾನೆ. ಸಂವತ್ಸರದ ಉದ್ದಕ್ಕೂ ಆತ ತನ್ನ ತಲೆಯನ್ನು ತಿರುಗಿಸುತ್ತಿರುತ್ತಾನೆ. ನಿರ್ಮಾಣಕ್ಕೆ ಆರಿಸಿಕೊಂಡ ಸ್ಥಳದಲ್ಲಿ ವಾಸ್ತುಪುರುಷನ ದೃಷ್ಟಿಗೆ, ಪಾದಗಳ ಕೆಳಗೆ ಬರುವ ಭಾಗಗಳನ್ನು ಬಿಟ್ಟು ಉಳಿದ ಜಾಗದಲ್ಲಿ ಕೊಠಡಿಗಳನ್ನು ನಿರ್ಮಿಸಬೇಕು.

ವಾಸ್ತುಪುರುಷನು ಭಾದ್ರಪದ, ಆಶ್ವೀಜ ಕಾರ್ತೀಕ ಮಾಸದಲ್ಲಿ ಪೂರ್ವಕ್ಕೂ, ಮಾರ್ಗಶಿರ ಪುಷ್ಯ, ಮಾಘಮಾಸಗಳಲ್ಲಿ ದಕ್ಷಿಣಕ್ಕೂ, ಪಾಲ್ಗುಣ, ಚೈತ್ರ-ವೈಶಾಖ ಮಾಸಗಳಲ್ಲಿ ಪಶ್ಚಿಮಕ್ಕೂ ಜೇಷ್ಠ ಆಶಾಢ, ಶ್ರಾವಣದಲ್ಲಿ ಉತ್ತರಕ್ಕೂ ತಲೆ ಇಟ್ಟು ಮಲಗಿರುತ್ತಾನೆ. ಇದನ್ನು ಕಂಡುಕೊಂಡು ವಾಸ್ತು ಶಾಸ್ತ್ರಗಳು ನಿರ್ಮಾಣಾರಂಭಕ್ಕೆ ಶುಭಾಶುಭ ಮಾಸಗಳನ್ನು ನಿಶ್ಚಯಿಸಿರುತ್ತವೆ.

ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ವಾಸ್ತುಪುರುಷನ ರೂಪ ವಿಭಿನ್ನವಾಗಿರುತ್ತವೆ. ಚೌಕ ಅಥವಾ ದೀರ್ಘ ಚೌಕಾಕಾರವನ್ನು ಹಲವಾರು ಮನೆ(ಅಂಕಣ)ಗಳಾಗಿ ಒಡೆದು ಪಂಚವರ್ಣದಲ್ಲಿ (ಕೆಂಪು, ಹಳದಿ, ಹಸಿರು, ಬಿಳಿ, ಕಪ್ಪು) ಅಂಕಣಗಳನ್ನು ತುಂಬುವುದರಿಂದ ಬಣ್ಣದ ಹರಹುಗಳೇ ಪ್ರಧಾನವಾದ ಅಮೂರ್ತ ಚಿತ್ರಗಳು ರೂಪಿತವಾಗುತ್ತದೆ. ಕೆಲವೊಮ್ಮೆ ಇವು ಅಮೂರ್ತ ಚಿತ್ರಗಳಂತೆ ಲಯಬದ್ಧವಾಗಿಯೂ ಇರುವುದುಂಟು.

ದೇಕೊರ

## ವಾಸ್ತು ಪ್ರಭೇಧಗಳು

ಶಿಲ್ಪ ಗ್ರಂಥದಲ್ಲಿ ಕಟ್ಟಡಗಳ ಒಳಗಿನ ಕೊಟಡಿಗಳು, ಕಟ್ಟಡಗಳ ಪ್ರಭೇದಗಳು ಅವುಗಳ ಪ್ರತ್ಯೇಕ ಲಕ್ಷಣಗಳನ್ನು ವಿವರಿಸಲಾಗಿದೆ. ಮುಖ್ಯವಾಗಿ ಕಟ್ಟಡಗಳು ೧೮ ರೀತಿಯಲ್ಲಿರುತ್ತವೆ.

೧) ಮೇರು ಪ್ರಾಸಾದ: ಇದರ ತಲ ವಿನ್ಯಾಸ ೩೨೪ ಅಡಿ ಉದ್ದ ೧೬೨ ಅಡಿ ಅಗವಿರುತ್ತದೆ. ಇದು ಪೂರ್ವಾಭಿಮುಖವಾಗಿರುತ್ತದೆ. ಕಟ್ಟಡಕ್ಕೆ ಎರಡು ಪ್ರವೇಶದ್ವಾರಗಳಿರಬೇಕು. ಅವನ್ನು ಸೂರ್ಯಚಂದ್ರ ದ್ವಾರವೆನ್ನುತ್ತಾರೆ. ಪ್ರಧಾನ ಪ್ರವೇಶದ್ವಾರವು ಕಟ್ಟಡದ ಮಧ್ಯೆ ಇದ್ದು, ಅದರ ಮುಂದೆ ವಿಶಾಲ ಮುಖಮಂಟಪ ಇರಬೇಕು. ಕಟ್ಟಡದ ಮಧ್ಯದಲ್ಲಿ ಸ್ವಲ್ಪ ಎತ್ತರವಾಗಿ ಕಲ್ಯಾಣಕೂಟ, ಅದರ ಮೇಲೆ ಪಕ್ಕದಲ್ಲಿ ಮಾರ್ಗಗಳು ಇರುತ್ತವೆ. ಕಲ್ಯಾಣಕೂಟಕ್ಕೆ ಸುತ್ತಲೂ ಗದಲು ನಿರ್ಮಿಸಬೇಕು. ಉತ್ತರ ದಿಕ್ಕಿಗೆ ಧನಾಗಾರವಿದ್ದು ಮೇಲೆ ಏಳು ಅಂತಸ್ತು ಇರುತ್ತದೆ.

೨) ಮಂದರ ಪ್ರಾಸಾರ: ಇದರ ಲಕ್ಷಣಗಳೆಲ್ಲವೂ ಮೇರು ಪ್ರಾಸಾರದಂತೆ ಇದ್ದು ಚಿಕ್ಕದಾಗಿರುತ್ತದೆ.

೩) ವಿಮಾನ ಪ್ರಾಸಾರ: ಇದೂ ಸಹ ಏಳು ಅಂತಸ್ತಿನ ಭವನವಾಗಿದ್ದು ಉತ್ತರಾಭಿಮುಖವಾಗಿ ಇರುತ್ತದೆ. ದೀರ್ಘಾಕೃತಿಯಾಗಿ ಕಟ್ಟಲಾಗಿದ್ದು, ಹಿಂಭಾಗದಲ್ಲಿ ಬಾಗಿಲುಗಳಿಲ್ಲದೇ ಹೋಗಬಹುದು.

೪) ಭದ್ರಕ: ಮೊದಲ ಪ್ರವೇಶ ದ್ವಾರ ಉತ್ತರಾಭಿಮುಖವಾಗಿ ಇದ್ದು ಚಿಕ್ಕ ಆಕಾರದ್ದಾಗಿ ಎರಡು-ಮೂರು ಅಂತಸ್ತುಗಳನ್ನು ಹೊಂದಿರುತ್ತದೆ. ಪ್ರವೇಶದ್ವಾರಕ್ಕೆ ಎದುರಾಗಿ ಎರಡು ವರಸೆಯ ಸ್ತಂಭಗಳಿಂದ ಚಿಕ್ಕಮಂಟಪದ ಸುತ್ತಲೂ ಕೈಸಾಲೆ(ವರಾಂಡಾ)ಯಿರುತ್ತದೆ.

೫) ಸರ್ವತೋಭದ್ರ: ಇದಕ್ಕೆ ನಾಲ್ಕು ದಿಕ್ಕಿನಿಂದಲೂ ಪ್ರವೇಶ ದ್ವಾರವಿರುತ್ತದೆ.

೬) ರುಚಿಕ: ಇದು ದಕ್ಷಿಣಾಭಿಮುಖವಾಗಿದ್ದು ಸುತ್ತಲೂ ಒಳಗಡೆಗೆ ಕೊಟಡಿಗಳಿರುತ್ತವೆ.

೭) ನಂದನ: ಕಟ್ಟಡದ ಅಳತೆ ೧೫೦ ಚದರ ಅಡಿಗಳು, ಪ್ರವೇಶದ್ವಾರಗಳು ಪಕ್ಕದಲ್ಲೇ ಇರುತ್ತದೆ. ಇದರ ಮುಂದೆ ಭದ್ರಮಂಟಪವಿರುತ್ತದೆ.

೮) ನಂದಿವರ್ಧನ : ಮುಂಭಾಗದ ಎರಡೂ ಕಡೆಯ ಕೊನೆಯಲ್ಲಿ ಸೋಪಾನ ಮಾರ್ಗವಿದ್ದು, ಸುತ್ತಲೂ ವರಾಂಡ, ಮುಂದೆ ಭದ್ರಮಂಟಪವಿರುತ್ತದೆ.

೯) ಶ್ರೀ ವತ್ಸ: ಮುಂದೆ ಅರ್ಧ ವಲಯಾಕೃತಿ ಮಂಟಪ, ತೋರಣ ಸ್ತಂಭ, ಪ್ರವೇಶ ದ್ವಾರವಿರುತ್ತದೆ.

೧೦) ಬಾಡಬಿ ಪ್ರಾಸಾದ: ಪೂರ್ವಾಭಿಮುಖ ತ್ರಿಮುಖ ಪ್ರವೇಶ ಮಾರ್ಗಗಳು ಮಧ್ಯ ಸೋಪಾನಗಳು ಎರಡು ಕಡೆಯ ಮೆಟ್ಟಿಲು ಇರುವುದಿಲ್ಲ

೧೧) ಗೃಹರಾಜ: ಮೇಲಿನದರಂತೆ ಇರುತ್ತದೆ. ಮುಖಭಾಗ ದೊಡ್ಡದಾಗಿಯೂ, ಪಕ್ಕ ಭಾಗವು ಚಿಕ್ಕದಾಗಿಯೂ ಇರುತ್ತದೆ.

೧೨) ಶಾಲಾ ಗೃಹ: ಮುಂದುಗಡೆ ಎತ್ತರವಾದ ಸ್ತಂಭದಿಂದ ಕೂಡಿದ ದೀರ್ಘ ಚತುರಸ್ರ ಮುಖಭದ್ರ ಮಂಟಪವಿರುತ್ತದೆ.

೧೩) ಮಂದಿರ: ಕಟ್ಟಡದ ಸುತ್ತಲೂ ವರಾಂಡವಿದ್ದು, ಮುಂದೆ ಮತ್ತು ಹಿಂದೆ ಪ್ರವೇಶ ಮಾರ್ಗಗಳಿರುತ್ತದೆ.

೧೪) ವಿಮಾನ : ಇದಕ್ಕೆ ನಾಲ್ಕು ಕಡೆಯ ಪ್ರವೇಶ ಮಾರ್ಗವಿರುತ್ತದೆ. ಮೇಲಿನ ಅಂತಸ್ತುಗಳು ಒಂದಕ್ಕಿಂತ ಒಂದು ಚಿಕ್ಕದಾಗಿರುತ್ತದೆ.

೧೫) ಬ್ರಹ್ಮಮಂದಿರ: ಇದರಲ್ಲಿ ಚಿಕ್ಕ ಶಾಲೆಗಳಿರುತ್ತದೆ. ಸುತ್ತಲೂ ವರಾಂಡಾ ನಡುವಿನ ಶಾಲೆಗಳು ಕೊಟಡಿಗಳಿಗೂ ದಾರಿಯಿರುತ್ತದೆ.

೧೬) ಭವನ : ಇದು ಬಾದಬಿ ಪದ್ಧತಿಯಲ್ಲಿ ಅದಕ್ಕೆ ವ್ಯತಿರಿಕ್ತವಾಗಿರುತ್ತದೆ.

೧೭) ಉತ್ತಂಬಿ: ಮುಖಮಂಟಪಕ್ಕೆ ಎರಡು ಪಕ್ಕದಲ್ಲಿ ಎರಡು ದೊಡ್ಡ ಶಾಲೆಗಳಿರುತ್ತದೆ. ಅವು ತೋರಣಗಳಿಂದ ಕೂಡಿದ್ದು, ಮಂಟಪ ಪದ್ಧತಿಯಲ್ಲಿರುತ್ತದೆ.

೧೮) ಶಿಬಿಕ ಪ್ರಾಸಾದ: ಮಧ್ಯ ಪ್ರವೇಶ ಮಂಟಪಕ್ಕಿಂತ ಪ್ರತ್ಯೇಕವಾಗಿ ಎರಡು ಪಕ್ಕದಲ್ಲಿ ಮಂಟಪಗಳಿರುತ್ತದೆ.

ಮಾನಸಾರದಲ್ಲಿ ಕಟ್ಟಡದೊಳಗಿನ ವಿಭಿನ್ನ ಶಾಲಾಗಳು, ಅವುಗಳ ಹೆಸರು ಲಕ್ಷಣಗಳು ಅವುಗಳ ಪ್ರತ್ಯೇಕತೆಯನ್ನು ವಿವರಿಸಿದೆ.

**ದೇಕೊರ**

## ವಿಕೃತಿ (Distortion)

'ಶ್ರೇಷ್ಠ ಶಿಲ್ಪವೊಂದು ತನ್ನ ಸಂಸ್ಕೃತಿಯ ಒರಟುತನವನ್ನು, ವಿಕೃತಿಯನ್ನು ಒಳಗೊಂಡಿರಬೇಕು' ಎಂದು ಶಿಲ್ಪಿಯೊಬ್ಬನು ಹೇಳಿರುವುದರ ಹಿನ್ನೆಲೆಯಲ್ಲಿ ಕಲಾಕೃತಿಯೊಂದು ಸುಂದರವಾಗಿ ಮಾತ್ರವೇ ಸೃಷ್ಟಿಯಾಗಬೇಕಿಲ್ಲ ಎಂಬ ಒಳನೋಟವಿದೆ. ವಿಕೃತ(distort)ವಾದ ರೂಪಗಳೂ ಸುಂದರ ಅನುಭವ ನೀಡಬಲ್ಲವು; ಅಥವಾ ಸ್ಪಂದಿಸಬಲ್ಲವು. ನವ್ಯಕಲೆಯ ಮುಖ್ಯಲಕ್ಷಣಗಳಲ್ಲೊಂದಾಗಿ ವಿಕೃತಿಯನ್ನು ವಿಮರ್ಶಕರು ಗುರುತಿಸಿದ್ದಾರೆ. ೧೮೮೯ರ ನಂತರ ಯುರೋಪಿನಲ್ಲಿ ಆದಿಮಾನವನ ಕಲೆ ಪ್ರದರ್ಶಿಸಲ್ಪಟ್ಟ ನಂತರ ಆ ಕಲಾಪ್ರಕಾರಗಳನ್ನು ಅರಗಿಸಿಕೊಂಡ ಕಲಾವಿದರು ಸೌಂದರ್ಯಕ್ಕೆ ಹೊಸ ಅರ್ಥವನ್ನು ಅನ್ವೇಷಿಸಿಕೊಂಡರು. ನಗರೀಕರಣ, ಕೈಗಾರಿಕೀಕರಣ,

ಯುದ್ಧಗಳು, ಇತ್ಯಾದಿಗಳ ನಡುವೆ ನಲುಗಿದ ಮಾನವೀಯತೆಯ ವಿಕೃತಿಯನ್ನು ಕಲಾವಿದರು ತಲ್ಲಣಗೊಂಡವರಂತೆ ಕಂಡುಕೊಂಡರು. ಚಿತ್ರ ಶಿಲ್ಪಗಳಲ್ಲಿ ಅನನ್ಯವಾಗಿ ವಿಕೃತಿ ಕಾಣಿಸಿಕೊಂಡಿತು. ಆನಂತರದ ವಿಶ್ವಕಲಾ ಇತಿಹಾಸದಲ್ಲಿ ಹೊನೋರೆ ಡಾಮಿರ್, ಆಗಸ್ಟೆ ರೋಡಿನ್, ಬ್ರಾಂಕುಸಿ, ಪಿಕಾಸೋ, ಡಾಲಿ, ಹೆನ್ರಿಮೂರ್, ಬೇಕನ್ ಮೊದಲಾದವರ ಹಲವು ಸೃಷ್ಟಿಗಳು ವಿಕೃತಿಯ ಅನನ್ಯ, ವಿಶಿಷ್ಟ ಅಭಿವ್ಯಕ್ತಿಗಳಾಗಿವೆ. ಭಾರತದ ಸಂದರ್ಭದಲ್ಲಿ ಅಕಾಡೆಮಿಕ್ ಆದ ಹಾದಿಯನ್ನು ತಿರಸ್ಕರಿಸಿ ರಾಮ್ ಕಿಂಕರ್ ಬೈಜ್‌ರಂಥ ಕಲಾವಿದರು ವಿಕೃತಿಯನ್ನು ಗಮನಾರ್ಹ ರೀತಿಯಲ್ಲಿ ದುಡಿಸಿಕೊಂಡರು. ಹುಸೇನ್, ಸೌಝಾ, ಶಂಖಿಚೌದುರಿ, ರಾಘವ ಕನೇರಿಯಾ, ಸೋಮನಾಥ್ ಹೋರ್, ಕೆ.ಜಿ. ಸುಬ್ರಮಣಿಯನ್, ಧನರಾಜ್ ಭಗತ್, ಚಿಂತಾಮಣಿಕರ್, ಹಿಮ್ಮತ್‌ಷಾ, ಯುವ ಪೀಳಿಗೆಯ ಎನ್. ಎನ್. ರಿಮ್‌ಝೋನ್, ಅಲೆಕ್ಸ್‌ಮ್ಯಾಥ್ಯೂ, ಕೆ.ಪಿ. ಕೃಷ್ಣಕುಮಾರ್, ರಾಜಶೇಖರನ್ ನಾಯರ್, ಕರ್ನಾಟಕದ ವಾಸುದೇವ್, ಪುಷ್ಪಮಾಲಾ, ವೆಂಕಟಾಚಲಪತಿ, ಯುಸೂಫ್ ಅರಕ್ಕಲ್, ಭಾಸ್ಕರ್‌ರಾವ್, ದೇಶಪಾಂಡೆ, ಶ್ಯಾಮ್ ಸುಂದರ್, ಜಾನ್ ದೇವ್‌ರಾಜ್ ಮೊದಲಾದವರು ವಿಕೃತಿಯನ್ನು ತಮ್ಮ ಅಭಿವ್ಯಕ್ತಿಗೆ ಪೂರಕವಾಗಿ ದುಡಿಸಿಕೊಂಡಿದ್ದಾರೆ.

**ಕೆ.ವಿ.ಸು.**

## ವಿಚಾರ ಪ್ರಧಾನ ಕಲೆ (Conceptual Art)

೧೯೬೦, ೭೦,೮೦ರ ದಶಕದ ಈ ಕೃತಿಗಳ ಸೃಷ್ಟಿಯ ಹಿಂದೆ ಈ ಕೆಳಗೆ ಹೇಳಿದ ಒಂದಕ್ಕಿಂತ ಹೆಚ್ಚು ಕಾರಣಗಳಿರಬಹುದು.

(ಅ) ಕಲೆಗೆ ವಿಚಾರ, ಹೊಳಹು, ಮುಖ್ಯವಾದದ್ದು, ಅವು ಮಾನಸಿಕ ರೂಪದವು. ಅವಕ್ಕೆ ವಸ್ತುವಿನ ರೂಪಧಾರಣೆ ಮಾಡುವ ಅಗತ್ಯವಿಲ್ಲ,

(ಆ) ಭಾಷೆಯೇ ಕಲೆಯ ಮೂಲಾಧಾರವಾಗಿದ್ದು; ಕಲೆಗೂ ಕಲಾ ಚಿಂತನೆಗೂ ನಡುವೆ ಗಡಿಗಳು ಇರುವುದಿಲ್ಲ.

(ಇ) ಕಲಾಚಟುವಟಿಕೆಯನ್ನು ಕಲೆಯ ಲಕ್ಷಣಗಳನ್ನು ಶೋಧಿಸುವ ಕ್ರಿಯೆಯಾಗಿ, ಅವರಿಂದ ಹೊರಬಂದ ಕೃತಿಯನ್ನು ಮಧ್ಯಂತರ ಫಲಿತಾಂಶ ಎಂಬುದಾಗಿ ತಿಳಿಯಬೇಕೆ ಹೊರತು, ಕಲಾಕೃತಿ ನಿರ್ಮಾಣವೇ ಅಂತಿಮ ಉದ್ದೇಶವಲ್ಲ. ಸಾಲ್ ಲೆವಿಟ್, ಜೋಸೆಫ್, ಕೊಸ್ಯೂತ್, ಬ್ರೂಸ್ ನೂಮಾನ್ ಇವರು ಈ ಪಂಥದ ಪ್ರಮುಖ ಕಲಾವಿದರು.

**ರ.ಕಾ**

## ವಿಜಯನಗರ ಕಾಲದ ವಾಸ್ತುಶಿಲ್ಪ

ಕರ್ನಾಟಕದಲ್ಲಿ ವಿಜಯನಗರ ಸ್ಥಾಪನೆಯ ನಂತರ ಈ ಅರಸರು ದ್ರಾವಿಡ ಶೈಲಿಯನ್ನು ಮತ್ತೆ ಪುನರುಜ್ಜೀವನಗೊಳಿಸಿದರು. ಇದಲ್ಲದೆ ಹಿಂದೆ ಇದ್ದ ದೇವಾಲಯಗಳನ್ನು ವಿಸ್ತರಿಸಿದರು. ತೀರ್ಥ ಮಂಟಪ, ಕಲ್ಯಾಣ ಮಂಟಪ, ಸಾವಿರ ಕಂಬದ ಮಂಟಪಗಳು ಪ್ರವೇಶ ದ್ವಾರದ ಮಹಾಗೋಪುರಗಳು ಇವುಗಳಿಗೆ ಸೇರಿಕೊಂಡವು.

ಗ್ರಾನೈಟ್‌ಕಲ್ಲನ್ನು ಇವರು ದೇವಾಲಯಗಳಿಗೆ ಉಪಯೋಗಿಸಿದರು. ಇವರ ದೇವಾಲಯಗಳು ಚಾಳುಕ್ಯ ಹೊಯ್ಸಳ ದೇವಾಲಯಗಳಂತೆ ಮೂರ್ತಿ ಶಿಲ್ಪಗಳಿಂದ ಅಲಂಕೃತಗೊಂಡವು. ಈ ದೇವಾಲಯಗಳಲ್ಲಿನ ಕಂಬಗಳು ಸಂಕೀರ್ಣದ ರೀತಿಯಲ್ಲಿ ವಿಕಾಸಗೊಂಡವು. ಸಾಲುಗಂಬಗಳಿಗೆ ಸೇರಿದಂತೆ ಕುದುರೆಯಾಳಿಗಳ ಬೃಹತ್ ಶಿಲ್ಪಗಳನ್ನು ಹಿಂಗಾಲಿನ ಮೇಲೆ ಚಿಮ್ಮಿ ನಿಂತಂತೆ ಬಿಡಿಸಿರುವುದು, ದೊಡ್ಡದಾದ ಬಾಗುಲೋವಗೆ ಕಲ್ಲಿನ ಬಳೆಗಳನ್ನು ತೂಗು ಬಿಡುವುದು ಇವುಗಳ ವೈಶಿಷ್ಟ್ಯವಾಗಿದೆ.

ಅನೇಕ ಕಂಬಗಳ ಮೇಲೆ ನಿಂತ ವಿಶಾಲ ಹಜಾರಗಳು ಮಂಟಪಗಳಂತೆ, ತೆರೆದಿದ್ದು ಗಾಳಿ ಬೆಳಕು ಧಾರಾಳವಾಗಿ ಒಳಬರುವಂತೆ ಇರುತ್ತದೆ. ಈ ಕಂಬಗಳ ಮುಖಗಳ ಮೇಲೆಲ್ಲ ಹಲವು ಬಗೆಯ ಮೂರ್ತಿಗಳನ್ನು ಹೆಚ್ಚು ಹೆಚ್ಚಾಗಿ ಬಿಡಿಸಿರುತ್ತದೆ. ಗಟ್ಟಿಕಲ್ಲಿನಲ್ಲಿ ಕಟ್ಟಿದುವಾದ್ದರಿಂದ ಈ ದೇವಾಲಯಗಳು ಬೃಹತ್ ಗಾತ್ರವನ್ನು ತಳದವು. ವೀರಭದ್ರ, ನರಸಿಂಹ, ಗಣೇಶ, ಶಿವಲಿಂಗ, ನಂದಿ ಇತ್ಯಾದಿ ಪೂಜಾಮೂರ್ತಿಗಳನ್ನು ಬೃಹದಾಕಾರದಲ್ಲಿ ಇವರು ರಚಿಸತೊಡಗಿದರು.

ವಿಜಯನಗರದ ಅರಸರ ಕಾಲದಲ್ಲಿ ಮೂರ್ತಿ ಮತ್ತು ವಾಸ್ತುಶಿಲ್ಪ ಎರಡಕ್ಕೂ ಸಮಾನ ಪ್ರಾಧಾನ್ಯ ದೊರೆಯಿತು. ಅವರು ಕಟ್ಟಡಗಳನ್ನು ಅತ್ಯಂತ ಸುಭದ್ರವಾಗಿ ನಿರ್ಮಿಸಿದರು. ದೀರ್ಘ ಚತುರಸ್ತಕಾರದ ವಿನ್ಯಾಸದಲ್ಲಿ ಈ ದೇವಾಲಯಗಳನ್ನು ನಿರ್ಮಿತವಾಗಿದ್ದು ಇವುಗಳ ಗೋಡೆಗಳ ಮೇಲೂ ಪೌರಾಣಿಕ ಕಥೆಗಳು, ರಾಮಾಯಣ, ಭಾರತ, ಶಿವಲೀಲೆಗಳು, ನೃತ್ಯ ಪ್ರಾಣಿಪಕ್ಷಿಗಳು ಬಳ್ಳಿ ಸುರಳಿ ಮೊದಲಾದ ಶಿಲ್ಪಗಳು ತುಂಬಿದ್ದು ಮೂರ್ತಿಶಿಲ್ಪವು ನೋಡುವರ ಮನಸ್ಸನ್ನು ಆಕರ್ಷಿಸುತ್ತವೆ. ಮತ್ತು ಕಟ್ಟಡಗಳ ರಚನೆ ಮತ್ತು ಗಾತ್ರಗಳು ನೋಡುಗರನ್ನು ಬೆರಗುಗೊಳಿಸುತ್ತವೆ.

ವಿಜಯನಗರದ ಕಾಲದ ದೇವಾಲಯಗಳು ಆಯಾಸ್ಥಳದ ಧರ್ಮ, ಕಲೆ, ಸಂಸ್ಕೃತಿ, ಸಾಮಾಜಿಕ ನಡವಳಿಕೆಗಾಗಿ, ವಿದ್ಯಾಭ್ಯಾಸ, ಊರೊಟ್ಟಿನ ಕರ್ತವ್ಯಗಳು ಮುಂತಾದವುಗಳ ಕೇಂದ್ರಬಿಂದುವಾಗಿ ಬೆಳೆದುದರಿಂದಾಗಿ ದೇವಾಲಯಗಳ ಪ್ರಾಮುಖ್ಯತೆ ಹೆಚ್ಚಾಯಿತು. ಇದರಿಂದಾಗಿಯೇ ದೇವಾಲಯಗಳ ವಿಸ್ತರಣೆ ಅವಶ್ಯಕವಾಯಿತು. ಹಂಪೆಯಲ್ಲಿನ ವಿರೂಪಾಕ್ಷ ದೇವಾಲಯ ವಿಸ್ತರಣೆ ಮತ್ತು ಬೃಹದಾಕಾರದ ಗೋಪುರ, ವಿಜಯ ವಿಠ್ಠಲ ಸ್ವಾಮಿ ದೇವಾಲಯ, ಕೃಷ್ಣರಾಯನ ಗುಡಿ, ಅಚ್ಯುತರಾಯನ ಗುಡಿ, ಹಜಾರ ರಾಮಸ್ವಾಮಿ ಇವುಗಳಲ್ಲದೇ ಲೇಪಾಕ್ಷಿಯ ವೀರಭದ್ರದೇವಾಲಯ ತಾಡಪತ್ರಿಯಲ್ಲಿ ಚಿಂತಲರಾಯ ಕಟ್ಟಿಸಿದ ಶಿವಾಲಯ, ಕಂಚಿ, ಶ್ರೀರಂಗ, ಚಿದಂಬರ ಮೊದಲಾದೆಡೆಗಳಲ್ಲಿ ಅಲ್ಲಿದ್ದ ದೇವಾಲಯಗಳಿಗೆ ಸೇರಿಸಿದ ತೀರ್ಥಮಂಟಪ ವಿಶಾಲವಾದ ಮಂಟಪಗಳು, ಪ್ರವೇಶದ್ವಾರದ ಗೋಪುರಗಳು ಇವರ ಕಾಲದ ವಾಸ್ತುಶಿಲ್ಪಕ್ಕೆ ಸಾಕ್ಷಿಯಾಗಿ ನಿಂತಿವೆ.

ಶೃಂಗೇರಿಯಲ್ಲಿ ದ್ರಾವಿಡ ಹೊಯ್ಸಳ ಮತ್ತು ಇತರ ಶೈಲಿಗಳ ಸಮಿಶ್ರಣದಿಂದ ಎತ್ತರವಾದ ಜಗತಿಯ ಮೇಲೆ ಕಗ್ಗಲ್ಲಿನಲ್ಲಿ ಕಟ್ಟಿರುವ, ಮುಂಭಾಗ ಹಿಂಭಾಗಗಳು ಅರ್ಧ ವೃತ್ತಾಕಾರದಲ್ಲಿದ್ದು ಗೋಪುರ ವೃತ್ತಾಕಾರವಾಗಿ ಮೆಟ್ಟಿಲು ಮೆಟ್ಟಿಲಾಗಿ ಮೇಲೆದ್ದಿರುವ ಅಪೂರ್ವ ಶೈಲಿಯ ವಿದ್ಯಾಶಂಕರ ದೇವಾಲಯವು ಈ ಕಾಲದ ವಾಸ್ತುಶಿಲ್ಪ ಅದ್ಭುತಗಳಲ್ಲಿ ಒಂದಾಗಿದೆ. ವಿಜಯನಗರದ ಕಾಲದ ಲೌಕಿಕ ಕಟ್ಟಡಗಳು ಕೆಲವರು ಉಳಿದು ಬಂದಿದ್ದು ಇವುಗಳಲ್ಲಿ ಹಿಂದೂ ಮುಸ್ಲಿಂ ಶೈಲಿಯ ಪ್ರಭಾವ ಕಂಡುಬರುತ್ತದೆ.

ಹಿಂದೂ ಮುಸ್ಲಿಂ ಶೈಲಿಯ ಕಟ್ಟಡಗಳು ಇಟ್ಟಿಗೆ ಗಾರೆಗಳಿಂದ ನಿರ್ಮಿತವಾಗಿದ್ದು ಅರೆಗೋಲಾಕೃತಿಗಳನ್ನು ಹೊಂದಿದ ಕಮಾನು, ಗುಮ್ಮಟಗಳಿಂದ ಕೂಡಿವೆ. ವಿಜಯನಗರದ ಕಮಲ ಮಂದಿರ, ಆನೆಯ ಲಾಯ, ಮತ್ತು ಚಂದ್ರಗಿರಿಯಲ್ಲಿನ ಅರಮನೆಗಳನ್ನು ಉದಾಹರಿಸಬಹುದಾಗಿದೆ. ಮಹಾನವಮಿ ದಿಬ್ಬವು ಇವರ ಕಾಲದ ಒಂದು ವಿಶಿಷ್ಟ ರಚನೆಯಾಗಿದೆ. ಎತ್ತರವಾದ ದಿಬ್ಬದ ಮುಖಗಳ ಮೇಲೆ ಸಾಲು ಸಾಲಾಗಿ ಉಬ್ಬು ಚಿತ್ರಗಳಲ್ಲಿ ಕಂಡರಿಸಿದ ಬಗೆ ಬಗೆಯ ನೃತ್ಯಭಂಗಿಗಳು ಆನೆಕುದುರೆಗಳ ಮೆರವಣಿಗೆಗಳು ಪ್ರಾಣಿ ಪಕ್ಷಿಗಳಿಂದ ತುಂಬಿವೆ.

ಜೆ. ಟಿ. ಜ.

## ವಿತಾನ, ವಿತಾನಾಲಂಕರಣ

ವಿತಾನ ಅಥವಾ ಮೇಲ್ಕಟ್ಟು ಅಂದರೆ ಮೇಲ್ಛಾವಣಿ. ಇದು ಯಾವುದೇ ನಿರ್ಮಾಣಕ್ಕೂ ಇರತಕ್ಕುದ್ದಾಗಿದೆ. ಇದನ್ನು 'ಮುಚ್ಚಿಕೆ' ಎಂದು ಕೂಡ ಕರೆಯಲಾಗಿದೆ. ಇದನ್ನೇ 'ಪ್ರಾಚ್ಛಾದನ' ಎನ್ನಬಹುದು. ದೀರ್ಘಕಾಲ ನಿಲ್ಲಬೇಕಾದ ದೇವಾಲಯ ಛತ್ರ ಮುಂತಾದವುಗಳಿಗೆ ಕಲ್ಲಿನ ಮೇಲ್ಛಾವಣಿಗಳನ್ನು ಸಾಮಾನ್ಯವಾಗಿ ಬಳಸಲಾಗಿದೆ. ಕಟ್ಟಡದ ರಚನೆಯನ್ನನುಸರಿಸಿ ಮೇಲ್ಛಾವಣಿ ಹಲವು ವಿಧವಾಗಿರುತ್ತದೆ. ೧) ಪೂರ್ಣ ಚದುರವಾಗಿರುವುದು ೨) ಮಧ್ಯಭಾಗ ಎತ್ತರವಾಗಿದ್ದು ಸುತ್ತಲೂ ಬಾಗಿದಂತಿರುವುದು. ಹೀಗೆ ಇನ್ನೂ ಹಲವು ವಿಧಗಳಿವೆ.

ಯಾವುದೇ ಮಂಟಪದ ಮುಚ್ಚಿಕೆಯ ಒಳಮುಖದಲ್ಲಿ ರಚಿಸಿರುವ ಅಲಂಕರಣವನ್ನು 'ವಿತಾನಾಲಂಕರಣ'ಎನ್ನುವರು. ಅನೇಕ ಅಂಕಣಗಳಾಗಿ ವಿಭಾಗಿಸಲ್ಪಟ್ಟ ನವರಂಗದ ಪ್ರತಿ ಅಂಕಣದಲ್ಲೂ, ಆಲಯದ ಇತರ ಮಂಟಪಗಳಲ್ಲೂ ಈ ರೀತಿಯ ಅಲಂಕರಣವನ್ನು ಕಾಣುತ್ತೇವೆ. ಚಪ್ಪಟೆಯಾಗಿರುವ ವಿತಾನದಲ್ಲಿ ಪದ್ಮ, ಅಷ್ಟಾದಿಕ್ಪಾಲಕರು, ನಾಗ, ಸಪ್ತಮಾತೃಕೆಯರು, ಸೂರ್ಯ, ನಟರಾಜ ಮುಂತಾದವನ್ನು ಶಿಲ್ಪಿಸಿರುತ್ತಾರೆ. ಬಹುಮಟ್ಟಿಗೆ ಮೂಲದೇವರಿಗೆ ಸಂಬಂಧಿಸಿದಂತೆ ಇಲ್ಲಿ ಉಬ್ಬುಶಿಲ್ಪಗಳು ರೂಪ ತಾಳಿರುತ್ತವೆ. ಮಧ್ಯಭಾಗ ಎತ್ತರವಾಗಿದ್ದು ಸುತ್ತಲೂ ಬಾಗಿರುವಂತಿರುವ ವಿತಾನಗಳು, ವೃತ್ತ, ಅಷ್ಟ, ಷಟ್‌ರಸ್ರಾಕರದಲ್ಲಿದ್ದು ಹೆಚ್ಚು ಅಲಂಕೃತಗೊಂಡಿರುತ್ತವೆ-ಪದ್ಮಕೃತಿಯ ಚೌಕಟ್ಟಿನ ಮಧ್ಯದಲ್ಲಿ ವೃತ್ತಾಕಾರದಲ್ಲಿ ಅಧೋಮುಖಿಯಾದ ಕಮಲದ ಮೊಗ್ಗನ್ನು ಇವು ಹೊಂದಿರುವುವು. ಇದನ್ನು 'ಭುವನೇಶ್ವರಿ' ಎಂದೂ ವ್ಯವಹರಿಸುತ್ತಾರೆ.

ಹಿ.ವಿ.ಕೆ.

## ವಿದ್ಯುತ್ಪ್ರತಿ (Electrotype)

ಎಲೆಕ್ಟ್ರೋ ಪ್ಲೇಟಿಂಗ್‌ನಂತಹುದೇ ಇನ್ನೊಂದು ತಂತ್ರ. ಇದರಲ್ಲಿ ಒಂದು ಲೋಹದ ಮೇಲ್ಮೈನ ಉಬ್ಬು ತಗ್ಗುಗಳನ್ನು ಇನ್ನೊಂದು ಲೋಹದಲ್ಲಿ ತದ್ರೂಪವಾಗಿ ಪುನರ್‌ಸೃಷ್ಟಿಮಾಡಲು ಸಾಧ್ಯ. ೧೮೪೦ರಲ್ಲಿ ಇಂಗ್ಲೆಂಡ್‌ನಲ್ಲಿ ಕಂಡುಹಿಡಿಯಲಾದ ಈ ತಂತ್ರ ಮೇಲ್ಮೈಯೊಂದರ ಅತಿಸೂಕ್ಷ್ಮ ವಿವರಗಳನ್ನೂ ಸಹ ಕರಾರುವಾಕ್ಕಾಗಿ ಪುನರ್‌ಸೃಷ್ಟಿಮಾಡಲು ಬಹು ಉಪಯೋಗಕಾರಿಯಾಗಿದ್ದು ಸಾಂಪ್ರದಾಯಿಕವಾದ ಎರಕ ಹೊಯ್ಯುವ ರೂಢಿಯನ್ನೇ ಬದಲಿಸಿತು.

ರ. ಕಾಶಿ

## ವಿದ್ಯುಲ್ಲೇಪನ (Electroplating)

ಎಲೆಕ್ಟ್ರೋಲಿಸಿಸ್ ತಂತ್ರದಿಂದ ಒಂದು ಲೋಹದ ಮೇಲೆ ಇನ್ನೊಂದು ಲೋಹದ ಅತಿಸೂಕ್ಷ್ಮವಾದ ಪದರವೊಂದನ್ನು ಕೂಡಿಸುವ ವಿಧಾನ. ಜಿ. ಆರ್ ಎಲ್ಲಿಂಗ್ಟನ್ ಎಂಬುವನು ೧೮೪೦ರಲ್ಲಿ ಇದನ್ನು ಪೇಟೆಂಟ್ ಮೂಡಿಸಿದ. ಎಚ್ಚಿಂಗ್‌ನಲ್ಲಿ ಸತು ಅಥವಾ ತಾಮ್ರದ ಮೇಲೆ ಕಲಾವಿದ ಸೂಕ್ಷ್ಮವಾದ ಕೆಲಸವನ್ನು ಮಾಡಿದ್ದು ಅದರಿಂದ ಹೆಚ್ಚು ಪ್ರತಿಗಳನ್ನು ಮಾಡುವ ಅಗತ್ಯವಿದ್ದಾಗ, ಮುದ್ರಣಕ್ಕೆ ಮುಂಚೆ ಆ ಪ್ಲೇಟಿನ ಮೇಲೆ ಮೈಕ್ರಾನ್‌ನಷ್ಟು ಸೂಕ್ಷ್ಮವಾದ ಸ್ಟೀಲ್ ಪದರವನ್ನು ಮೂಡಿಸಲಾಗುತ್ತದೆ. ಇದರಿಂದ ಆ ಪ್ಲೇಟಿಗೆ ಮುದ್ರಣದ ಸಮಯದಲ್ಲಿ ದೃಢತೆ ಬರುವುದಲ್ಲದೆ, ತುಕ್ಕು ಹಿಡಿಯುವುದು ತಪ್ಪುತ್ತದೆ. ಶಿಲ್ಪದಲ್ಲಿಯೂ ಈ ತಂತ್ರವನ್ನು ಬಳಸಲಾಗುತ್ತದೆ.

ರ. ಕಾಶಿ

## ವಿದ್ಧ ಅವಿದ್ಧ ಇತ್ಯಾದಿ

ಶಾಸ್ತ್ರ ಗ್ರಂಥಗಳಲ್ಲಿ ವಿದ್ಧ ಅವಿಧ್ಧಗಳ ಪ್ರಸ್ತಾಪವಿದೆ. 'ವಿದ್ಧ' ಎಂದರೆ ಪೂರ್ತಿಯಾಗಿ ಕನ್ನಡಿಯಲ್ಲಿ ಕಾಣುವಂತೆ ತದ್ರೂಪವಾದ ಚಿತ್ರವೆಂದೂ, 'ಅವಿದ್ಧ' ಹಾಗೆ ಅಲ್ಲದೆ ಆಕಾರ ಮಾತ್ರವೇ ಆದ ರೂಪಚಿತ್ರ(ಕ್ಯಾರಿಕೇಚರ್)ವೆಂದೂ ವಿದ್ವಾಂಸರ ಅಭಿಪ್ರಾಯ. 'ಅವಿದ್ಧ' ಚಿತ್ರವೆಂದರೆ ಕಾಲ್ಪನಿಕ ಚಿತ್ರ. ಚಿತ್ರಕಾರನ ಭಾವೋಲ್ಲಾಸದ ಉತ್ಸಾಹದಲ್ಲಿ ಬರೆದ ಚಿತ್ರ ಎಂಬ ಅಭಿಪ್ರಾಯವೂ ಇದೆ. ರಾಘವನ್ ಅವರು 'ಅವಿದ್ಧ' ಪದವು ಶ್ರೀಕುಮಾರನ ಚಿತ್ರಸೂತ್ರದಲ್ಲಿ ಬರುವ 'ನಾಳ' ಹಾಗೂ ಅಭಿಲಕ್ಷಿತಾರ್ಥ ಚಿಂತಾಮಣಿಯ 'ಆಕಾರ ಮಾತೃಕಾ' ಪದಗಳಿಗೆ ಸಮಾನವೆಂದೂ ಕಲಾವಿದ ಕೆಲವೇ ರೇಖೆಗಳಲ್ಲಿ, ನೆನಪಿನಿಂದ ಬರೆದ, ಮೂಲವನ್ನು ಗುರುತಿಸಬಹುದಾಷ್ಟೇ ಹೋಲುವ ಚಿತ್ರವೆಂದೂ; ಹಾಗೂ 'ವಿದ್ಧ'ವು ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಬರುವ 'ಸತ್ಯ' ಎಂಬ ಪ್ರಕಾರದಂತೆ ತೀರ ತದ್ರೂಪವಾದ ಚಿತ್ರವೆಂದೂ ವಾದಿಸುತ್ತಾರೆ. ಶಬ್ದಕೋಶದಲ್ಲಿ 'ವಿದ್ಧ'ಕ್ಕೆ ಸದೃಶವಾದ, ಸಮಾನವಾದ ಎಂಬ ಅರ್ಥಗಳಿದ್ದರೂ, 'ರಂಧ್ರ , ಗಾಯಮಾಡಿದ, ಎಸೆದ' ಇತ್ಯಾದಿ ಅರ್ಥಗಳೂ ಇವೆ.

ಕಾವ್ಯಗಳಲ್ಲಿ ಶ್ರುತಿವಿದ್ಧ, ಆತ್ಮವಿದ್ಧ, ಪರವಿದ್ಧ, ರಸವಿದ್ಧ, ಅತಿವಿದ್ಧ, ನಿಜವಿದ್ಧ ಇತ್ಯಾದಿ ಪ್ರಯೋಗಗಳಿವೆ. ಇವುಗಳಲ್ಲಿ 'ಆತ್ಮವಿದ್ಧ'ವೆಂದರೆ ತನ್ನನ್ನು ತಾನೇ(self portrait) ಚಿತ್ರಿಸಿಕೊಳ್ಳುವುದು ಎಂದೂ 'ಪರವಿದ್ಧ'ವೆಂದರೆ ಎದುರಿಗೆ ಇಲ್ಲದ ವಸ್ತು ಅಥವಾ ಮನುಷ್ಯರ ಚಿತ್ರಣ ಎಂದು ಅರ್ಥೈಸಬಹುದು. ಕಾವ್ಯ ನಾಟಕಗಳಲ್ಲಿ ನಾಯಕ ನಾಯಕಿಯರು ಈ ರೀತಿ ಚಿತ್ರಿಸುವ ಸಂದರ್ಭಗಳನ್ನು ಕಾಣುತ್ತೇವೆ. 'ಶ್ರುತಿ'ಗೆ ಸಾಮಾನ್ಯವಾಗಿ 'ಶ್ರವಣ, ಕೇಳುವುದು' ಎಂಬ ಅರ್ಥದಂತೆ 'ಶ್ರುತಿ ವಿದ್ಧ 'ವೆಂದರೆ ಇತರರ ವರ್ಣನೆಯ ಆಧಾರದಿಂದ ರಚಿಸಿದ ಚಿತ್ರ ಎಂದು ಭಾವಿಸಬಹುದು. 'ರಸಚಿತ್ರ' ವೆಂದರೆ ನವರಸ ಭರಿತವಾದ ಚಿತ್ರ ಎಂದು ಹೇಳಬಹುದು. 'ಅತಿ' ಎಂದರೆ ಅತಿಶಯೋಕ್ತಿ ಸ್ವಭಾವವನ್ನು ಮೀರಿ ಹೇಳುವುದು ಎಂಬ ಅರ್ಥಗಳಿದ್ದು 'ಅತಿವಿದ್ಧ' ಎಂದರೆ ಅತಿಶಯಿಸಿದ (exagarated) ಚಿತ್ರವೆಂದು ಊಹಿಸಬಹುದು. ಮೇಲೆ ಹೇಳಿದಂತೆ ವಿದ್ಧವೆಂದರೆ ಕನ್ನಡಿಯಲ್ಲಿ ಕಂಡಂತೆ ತದ್ರೂಪವಾದ ಚಿತ್ರ ಎಂಬ ಅರ್ಥವಿದ್ದು 'ನಿಜವಿದ್ಧ'ಕ್ಕೂ ಇದೇ ಅರ್ಥವನ್ನು ವಿಸ್ತರಿಸಬಹುದು.

ಅಲಸ

## ವಿಷ್ಣುಧರ್ಮೋತ್ತರ ಪುರಾಣ

ವಿಷ್ಣುಧರ್ಮೋತ್ತರ ಪುರಾಣವನ್ನು ೨ರಿಂದ ೪ನೇ ಶತಮಾನದಲ್ಲಿ ರಚಿಸಿದಂತೆ ತಿಳಿದು ಬರುತ್ತದೆ. ಆದರೆ ಇದರಲ್ಲಿಯ ಚಿತ್ರಕಲಾ ವಿಚಾರವು ಏಳನೆಯ ಶತಮಾನದಲ್ಲಿ ಸೇರಿಕೊಂಡಿರ ಬೇಕೆಂದು ವಿದ್ವಾಂಸರ ಊಹೆ. ಇದರ ಮೂರನೇ ಖಂಡದ ಒಂದನೇ ಭಾಗದಲ್ಲಿ ಚಿತ್ರಕಲೆಯ ಬಗ್ಗೆ ವಿಸ್ತಾರವಾದ ಪ್ರಸ್ತಾಪ ಬರುತ್ತದೆ. ಗ್ರಂಥದ ಆದಿಯಲ್ಲಿ ವ್ರಜ ಮಹಾರಾಜನು ಮಾರ್ಕಂಡೇಯ ಮುನಿಯ ಉವಾಚದಂತೆ ದೇವತಾಗೃಹ ನಿರ್ಮಾಣ ಮಾಡಬಯಸಿದಾಗ ಮುನಿಯು ದೇವಾಲಯ ನಿರ್ಮಾಣಕ್ಕೆ ಶಿಲ್ಪವೂ; ಶಿಲ್ಪಕ್ಕೆ ಚಿತ್ರವೂ; ಚಿತ್ರಕ್ಕೆ ನೃತ್ಯ ಅದಕ್ಕೆ ವಾದ್ಯ ಮತ್ತು ಸಂಗೀತ, ಸಂಗೀತಕ್ಕೆ ಭಾಷೆ ತಿಳಿದಿರಬೇಕು ಎಂದು ಹೇಳಿ ಈ ಎಲ್ಲ ಲಲಿತಕಲೆಗಳನ್ನೂ ವಿವರಿಸುತ್ತಾನೆ. ಎಂದರೆ ಒಂದು ಕಲೆ ಇನ್ನೊಂದಕ್ಕೆ ಪೂರಕವಾಗಿರಬೇಕೆಂಬ ಅಭಿಪ್ರಾಯ ಇಲ್ಲಿದೆ. ಮುವ್ವತ್ತೈದನೆಯ ಅಧ್ಯಾಯದಿಂದ ಚಿತ್ರಶಾಸ್ತ್ರ ಆರಂಭವಾಗುತ್ತದೆ. ಅಂಗ ಪ್ರತ್ಯಂಗಗಳು ನವಸ್ಥಾನಗಳು, ಭಿತ್ತಿ. ಲೇಖನ ಸಾಮಗ್ರಿ, ವರ್ಣಗಳ ತಯಾರಿಕೆ ಬಳಕೆ. ಚಿತ್ರಗಳ ವೈವಿಧ್ಯ ಗುಣದೋಶಗಳು, ರಾಜಋಷಿ,ದೇವಮಾನವ ಇತ್ಯಾದಿ ಆಕಾರಗಳ ರಚನಾ ವಿಧಾನ ವೈವಿಧ್ಯತೆ ಆಭರಣ ಅಲಂಕಾರಗಳು ಇತ್ಯಾದಿ ಕುರಿತು ಹೇಳುತ್ತದೆ.

ನಲವತ್ತಮೂರನೆಯ ಅಧ್ಯಾಯದಿಂದ ತೊಂಬತ್ತ ಮೂರರವರೆಗೆ ಶಿಲ್ಪ ಕಲೆಗೆ ಮೀಸಲಾಗಿದೆ. ಶಿಲೆಯ ಪ್ರಕಾರಗಳು ಅವುಗಳ ಪರೀಕ್ಷೆ ಆಯ್ಕೆ ಇತ್ಯಾದಿಗಳಿಂದ ಹಿಡಿದು ಮೂರ್ತಿಯ ತಯಾರಿಕೆಯವರೆಗೆ, ಗಾರೆ, ಇಟ್ಟಿಗೆ, ಇತ್ಯಾದಿಗಳಲ್ಲಿ ಶಿಲ್ಪರಚನೆಯ ಬಗ್ಗೆ ವಿಸ್ತಾರವಾದ ವಿವರಣೆ ಬರುತ್ತದೆ. ದೇವರುಗಳ ಮೂರ್ತಿ ಲಕ್ಷಣಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿದೆ. ಕೊನೆಯ ಅಧ್ಯಾಯದಲ್ಲಿ ವಾಸ್ತುಪುರುಷನ ಬಗ್ಗೆ ವಿವರವಿದೆ. ಚರಾ, ಚರ ವಸ್ತುಗಳ ಬಗ್ಗೆ, ಜೀವಿ, ನಿರ್ಜೀವಿಗಳ ಬಗ್ಗೆ ಕಲಾವಿದ ಅರಿತು ಚಿತ್ರಿಸಬೇಕೆಂದು ವಿಸ್ತಾರವಾಗಿ ಬೋಧನೆಮಾಡುತ್ತದೆ.

ವಿಷ್ಣುಧರ್ಮೋತ್ತರ ಪುರಾಣದಲ್ಲಿ ಸತ್ಯ, ವೈಣಿಕ ಇತ್ಯಾದಿ ಕಲಾ ಪ್ರಕಾರಗಳ ಬಗ್ಗೆ ಹೇಳುವುದಲ್ಲದೆ, ಚಿತ್ರರಚನೆಯ ನಂತರ ಅವು ಹೆಚ್ಚು ಕಾಲ ಉಳಿಯಲೆಂದು ಕೈಗೊಳ್ಳಬೇಕಾದ ರಕ್ಷಣಾ ವಿಧಾನ (ಸ್ಥಂಭನ)ದ ಬಗ್ಗೆಯೂ ಹೇಳುತ್ತದೆ. ಮೂಲ ವರ್ಣಗಳು ಪಂಚವರ್ಣಗಳು ಮತ್ತು ಮಿಶ್ರ ವರ್ಣಗಳ ಬಗ್ಗೆ ಸಾಕಷ್ಟು ವಿವರಗಳಿದ್ದು ಗ್ರಂಥದ ರಚನಾಕಾಲಕ್ಕೆ ಚಿತ್ರಕಲೆ ಪ್ರಭುದ್ಧವಾಗಿ ಬೆಳೆದಿತ್ತೆಂದು ಹೇಳಬಹುದು. ಈ ಗ್ರಂಥವನ್ನು ಮೈಸೂರು ಒಡೆಯರು ೧೯೫೩ರಲ್ಲಿ ಸಂಕೀರ್ಘಟ್ಟಂ ವೆಂಕಟಾಚಾರ್ಯರಿಂದ ಕನ್ನಡಾನುವಾದ ಮಾಡಿಸಿ ಪ್ರಕಟಿಸಿದ್ದಾರೆ.

ಅಂನ

## ವೈಕಿಂಗ್ ಕಲೆ (Viking Art)

ಒಂಬತ್ತನೆಯ ಶತಮಾನದ ನಂತರ ಸ್ಕ್ಯಾಂಡಿನೇವಿಯದ ಸಮುದ್ರ ತೀರದಲ್ಲಿ ಬೆಳೆದು ಬಂದ ಕಲೆಯನ್ನು ವೈಕಿಂಗ್ ಕಲೆ ಎಂದು ಗುರುತಿಸಲಾಗುತ್ತದೆ. ನೌಕೆಗಳಲ್ಲಿ ಪ್ರಯಾಣಿಸುತ್ತಿರುವವರನ್ನು

ಅಪಹರಿಸಲು ಹಡಗುಗಳ್ವರು ತಯಾರಿಸಿಕೊಳ್ಳುತ್ತಿದ್ದ ಆಯುಧಗಳ ಮೇಲೆ ರಚಿತವಾದ ಕಲಾಕೃತಿಗಳು ವೈಕಿಂಗ್ ಕಲಾಮಾದರಿಗಳಾಗಿವೆ. ಈ ಕಲಾಕೃತಿಗಳು ಕಟ್ಟಿಗೆ, ಲೋಹ ಇಲ್ಲವೆ ಕಲ್ಲುಗಳ ಮೇಲೆ ಕೆತ್ತನೆಮಾಡಿದ ವಿಶಿಷ್ಟ ಬಗೆಯ ಕೆತ್ತನೆಗಳಾಗಿದ್ದು ಕುರುಚಲು ಉಬ್ಬು ಚಿತ್ರಗಳಾಗಿವೆಯಲ್ಲದೆ ವಸ್ತುವನ್ನು ಸುತ್ತುವರಿದ ಲತಾತಂತುಗಳನ್ನೂ ಆಶ್ಚರ್ಯವನ್ನು ಹುಟ್ಟಿಸುವ ಪ್ರಾಣಿಗಳ ಆಕೃತಿಗಳನ್ನೂ ಒಳಗೊಂಡವುಗಳಾಗಿರುತ್ತವೆ. ವೈಕಿಂಗ್ ಕಲೆಯು ಸೆಲ್ಟಿಕ್ ಕಲೆಯ ಮೂಲದಿಂದಲೇ ಉತ್ಪತ್ತಿಯಾಗಿದ್ದರೂ ಕ್ರೈಸ್ತ ಐಯರ್ಲಂಡ್ ಮತ್ತು ಅಲ್ಲಿನ ಸನ್ಯಾಸಿಗಳ ಆಕಸ್ಮಿಕ ಆಕ್ರಮಣದ ಹಾಗೂ ಧರ್ಮಪ್ರಚಾರಕರ ಪ್ರಭಾವವು ತೀವ್ರವಾಗಿರುವುದು ಕಂಡು ಬರುತ್ತದೆ. ೧೧ನೆಯ ಶತಮಾನವು ವೈಕಿಂಗ್ ಕಲೆಯ ಸುವರ್ಣಯುಗವಾಗಿತ್ತು.

ಶಾ.ದಿ.

## ವೈವಿಧ್ಯತೆ (Variety)

ಚಿತ್ರದ ಸಮಗ್ರತೆಯನ್ನು ಕಾಪಾಡುವಲ್ಲಿ ಪುನರಾವೃತ್ತಿಯ ಉಪಯೋಗ ಮಾಡಿದಂತೆಯೇ ಆದಕ್ಕೆ ವಿರುದ್ಧವೆನ್ನಬಹುದಾದ ವೈವಿಧ್ಯತೆಯನ್ನೂ ಸಹ ಉಪಯೋಗಿಸುತ್ತಾರೆ. ಒಂದೇ ವಸ್ತುವಿನಲ್ಲಿ ಸಾಂದ್ರತೆಯನ್ನು ವ್ಯತ್ಯಾಸಗೊಳಿಸುವುದು, ನವಿರಾದ ವರ್ಣ ಭೇದಗಳನ್ನು ಸೃಷ್ಟಿಸುವುದು ಈ ತಂತ್ರದ ಗುಟ್ಟು. ಅಬಾಕಾನೋವಿಸ್‌ನ ಬ್ಯಾಕ್ಸ್‌ನಲ್ಲಿ ಪ್ರತಿಮುಂಡವೂ ಇನ್ನೊಂದಕ್ಕಿಂತ ಸ್ವಲ್ಪ ವ್ಯತ್ಯಾಸಗಳನ್ನು ಹೊಂದಿದೆ. ಷೂಲೆಯ ನ್ಯೂಯಾರ್ಕ್, ನ್ಯೂಯಾರ್ಕ್‌ನಲ್ಲಿ ಗಗನ ಚುಂಬಿಗಳ ಗುಂಪೇ ಇದ್ದರೂ ಅವುಗಳ ಆಕಾರ, ಎತ್ತರ, ರೂಪಗಳು ಬೇರೆ ಬೇರೆ ಇರುವುದನ್ನು ಗಮನಿಸಬಹುದು. ಹಾಗೆಯೇ ವರ್ಣಗಳನ್ನು ಹಂತಹಂತವಾಗಿ ಬದಲಿಸುತ್ತಾ ಹೋಗುವ ಫ್ರಾಂಕೆಂಥಾಲ್‌ಳ ಚಿತ್ರಗಳೂ ಇದಕ್ಕೆ ಉದಾಹರಣೆ. ಸೂರ್ಯ ಪ್ರಕಾಶರ ಇತ್ತೀಚಿನ ಚಿತ್ರಗಳು ಇದಕ್ಕೆ ಉತ್ತಮ ಉದಾಹರಣೆ. ಪಾಯಿಂಟಲಿಸ್ಟ್ ಮಾದರಿಯ ಚುಕ್ಕಿಗಳ ಮೇಲ್ಪದರ ಇರುವ ಅವರ ಚಿತ್ರಗಳಲ್ಲಿನ ಯಾವುದೇ ಎರಡು ಚುಕ್ಕೆ ಒಂದೇ ತರಹ ಇಲ್ಲದಿರುವುದನ್ನೂ ಗಮನಿಸಬಹುದು. ಬಣ್ಣ, ಆಕಾರ, ಗಾತ್ರ, ಕುಂಚರೇಖೆತ ಯಾವುದಾದರೊಂದರಲ್ಲಿ ಭಿನ್ನತೆ ಇರುವಷ್ಟು ವೈವಿಧ್ಯಮಯವಾಗಿರುತ್ತವೆ. ನರೇಂದ್ರನಾಥ್‌ರ ಮೊದಲಿನ ಚಿತ್ರಗಳು, ಗಾಯತೊಂಡೆಯವರ ಚಿತ್ರಗಳು ಈ ದಿಶೆಯಲ್ಲಿ ಗಮನಿಸಬೇಕಾದ ಚಿತ್ರಗಳು ಓಪ್ ಕಲಾವಿದ ಅನುನುಸ್ಕೊವಿಸ್‌ನ ಚಿತ್ರದಲ್ಲಿನ ವರ್ಣಗಳು ಕೆಲವೊಮ್ಮೆ ಚಪ್ಪಟೆ ಬಣ್ಣದಂತೆ ಕಂಡರೂ ಕೂಲಂಕಷವಾಗಿ ನೋಡಿದಾಗ ಆ ವರ್ಣಗಳಲ್ಲಿ ಸಾಕಷ್ಟು ಪ್ರಭೇದಗಳನ್ನು ಗುರುತಿಸಬಹುದಾಗಿರುತ್ತದೆ.

ಇದಕ್ಕೆ ವಿಭಿನ್ನವಾಗಿ ತೀರಾ ಅಂತರವಿರುವಂತಹ ವರ್ಣ ಧೋರಣೆಯನ್ನು ಕೆಲವರು ವ್ಯಕ್ತಪಡಿಸುತ್ತಾರೆ. ಹಾನ್ಸ್‌ಹಾಫ್‌ಮನ್‌ನ ಕೆಲವು ಚಿತ್ರಗಳು, ಆದಿಮೂಲಂ, ಸಂತೋಷರ ಕೆಲವು ಚಿತ್ರಗಳಲ್ಲಿ ತೀರಾ ವೈರುಧ್ಯವಿರುವ ಬಣ್ಣಗಳ ಉಪಯೋಗ ಸಹ ಕಾಣಬಹುದು. ತೀರಾ ಅಂತರವಿರುವ ಬಣ್ಣಗಳು ಚಿತ್ರದ ಒಟ್ಟಂದವನ್ನು ಹಾಳು ಮಾಡುವುದೆಂಬ ವಾದ ನಿಜವಿರಬಹುದಾದರೂ ಈ ಚಿತ್ರಗಳಲ್ಲಿ ವೈರುಧ್ಯ ಚಿತ್ರದ ಚೌಕಟ್ಟನ್ನು ಬಲಪಡಿಸುತ್ತದೆ.

ರಜಾ

## ವೀಡಿಯೋ ಕಲೆ (Video art)

ಚಿತ್ರ ಮತ್ತು ಶಿಲ್ಪವನ್ನು ಹೊರತು ಪಡಿಸಿದ ಇತರ ದೃಶ್ಯಕಲಾ ಮಾಧ್ಯಮಗಳಲ್ಲಿ ಪರಿಸರ ಕಲೆ, ಘಟನಾವಳಿ ಕಲೆ(Happenings)ಗಳಂತೆ ವಿಡಿಯೋ ಕಲೆಯೂ ಪ್ರಮುಖವಾದುದು. ಆದರೆ ವ್ಯತ್ಯಾಸವೆಂದರೆ, ವಿಡಿಯೋ ಕಲೆಯು ಮುಖ್ಯವಾಗಿ ತಾಂತ್ರಿಕ, ಔದ್ಯೋಗಿಕ ವಸ್ತುವಾದ ಟೆಲಿವಿಷನನ್ನು ಹಿಂದಿನಕಾಲದ ಅರ್ಥದಲ್ಲಿ ಕ್ಯಾನ್ವಾಸ್ ಎಂದು ಭಾವಿಸುತ್ತಿದೆ.

ಮೊದಲ ಬಾರಿಗೆ ವಿಡಿಯೋ ಕಲೆ ಮೂಡಿದುದು ಆಂಡಿವಾರ್ ಹೋಲ್(Andy Waarhol) ನ(೧೯೬೩) 'ನಿದ್ರೆ' ಎಂಬ ದೃಶ್ಯಾವಳಿಗಳಿಂದ ಆರು ಘಂಟೆಗಳ ಕಾಲ ನಿದ್ರಿಸುತ್ತಿರುವ ಮನುಷ್ಯನ ದೃಶ್ಯಾವಳಿಗಳು ವಿಡಿಯೋ ಆರ್ಟ್‌ನಲ್ಲಿ ಬರತ್ತದೆ. ೧೯೬೪ರಲ್ಲಿ ಈತನದೇ ಆದ 'ಸಾಮ್ರಾಜ್ಯ' (Empire) ಎಂಬ ವಿಡಿಯೋದಲ್ಲಿ ನ್ಯೂಯಾರ್ಕ್ ನಗರದ ಎಂಪೈರ್ ಬಿಲ್ಡಿಂಗ್‌ನಲ್ಲಿನ ಚಟುವಟಿಕೆಗಳನ್ನು ೮ ಗಂಟೆಗಳ ಕಾಲ ಚಿತ್ರೀಕರಿಸಲಾಗಿದೆ.

ವಿಡಿಯೋ ಕಲೆಯ ಮೂಲಕ ಹೊರಗಿನ ಆಗುಹೋಗುಗಳನ್ನು ಮನುಷ್ಯ ಮನೆಯ ಒಳಗಿನಿಂದಲೇ ವೀಕ್ಷಿಸಬಹುದು. ಹಿಂದಿನ ರೂಢಿಯಂತೆ ಪುಸ್ತಕಗಳನ್ನು ಮನೆಯೊಳಗೆ ಕುಳಿತು, ಓದಿ ಬೇರೊಂದು ಲೋಕಕ್ಕೆ ಹೋಗುತ್ತಿದ್ದ ಓದುಗ, ಈಗ ವೀಡಿಯೋ ಕಲೆಯಿಂದ ಅದೇ ಪ್ರಯೋಜನ ಪಡೆಯತೊಡಗಿದ. ಆದರೆ ನಿಜವಾಗಿ ಒಂದು ಜಾಗಕ್ಕೆ ಹೋಗುವುದಕ್ಕೂ ಮನೆಯಲ್ಲಿ ಕುಳಿತೇ ಆ ದೃಶ್ಯಾವಳಿ ವೀಕ್ಷಿಸುವುದಕ್ಕೂ ವ್ಯತ್ಯಾಸವಿದೆ. ೧೯೨೦ರಲ್ಲಿ Egon Friedell ಎಂಬಾತ ತಿಳಿಸಿದಂತೆ ಈಜಿಪ್ಟ್ (Egypt) ದೇಶಕ್ಕೆ ಪ್ರಯಾಣ ಹೋದಾಗ ಆತನಿಗೆ



ರಿಚಹಾರ್ನ್ಸ್

ವಿಶೇಷವೇನೂ ಕಾಣಿಸಲಿಲ್ಲ. ಅದೇ ವಿಡಿಯೋದಲ್ಲಿ ಈಜಿಪ್ಟ್ ಒಂದು ಅದ್ಭುತ ರಮ್ಯಲೋಕವಾಗಿ ಆತನಿಗೆ ಕಂಡುಬಂದಿದ್ದಿತು.

ವಿಡಿಯೋ ಕಲಾವಿದರು ಬೇರೆ ಬೇರೆ ಕಲಾಕಾರರುಗಳಿಂದ ಬಂದವರಾಗಿರಬಹುದು. ಉದಾಹರಣೆಗೆ: ಪಾಯಿಕ್ (Paik) ಎಂಬಾತ ಸಂಗೀತದಿಂದಲೂ, ವೋಸ್ಟೆಲ್ (Vostel)ಎಂಬಾತ ಚಿತ್ರಕಲೆಯಿಂದಲೂ, ಬ್ರೂಸ್ ನೆಮ್ಯಾನ್ (Bruce nauman) ಎಂಬಾತ ಗ್ರಾಫಿಕ್ ಕಲೆಯಿಂದಲೂ, ವಿಟೋ ಅಕೊನ್ಸಿ(Vico Acconci) ಸಾಹಿತ್ಯದಿಂದಲೂ ವಿಡಿಯೋ ಕಲೆಗೆ ಸೃಷ್ಟಿಗಿಳಿದವರು

ಈ ಕಲಾವಿದರೆಲ್ಲರೂ ಬಹುಪಾಲು ೧೯೫೦ರ ನಂತರ ಜನಿಸಿದವರು. ಬಿಲ್ ವಯೊಲಾ (Bill Voila) ಎಂಬಾತ ಮಾತ್ರ ಚಿತ್ರಕಲೆಯ ಅಥವಾ ಇನ್ಯಾವುದೇ ಕಲೆಯ ರೂಪುರೇಷೆ ಕಲಿಯದಲೇ ವಿಡಿಯೋ ಕಲಾಸೃಷ್ಟಿಗೆ ನೇರವಾಗಿ ತೊಡಗಿಸಿಕೊಂಡ.

ಇಂದು ವಿಡಿಯೋ ದೃಶ್ಯಾವಳಿಗಳು ಪ್ರಪಂಚದ ಆಗು ಹೋಗುಗಳಿಗೆ ತೆರೆದ ಕಿಟಕಿಯಾಗಿದೆ. ಆದರೆ ಪ್ರಸಾರಾಂಗಣದಲ್ಲಿ ಬರುವ ನಿರ್ಜೀವ ದೃಶ್ಯಾವಳಿಗಳು ಬೇರೆ ಹಾಗೂ ಕಲಾವಿದ ಸೃಷ್ಟಿಸಿದ ದೃಶ್ಯಗಳೇ ಬೇರೆ ಕಲಾತ್ಮಕ ಅಂಶಗಳನ್ನೊಳಗೊಂಡಿರುತ್ತದೆ. ಕೆಲವೊಮ್ಮೆ ನೈಜ ದೃಶ್ಯವನ್ನು ಸೆರೆಹಿಡಿಯದೆಯೇ ಕಂಪ್ಯೂಟರ್ ಮುಖಾಂತರವೇ ನೈಜ ದೃಶ್ಯಗಳ ಅಸಹಜ ಅರೆ ಚಿತ್ರ (Blurred images) ಸೃಷ್ಟಿಸಿ 'ನಿಜವೋ' ಎಂಬಂತಹ ಭ್ರಮೆ ಹುಟ್ಟಿಸುತ್ತವೆ. ಇದು ವಿಡಿಯೋ ಕಲೆಯ ವಿಶೇಷತೆ.

Hanno Baethe ಎಂಬಾತನು 'Fairy Tales' (ದಂತಕಥೆಗಳು) ಎಂಬ ವೀಡಿಯೋ ಚಿತ್ರಣದಲ್ಲಿ ವಿಡಿಯೋ ಕಲೆ ಕುರಿತೇ ವಿಮರ್ಶೆ ನಡೆಸಿದ್ದಾನೆ. ಅಂದರೆ ವೀಡಿಯೋ (T. V.) ದೃಶ್ಯಾವಳಿಯು, ಅದು ನೈಜವೇ ಇರಬಹುದು ಅಥವಾ ಕೃತಕವಾದುದಿರಬಹುದು, ನಮ್ಮನ್ನು ದಂತಕತೆ ಎಳೆದುಕೊಂಡು ಹೋಗುವಂತಹ ಕಲ್ಪನಾ ಲೋಕಕ್ಕೆ ಕರೆದೊಯ್ಯುತ್ತದೆಂಬುದೇ ಈತನ (ಹ್ಯಾನ್ನೊಬೇಥೇ) ಅಭಿಪ್ರಾಯ

ಎಚ್. ಎ. ಅ.

## ಶಬಲ ಚಿತ್ರಗಳು (Mosaic)

ಮೂಲತಃ ಕಲ್ಲಿನ, ಅನಂತರ ಗಾಜಿನ ತುಣುಕುಗಳನ್ನು- ಮೊದಮೊದಲು ನೆಲದ ಮೇಲೆ, ಅನಂತರ ಗೋಡೆಗಳ ಮೇಲೆ ಗಚ್ಚು(ಗಾರೆ), ಸಿಮೆಂಟ ಮುಂತಾದ ಬಂಧಕಗಳ ಮೇಲೆ ಒತ್ತಿ ಇಟ್ಟು ರಚಿಸಿದವುಗಳು ಶಬಲ ಅಥವಾ ಸಂಕಲನ ಚಿತ್ರಗಳು. ಈಚೆಗೆ ಅಂಟು ಬಂಧಕಗಳಲ್ಲಿ ಬೇರೆ ಬೇರೆ ವಸ್ತು ಪದಾರ್ಥಗಳ ತುಣುಕುಗಳನ್ನು ಜೋಡಿಸಿ ಫಲಕಗಳ ಮೇಲೆಯೂ ಸಂಕಲನ ಚಿತ್ರಗಳನ್ನು ಬಿಡಿಸುತ್ತಾರೆ.

ಪ್ರಾಚೀನ ಬೆಬಿಲೋನಿಯಾದಲ್ಲಿ ಜೇಡಿಮಣ್ಣಿನ ಶಂಕುವಿನಾಕೃತಿಗಳನ್ನು ತಿರುವು-ಮುರುವಾಗಿ ಜೋಡಿಸಿ ಮಾಡಿದ ಸಂಕಲನ ಚಿತ್ರಗಳು ಪ್ರಚಲಿತವಾಗಿದ್ದವು. ಪ್ರಾಚೀನ ಶಾಸ್ತ್ರೀಯ ಪರಂಪರೆಯಲ್ಲಿ ಮೂರು ಪ್ರಕಾರದ ಸಂಕಲನ ಚಿತ್ರಗಳನ್ನು ಕಾಣಬಹುದು.

ಓಪಸ್ ಸೆಕ್ಟೈಲ್(Opus sectile)- ಇದರಲ್ಲಿ ವಿವಿಧ ಬಣ್ಣಗಳ ದೊಡ್ಡ ಆಕಾರದ ಫಲಕಗಳನ್ನು ವಿವಿಧ ನಕ್ಷಾಕೃತಿಗಳಿಗೆ ಹೊಂದುವಂತೆ ಕತ್ತರಿಸಿಕೊಂಡು ಜೋಡಿಸಲಾಗುತ್ತದೆ.

ಓಪಸ್ ಟೆಸ್‌ಲಾಟಮ್(Opus tesselatum)- ಇದು ಚಿಕ್ಕ ಚಿಕ್ಕ ಕಲ್ಲಿನ ಘನಾಕೃತಿಗಳಿಂದ ಜೋಡಿಸಿ ಮಾಡಿದ ಸಂಕಲನ ಚಿತ್ರವಾಗಿರುತ್ತದೆ.

ಓಪಸ್ ವರ್ಮಿಕ್ಯೂಲಟಮ್(Opus vermiculatum)- ಇವು ಇಂದಿನ ದಿನಗಳಲ್ಲಿ ನಾವು ಕಾಣುವ ಸಂಕಲನ ಚಿತ್ರಕೃತಿಗಳು. ಯಾವುದೇ ಒಂದೇ ತೆರನಾದ ಆಕಾರವನ್ನು ಹೊಂದಿರದ-ಉದ್ದ, ಚೌಕ ಮತ್ತು ವಜ್ರಾಕೃತಿ ತುಣುಕುಗಳನ್ನು ಜೋಡಿಸಿ ರಚಿಸಿದ್ದಾಗಿರುತ್ತದೆ.

ಸಂಕಲನ ರಚನೆಗಳನ್ನು ಪ್ರಧಾನವಾಗಿ ನೆಲದ ಹಾಸುಗಳಲ್ಲಿ ನಕ್ಷೆ ತೆಗೆಯಲು ಉಪಯೋಗಿಸಲಾಗುತ್ತಿತ್ತು. ಹಾಗೆಯೇ ಗೋಡೆಯ ಸಣ್ಣ ಆಕಾರದ ಅಲಂಕಾರಗಳಲ್ಲಿ ಚೌಕಟ್ಟು ಹಾಕಿದ ಚಿತ್ರಗಳಂತೆ ಉಪಯೋಗಿಸಿದರು. ಇಂಥ ರಚನೆಗಳು ಮೂಲದ ವಾಸ್ತುಶಿಲ್ಪಕ್ಕೆ ಪೂರಕವಾಗಿರುತ್ತಿದ್ದವು.

ಪ್ರಾಚೀನ ಕ್ರಿಶ್ಚಿಯನ್ನರಿಂದ ೪ನೆಯ ಶತಮಾನದಲ್ಲಿ ಸಂಕಲನ ಚಿತ್ರಗಳಿಗೆ ಒಂದು ವಿಶಿಷ್ಟ ಸ್ವರೂಪ ಪ್ರಾಪ್ತವಾಯಿತು. ಆಗ ಕೇವಲ ಲಂಬಗೋಡೆಗಳ ಮೇಲೆ ಅಲ್ಲದೆ ಚರ್ಚುಗಳ ಕಮಾನು, ಛತ್ತುಗಳ ಮೇಲೆಯೂ ಇಂಥ ಚಿತ್ರಗಳನ್ನು ರಚಿಸಲಾಯಿತು. ಇವು ದೇವಲೋಕದಿಂದ ಇಳಿದು ಬಂದ ದೇವತೆಗಳ ಸಮಾವೇಶದ ಭ್ರಮೆಯನ್ನುಂಟು ಮಾಡುತ್ತಿದ್ದವು.

ಇಂದು ಸಂಕಲನ ಚಿತ್ರ ರಚನೆಯಲ್ಲಿ ತುಂಬಾ ಬದಲಾವಣೆಗಳಾಗಿವೆ. ಜೋಡಿಸಬೇಕಾದ ತುಣುಕಿನ ಗಾತ್ರ, ಸ್ಥಳ ಇತ್ಯಾದಿಗಳು ಪೂರ್ವಭಾವಿಯಾಗಿಯೇ ನಿರ್ಧಾರಗೊಂಡಿರುತ್ತವೆ. ಇಂಥ ಚಿತ್ರಗಳನ್ನು ಸ್ಟುಡಿಯೋದಲ್ಲೇ ರಚಿಸಿ ಅನಂತರ ನಿಯೋಜಿತ ಸ್ಥಳದಲ್ಲಿ ಹೊಂದಿಸಬಹುದಾಗಿದೆ. ಆದರೆ ಕಲಾವಿದನ ಸ್ಫೂರ್ತಿ, ಕಲಾತ್ಮಕತೆಯ ದೃಷ್ಟಿಯಿಂದ ಇದು ಒಳ್ಳೆಯ ವಿಧಾನವೆನಿಸದು. ಇದಕ್ಕೆ ಬಳಸಲಾಗುವ ಸಾಮಗ್ರಿ ಮತ್ತು ರಚನಾ ತಂತ್ರಗಳಿಂದಾಗಿ ಅಂಟಿಸಿದ ತುಣುಕುಗಳ ಸುತ್ತಲಿನ ರೇಖೆಗಳು ಪ್ರಧಾನವಾಗಿ ವರ್ಣಚಿತ್ರದ ಅನುಭೂತಿ ಆಗದು.

೧೪ನೆಯ ಶತಮಾನದ ಹೊತ್ತಿಗೆ ಸಂಕಲನ ಚಿತ್ರಕಲೆಯ ಸ್ಥಾನವನ್ನು ಭಿತ್ತಿಚಿತ್ರಗಳು ಆಕ್ರಮಿಸಿದವು. ಈಚೆಗೆ ಸಂಕಲನ ಚಿತ್ರರಚನೆಯು ಒಂದು ಕಲಾಪ್ರಕಾರವಾಗಿ ಮತ್ತೆ ಪ್ರಚುರಗೊಂಡು ಸಾರ್ವಜನಿಕ ಕಟ್ಟಡಗಳ ಹೊರ ಒಳಭಾಗಗಳಲ್ಲಿ ಕಂಗೊಳಿಸುತ್ತಲಿದೆ.

**ಶಂ. ಮೂ.**

## ಶವದ ಪೆಟ್ಟಿಗೆ (Sarcophagus)

ಚಂದ್ರಕಾಂತಶಿಲೆ ಅಥವಾ ಅಮೃತಶಿಲೆಯಿಂದ ಮಾಡಿದ, ವಿಸ್ತೃತವಾದ, ಉತ್ತಮವಾಗಿ ಪರಿಷ್ಕರಿಸಿದ ಶವದ ಪೆಟ್ಟಿಗೆಗೆ ಸ್ಯಾರಕೋಫಾಗಸ್ ಎನ್ನುತ್ತಾರೆ. ಈ ಪೆಟ್ಟಿಗೆಯ ಮೂರು ಅಥವಾ ನಾಲ್ಕೂ ಬದಿಗಳಲ್ಲಿ ಉಬ್ಬುಚಿತ್ರ, ಅಲಂಕಾರ ಚಿತ್ರ ಅಥವಾ ಬರಹಗಳನ್ನು ಕೆತ್ತಿರುತ್ತಾರೆ. ಪೆಟ್ಟಿಗೆಯ ಮುಚ್ಚಳಗಳು ಸಾಮಾನ್ಯವಾಗಿ ತ್ರಿಕೋನಾಕೃತಿಯ ಇಲ್ಲವೆ ಶವದ

ಆಕಾರವನ್ನು ಹೊಂದಿರುತ್ತವೆ. ಶವದ ಕೊಳೆಯಿಸುವಿಕೆಯನ್ನು ತೀವ್ರಗೊಳಿಸಲು ಶವದ ಪೆಟ್ಟಿಗೆಯ ಸುತ್ತಲೂ ಸುಣ್ಣದ ಕಲ್ಲನ್ನು ಜೋಡಿಸುವ ಪದ್ಧತಿಯನ್ನು ಅನುಸರಿಸಿ ಬಂದ ಪದ ಸ್ಯಾರಕೋಫಾಗಸ್. ಯುರೋಪದಲ್ಲಿ ಕ್ರಿ. ಪೂ. ೫ ರಿಂದ ೧ ನೆಯ ಶತಮಾನ ಹಾಗೂ ೩ರಿಂದ ೫ನೆಯ ಶತಮಾನದ ಸ್ಯಾರಕೋಫಾಗಿಗಳು ಸ್ಮಾರಕ ಶಿಲ್ಪ ಮತ್ತು ಅವುಗಳ ತಂತ್ರ ಕುರಿತಾದ ತಿಳುವಳಿಕೆ ನೀಡುವ ಮೂಲ ಸಾಮಗ್ರಿಗಳಾಗಿವೆ.

ಅ.ಜಾ.

## ಶ್ರವಣಬೆಳಗೊಳ

ಇತಿಹಾಸ ಪ್ರಸಿದ್ಧ ಶ್ರವಣಬೆಳಗೊಳದ ಹಲವಾರು ಸ್ಥಳಗಳಲ್ಲಿ ಬೇರೆ ಬೇರೆ ಕಾಲದಲ್ಲಿ ರಚಿತವಾದ ಭಿತ್ತಿಚಿತ್ರಗಳಿವೆ. ಚಂದ್ರಗಿರಿಯ ಶಾಂತಿನಾಥಬಸ್ತಿಯಲ್ಲಿ ಪಕ್ಕದ ಭಿತ್ತಿಯಲ್ಲಿ ದ್ವಾರಪಾಲಕರು ಹಾಗೂ ಕತ್ತಲ ಬಸ್ತಿಯ ತೀರಾ ಒಳ ಅಂಕಣದ ಮೇಲ್ಭಾವಣಿಯಲ್ಲಿ ಕೆಲವು ಡಿಸೈನ್‌ಗಳೂ ಇವೆ. ಈ ಡಿಸೈನ್‌ಗಳನ್ನು ಹೊಯ್ಸಳರ ಕಾಲಕ್ಕೆ ಸೇರಿಸಬಹುದು. ಇವುಗಳ ಮೇಲೆಯೇ ಮೈಸೂರು ಅರಸರ ಕಾಲದಲ್ಲಿ ಬರೆಸಿದ ಡಿಸೈನ್‌ಗಳೂ ಇದ್ದು ಅಲ್ಲಲ್ಲಿ ಉದರಿದ್ದು ಹಿಂದಿನ ಹಳೆಯ ಚಿತ್ರ ಗೋಚರಿಸುತ್ತದೆ. ಊರಿನ ಮಧ್ಯದಲ್ಲಿಯ ಕಲ್ಯಾಣಿಯ ಮಂಟಪ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಿರ್ಮಾಣವಾಗಿದ್ದು ಅದರಲ್ಲಿ ಅಲ್ಲಲ್ಲಿ ಉಳಿದರುವ ಚಿತ್ರ ಈ ಕಾಲದವು.

ಸುಮಾರು ೩೦೦ ವರ್ಷ ಹಳೆಯದಾದ ಜೈನ ಮಠದಲ್ಲಿ ವಿಪುಲವಾದ ಭಿತ್ತಿಚಿತ್ರಗಳಿದ್ದು ಇವು ೧೮-೧೯ನೇ ಶತಮಾನದಲ್ಲಿ ರಚಿತವಾಗಿರಬಹುದು. ಪಾರ್ಶ್ವನಾಥನ ಭವಾವಳಿಗೆ ಹಾಗೂ ನಾಗಕುಮಾರ ಚಕ್ರವರ್ತಿಯ ಜೀವನಕ್ಕೆ ಸಂಬಂಧಿಸಿದ ಚಿತ್ರಗಳನ್ನು ವಿಸ್ತಾರವಾಗಿ ರಚಿಸಿದೆ. ಭರತನಿಗೆ ಸಂಬಂಧಿಸಿದ ಎರಡು ಅಂಕಣಗಳಿದ್ದು ಉಳಿದವು ನಾಶವಾಗಿದೆ. ಪಂಚಪರಮೇಷ್ಠಿಗಳು ಇತ್ಯಾದಿ ಜೈನಸಂಬಂಧಿ ಚಿತ್ರಗಳ ಎಡೆಯಲ್ಲಿ ಮುಮ್ಮಡಿಯವರ ಚಿತ್ರವೂ ಇದ್ದು ಇವು ನಂತರದ ಕಾಲದ್ದೆಂದು ತರ್ಕಿಸಲಾಗಿದೆ. ಆನೆ ಹಾಗೂ ಕ್ರೂರ ಮೃಗಗಳಿಂದ ತುಂಬಿದ ಅರಣ್ಯದ ಮಧ್ಯದಲ್ಲಿ ಮುನಿಯೊಬ್ಬ ತಪಸ್ಸು ಮಾಡುತ್ತಿರುವುದು, ಆರು ವಿಧದ ಮನೋಭಾವಗಳು(ಲೇಶ್ಯ) ಮನುಷ್ಯಾಕಾರದಲ್ಲಿ ಗಿಡವೊಂದರಿಂದ ಹಣ್ಣು ಕೀಳುತ್ತಿರುವ ಮೂಲಕ ಜೈನ ತತ್ವವೊಂದನ್ನು ಹೇಳುತ್ತಿರುವುದು, ವಿಸ್ತಾರವಾದ ಅಂಕಣದಲ್ಲಿ ರಥೋತ್ಸವ ಮತ್ತು ಜಾತ್ರೆಗಳ ಚಿತ್ರಣ ಇತ್ಯಾದಿಗಳನ್ನೂ ಸಹ ಇಲ್ಲಿ ಕಾಣಬಹುದು. ಚಿಕ್ಕ ಚಿಕ್ಕ ಅಂಕಣಗಳಲ್ಲಿ ಮೃದುವಾದ ಬಣ್ಣಗಳಿಂದ ರೇಖಾ ಪ್ರಧಾನವಾಗಿರುವ ಈ ಚಿತ್ರಣಗಳು ಅತ್ಯಂತ ಅಮೂಲ್ಯವಾದವು.

ಅಲಶ

## ಶಿರೋಕ್ಷ ಶಿಲ್ಪ (Bust)

ತಲೆ, ಕುತ್ತಿಗೆ ಮತ್ತು ಭಾಗಶಃ ತೋಳು, ಎದೆಯನ್ನು ಹೊಂದಿರುವ ಶಿಲ್ಪ.

ಸಾಮಾನ್ಯವಾಗಿ ಇದನ್ನು ಸ್ತಂಭದ ಮೇಲೆ ಇಲ್ಲವೆ ಎತ್ತರದ ಪೀಠದ ಮೇಲೆ ಇರಿಸಿರುತ್ತಾರೆ. ಪ್ರಾಚೀನ ಕಾಲದ ಗ್ರೀಕರು, ಇಜಿಪ್ತದ ಜನರು, ರೋಮನ್ನರು ಅನೇಕ ಶಿರೋಶಿಲ್ಪಗಳನ್ನು ನಿರ್ಮಿಸಿದರು. ಅವು ಆದರ್ಶೀಕೃತ ಮತ್ತು ಪ್ರಾತಿನಿಧಿಕ ಶಿಲ್ಪಗಳನ್ನು ಒಳಗೊಂಡಿವೆ.

ಹೀಗೆ ಕೆತ್ತನೆಗೆ ಒಳಗಾದ ಶಿರೋಕ್ಷ ಶಿಲ್ಪ ಕಲಾಕೃತಿಗಳು ಮಧ್ಯಯುಗದಲ್ಲಿ ತೀರ ಇಲ್ಲವಾಗಿ, ಕಲೆಯ ಪುನರುಜ್ಜೀವನದ ಕಾಲದಲ್ಲಿ ಮತ್ತೆ ಪೂರ್ಣವಾಗಿ ಚೇತರಿಸಿಕೊಂಡವು ಮತ್ತು ಬರೊಕ್ ಕಲೆಯ ಅವಧಿಯ ವರೆಗೂ ಚಾಚಿಕೊಡವು. ಬಹಳ ಹಿಂದೆಯೇ ಅನೇಕ ಶಿರೋಕ್ಷ ಶಿಲ್ಪಗಳ ಪ್ರಭೇದಗಳು ನಿಶ್ಶೇಷವಾಗಿ ರೋಡಿನ್, ಎಪಸ್ಟೀನ್‌ರಂತಹ ಕೆಲವು ಆಧುನಿಕ ಶಿಲ್ಪಿಗಳಿಂದ ಮಾತ್ರ ಭಾವನಾ ಪ್ರಧಾನ ಶಿರೋಕ್ಷ ಶಿಲ್ಪಗಳು ರಚಿತವಾಗಿವೆ. ಆದರೆ ಅಂತಹ ಶಿಲ್ಪಪ್ರಕಾರದ ಬಳಕೆ ಈಗ ಅಪರೂಪ.

ಶಿ.ಪ.

## ಶಾತವಾಹನರ ಕಲೆ

ಆಂಧ್ರದವರಾದರೂ ಕರ್ನಾಟಕದಲ್ಲಿಯೂ ಕ್ರಿಸ್ತಶಕದ ಆದಿಯಲ್ಲಿ ಶಾತವಾಹನರು ಕೆಲವು ವಾಸ್ತು ಶಿಲ್ಪಗಳನ್ನು ನಿರ್ಮಿಸಿದ್ದಾರೆ. ಬನವಾಸಿ ಹಾಗೂ ಸನ್ನತಿಗಳಲ್ಲಿ ಇಟ್ಟಿಗೆಯಲ್ಲಿ ನಿರ್ಮಿಸಿದ ಸ್ತೂಪಗಳ ತಳಭಾಗ ದೊರೆತಿದೆ. ಐಹೊಳೆ ಪಟ್ಟದಕಲ್ಲುಗಳಲ್ಲೂ ಇಟ್ಟಿಗೆಯ ಕಟ್ಟಡಗಳ ಅವಶೇಷಗಳಿವೆ. ಬಾದಾಮಿಯ ನಾಗ, ತಾಳಗುಂದದ ಪ್ರಣವೇಶ್ವರ ಈ ಕಾಲಕ್ಕೆ ಸೇರುವ ಶಿಲ್ಪಗಳು. ಚಂದ್ರವಳ್ಳಿ, ಹಿರೇಹಡಗಲಿ ಇತ್ಯಾದಿ ಕಡೆಗಳಲ್ಲಿ ಇವರ ಶಾಸನಗಳಿವೆ. ಈಚೆಗೆ ಸನ್ನತಿ ವಾಸನ ಕುದ್ರಗಿ ಇತ್ಯಾದಿ ಕಡೆಗಳಲ್ಲಿ ನಡೆದ ಉತ್ಖನನದಲ್ಲಿ ಶಾತವಾಹನರ ಅನೇಕ ಶಿಲ್ಪಗಳು ದೊರೆತಿವೆ. ಬುದ್ಧನ ಪಾದುಕೆಗಳನ್ನು ಪೂಜಿಸುತ್ತಿರುವವರು, ನಾಗ, ಯಕ್ಷರು, ರೆಕ್ಕೆಯುಳ್ಳ ಪ್ರಾಣಿಗಳು, ಇತ್ಯಾದಿಗಳು ದೊರೆತಿವೆ. ವ್ಯಾಪಾರಿ ಹಾಗೂ ಪ್ರವಾಸಿಗಳು ದಾರಿಯಲ್ಲಿ ಮಡಿದಾಗ ಶಿಲ್ಪಗಳಿಂದ ಕೂಡಿದ ಶಾಸನ ಸಹಿತ ಹಾಕಿಸುತ್ತಿದ್ದ ಆಯತಸ್ತಂಭ ಅಥವಾ ಛಾಯಾಸ್ತಂಭಗಳು ಹಲವಾರು ದೊರೆತಿವೆ. ಇಂತಹ ಹಲವಾರು ಕಲಾಕೃತಿಗಳನ್ನು ಗುಲಬರ್ಗದ ಪ್ರದರ್ಶನಾಲಯದಲ್ಲಿ ನೋಡಬಹುದು.

ಶಾತವಾಹನರ ಹಲವಾರು ಗುಹಾಲಯಗಳನ್ನು ಮುಂಬಯಿ ಬಳಿಯ ಕನ್ಹೇರಿ ಕಾರ್ಲ, ಬೇಡ್ಸ ಇತ್ಯಾದಿ ಕಡೆಗಳಲ್ಲಿ ಕಾಣಬಹುದು. ವಿಶಾಲವಾದ ಪ್ರಾರ್ಥನಾಮಂದಿರ ಅಲಂಕಾರಯುತ ಕಂಬಿಗಳು ಸ್ಥೂಲಕಾಯದ ಸ್ತ್ರೀ, ಪುರುಷರ, ಪ್ರಾಣಿಗಳ ಉಬ್ಬು ಶಿಲ್ಪಗಳು, ಎತ್ತರವಾದ ಬಾಗಿಲುವಾಡಗಳು ಅವುಗಳ ಮೇಲೆ ಕುದುರೆ ಲಾಳಾಕೃತಿಯ ಜಾಲಾಂಧ್ರ(ಕಿಟಕಿ)ಗಳು. ಬೌದ್ಧ ಭಿಕ್ಷುಗಳು ತಪಸ್ಸು ಮಾಡಲು ಅಲ್ಲಲ್ಲಿ ಸಣ್ಣ ಸಣ್ಣ ಕೊಠಡಿಗಳು ಇತ್ಯಾದಿಗಳನ್ನು ನೋಡಬಹುದು. ಬಿಡಿಯಾಗಿ ಕಟ್ಟಿದ ಚೈತ್ಯ, ಸ್ತೂಪಗಳು ಆಂಧ್ರಪ್ರದೇಶದ ಗೋಳಿ, ಜಗ್ಗಯಪೇಟ, ಭಟ್ಟಿಪ್ರೊಲು, ಘಂಟಸಾಲ ಇತ್ಯಾದಿಗಳಲ್ಲಿ ಕಾಣಬಹುದು. ಬೌದ್ಧ ತತ್ವದ. ಜಾತಕ ಕಥೆಗಳ ಅನೇಕ ಉಬ್ಬುಶಿಲ್ಪಗಳು ಬಿಡಿ ಫಲಕಗಳ ಮೇಲೆ ರಚಿಸಿರುವುದು ಅಮರಾವತಿ ಮತ್ತು ನಾಗಾರ್ಜುನಸಾಗರಗಳಲ್ಲಿ ಕಾಣಬಹುದು.

ಜಿ. ಟಿ. ದ.

# ಶಿಖರ

ಗರ್ಭಗೃಹದ ಮೇಲಿನ ಎತ್ತರವಾದ ಕಟ್ಟಡವನ್ನು 'ಶಿಖರ ಎಂದು ಕರೆಯುತ್ತಾರೆ. ಈ ಭಾಗವೂ ಒಳಗೊಂಡಂತೆ ಕೆಳಗಿನ ಅಧಿಷ್ಠಾನದವರೆಗಿನ ಪೂರ್ಣರಚನೆಯನ್ನು 'ವಿಮಾನ' ಎಂದು ವ್ಯವಹರಿಸುವುದು ಕಂಡುಬರುತ್ತದೆ. ಶಿಖರದ ಒಂದೊಂದು ಹಂತವು ಗೋಡೆಯಂತಹ ರಚನೆಯನ್ನು ಹೊಂದಿದ್ದು ಅನೇಕ ಅಲಂಕಾರಿಕ ಭಾಗಗಳಿಂದ ಕೂಡಿ ಹಂತ ಹಂತವಾಗಿ ಮೇಲೇರುವುದು, ಈ ಹಂತಗಳಿಗೆ 'ತಳ'ಗಳೆಂದು ಹೆಸರು. ಆಲಯವು ಹೊಂದಿರುವ ತಳಗಳ ಸಂಖ್ಯೆಯ ಆಧಾರದ ಮೇಲೆ 'ಅಲ್ಪವಿಮಾನ', 'ಮುಖ್ಯವಿಮಾನ'ವೆಂದು ವರ್ಗೀಕರಿಸಿರುತ್ತಾರೆ. ಪ್ರತಿತಳದಲ್ಲೂ 'ಕೂಟ, 'ಶಾಲಾ', 'ಪಂಜರ'ಗಳ ಅಲಂಕಾರವನ್ನು ಅಳವಡಿಸಿರುತ್ತಾರೆ ಇವೆಲ್ಲವನ್ನು ಸೇರಿರುವಂತೆ ಒಂದು ಸಣ್ಣ ಪಟ್ಟಿಯಿರುವುದು ಇದಕ್ಕೆ 'ಹಾರ' ಎಂದು ಹೆಸರು. ಯಾವುದೇ ಆಲಯವು ಒಂದು ಅಥವಾ ಹಲವು ತಳಗಳುಳ್ಳ ಶಿಖರವನ್ನು ಹೊಂದಿರಬಹುದು. ಶಿಖರವು ಮುಖ್ಯವಾಗಿ ವೇದಿ, ಗ್ರೀವ, ಸ್ತೂಪಿ, ಕಲಶ ಎಂಬ ನಾಲ್ಕು ಮುಖ್ಯ ಭಾಗಗಳನ್ನೊಳಗೊಂಡಿರುತ್ತದೆ.

ಪ್ರಸ್ತರದ ಮೇಲೆ ಕೂಟ ಶಾಲಾಗಳ ಹಾರದ ಕೆಳಗೆ ನಿರ್ಮಿತವಾಗಿರುವ ವಾಸ್ತು ಭಾಗವನ್ನು 'ವೇದಿ' ಎಂದು ಕರೆಯಲಾಗಿದೆ. ಇದು ಶಿಖರಕ್ಕೆ ಆಧಾರವಾಗಿದ್ದು ಮೇಲಿನ ಭಾರವನ್ನು ಹೊರಲು ಪೂರಕವಾಗುತ್ತದೆ. ಇದು ಪ್ರತಿ ತಳಗಳಲ್ಲೂ ಬರುವುದುಂಟು.

'ಗ್ರೀವ' ಅಥವಾ 'ಕಂಠ'ವು ಸ್ತೂಪಿಯ ಕೆಳಗಿನ ಭಾಗ. ಇದನ್ನು ಮೇಲಿನ ಸ್ತೂಪಿಯ ಆಕಾರವನ್ನು ಅನುಸರಿಸಿ ರೂಪಿಸಿರುತ್ತಾರೆ. ಸಾಮಾನ್ಯವಾಗಿ ಅಲಂಕಾರ ರಹಿತವಾಗಿರುತ್ತದೆ. ಕೆಲವೊಮ್ಮೆ ಕೋಷ್ಠಗಳಿರುವುದುಂಟು, ಆಗ ಅವನ್ನು ಗ್ರೀವ ಕೋಷ್ಠಗಳೆಂದು ಅವುಗಳಲ್ಲಿ ಮೂರ್ತಿಗಳಿದ್ದರೆ 'ಗ್ರೀವದೇವತಾ' ಎಂದು ಹೆಸರು. 'ಸ್ತೂಪಿ'ಯು 'ಗ್ರೀವ'ದ ಮೇಲಿನ ರಚನೆ. ಇದು ವಿವಿಧ ವಿನ್ಯಾಸಗಳಿಂದ ಕೂಡಿ ಆಲಯಕ್ಕೆ ಶೋಭೆಯನ್ನು ನೀಡುತ್ತದೆ. ಇದು ಚತುರಸ್ರ, ಅಷ್ಟಮುಖ ಇಲ್ಲವೆ ವೃತ್ತಾಕಾರವಾಗಿರುತ್ತದೆ. ವೃತ್ತಾಕಾರವಾಗಿದ್ದರೆ 'ರುದ್ರಛಂದ'ವೆಂದೂ, ಅಷ್ಟಾಸ್ರವಾಗಿದ್ದರೆ 'ವಿಷ್ಣುಛಂದ'ವೆಂದೂ ಚತುರಸ್ರವಾಗಿದ್ದರೆ 'ಬ್ರಹ್ಮಛಂದ'ವೆಂದು ಹೆಸರಿಸುತ್ತಾರೆ.

ಆಯಾ ದೇವತೆಗೆ ಸಂಬಂಧಿಸಿದ ಆಯುಧ, ವಾಹನ, ಚಿಹ್ನೆಗಳು ಶಿಖರದಲ್ಲಿಡಬೇಕೆಂದು ಶಾಸ್ತ್ರಗ್ರಂಥಗಳು ಹೇಳುತ್ತವೆ. ಅಂತೆಯೇ ತ್ರಿಶೂಲ, ಚಕ್ರಗಳಲ್ಲದೆ ಸ್ತೂಪಿಯ ಕೆಳಗ ವೇದಿಯ ಮೇಲೆ ನಾಲ್ಕೂ ತುದಿಗಳಲ್ಲಿ ನಂದಿ, ಸಿಂಹ, ಗರುಡ ಮುಂತಾದ ಶಿಲ್ಪಗಳನ್ನು ಕಾಣುತ್ತೇವೆ. ಇವು ಗರ್ಭಗುಡಿಯಲ್ಲಿರುವ ಮೂಲಮೂರ್ತಿಯ ವಾಹನ ಅಥವಾ ಲಾಂಛನಗಳಾಗಿರಬಹುದು.

ಸ್ತೂಪಿಯ ಮೇಲೆ ರಚಿಸುವ ಕುಂಬವೇ 'ಕಲಶ'. ಇದು ವಿಮಾನದ ಮೇಲ್ಕಟ್ಟಡದ ತುದಿ. ಶಾಸ್ತ್ರಗ್ರಂಥಗಳು ಇದನ್ನು 'ಕಾಮಕುಂಭ' ಎಂದು ಕರೆದಿವೆ. ಇದು ವಿಸ್ತೃತ 'ಮಹಾಪದ್ಮ'ದ ಮೇಲೆ ನಿಲ್ಲಿಸಿರುತ್ತಾರೆ. ಪ್ರಾಚೀನ ಕಲಶಗಳು ಕಲ್ಲಿನವಾಗಿದ್ದು, ಲೋಹದ ಕಲಶಗಳು ನಂತರದ ಬೆಳವಣಿಗೆಯಾಗಿದೆ. ಕಳಶವು ಅನೇಕ ಭಾಗಗಳನ್ನು ಒಳಗೊಂಡಿರುತ್ತದೆ. ಪಾದಗ್ರಾಹಿ, ಅಂಡ, ಗ್ರೀವ, ಪದ್ಮಪಟ್ಟಿಕಾ, ಕರ್ಣಿಕಾ ಮತ್ತು ಬೀಜಪೂರ(ಮೊಗ್ಗು) ಎಂಬುವವೇ ಅಂಗಗಳಾಗಿವೆ.

ಪಿವಿಕೆ

## ಶಿಲ್ಪ

ಶಿಲ್ಪ ಎಂದರೇ ಯಾವುದೇ ಒಂದು ವಾಸ್ತವಿಕ ಅಥವಾ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಗೆ ಶಿಲ್ಪ ಎನ್ನಬಹುದು. ಇದು ಅಸ್ತಿತ್ವದಲ್ಲಿರುವ ಅಥವಾ ಇಲ್ಲದಿರುವ, ಜೀವಂತ ಇಲ್ಲವೆ ಜಡ ವಸ್ತುಗಳ ಬಾಹ್ಯ ಆಕೃತಿಯಾಗಿದ್ದು, ಉದ್ದ, ಅಗಲ, ದಪ್ಪಗಳೆಂಬ ಮೂರು ಮಾನಗಳುಳ್ಳ ನಿರ್ಮಾಣದ ಮೂಲಕ ತೋರಿಸಬೇಕು. ಶಿಲ್ಪಿಯಾದವನು ಮೂರು ಮಾನಗಳುಳ್ಳ ಒಂದು ನಿರ್ಮಾಣವನ್ನು ಅನೇಕ ಬಗೆಯ ವಸ್ತುಗಳಿಂದ ರೂಪಿಸಬಹುದು. ಅವನು ಮೇಣ, ಜೇಡಿಮಣ್ಣುಗಳಿಂದ ಒಂದು ಆಕೃತಿ ರಚಿಸುವನು. ಇದಕ್ಕೆ ನಾವು 'ಆಕೃತಿ' ಎಂದು ಕರೆಯುತ್ತೇವೆ ಹಾಗೂ ಇದು ವಸ್ತುವಿನ ಹೊರ ಮೈಯ ತಳಗಳು ಪರಸ್ಪರ ಸಂಬಂಧವಿದ್ದು, ಅದು ನಮ್ಮ ಸಮೀಪಕ್ಕಿದೆಯೇ, ದೂರಕ್ಕಿದೆಯೇ, ಅದರ ಹಿಂದಣ ಮುಂದಣ ಭಾಗಗಳ ಅಂತರ ಎಷ್ಟು, ಅದೇ ರೀತಿಯಲ್ಲಿ ಮೇಲಿನ ಭಾಗ, ಕೆಳಗಿನ ಭಾಗದು - ಅಂತರ ಎಷ್ಟು ಹೇಗೆ - ಎಂಬುದರ ಪರಸ್ಪರ ಸಂಬಂಧಗಳನ್ನು ತೋರಿಸುವುದರಿಂದ ಒಂದು ಶಿಲ್ಪಕೃತಿಯಾಗುತ್ತದೆ. ಒಂದು ಶಿಲ್ಪ ತದ್ರೂಪವಾಗಬೇಕಿಲ್ಲ ಅಥವಾ ಅದು ನಮಗೆ ಪ್ರಕೃತಿಯಲ್ಲಿ ಕಾಣದೆ ಇರುವ ಯಾವುದೇ ವಸ್ತುವಿನ ಆಕಾರದ ಅನುಕರಣೆ ಸಹ ಆಗಬೇಕಿಲ್ಲ.

ಒಬ್ಬ ಶಿಲ್ಪಿ, ಒಂದು ಕೃತಿಯನ್ನು ನಿರ್ಮಿಸಲು ಆತ ತನ್ನ ಕಣ್ಣೆದುರಿಗೆ ಯಾವುದೇ ವಸ್ತುವನ್ನು ಇರಿಸಿಕೊಳ್ಳದೆ, ಹೊಸದಾದ ಆಕೃತಿಯನ್ನು ರಚಿಸಬಹುದು. ಒಂದು ಆಕೃತಿ ನಮ್ಮ



ಮೈಕೆಲ್ ಏಂಜಲೋ



ಗೊಮ್ಮಟೇಶ್ವರ

ಕಣ್ಣೆದುರಿಗೆ ಇದ್ದು, ಇಲ್ಲದಿರುವ ಆಕಾರದ ಅನುಕರಣೆಯಾಗಿರಬಹುದು. ಈ ಅನುಕರಣೆ ಮೂಲ ವಸ್ತುವಿನ ಆಕಾರದ ತದ್ರೂಪವಾದರೇ, ಅದನ್ನು 'ಪ್ರತಿಮೆ' ಎಂದು ಕರೆಯುವರು. ಒಬ್ಬ ಶಿಲ್ಪಿ ಚಿಕ್ಕ ವಸ್ತುವಿನಲ್ಲಿ ತಾನು ಗುರುತಿಸಿದ ಸೌಂದರ್ಯವನ್ನು, ಶಿಲ್ಪದ ಗಾತ್ರವನ್ನು ಹಿಗ್ಗಿಸಿ ತೋರಿಸಬಹುದು. ಶಿಲ್ಪಿಯಾದವನು ಅದರ ಆಕಾರವನ್ನು ಹಿಗ್ಗಿಸಿ, ಕುಗ್ಗಿಸಿ, ತೋರಿಸುವುದರ ಜೊತೆಗೆ, ಅಂತಹ ಆಕೃತಿಗಳಲ್ಲಿ ವಿವಿಧ ಅವಯವಗಳ ಪರಸ್ಪರ ಸಂಬಂಧವನ್ನು ಅಳವಡಿಸುವನು. ಶಿಲ್ಪಿ ತಾನು ತನ್ನ ಪರಿಸರದಲ್ಲಿ ಕಾಣುವ ಪ್ರಾಣಿ, ಮನುಷ್ಯ ಮುಂತಾದವರ ಆಕಾರಗಳ ಅನುಕರಣೆ ಮಾಡಿ, ಅವನ ಮನೋವಿಲಾಸಕ್ಕೆ ಹೊಂದಿಕೊಂಡಂಥ ಸೃಷ್ಟಿಗಳಾಗುತ್ತವೆ. ಅವನು ಮೂಲ ವಸ್ತುವಿನ ಅಂಗಗಳಾದ ತಳ, ಮೈವಳಿಕೆ, ಅಂಗಾಂಗಗಳಲ್ಲಿ ಕಾಣಿಸುವ ರೇಖೆ, ವಿವಿಧ ಲಕ್ಷಣಗಳನ್ನು ಹಿಗ್ಗಿಸಿ, ಕುಗ್ಗಿಸಿ ತನಗೆ ಬೇಕಾದ ರೀತಿಯಲ್ಲಿ ಆಯ್ದು, ಸಂಯೋಜಿಸುವನು ಅವನು ಸೌಂದರ್ಯವನ್ನು ಗಮನದಲ್ಲಿಟ್ಟುಕೊಂಡು, ಶಿಲ್ಪವನ್ನು ಸೃಷ್ಟಿಸುವನು.

ಶಿಲ್ಪಿ ತಾನು ರಚಿಸುವ ಶಿಲ್ಪವನ್ನು ಕಲ್ಲು,ಕಂಚು,ಲೋಹ,ಮೇಣ,ಮರ,ಅಮೃತಶಿಲೆ ಮುಂತಾದ ಮಾಧ್ಯಮಗಳಲ್ಲಿ ರಚಿಸುವನು. ಒಂದು ಶಿಲ್ಪಕೃತಿಗೆ ಅದರ ಆವರಣದೊಡನೆ ಇರುವ ಸಂಬಂಧವು ಶಿಲ್ಪಿ ಉದ್ದೇಶಿಸಿದ ವಿಷಯವನ್ನು ತಿಳಿಸಲು ಸಹಾಯಕವಾಗುತ್ತದೆ. ಉಬ್ಬುಗೆತ್ತನೆಯ ಶಿಲ್ಪಗಳನ್ನು ರಚಿಸುವುದು ಒಂದು ಪದ್ಧತಿಯಾಗಿದೆ. ಶಿಲ್ಪಿ ಒಂದು ಆಕೃತಿಯನ್ನು ಅವಕಾಶದಲ್ಲಿ ರೂಪಿಸುವನು. ಆಧುನಿಕ ಶಿಲ್ಪಿಗಳು ಇಂದು ವಸ್ತುಗಳ ಬಾಹ್ಯ ಆಕಾರವನ್ನು ಅನುಕರಿಸದೆ, ಹೊಸ ಸೃಷ್ಟಿಯಲ್ಲಿ ಶಿಲ್ಪಗಳನ್ನು ರಚಿಸುತ್ತಿದ್ದಾರೆ. ಈ ಕ್ಷೇತ್ರದಲ್ಲಿ ಬಹಳ ಹಿಂದಿನಿಂದ ಇಂದಿನ ತನಕ ಅನೇಕ ಪ್ರಯೋಗಗಳನ್ನು ಮಾಡುತ್ತ ಬಂದಿದ್ದಾರೆ.

ಮರಿ

## ಶಿಲ್ಪಶಾಸ್ತ್ರ ಗ್ರಂಥಗಳು

ವಾಸ್ತುಶಾಸ್ತ್ರ ಮತ್ತು ಶಿಲ್ಪರಚನಾಶಾಸ್ತ್ರಗಳೆರಡು ಸೇರಿ 'ಶಿಲ್ಪಶಾಸ್ತ್ರ'ವೆನ್ನಿಸಿದೆ. 'ಮಾನಸಾರ' 'ಮಯಮತ' 'ಕಶ್ಯಪಶಿಲ್ಪ' 'ವೈಖಾನಸಾಗಮ' 'ಸಕಲಾಧಿಕಾರ' 'ಪಂಚರಾತ್ರಾಗಮ' 'ಸಮರಾಂಗಣ ಸೂತ್ರಧಾರ' ಮೊದಲಾದವು ಪ್ರಸಿದ್ಧವಾದ ಶಿಲ್ಪಶಾಸ್ತ್ರ ಗ್ರಂಥಗಳಾಗಿವೆ. ಈ ಗ್ರಂಥಗಳಲ್ಲಿ ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರಗಳಿಗೆ ಸಂಬಂಧಿಸಿದಂತೆ ರಚನಾ ಪ್ರಮಾಣಗಳನ್ನು ಆಯಾ ಭಾಗದ ಶಿಲ್ಪದ ಲಕ್ಷಣಗಳನ್ನು ತಿಳಿಸಲಾಗಿರುತ್ತದೆ. ಶಿಲ್ಪಿಗಳ ಅರ್ಹತೆಯ ಬಗೆಗೂ, ಕಲಾಮಾಧ್ಯಮದ ಬಗೆಗೂ ವಿವರಗಳೂ ದೊರೆಯುತ್ತದೆ. ವಾಸ್ತು ಶಿಲ್ಪವನ್ನು ಪ್ರಮುಖವಾಗಿ, ೧)ಗೃಹವಾಸ್ತು ೨) ಪುರವಾಸ್ತು ಮತ್ತು ೩) ದೇವಾಲಯ ವಾಸ್ತುಗಳೆಂದು ವಿಂಗಡಿಸಿರುತ್ತಾರೆ. ಮೂರ್ತಿಶಿಲ್ಪಶಾಸ್ತ್ರದಲ್ಲಿ ದೇವತಾಮೂರ್ತಿ ರಚನೆ (ಮೂಲ ಬೇರದ ರಚನೆ), ಅಲಂಕಾರ ದೇವತಾ ಶಿಲ್ಪಗಳು ಮತ್ತು ಮಾನವ ಶಿಲ್ಪಗಳ ರಚನೆಗಳಲ್ಲಿ ವ್ಯತ್ಯಾಸವನ್ನು ಕಾಣಬಹುದು. ಮಾನಸಾರ ಗ್ರಂಥದಲ್ಲಿ ಗೃಹವಾಸ್ತು ರಚನೆಯ ಅಂಗಗಳನ್ನು ತಿಳಿಸಿರುವುದಲ್ಲದೇ ವಿವಿಧ ವರ್ಗದ ಜನರ ವಾಸಗೃಹಗಳ ನಿರ್ಮಾಣಕ್ಕೆ ಬೇಕಾದ ಸೂಕ್ತ ಸ್ಥಳಗಳ ಬಗೆಗೂ ತಿಳಿಸಲಾಗಿದೆ. ಪುರವಾಸ್ತುವಿನ ಬಗೆಗೆ ತಿಳಿಸುವಲ್ಲಿ-ಬೀದಿಗಳನ್ನು ರಚಿಸಲು ಇರುವ ನಿಯಮಗಳು, ದೇವಾಲಯಗಳ ರಚನೆ, ಹಲವು ಬಗೆಯ ನಗರಗಳ ವಿವರಗಳು, ವರ್ಣನೆಗಳೂ ಇವೆ. ರಾಜಗೃಹ ನಿರ್ಮಾಣದ ವಿವರಗಳೂ ಇವೆ.

ವಿಶೇಷವಾಗಿ 'ದೇವಾಲಯ ವಾಸ್ತು'ವನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ. 'ಗರ್ಭವಿನ್ಯಾಸ', ವಿಮಾನ, ವಿವಿಧಾಕಾರದ ಸ್ತಂಭಗಳ ರಚನೆ. ಗೋಪುರ ನಿರ್ಮಾಣ, ಮಹಾದ್ವಾರ, ವಾಹನಗಳು, ಮೊದಲಾದ ಹಲವು ಅಂಗಗಳ ರಚನೆಯ ಬಗೆಗೆ ತಿಳಿಸಲಾಗಿದೆ. ವೈದಿಕ ಮತದ ಅನೇಕ ದೇವ ದೇವತೆಗಳ ಲಕ್ಷಣಗಳನ್ನು ತಿಳಿಸಿದ್ದು ಗರ್ಭಗೃಹದಲ್ಲಿಡುವ ಮೂರ್ತಿ ರಚನೆಯ ವಿವರವೂ ಈ ಗ್ರಂಥದಲ್ಲಿದೆ. ವಿದ್ಯಾಧರರ ವಂದಿಮಾಗಧರ ಶಿಲ್ಪಗಳ ಬಗೆಗೂ ತಿಳಿಸಿದೆ. ಜೈನ ಮತ್ತು ಬೌದ್ಧ ಮತದ 'ಶಿಲ್ಪಲಕ್ಷಣ'ಗಳನ್ನು ತಿಳಿಸಿರುವುದು ಗಮನಾರ್ಹವಾಗಿದೆ. ಶಿಲ್ಪರಚನೆಯಲ್ಲಿ ಅಂಗಾಂಗ ವಿನ್ಯಾಸಗಳೂ ಅಯಾ ಮೂರ್ತಿಗೆ ಸಂಬಂಧಿಸಿದ ವಿಶೇಷ ಲಕ್ಷಣಗಳನ್ನು ಸೂಚಿಸಲಾಗಿದೆ. ಮೂರ್ತಿ ಪ್ರತಿಷ್ಠಾಪನ ಸಮಯದಲ್ಲಿ ಆಚರಿಸಬೇಕಾದ 'ಸಂಸ್ಕಾರವಿಧಿಗಳನ್ನೂ' ದೇವಾಲಯ ನಿರ್ಮಾಣ ಮಾಡಿಸಿದ ದಾತರಿಗೆ ನಿರ್ಮಿಸಿದ ಶಿಲ್ಪಿಗಳಿಗೆ ಒದಗುವ ಶುಭಾಶುಭಗಳನ್ನೂ ತಿಳಿಸಿದೆ.

'ಮಯಮತ'ವು ಆರಂಭದಲ್ಲಿ "ಕಟ್ಟಡವನ್ನು ಕಟ್ಟಲು ಪ್ರಾರಂಭಿಸಿದಾಗ ವಾಸ್ತುಪುರುಷನನ್ನು ತೃಪ್ತಿಪಡಿಸಲು ಮಾಡಬೇಕಾದ ಸಂಸ್ಕಾರ ವಿಧಿ ವಿಧಾನಗಳನ್ನು ತಿಳಿಸಿದೆ. ಇದರಂತೆ ಕಟ್ಟಡದ ಆರಂಭ ಕಾಲದಲ್ಲಿ ಹಾಕುವ ಕಲ್ಲು ಮುಗಿಯುವ ಮುನ್ನ ಇಡುವ ಕೊನೆಯ ಕಲ್ಲುಗಳ ಸನ್ನಿವೇಶದಲ್ಲಿ ಮಾಡುವ 'ಸಂಸ್ಕಾರ'ದ ಬಗೆಗೆ ತಿಳಿಸಿದೆ. ಕಾಶ್ಯಪಶಿಲ್ಪವು ಶಿವನು ಕಾಶ್ಯಪನಿಗೆ ತಿಳಿಸಿದಂತೆ 'ಶಿಲ್ಪಶಾಸ್ತ್ರದ ವಿವರಗಳು ಮೂಡಿದ್ದು ಇದು ಶೈವ ಆದ್ಯಗ್ರಂಥವಾಗಿದೆ. ವೈಖಾನಸಾಗಮ, ಪಂಚರಾತ್ರಗಮಗಳು ವೈಷ್ಣವರ ಶಿಲ್ಪಶಾಸ್ತ್ರ ಗ್ರಂಥಗಳೆನ್ನಿಸಿವೆ. ವೈಖನಾಸಾಗಮದಲ್ಲಿ ಶಿಲ್ಪಶಾಸ್ತ್ರಕ್ಕಿಂತ ಕರ್ಮಕಾಂಡವೇ ಹೆಚ್ಚಾಗಿ ತಿಳಿಸಿದ್ದು, ಈ ಗ್ರಂಥದಲ್ಲಿ ಬ್ರಾಹ್ಮಣರ ನಿವಾಸಗಳನ್ನು ಕಟ್ಟಿದರೆ ಬರುವ ಪುಣ್ಯ, ವಿಷ್ಣು ದೇವಾಲಯಗಳ ನಿರ್ಮಾಣದ ಮಹತ್ವವನ್ನು ತಿಳಿಸಿದೆ. 'ಸಕಲಾಧಿಕಾರ'ದ ಕರ್ತೃ ಅಗಸ್ತ್ಯಋಷಿ ಇದು ಬಹುದೊಡ್ಡ ಗ್ರಂಥವಾಗಿದ್ದು, ಕೆಲಭಾಗಗಳು ಮಾತ್ರ ಉಪಲಬ್ಧವಿವೆ. ಇದರ ವಿವರಗಳು ಬಹುಮಟ್ಟಿಗೆ ಮಾನಸಾರದ ವಿವರವನ್ನು ಹೋಲುತ್ತದೆ.

ಈ ಗ್ರಂಥಗಳೆಲ್ಲವು ಸುಮಾರು ನಾಯನಾರ್, ಅಪ್ಪರ್‌ರ ಕಾಲಾನಂತರದಲ್ಲಿ ರಚಿತವಾಗಿವೆ. ಪರಿವಾರದೇವತೆಗಳಾಗಿ ಶಿವಾಲಯಗಳಲ್ಲಿ ಇವರ ಮೂರ್ತಿಗಳಿರಬೇಕೆಂದು ಗ್ರಂಥಗಳು ಸೂಚಿಸಿದ್ದು, ಅವರ ಲಕ್ಷಣಗಳನ್ನು ತಿಳಿಸಲಾಗಿದೆ. ನಯನಾರರ ಶಿಲ್ಪಗಳ ಉಲ್ಲೇಖವಿರದ ಪೂರ್ಣವಾಗಿ ದೊರೆತಿರದ ಬಹು ವಿಸ್ತಾರವಾದ 'ಸಕಲಾಧಿಕಾರ'ವೇ ಪ್ರಾಚೀನ ಗ್ರಂಥವಿರಬೇಕೆಂದು ಭಾವಿಸಬಹುದಾಗಿದೆ.

**ದೇಕೊರೆ**

## ಶಿಲಾಯುಗ

ಆದಿಮಾನವನು ಜೀವಿಸಿದ್ದ ಕಾಲವನ್ನು ಶಿಲಾಯುಗವೆಂದು ಕರೆಯಲಾಗಿದೆ. ಶಿಲಾಯುಗದ ಕಾಲಾವಧಿಯು ಕ್ರಿಸ್ತಪೂರ್ವ ೬೦೦,೦೦೦ದಿಂದ ಕ್ರಿಸ್ತ ಪೂರ್ವ ೮,೦೦೦ವರುಷಗಳಷ್ಟು ದೀರ್ಘಾವಧಿಯದಾಗಿದೆ. ಶಿಲಾಯುಗವನ್ನು ಪೂರ್ವ ಪ್ರಾಚೀನ ಶಿಲಾಯುಗ, ಪ್ರಾಚೀನ ಶಿಲಾಯುಗ, ಮಧ್ಯ ಶಿಲಾಯುಗ ಹಾಗೂ ನೂತನ ಶಿಲಾಯುಗಗಳೆಂದು ವಿಂಗಡಿಸಲಾಗಿದೆ.

೧. **ಪೂರ್ವ ಪ್ರಾಚೀನ ಮತ್ತು ಪ್ರಾಚೀನ ಶಿಲಾಯುಗ**- (ಕಾಲ-ಕ್ರಿ. ಪೂ. ೬೦೦,೦೦೦ದಿಂದ ಕ್ರಿ. ಪೂ. ೭೦,೦೦೦ ಮತ್ತು ಕ್ರಿ. ಪೂ ೬೦,೦೦೦ ದಿಂದ ಕ್ರಿ. ಪೂ. ೧೦,೦೦೦) ಈ ಯುಗಗಳಲ್ಲಿ ಅಬ್ಬೆವ್ವೇಲಿಯನ್, ಕ್ಲ್ಯಾಕ್ಟೋನಿಯನ್, ಅಚ್ಯುಲಿಯನ್, ಟಯಾಸಿಯನ್, ಲೆವಲೊಯ್ಸಿಯನ್, ಮೊಸ್ಟೇರಿಯನ್, ಆರಿಗ್ನ್ಯಾನಿಯನ್, ಸೊಲ್ಯೂಟ್ರಿಯನ್ ಮತ್ತು ಮಾಗ್ಡಾಲೀನಿಯನ್ ಮುಂತಾಗಿ ಅನೇಕ ಸಂಸ್ಕೃತಿಗಳಿರುತ್ತವೆ. ಆರಿಗ್ನ್ಯಾಸಿಯನ್, ಸೊಲ್ಯೂಟ್ರಿಯನ್ ಮತ್ತು ಮ್ಯಾಗ್ಡಾಲೀನಿಯನ್ ಸಂಸ್ಕೃತಿಗಳ ಕಾಲ ಕ್ರಿ.ಪೂ. ೬೦,೦೦೦ದಿಂದ ಕ್ರಿ.ಪೂ. ೨೦,೦೦೦ ವರುಷಗಳ ಹಿಂದಿನ ಕಾಲ. ಮಾನವನ ಮೊಟ್ಟ ಮೊದಲ ಕಲಾಕೃತಿಯ ರಚನೆಯು ಆರಿಗ್ನ್ಯಾಸಿಯನ್ ಕಾಲದಲ್ಲಿ ಅಂದರೆ ಕ್ರಿ.ಪೂ. ೬೦,೦೦೦ದಿಂದ ಕ್ರಿ.ಪೂ. ೪೦,೦೦೦ ವರುಷಗಳ ಹಿಂದೆಯೇ ಆಯಿತು. ಈ ಯುಗಗಳ ಮಾನವರು ಸಂಚಾರಿ ಬೇಟೆಗಾರರಾಗಿದ್ದರು.

೨. **ಮಧ್ಯ ಶಿಲಾಯುಗ**-(ಕಾಲ-ಕ್ರಿ.ಪೂ. ೯,೦೦೦ ದಿಂದ ಕ್ರಿ.ಪೂ ೫,೦೦೦) ಅಝಿಲಿಯನ್, ಸಾವೆಟರಿಯನ್, ಟಾರ್ಡೆನೊಯ್ಸಿಯನ್, ಮ್ಯಾಗ್ಲೆಮೋಸಿಯನ್, ಕ್ಯಾಂಪಿಗ್ನಿಯನ್, ಕ್ಯಾಪ್ಸಿಯನ್, ನ್ಯಾಟುಫಿಯನ್ ಮುಂತಾಗಿ ಅನೇಕ ಸಂಸ್ಕೃತಿಗಳನ್ನು ಕಂಡುಹಿಡಿಯಲಾಗಿದೆ. ಈ ಕಾಲದಲ್ಲಿ ಮಾನವನು ಬೇಟೆಯ ಜೊತೆಗೆ ಸೊಗಸಿಗಾಗಿ ಮೀನು ಮತ್ತು ಪಕ್ಷಿಗಳನ್ನು ಹಿಡಿಯುವದನ್ನೂ ನಾಯಿಗಳನ್ನು ಸಾಕಿ ಪಳಗಿಸುವ ಕಲೆಯನ್ನೂ ತಿಳಿದಿದ್ದನು. ಮಧ್ಯ ಶಿಲಾಯುಗದ ಜನಾಂಗಗಳು ಏಷ್ಯದ ಸಿರಿಯಾ ಮತ್ತು ಪ್ಯಾಲೆಸ್ಟೈನ್‌ಗಳಲ್ಲಿ ನೆಲೆಸಿದ್ದವೆಂದು ತಿಳದು ಬಂದಿದೆ.

ಯುರೋಪಿನ ಪಶ್ಚಿಮ ಭಾಗದಲ್ಲಿಯೂ ಫ್ರಾನ್ಸ್, ಇಟಲಿ, ಸ್ಪೇನ್, ಆಫ್ರಿಕಾ ಹಾಗೂ ಭಾರತ ದೇಶಗಳಲ್ಲಿ ಪ್ರಾಚೀನ ಶಿಲಾಯುಗಗಳ ಮಾನವರು ವಾಸಿಸಿದ್ದ ಅಸಂಖ್ಯಾತ ಗವಿಗಳು ಕಂಡು ಬಂದಿವೆ. ಎಲುಬಿನ ಉಪಕರಣಗಳ ಮೇಲೆಯೂ ಆಯುಧಗಳ ಮೇಲೆಯೂ ಕೊರೆದು(Carved) ಹಾಗೂ ಕೆತ್ತನೆ ಮಾಡಿ(engraved) ತಯಾರಿಸಿದ ಚಿತ್ರಗಳೂ, ಎಲುಬಿನಿಂದಲೂ ಮಣ್ಣಿನಿಂದಲೂ ತಯಾರಿಸಿದ ಚಿಕ್ಕ ಚಿಕ್ಕ ಪ್ರತಿಮೆಗಳೂ ಈ ಕಾಲದ ಮಾನವರ ಅತ್ಯುತ್ತಮ ಕಲಾಕೃತಿಗಳಾಗಿವೆ. ಪಶ್ಚಿಮ ಫ್ರಾನ್ಸ್‌ನಿಂದ ಪೂರ್ವ ರಷ್ಯದವರೆಗಿನ ಭಾಗದಲ್ಲಿ ಕಲ್ಲು, ಹಸ್ತಿದಂತಗಳಲ್ಲಿ ಕೊರೆತದ ಹಾಗೂ ಕೆತ್ತನೆ ಮಾಡಿದ ಚಿತ್ರಗಳು ಅಸಂಖ್ಯ ಸಂಖ್ಯೆಯಲ್ಲಿ ದೊರಕಿವೆ. ಪ್ರಾಚೀನ ಶಿಲಾಯುಗಗಳ ಜನರು ತಮ್ಮ ಕಾಲದಲ್ಲಿ ಜೀವಿಸಿದ್ದ ಕಾಡುಕೋಣ, ಕಾಡುಕುದುರೆಗಳು, ಮಮಾಥ್, ಗವಿ ಕರಡಿ, ಕಾಡು ಹಂದಿ, ತೋಳ ಮುಂತಾದ ಕಾಡು ಪ್ರಾಣಿಗಳನ್ನೂ ಪಕ್ಷಿ, ಮೀನುಗಳನ್ನೂ ಗುಂಪು ಗುಂಪಾಗಿಯೂ ಒಂಟಿಯಾಗಿರುವಂತೆಯೂ ಚಿತ್ರಿಸಿದ್ದಾರೆ.

೩. **ನೂತನ ಶಿಲಾಯುಗ**- ಕಾಲ-ಯುರೋಪಿನಲ್ಲಿ ನೂತನ ಶಿಲಾಯುಗವು ಕ್ರಿ.ಪೂ. ೩೦೦೦ ದಿಂದ ೧,೮೦೦ ವರುಷಗಳ ಹಿಂದಿನದೆಂದು ತಿಳಿಯುತ್ತಿದ್ದರೆ ಪೌರ್ವಾತ್ಯ ಮೆಡಿಟರೇನಿಯನ್ ಕ್ಷೇತ್ರಗಳಲ್ಲಿ ಕ್ರಿ.ಪೂ. ೫೦೦೦ ವರುಷಗಳ ಹಿಂದೆಯೇ ಪ್ರಾರಂಭವಾಯಿತೆಂದು ತಿಳಿಯಲಾಗುತ್ತದೆ. ಈ ಯುಗದ ಮಾನವರು ಹಿಂದಿನ ಯುಗಗಳ ಮಾನವರಿಗಿಂತ ಹೆಚ್ಚು ಸುಧಾರಿಸಿದವರಾಗಿದ್ದರು. ಮೆಡಿಟರೇನಿಯನ್ ಸಮುದ್ರದ ಪಶ್ಚಿಮ ಭಾಗದಲ್ಲಿಯೂ ಸ್ಪೇನದಿಂದ ಆಯರ್ಲಂಡ್ ಮತ್ತು ಆರ್ಕ್ನೇಸ್‌ವರೆಗಿನ ಅಟ್ಲಾಂಟಿಕ ಸಾಗರದ ತೀರದ ಭಾಗದಲ್ಲಿಯೂ ದೊರೆತ ಉಬ್ಬು ಚಿತ್ರಗಳೂ, ಗಡಿಗೆ-ಮಡಕೆಗಳ ಮೇಲಿನ ಕೆತ್ತನೆಯ ಚಿತ್ರಗಳೂ ಗುಹೆಗಳ ಗೋಡೆ, ನೈಸರ್ಗಿಕ ಕಲ್ಲಿನ ಮಾಡುಗಳ ಮೇಲೆ ಕೆತ್ತನೆ ಮಾಡಿದ ಹಾಗೂ ಬಣ್ಣಗಳಿಂದ ಚಿತ್ರಿತವಾದ ಕೃತಿಗಳೂ ಈ ಮಾನವರ ಮಾತೃದೇವತೆಗಳಾಗಿರಬೇಕೆಂದು ಊಹಿಸಲಾಗಿದೆ.

ನೂತನ ಶಿಲಾಯುಗದ ಮಾನವರು ಸುರುಳಿಯಾಕಾರದ(Spiral), ವೃತ್ತಾಕಾರದ(Circular) ಹಾಗೂ ಅಂಕುಡೊಂಕಾದ(Zig-zag) ರೂಪಗಳಲ್ಲಿ ಚಿತ್ರಿಸುವ ಸಂಪ್ರದಾಯವನ್ನು ಪ್ರಾಚೀನ ಶಿಲಾಯುಗಗಳ ಅವಶೇಷಗಳಿಂದ ಸ್ಫೂರ್ತಿಗೊಂಡು ಬಳಕೆಯಲ್ಲಿ ತಂದಿರಬೇಕು.

ಎ. ಟಿ. ಶಾ.

## ಶೀಗಿ ಹಾಡುಗಳಲ್ಲಿ ಚಿತ್ರಕಲೆ

ಶೀಗಿ ಹಾಡುಗಳಲ್ಲಿರುವ ಚಿತ್ರಕಲೆಗಳೆಂದರೆ: ಚುಕ್ಕಿ-ಚಂದ್ರ, ಗಂಗಿ-ಗೌರಿ, ಭಾರಂಭಾಯಿ, ಬಾಳೆಗಿಡ, ಕಂಬುಳಹುವಾ, ಖಬ್ಬಿನ ಮಳು, ಹಣಮಂದೇವರು, ಕರಬನಗಡಗಿ, ಛೆರಚೀಲ, ಏಳುಸುತ್ತಿನ ಕ್ವಾಟಿ, ಮುಂತಾದವು.

ಮಾಧ್ಯಮ: ಶೀಗಿ ಚಿತ್ರಗಳು ರೇಖಾ ಚಿತ್ರಗಳಂತಿದ್ದು ಅವು ಆಕಳ ಹೆಂಡಿ(ಸೆಗಣಿ)ಯಿಂದ ಬಿಡಿಸಿ ಅವುಗಳಲ್ಲಿ ಕುಕ್ಕೆ ಹಾಗೂ ಕಾರಳ ಹೂಗಳು ಊರುತ್ತ ಅಲಂಕರಿಸುತ್ತಾರೆ.ಹೀಗೆ ಹೆಂಡಿಯಿಂದ ವಿನ್ಯಾಸಗಳು ಶೀಗಿ ಆಚರಿಸುವ ೫-೬ ದಿವಸ ಬಡಿದು ಕೊನೆಯ ದಿನವಾದ ಹುಣ್ಣಿಮೆಯ ದಿನದಂದು ಪುನಃ ಮುಂದಿನ ವರ್ಷದ ಶೀಗಿ ಆಚರಣೆಯವರೆಗೆ ಚಿತ್ರಗಳು ಇರುವಂತೆ ಸುಣ್ಣ-ಜಾಜಿ ಹಾಗೂ ತಪ್ಪಲಿನ ರಸದಿಂದ ರೇಖಾ ಮೂಲಕ ಚಿತ್ರಗಳು ಬಿಡಿಸುತ್ತಾರೆ.

ಚಿತ್ರಗಳ ತಾಣ: ಭಿತ್ತಿ ಚಿತ್ರಗಳಂತೆ ಶೀಗಿ ಚಿತ್ರಗಳು ಸಹ ಗೋಡೆಯ ಮೇಲೆ ಇಳಿಸುವುದಾಗಿದೆ. ಆದರೆ ಗೋಡೆಯ ಮೇಲೆ ಎಲ್ಲೆಂದರಲ್ಲಿ ಇಳಿಸದೆ ಮನೆಯ ಹೊರಬಾಗಿಲ ಪಕ್ಕದಲ್ಲಿ ಇಳಿಸುತ್ತಾರೆ: ಕಾರಣ ಮನೆಯೊಳಗೆ ಹೋಗುವಾಗ ಬರುವಾಗ ಈ ಚಿತ್ರಗಳು ಸಹಜವಾಗಿಯೇ ಕಣ್ಣಿಗೆ ಕಾಣುತ್ತಿರಬೇಕೆಂದು.

ನಂಬಿಕೆ ಹಾಗೂ ನಿಯಮಗಳು: ಶೀಗಿ ಆಚರಣೆಯ ಮೊದಲ ದಿನ ಬಿಡಿಸುವ ಚಿತ್ರ ಚುಕ್ಕಿ-ಚಂದ್ರ. ಬ್ರಹ್ಮಾಂಡದ ಮೇಲೆ ಮೊದಲಿಗೆ ಕಾಣಸಿಕೊಂಡವರೆಂದರೆ. ಚುಕ್ಕಿ-ಚಂದ್ರ. ಈ ಬ್ರಹ್ಮಾಂಡಕ್ಕೆ ತಂಪು ಬೆಳಕು ನೀಡುವವರೆಂದರೆ ಇವರು. ಇವರ ಗುಣಧರ್ಮವೇ ನಮ್ಮಲ್ಲಿಯೂ ಆಳವಡಲಿ ಹಾಗೂ ಸದಾ ನಮಗೆ ತಂಪುವೀಯುತ್ತಿರಲಿ ಎಂಬುದಕ್ಕಾಗಿ ಮೊದಲ ಚಿತ್ರ ಇವರದು.

ಎರಡನೆಯದಾಗಿ ಗಂಗಿ-ಗೌರಿಯರ ಚಿತ್ರ. ಇವರು ದೇವತಾ ಸ್ವರೂಪಿಗಳು, ಮಾನವನ ಮೂಲ ಜನಕರೇ ಇವರು. ಇವರು ಸದಾ ನಮಗೆ ಕಾಪಾಡಲಿ ಎಂಬ ನಂಬಿಕೆ ಹಾಗೂ ಗಂಗಿ ಎಂದರೆ ನೀರು, ಜಲ ಮುಂತಾಗಿ. ಈ ಗಂಗಾ ಮಾತೆಯಿಂದಲೇ ಜೀವನ ಸ್ವಚ್ಛ. ಹಾಗೂ ಗಂಗೆಯಂತೆಯೇ ಜೀವನವೂ ಸದಾ ಜುಳು, ಜುಳು, ನಾದದೊಂದಿಗೆ ಪ್ರವಹಿಸುತ್ತಿರಲಿ ಎನ್ನುವುದು.

ಮೂರನೆಯದಾಗಿ ಭಾರಂಭಾಯಿ, ಬಾಳೆಗಿಡ, ಕಂಬುಳ ಹೂವಾ, ಕಬ್ಬಿನ ಮಳು ಮುಂತಾದ ಚಿತ್ರಗಳು ಬಿಡಿಸುತ್ತಾರೆ. ಈ ಚಿತ್ರಗಳು ಇಂಥ ದಿವಸವೇ ಬಿಡಿಸಬೇಕೆಂಬ ಕಟ್ಟುನಿಯಮವೇನಿಲ್ಲ. ಶೀಗಿ ಆಚರಣೆಯ ೩ನೇ ಅಥವಾ ೪ನೇ ದಿವಸದಲ್ಲಿ ಯಾವಾಗಾದರೂ

ಇಳಿಸುತ್ತಾರೆ. ಈ ಚಿತ್ರಗಳ ನಂಬಿಕೆಯೆಂದರೆ: ಆದಿಮಾನವ ಕ್ರಮೇಣ ಬೇಸಾಯ ಪ್ರಾರಂಭಿಸಿ ಉತ್ತಮ ಜೀವನ ಸಾಗಿಸಲು ಪ್ರಾರಂಭಿಸಿದ. ಇವನ ಜೀವನಕ್ಕೆ ಬಾವಿ, ನೀರು, ಹೊಲ, ಬೆಳೆ ಇವೇ ದೇವರು. ಇವುಗಳನ್ನು ಸದಾ ಶ್ರದ್ಧೆಯಿಂದ ದುಡಿಯುತ್ತಾ ಹಸನು ಮಾಡುತ್ತಾ ಇರಬೇಕೆಂದು ಚಿತ್ರಗಳು ಬಿಡಿಸುವ, ಹಾಡುವ ಮೂಲಕ ಆರಾಧಿಸುವುದಾಗಿದೆ.

ಹಣಮಂದೇವರು: ಇವನೊಬ್ಬ ಶಕ್ತಿವಂತ, ಚಾರಿತ್ರವಂತ ಹಾಗೂ ಚಿರಂಜೀವಿ. ಇವನಂತೆಯೇ ನಮ್ಮಲ್ಲಿಯೂ ಶಕ್ತಿ, ಚಾರಿತ್ರ್ಯ ತುಂಬಿರಲಿ. ಹಾಗೂ ಕ್ಷಣಿಕ ಬಾಳುವೆ ಆದರೂ ಅದು ಚಿರಂಜೀವಿಯಂತೆ ಅಮರವಾದುದಾಗಲಿ ಎಂಬ ಭಾವನೆ ಕಾಣುತ್ತೇವೆ.

ಕರಬನಗಡಗಿ, ಥೆರಚೀಲ: ಈ ಚಿತ್ರಗಳು ಮಾನವ ವ್ಯವಸ್ಥಿತ ಜೀವನ ಪ್ರಾರಂಭಿಸಿ ತನಗೆ ಬೇಕಾಗುವ ಅಗತ್ಯ ವಸ್ತುಗಳು ಇವುಗಳಲ್ಲಿ ಶಿಸ್ತಿನಿಂದ ಇಟ್ಟುಕೊಳ್ಳುವುದಾಗಿದೆ. ಇವುಗಳೇ ಇಂದು ಟಿಫನ್ ಬಾಕ್ಸ್, ಲೆಟರ್ ಬಾಕ್ಸ್ ರೀತಿಯಲ್ಲಿ ಮುಂದುವರೆದದ್ದನ್ನು ಕಾಣುತ್ತೇವೆ.

ಏಳಸುತ್ತಿನ ಕೋಟೆ: ಇದು ಶೀಗಿ ಹಾಡುವ ಆರನೆಯ ದಿವಸ ಬಿಡಿಸುವುದು ನಿಯಮ. ಇಲ್ಲಿ ಚಕ್ರವ್ಯೂಹದ ಕಲ್ಪನೆ ಅಡಗಿದೆ. ಬಸವ(ದೇವರು) ಏಳಸುತ್ತಿನ ಕೋಟೆಯಲ್ಲಿದ್ದಾನೆ. ಅವನಿಗೆ ಒಲಿಸಿಕೊಂಡು ಪಾರಮಾರ್ಥ ಸಾಧಿಸುವುದು ಕಠಿಣ. ಆದರೂ ಪ್ರಯತ್ನಿಸಿ ಫಲ ಪಡೆಯಬೇಕಾಗಿದೆ. ಎನ್ನುವುದು ಒಂದರ್ಥವಾದರೆ. ಜೀವನದಲ್ಲಿ ಏಳುಸುತ್ತಿನಂಥ ಕೋಟೆ ಭೇದಿಸುವ ಸಂದರ್ಭ ಬಂದರೂ ಎದುರಿಸುವ ಶಕ್ತಿ ಇರಲಿ,ಹಾಗೂ ಮೆಟ್ಟಿ ಮುಂದೆ ಸಾಗುವ ಸಾಹಸವಿರಲಿ ಎನ್ನುವ ಕಲ್ಪನೆಯಾಗಿದೆ.

ಎಲ್ಲಾ ಚಿತ್ರಗಳು ಒಟ್ಟಿಗೆ ಬಿಡಿಸುವುದು: ಮೇಲಿನ ಎಲ್ಲ ಚಿತ್ರಗಳು ಹೆಂಡಿಯಿಂದ ಒಂದೊಂದೇ ಆಗಿ ಒಂದೊಂದು ದಿವಸ ಬಿಡಿಸಿ ಶೀಗಿ ಹುಣ್ಣಿಮೆಯ ದಿವಸ ಹೆಂಡಿ ಬಳಸದೆ ಸುಣ್ಣ-ಜಾಜಿ-ಎಲೆಗಳ ರಸದಿಂದ ಎಲ್ಲಾ ಚಿತ್ರಗಳು ಒಂದು ಚೌಕಕೋನದಲ್ಲಿ ಒಟ್ಟಿಗೆ ಇಳಿಸುವುದಾಗಿದೆ. ಒಟ್ಟಿಗೆ ಚಿತ್ರಿಸುವುದರಲ್ಲಿ ಶಕ್ತಿ ಇದೆ, ಸುಖ ಇದೆ, ಹಾಗೂ ಸೌಂದರ್ಯ ಇಮ್ಮಡಿಸುತ್ತದೆ. ಹೀಗೆ ಜೀವನವೂ ಸಮೂಹವಾಗಿ ಎಂದೆಂದೂ ಕೂಡಿಕೊಂಡು ಒಟ್ಟಿಗಿರಲೆಂಬ ಆಪೇಕ್ಷೆ ಆಗಿದೆ.

ಶೀಗಿ ಹಾಡುವುದು ಮುಗಿದ ನಂತರವೂ ವರ್ಷಗಟ್ಟಲೆ ಬಾಗಿಲ ಮುಂದೆ ಶೀಗಿಯ ಎಲ್ಲಾ ಚಿತ್ರಗಳು ಬಿಡಿಸುವ ಹೊರಮ್ಮೆ ಕೋನಗಳು ಸಹ ಕಲಾತ್ಮಕವಾಗಿಯೇ ಇವೆ. ಮೊದಲು ಕೇವಲ ಚೌಕಕೋನ ಅನಂತರ ಅದಕ್ಕೆ ನಾಲ್ಕೂ ಮೂಲೆಗೆ ಚಿಗುರೊಡೆದಂತೆ, ಅನಂತರ ಚೌಕಕೋನಕ್ಕೆ (ಶರೀರಕ್ಕೆ ಮುಖವಿರುವಂತೆ) ಸ್ವಲ್ಪ ಮೇಲಕ್ಕೆ ಕೋನವಿರುವುದು ಆಮೇಲೆ ಹಲವಾರು ದೃಷ್ಟಿಗಳು ಬೆಳೆದಂತೆ ನಾಲ್ಕೂ ಕಡೆಗೆ ಚೌಚೌಕೋನ. ಇದರ ನಂತರ ಗೋಪುರದಂತೆ ಶಿಖರರೂಪ. ಇದರನಂತರ ಧಾರ್ಮಿಕವಾಗಿ ಷಟ್ಕೋನ ಮುಂತಾಗಿ ಬದಲಾವಣೆ ಹೊಂದುತ್ತ ಈಗ ಈ ಏಳೂ ಹೊರಮ್ಮೆಕೋನಗಳಲ್ಲಿ ತಮಗಿಷ್ಟವಿರುವ ಒಂದರಲ್ಲಿ ಚಿತ್ರ ಬಿಡಿಸುವುದಾಗಿದೆ.

ಈ ಎಲ್ಲ ಶೀಗಿ ಚಿತ್ರಗಳು ಹೇಗೆ ಬಿಡಿಸಿದರೂ, ಏನು ಮಾಡಿದರೂ ಇದರಲ್ಲಿ ಪುರುಷರ ಪಾತ್ರವಿರದೆ ಕೇವಲ ಮಹಿಳೆಯರು ಹಾಡುವುದು, ಚಿತ್ರಿಸುವುದು ಆಗಿದೆ. ಇಂಥ ವಿಶಿಷ್ಟ ಕಲೆ ಬೀದರ ಜಿಲ್ಲೆಯಲ್ಲಿ ಪ್ರತಿವರ್ಷ ವಿಜಯದಶಮಿಯ ಮಹಾನವಮಿಯಿಂದ ಶೀಗಿ

ಹುಣ್ಣಿಮೆಯ ಮಧ್ಯವಿರುವ ದಿನಗಳಲ್ಲಿ ಕಾಣಬಹುದಾಗಿದೆ. ಗ್ರಂಥರೂಪದಲ್ಲಿ ಶ್ರೀ ರಾಜೇಂದ್ರ ಯರನಾಳೆ (ಕುಯವೀರಾ) ಸಂಪಾದಿಸಿರುವ 'ಶೀಗಿ ಹಾಡುಗಳು' ಪುಸ್ತಕದಲ್ಲಿ ಸವಿವರವಾಗಿ ದಾಖಲಿಸಿದ್ದು ಕಾಣಸಿಗುತ್ತದೆ.

**ಕುಯವೀರಾ**

## ಶಿವತತ್ವರತ್ನಾಕರ

ಕೆಳದಿ ಚೆನ್ನಾಮಾಜಿಯ ದತ್ತು ಮಗ ಒಂದನೇ ಬಸವಪ್ಪನಾಯಕ (೧೬೯೭-೧೭೧೪)ನು ಸುಮಾರು ೧೭೦೭ರಲ್ಲಿ ಶಿವತತ್ವರತ್ನಾಕರ ಎಂಬ ಗ್ರಂಥ ರಚಿಸಿದನು. ಇದಲ್ಲದೆ ಆತ ಇನ್ನೂ ಕೆಲವು ಗ್ರಂಥಗಳನ್ನು ರಚಿಸಿದ್ದಾನೆ. ಶಿವತತ್ವರತ್ನಾಕರವು ಒಂದು ವಿಶ್ವಕೋಶದಂತಹ ರಚನೆ ಸ್ವತಃ ಕವಿಯೇ ತಾನು ಅನೇಕ ಗ್ರಂಥಗಳ ಸಾರಸರ್ವಸ್ವವನ್ನು ಹಿಂಡಿ ತೆಗೆದು ಈ ಗ್ರಂಥ ರಚಿಸಿದ್ದಾಗಿ ತಿಳಿಸಿದ್ದಾನೆ. ಆದರೆ ಆತ ಉದಾಹರಿಸುವ ಹಲವಾರು ಗ್ರಂಥಗಳು ಈಗ ದೊರೆಯುವುದಿಲ್ಲ. ಅಂತೆಯೇ ಶಿವತತ್ವರತ್ನಾಕರದಲ್ಲಿ ಚಿತ್ರಕಲೆಯನ್ನು ಕುರಿತು ದೀರ್ಘವಾದ ವಿವರಣೆ ಇದೆಯಾದರೂ ಮೊದಲ ಕೆಲವು ಪದ್ಯಗಳನ್ನು ಬಿಟ್ಟರೆ ಉಳಿದವು ಅಬಿಲಷಿತಾರ್ಥ ಚಿಂತಾಮಣಿಯನ್ನು ಅನುಸರಿಸಿದವೇ ಆಗಿದೆ.

ಈ ಗ್ರಂಥದಲ್ಲಿ ಒಂಬತ್ತು ಅಧ್ಯಾಯಗಳು ಹಾಗೂ ನೂರ ಎಂಟು ತರಂಗಗಳೂ ಇವೆ. ನಾಟ್ಯ, ನೃತ್ಯ ಅಭಿನಯ ಸಂಗೀತ, ತಾಳ, ವಾದ್ಯ, ಜಲ, ಭೂಮಿ ಪರೀಕ್ಷೆ, ಚಿತ್ರಲಿಪಿ, ಶಿಲ್ಪ, ಕಾಮಶಾಸ್ತ್ರ ಇತ್ಯಾದಿ ಹತ್ತು ಹಲವು ವಿಷಯಗಳನ್ನು ಕುರಿತ ವಿವರವಿದೆ. ಚಿತ್ರಕಲೆಗೆ ಸಂಬಂಧಿಸಿದಂತೆ ಆರನೆ ಕಲ್ಲೋಲ(ಅಧ್ಯಾಯ)ದ ೨ನೇ ತರಂಗದಲ್ಲಿ ವಿವರ ಬರುತ್ತದೆ. ಭಿತ್ತಿ ಸಿದ್ಧತೆ, ವಜ್ರಲೇಪ, ಲೇಖಣಿ, ಬರೆಯುವ ಸಾಧನಗಳು, ಬೇರೆ ಬೇರೆ ದೇವಾನುದೇವತೆಗಳಿಗೆ ತಕ್ಕ ಬಣ್ಣಗಳು, ಮೂಲ ಹಾಗೂ ಮಿಶ್ರ ವರ್ಣಗಳ ತಯಾರಿಕೆ, ಬಳಕೆ, ನೈಸರ್ಗಿಕ ಹಾಗೂ ಸಿದ್ಧಪಡಿಸಿದ ಬಣ್ಣಗಳು, ಅವಯವ ಪ್ರಮಾಣ, ಆಕಾರಗಳ ವೈವಿಧ್ಯತೆ, ಹಾಗೂ ಚಿತ್ರ ಇರಬೇಕಾದ ಸೂಕ್ತ ಜಾಗಗಳು ಇತ್ಯಾದಿ ಕುರಿತ ವಿವರಗಳು ಇವೆ. ಇದರಲ್ಲಿನ ಕೆಲವು ಸಂಗತಿಗಳಾದರೂ ೧೭,೧೮ನೇ ಶತಮಾನದ ಚಿತ್ರಕಲೆಯ ಮೇಲೆ ಬೆಳಕು ಚಲ್ಲುವಂತಿವೆ.

**ಮೂ.ಮಂ.**

## ಶಿವಾರಪಟ್ಟಣ

ಕೋಲಾರ ಜಿಲ್ಲೆಯ ಮಾಲೂರು ತಾಲೂಕಿನ ಶಿವಾರಪಟ್ಟಣ ಬೆಂಗಳೂರಿನಿಂದ ಸುಮಾರು ೪೫ ಕಿ.ಮಿ. ದೂರದಲ್ಲಿದೆ. ಇಂದು ಪುಟ್ಟಹಳ್ಳಿಯಾಗಿರುವ ಶಿವಾರಪಟ್ಟಣ ಗಂಗ ಅರಸು ೨ನೇ ಶಿವಮಾರನು (೭೮೮-೮೧೨)ರೂಪಿಸಿದ್ದು 'ಶಿವಾಮಾರ ಪಟ್ಟಣ' ಎಂದು ಕರೆಯಲಾಗುತ್ತಿತ್ತು. ಎಂಬ ಹೇಳಿಕೆಗಳಿವೆ. ಅಲ್ಲಿ ಶ್ರೀಪುರುಷನ ಕಾಲದ ಶಾಸನ ಹಾಗೂ ಆ ಕಾಲದ ದೇವಾಲಯವೊಂದರ ಅವಶೇಷ ಹಾಗೂ ಕೆಲವು ವೀರಗಲ್ಲುಗಳು ಭಗ್ನಾವಸ್ಥೆಯಲ್ಲಿವೆ.

ಇಂದು ಶಿವಾರಪಟ್ಟಣ ಪ್ರಸಿದ್ಧವಾಗಿರುವುದು ಅಲ್ಲಿಯ ಶಿಲ್ಪಕಲೆಯಿಂದಾಗಿ. ಹಳ್ಳಿಯಲ್ಲಿ

ಸುಮಾರು ೩೫-೪೦ ಮನೆಗಳಲ್ಲಿ ಶಿಲ್ಪ ಕಲಾಕೃತಿಗಳನ್ನು ತಯಾರಿಸುವವರಲ್ಲದೆ ಒಂದು ಶಿಲ್ಪಕಲಾಶಾಲೆಯೂ ಇದೆ. ಆಗಮಗಳು ಹೇಳಿರುವ ರೀತಿಯಲ್ಲಿ ಶಾಸ್ತ್ರೋಕ್ತವಾಗಿ ಶಿಲ್ಪಗಳನ್ನು ರೂಪಿಸಿಕೊಡುವ ಪರಂಪರಾನುಗತ ಶಿಲ್ಪಿಗಳು ಇಲ್ಲಿದ್ದಾರೆ. ೨೫೦ ವರ್ಷಗಳ ಹಿಂದೆ ಹೊಸಕೋಟೆಯ ಏಳಚೇಹಳ್ಳಿಯ ಬಸವ ಲಿಂಗಾಚಾರ್ಯರೆಂಬುವರು ಕಂಚಿಯಲ್ಲಿ ಶಿಲ್ಪಕಲೆಯನ್ನು ಕಲಿತಿದ್ದು ನಂತರ ಅವರ ವಂಶದ ವಿಶ್ವನಾಥಾಚಾರ್ಯರು ಶಿವಾರಪಟ್ಟಣದಲ್ಲಿ ನೆಲೆಸಿದರೆಂದೂ ಅವರ ವಂಶದವರೇ ಕುಡಿಯೊಡೆದು ೪೦-೫೦ ಕುಟುಂಬಗಳಾಗಿ ಇಂದು ಬೇರೆ ಬೇರೆಯಾಗಿ ಶಿಲ್ಪ ರಚಿಸುತ್ತಿರುವರೆಂದು ಸ್ಥಳೀಯರು ಹೇಳುತ್ತಾರೆ.

ಮೊದಲು ಇಲ್ಲಿಗೆ ಸುಮಾರು ೫ ಕಿ. ಮಿ. ದೂರದಲ್ಲಿರುವ ಸೂರ್ಯ ಮಲ್ಲೇಶನ ಬೆಟ್ಟದಿಂದ ಪ್ರಾತಃಕಾಲದಲ್ಲಿ ಪೂಜೆ ಇತ್ಯಾದಿ ವಿಧಿಕ್ರಿಯೆಗಳನ್ನು ನಡೆಸಿ ಬೇಕಾದ ಅಳತೆಯ ಕಲ್ಲು ತರುತ್ತಿದ್ದು ಈಗ ಮೈಸೂರು ಜಿಲ್ಲೆಯಿಂದ ಕಲ್ಲುಗಳು ಬರುತ್ತವೆ. ಗ್ರಾಹಕನ ಬೇಡಿಕೆಯನ್ನು ಅನುಸರಿಸಿ ಅವರು ಹೇಳಿದ ರೀತಿಯಲ್ಲಿ ದೇವಾನು ದೇವತೆಗಳ ಶಿಲ್ಪಗಳನ್ನು ರಚಿಸುತ್ತಾರೆ. ದೈನಂದಿನ ಬಳಕೆಯಲ್ಲಿ ಕಂಡುಬರುವ ನವಗ್ರಹಗಳು, ನಾಗರಕಲ್ಲು ಇತ್ಯಾದಿಗಳೇ ಹೆಚ್ಚಾಗಿ ರೂಪಿಸುವವರಾದರೂ ದೇವಾಲಯಗಳ ಪೂಜಾಮೂರ್ತಿಗಳನ್ನು ರಚಿಸಿ ಶಾಸ್ತ್ರೋಕ್ತವಾಗಿ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿ ಕೊಡುತ್ತಾರೆ. ಪ್ರತಿಯೊಬ್ಬ ಶಿಲ್ಪಿಯ ಬಳಿಯೂ ಸಾಮಾನ್ಯವಾಗಿ ಪೂಜಿಸುವ ದೇವರುಗಳ ರೇಖಾಚಿತ್ರಗಳು ಇದ್ದು ಅವುಗಳ ಆಧಾರದಿಂದ ಶಿಲ್ಪಗಳನ್ನು ರಚಿಸುತ್ತಾರೆ. ನಮ್ಮ ಹಳೆಯ ಚಾಳುಕ್ಯ, ಹೊಯ್ಸಳ ಇತ್ಯಾದಿ ಶೈಲಿಯಲ್ಲಿ ಇಲ್ಲಿಯ ಶಿಲ್ಪಿಗಳು ಶಿಲ್ಪಗಳನ್ನು ರಚಿಸಬಲ್ಲವರಾದರೂ ಆ ರೀತಿ ರಚಿಸಲು ಹೆಚ್ಚಿನ ಕಾಲಾವಕಾಶ ಬೇಕಲ್ಲದೆ ಶಿಲ್ಪದ ಬೆಲೆಯೂ ಹೆಚ್ಚಾಗಿರುತ್ತದೆ.

ಮಾಮಂ

## ಶ್ರೀ ತತ್ವನಿಧಿ

ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಎಂದರೆ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾದ ಸಚಿತ್ರ ಗ್ರಂಥವಿದು. ಅನೇಕ ಧ್ಯಾನ ಶ್ಲೋಕಗಳಿದ್ದು ಅದಕ್ಕೆ ಪೂರಕವಾಗಿ ಚಿತ್ರಗಳಿವೆ. ಇದರಲ್ಲಿ ಶಕ್ತಿನಿಧಿ ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ, ಕೌತುಕನಿಧಿ, ಎಂಬ ಒಂಬತ್ತು ನಿಧಿಗಳಿವೆ. ಶಕ್ತಿನಿಧಿಯಲ್ಲಿ ಚಾಮುಂಡೇಶ್ವರಿ ಇತ್ಯಾದಿ ಶಕ್ತಿದೇವತೆಗಳೂ, ವಿಷ್ಣು ನಿಧಿಯಲ್ಲಿ ತಾರಕರಾಮ, ವೇಣುಗೋಪಾಲ ಇತ್ಯಾದಿ ವೈಷ್ಣವರ ಚಿತ್ರಗಳೂ, ಶಿವನಿಧಿಯಲ್ಲಿ ಶಿವನ ಲೀಲೆಗಳು ವೈವಿಧ್ಯಮಯ ಗಣಪತಿ ಇತ್ಯಾದಿಗಳೂ ಬ್ರಹ್ಮನಿಧಿಯಲ್ಲಿ ಬ್ರಹ್ಮ ಸರಸ್ವತಿಯರು ಸಪ್ತಋಷಿಗಳು, ಅಷ್ಟ ನದಿಗಳು, ಚತುರ್ದಶ ಲೋಕಗಳು, ಇಂದ್ರರು, ಅಷ್ಟವಸುಗಳು, ಸಪ್ತಮಾರುತರು, ಅಷ್ಟ ದಿಕ್ಪಾಲಕರು, ಗಜನಾಗಗಳು, ವೇದಗಳ ಸ್ವರೂಪ, ಅಭಿಮಾನಿ ದೇವತೆಗಳು ಇತ್ಯಾದಿ ಹಲವಾರು ಧಾರ್ಮಿಕ ಚಿತ್ರಣಗಳನ್ನು ಕಾಣಬಹುದು.

ಇಷ್ಟೇ ಅಲ್ಲದೆ ಸಂಗೀತದ ಸಪ್ತಸ್ವರಗಳು, ಮೂವ್ವತ್ತಾರು ರಾಗ ಲಕ್ಷಣಗಳು, ಬಣ್ಣಗಳು, ಧ್ರುವಾದಿ ಸಪ್ತತಾಳಗಳ ಸ್ವರೂಪ ಇತ್ಯಾದಿಗಳು ಅಮೋಘವಾಗಿವೆ. 'ಗ್ರಹನಿಧಿ'ಯು ಜ್ಯೋತಿಷ್ಯ ಶಾಸ್ತ್ರದ ನಿಘಂಟುವಿನಂತಿದೆ. ಕಾಲಪುರುಷ ಯುಗಗಳು, ಮನ್ವಂತರ, ಸಂವತ್ಸರ,

ಆಯನ, ಯುಗ, ಋತು, ಮಾಸ, ಪಕ್ಷ, ತಿಥಿ, ವಾರ ಗ್ರಹ, ರಾಶಿ, ನಕ್ಷತ್ರ ಇತ್ಯಾದಿ ಪ್ರತಿಯೊಂದಕ್ಕೂ ಸ್ವರೂಪ ಚಿತ್ರ ಮತ್ತು ಅಭಿಮಾನಿ ದೇವತಾ ಚಿತ್ರಗಳಿವೆ. ಮೃಗ, ಪಕ್ಷಿ ಜಲ, ಜಂತು, ಕ್ರಿಮಿಕೀಟಾದಿಗಳ ಚಿತ್ರಣವೂ ಅವುಗಳ ಹೆಸರು ವಿವರಗಳೊಂದಿಗೆ ಇವೆ. ವೈಷ್ಣವ ನಿಧಿಯಲ್ಲಿ ಭಾಷ್ಯಾಕಾರರು ಆಳ್ವರುಗಳ, ಶೈವನಿಧಿಯಲ್ಲಿ ಲಿಂಗಗಳು, ಯೋಗಾಸನಗಳು ಇವೆ. ಕೌತುಕನಿಧಿಯಲ್ಲಿ ಹಲವಾರು ಬಗೆಯ ಚತುರಂಗದ ಆಟಗಳಿವೆ. ಒಟ್ಟು ೧೮೮೬ ಚಿತ್ರಗಳೂ ೪೫೮ ರೇಖಾಚಿತ್ರಗಳೂ ಈ ಗ್ರಂಥದಲ್ಲಿವೆ.

ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿ ರಚಿತವಾದ ದಪ್ಪನಾದ ಕೈ ಕಾಗದದ ಮೇಲಿರುವ ಇವು ಕಿರು ಆಕಾರದ ಚಿತ್ರಗಳು. ಕೆಲವು ಚಿತ್ರಗಳು ಚಿನ್ನದ ಬಣ್ಣದ ಲೇಪವನ್ನು ಹೊಂದಿದ್ದು ಪೂರ್ಣ ಪ್ರಮಾಣದ ಕೃತಿಗಳಾಗಿವೆ. ಆದರೆ ಅನೇಕ ಚಿತ್ರಗಳು ಕೇವಲ ರೇಖಾ ಚಿತ್ರದಿಂದ ಹಿಡಿದು ಅರೆಬರೆಯಾಗಿ ಅಪೂರ್ಣವಾಗಿಯೂ ಇವೆ. ಕೆಲವೆಡೆ ಚಿತ್ರರಚನೆಗಾಗಿ ಖಾಲಿ ಜಾಗ ಬಿಡಲಾಗಿದೆ. ಇವೆಲ್ಲ ಪೂರ್ಣಗೊಂಡಿದ್ದರೆ ಇದೊಂದು ಅತ್ಯುತ್ತಮವಾದ ಚಿತ್ರಿತ ಗ್ರಂಥವಾಗುತ್ತಿತ್ತು.

**ಪಿ.ಆರ್.ತಿ.**

## ಶ್ರೀರಂಗಂ

ಶ್ರೀರಂಗಂ ತಮಿಳುನಾಡಿನ ತಿರುಚ್ಚಿಯ ಬಳಿಯಿರುವ ಪ್ರಸಿದ್ಧ ಯಾತ್ರಾಸ್ಥಳ. ವೃತ್ತಾಕಾರವಾದ ಊರಿನ ಮಧ್ಯದಲ್ಲಿ ವಿಶಾಲ ಹರಹಿನಲ್ಲಿ ಹಲವಾರು ದೇವಾಲಯಗಳಿಂದ ಕೂಡಿದ ಸಂಕೀರ್ಣದಂತಿರುವ ಇಲ್ಲಿಯ ಮುಖ್ಯ ದೈವ ಶ್ರೀರಂಗನಾಥ. ಈ ಸಂಕೀರ್ಣದ ಹಲವಾರು ಕಡೆಗಳಲ್ಲಿ ಭಿತ್ತಿಚಿತ್ರಗಳನ್ನು ಕಾಣಬಹುದು. ಪ್ರವೇಶದ್ವಾರದ ಬಳಿಯ ಎಡಕ್ಕೇ ಇರುವ ಗೋಪಾಲ ಸ್ವಾಮಿ ದೇವಾಲಯ ಹೊಯ್ಸಳ ರಾಮನಾಥನಿಂದ ನಿರ್ಮಿತವಾಗಿ ಗ್ರೆನೈಟ್ ಶಿಲೆಯಲ್ಲಿ ಹೊಯ್ಸಳ ಶಿಲ್ಪ ಶೈಲಿಯಿಂದ ಕೂಡಿದೆ.ಇದರ ಮುಖಮಂಟಪದಲ್ಲಿ ಕೃಷ್ಣಲೀಲೆಗೆ ಸಂಬಂಧಿಸಿದ ಚಿತ್ರಗಳಿದ್ದು, ಇವು ಹೊಯ್ಸಳರ ಕಾಲದ ಚಿತ್ರಕಲೆಯ ಏಕೈಕ ಉದಾಹರಣೆ ಎನಿಸಿದೆ. ಮುಂದೆ ಕೃಷ್ಣದೇವರಾಯನ ಕಾಲದಲ್ಲಿ(೧ನೇ ಶತಮಾನ) ದೇವಿಸನ್ನಿಧಿಯ ಹೊರ ಪ್ರಾಕಾರದ ಮೇಲ್ಛಾವಣಿಯಲ್ಲಿ ಕೃಷ್ಣಲೀಲೆಗೆ ಸಂಬಂಧಿಸಿದ ಚಿತ್ರಗಳು ರಚಿತವಾದವು. ದೇವಾಲಯದ ದಕ್ಷಿಣ ಭಾಗದಲ್ಲಿರುವ ಚಿತ್ರಗೋಪುರದಲ್ಲಿ ೧೭ನೇ ಶತಮಾನದಲ್ಲಿ ರಂಗನಾಥನ ಕಥೆಗೆ ಸಂಬಂಧಿಸಿದ ಚಿತ್ರಗಳ ರಚನೆಯಾಯಿತು. ರಂಗನಾಥನಿಗೆ ವರ್ಷದಲ್ಲಿ ಹಲವಾರು ಉತ್ಸವಗಳನ್ನು ಏರ್ಪಡಿಸುತ್ತಿದ್ದು ಅವುಗಳಲ್ಲಿ ಕುದುರೆಯ ವಾಹನದಲ್ಲಿ ಏರ್ಪಡಿಸುವ 'ವೈಹಾಳಿ' ಉತ್ಸವ ಪ್ರಸಿದ್ಧವಿದ್ದು ಅದರ ವಿವರವಾದ ಚಿತ್ರಣ ಇಲ್ಲಿಯ ಚಿತ್ರಗಳಲ್ಲಿವೆ. ವೇಣುಗೋಪಾಲ ಮಂಟಪದಲ್ಲಿ ೧೮ನೇ ಶತಮಾನದ ಆದಿಯಲ್ಲಿ ನಾಯಕರ ಕಾಲದಲ್ಲಿ ರಚಿತವಾದ ರಾಮಾಯಣ ಹಾಗೂ ಭಾಗವತ ಪುರಾಣಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಇದಲ್ಲದೆ ದೇವಾಲಯದ ಹೊರಗೆ ರಾಮಾನುಜರ ಸನ್ನಿಧಿಯ ಬಳಿಯಲ್ಲಿ ಈಚೆಗೆ ಕೆಲವು ಭಿತ್ತಿಚಿತ್ರಿಗಳು ಪತ್ತೆಯಾಗಿದ್ದು ಅವು ವಿಜಯನಗರದ ಅಂತಿಮ ಕಾಲದ್ದಾಗಿವೆ. ವಿಜಯನಗರ ಕಾಲದ ಎಲ್ಲ ಚಿತ್ರಗಳೂ ಅಂಕಣಗಳಾಗಿ ವಿಭಾಗಿಸಿ ನಿರೂಪಣಾ ಶೈಲಿಯಲ್ಲಿ ಕಥೆ ಹೇಳುವಂತೆ ರೂಪಿಸಿದೆ. ಚಿಕ್ಕದಾದ ದುಂಡಗಿನ ಆಕಾರಗಳು, ವಿಶಾಲವಾದ ಕಣ್ಣುಗಳು, ಹಿನ್ನೆಲೆಗೆ

ಗಾಢವಾದ ಹಸಿರು ಬಣ್ಣ ಇಲ್ಲಿಯ ಚಿತ್ರಗಳಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಚಿತ್ರದ ಅಂಕಣಗಳ ಕೆಳಗೆ ವಿವರಗಳನ್ನು ಬರೆದಿರುವುದು ವಿಶೇಷ.

**ಮಾ.ಮಂ.**

## ಶ್ರೀರಂಗಪಟ್ಟಣ

ಹದಿನೆಂಟನೆಯ ಶತಮಾನದ ಅಂತ್ಯದಲ್ಲಿ ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರು ಶ್ರೀರಂಗಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡು ಆಡಳಿತ ನಡೆಸಿದರು. ಆ ಸಂದರ್ಭದಲ್ಲಿ ೧೭೮೦ರಲ್ಲಿ ಹೈದರ್ ಪೊಲ್ಲೈಲೂರ್‌ನಲ್ಲಿ ಬ್ರಿಟೀಷರನ್ನು ಗೆದ್ದು ಸಮುದ್ರದ ತನಕ ತನ್ನ ರಾಜ್ಯವನ್ನು ವಿಸ್ತರಿಸಿದ ನೆನಪಿಗಾಗಿ ಶ್ರೀರಂಗಪಟ್ಟಣದಲ್ಲಿ ದರಿಯಾದೌಲತ್ (ಸಮುದ್ರದ ಸಂಪತ್ತು) ಎಂಬ ಹೆಸರಿನಲ್ಲಿ ಬೇಸಿಗೆಯ ಅರಮನೆ ಕಟ್ಟಿಸಿ ಹೊರಭಿತ್ತಿಯಲ್ಲಿ ಯುದ್ಧವನ್ನು ನೆನಪಿಸುವಂತೆ ಚಿತ್ರಗಳನ್ನು ಬರೆಯಿಸಿದ. ಒಂದು ಬದಿಯ ಭಿತ್ತಿಯ ತುಂಬಾ ವಿಶಾಲವಾದ ಹರಹಿನಲ್ಲಿ ಯುದ್ಧದ ದೃಶ್ಯವಿದ್ದು ಕುದುರೆ ಕಾಲಾಳುಗಳು, ಆನೆ, ಒಂಟೆಗಳು ಅವುಗಳ ರಕ್ಷಣಾ ವ್ಯವಸ್ಥೆ ಆಯುಧಗಳು, ಉಡಗೆ ತೊಡಗೆಗಳು ಇತ್ಯಾದಿಗಳ ವಿವರವಾದ ಚಿತ್ರಣವಿದೆ. ಶತ್ರು ಸೈನಿಕರ ಮದ್ದಿನ ರಾಶಿಗೆ ಬೆಂಕಿಯಿರಿಸಿರುವುದು. ಸೈನ್ಯಾಧಿಕಾರಿ ಬೆರಗಾಗಿ ನೋಡುತ್ತಿರುವುದು ಇತ್ಯಾದಿಗಳು ಭಾವನಾತ್ಮಕವಾಗಿದ್ದರೂ ಸಂಯೋಜನೆಯ ದೃಷ್ಟಿಯಿಂದ ಅನೇಕ ಆಕಾರಗಳನ್ನು ಒತ್ತೊತ್ತಾಗಿ ಚಿತ್ರಿಸಿರುವುದು ವೀಕ್ಷಿಸಲು ✂✵♎✉🕐[illegible]♍ನ್ನೊಂದು ಬದಿಯ ಗೋಡೆಯಲ್ಲಿ ಅಂದಿನ ಸಮಕಾಲೀನ ರಾಜರುಗಳ ಭಾವಚಿತ್ರಗಳಿವೆ. ಚಿಕ್ಕ ಚಿಕ್ಕ ಅಂಕಣಗಳಲ್ಲಿ ಅರಮನೆಯಂತಹ ರಚನೆಯಿದ್ದು ಅವುಗಳ ಕಂಬಗಳ ಎಡೆಯಲ್ಲಿ ರಾಜರ ರಾಜ ಪರಿವಾರದವರ ಚಿತ್ರಗಳಿದ್ದು ರಚನೆಯಲ್ಲಿ ಸರಳತನವಿದೆ. ವಾಸ್ತುಶಿಲ್ಪದ ದೃಷ್ಟಿಯಿಂದ ಕಟ್ಟೋಣಗಳು ವೈವಿಧ್ಯಮಯವಾಗಿವೆ. ದರಿಯಾದೌಲತ್‌ನ ಭಿತ್ತಿಚಿತ್ರಗಳೆಲ್ಲಾ ಮೂರು ನಾಲ್ಕು ಬಾರಿ ತಿದ್ದಿ ಬರೆಸಿದಂತೆ ಕಾಣುತ್ತದೆ.

**ಅಲಸ**

## ಷಡಂಗಗಳು

ಚಿತ್ರಕಲೆಯಲ್ಲಿ ಆರು ಅಂಗಗಳನ್ನು ಷಡಂಗಗಳೆಂದು ಕರೆಯುವರು. ವಾತ್ಸ್ಯಾಯನನ ಕಾಮಸೂತ್ರಕ್ಕೆ ಯಶೋಧರನು ಬರೆದಿರುವ ವ್ಯಾಖ್ಯೆಯಿದೆ.

ರೂಪಭೇದಾ, ಪ್ರಮಾಣಾನಿ ಭಾವಲಾವಣ್ಯ ಯೋಜನಂ।
ಸಾದೃಶ್ಯಂ ವರ್ಣಿಕಾಭಂಗ ಇತಿ ಚಿತ್ರಂ ಷಡಂಗಕ॥

ರೂಪಬೇಧಾವೆಂದರೆ ಚಿತ್ರದಲ್ಲಿ ಚಿತ್ರಿಸುವ ಬೇರೆ ಬೇರೆ ಆಕಾರಗಳು, ದೇಹದ ಅಂಗಗಳು, ಆಯುಧಗಳು ಆಭರಣ ಮುಂತಾದವು ಪ್ರಮಾಣವೆಂದರೆ ಅಳತೆ, ಒಟ್ಟು ಎತ್ತರ, ಅಗಲ, ದಪ್ಪ, ಸುತ್ತಳತೆ, ಅಳತೆಗೋಲಿನಿಂದ ನಿರ್ಧರಿಸಬೇಕಾದ ವಿವರಗಳು, ಅಂಗೋಪಾಂಗಗಳ ನಡುವೆ ಇರಬೇಕಾದ ಅಂತರ ಮುಂತಾದವು. ಭಾವವೆಂದರೆ ಚಿತ್ರ ಶಿಲ್ಪವಾಗಲಿ ಹೊರಹೊಮ್ಮಿಸುವ ರಸವಿಶೇಷ ಹಾಗೂ ನೋಡುಗನಲ್ಲಿ ಶೃಂಗಾರ, ಅದ್ಭುತ, ಭಯಾನಕ, ರೌದ್ರ ಮೊದಲಾದವು.

ಲಾವಣ್ಯವೆಂದರೆ ಸೌಂದರ್ಯ ವಿಶೇಷ ಹಾಗೂ ಸಾದೃಶ್ಯವೆಂದರೆ ವಾಸ್ತವಿಕವಾಗಿರಬೇಕು. ಚಿತ್ರಣ ವಸ್ತುವಿಗೆ ಎಷ್ಟು ಸದೃಶವಾಗಿದ್ದರೆ ಅಷ್ಟು ಗ್ರಹಣ ಸೌಕರ್ಯ ಮನುಷ್ಯನ ಆಕಾರವಾಗಲಿ, ಪ್ರಾಣಿಗಳ ರೂಪವಾಗಲಿ, ಗಿಡಬಳ್ಳಿಗಳ ವಿನ್ಯಾಸವಾಗಲಿ, ನಮ್ಮ ಸುತ್ತಮುತ್ತ ಇರುವ ಪದಾರ್ಥಗಳ ನಿರೂಪಣೆಯಾಗಲಿ ಯಥಾರ್ಥತೆಯ ಮೇರೆಯನ್ನು ಮೀರಬಾರದು, ವರ್ಣಿಕಾಭಂಗ ಎಲ್ಲಿ ಯಾವ ಬಣ್ಣವಿರಬೇಕು, ಹೇಗೆ ಕಾಣಬೇಕು ಎಂಬುದನ್ನು ಅಂತು ರೂಪಭೇದಕ್ಕಾಗಲಿ, ಪ್ರಮಾಣಕ್ಕಾಗಲಿ, ಸಾದೃಶ್ಯಕ್ಕಾಗಲಿ, ಕೊರತೆ ಬರದಂತೆ ಭಾವವನ್ನು ಹೊರಹೊಮ್ಮಿಸುವಂತ ಲಾವಣ್ಯವನ್ನು ಹೆಚ್ಚಿಸುವಂತೆ ಬಣ್ಣ ಇರಬೇಕು. ಇದು ಚಿತ್ರಕ್ಕೆ ವಿಶೇಷವಾದ ಲಕ್ಷಣ.

ಮರಿ

## ಸಂಗ್ರಹಣೆ (ಕಲಾಕೃತಿಗಳ) (Collection)

ಕಲಾ ಸಂಗ್ರಹಣೆಯು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ಕ್ರಿ. ಪೂ. ೫ನೆಯ ಶತಮಾದಲ್ಲಿ ಅಥೆನ್ಸ್ ನಗರದಲ್ಲಿ ಚಿತ್ರಸಂಗ್ರಹ ಶಾಲೆಯೊಂದಿತ್ತು. ರೋಮನ್ನರು ಮೂಲ ಪ್ರತಿಗಳನ್ನು ಕೊಳ್ಳುವ ಮೂಲಕ ಹಾಗೂ ಪ್ರತಿಕೃತಿಗಳನ್ನು ಮಾಡುವ ಮೂಲಕ ಹೇರಳವಾಗಿ ಕಲಾಕೃತಿಗಳನ್ನು ಸಂಗ್ರಹಿಸಿದ್ದರು. ಸಂಗ್ರಹಿತ ಕಲಾಕೃತಿಗಳು ಹೆಚ್ಚು ಪ್ರಸಿದ್ಧವಾಗಿರುತ್ತಿದ್ದವಲ್ಲದೆ ಅತ್ಯಧಿಕ ಬೆಲೆಯುಳ್ಳವಾಗಿರುತ್ತಿದ್ದವು. ಆಗಸ್ಟಸ್ ಚಕ್ರವರ್ತಿಯು ಅಪೆಲಿಸ್(Appelles)ನ ಕೃತಿಯೊಂದಕ್ಕೆ ಭಾರಿ ಮೊತ್ತದ ಹಣವನ್ನು ನೀಡಿದನೆಂದು ತಿಳಿದು ಬರುತ್ತದೆ.

ಕ್ರೈಸ್ತ ಧರ್ಮದ ಆಗಮನದ ನಂತರ ಕ್ರಿಶ್ಚಿಯನ್ನೇತರ ಕೃತಿಗಳನ್ನು ಸಂಶಯದ ದೃಷ್ಟಿಯಿಂದ ಕಾಣತೊಡಗಿದರು. ಆದರೆ ಮಧ್ಯಯಗದಲ್ಲಿ ರಾಜಕುಮಾರರು ಪ್ರಾಚೀನ ವಸ್ತುಗಳನ್ನು ವಿಶೇಷವಾಗಿ ಸಣ್ಣ ಗಾತ್ರದ ವಸ್ತುಗಳನ್ನು, ಮಂತ್ರಶಕ್ತಿಯುಳ್ಳವೆಂದು ತಿಳಿಯಲಾದ, ಕೆತ್ತನೆಗೊಂಡ, ಬೆಲೆಯುಳ್ಳ ಹರಳುಗಳನ್ನು ಸಂಗ್ರಹಿಸಿದಂತೆ ತಿಳಿದುಬರುತ್ತದೆ.

ಪುನರುಜ್ಜೀವನ ಕಾಲದಲ್ಲಿ, ಶಾಸ್ತ್ರೀಯ ಕಲೆಯತ್ತ ಅಭಿರುಚಿಯು ವ್ಯಾಪಕವಾಗಿ, ವಿವಿಧ ಬಗೆಯಾಗಿ ಬೆಳೆಯತೊಡಗಿತು. ಮಧ್ಯಯುಗದಲ್ಲಿ ಕಲಾ ಸಂಪತ್ತಿನ ಕೋಣೆಯು ಸ್ಟುಡಿಯೋ ಆಗಿ ಬೆಳೆಯಿತು. ಇಸಾಬೆಲಾ ಡಿ ಎಸ್ಟೆ ಇವನ ಸ್ಟುಡಿಯೋ 'ಮಾಂಟು ಆ'ದ 'ಡ್ಯೂಕಲ್' ಅರಮನೆಯಲ್ಲಿ ಈಗಲೂ ಕಾಣಸಿಗುತ್ತದೆ. ನಂತರ ಈ ಸ್ಟುಡಿಯೋ ಚಿತ್ರ ಪ್ರದರ್ಶನಾಲಯವಾಗಿ ರೂಪುಗೊಂಡಿತು.

ಶಿ.ಷ.

## ಸ್ತಂಭ ಶಿಲ್ಪಗಳು (Column figures)

ಚರ್ಚುಗಳ ಬಾಗಿಲುಪಾಡಗಳ ಸ್ತಂಭಗಳಿಗೆ ಹೊಂದಿಕೊಂಡ ಅಲಂಕಾರಿಕ ಚಿತ್ರಗಳಿವು. ಬೌದ್ಧ ಸ್ತೂಪಾದಿ ಶಿಲ್ಪಗಳಲ್ಲಿಯೂ ಇಂಥ ಶಿಲ್ಪ(ಚಿತ್ರ)ಗಳನ್ನು ಕಾಣಬಹುದು. ಆಧಾರ ನೀಡುವುದು ಈ ರಚನೆಗಳ ಮೂಲ ಉದ್ದೇಶ. ಕ್ರಮೇಣ ಈ ರಚನೆಗಳು ರಂಗಮಂಟಪಕ್ಕೆ

ವರ್ಗಾಯಿಸಲ್ಪಟ್ಟವು. ಅಲ್ಲಿ ಸ್ತಂಭದ ಸ್ಥಾನವನ್ನು ಶಿಲ್ಪಾಕೃತಿಗಳು ಆವರಿಸಿದವು. ಪ್ರಾಚೀನ ಗ್ರೀಕರು ಸ್ತಂಭಗಳ ಬದಲಾಗಿ ಶಿಲ್ಪಗಳನ್ನೇ ಉಪಯೋಗಿಸಿದ್ದುದನ್ನು ಕಾಣಬಹುದಾಗಿದೆ. ಪ್ಯಾರಿಸ್‌ದ ಸಮೀಪದಲ್ಲಿರುವ ೧೨ನೆಯ ಶತಮಾನದ ಸೇಂಟ್‌ಡೆನಿಸ್‌ನ ಚರ್ಚಿನಲ್ಲಿ ಇವನ್ನು ದೊಡ್ಡ ಪ್ರಮಾಣದಲ್ಲಿ ಬಳಸಿಕೊಳ್ಳಲಾಗಿದೆ.

ಭಾರತದಲ್ಲಿಯೂ ಪಲ್ಲವ, ಗಂಗರ ಕಂಬ ಶಿಲ್ಪಗಳಲ್ಲಿ ಮೊದಲಿಗೆ ಸಿಂಹಾಕೃತಿಯನ್ನು ಬಳಸಿಕೊಂಡಿದ್ದರು. ಮುಂದೆ ವಿಜಯನಗರದ ಬೃಹದಾಕಾರದ ಕಂಬಗಳಲ್ಲಿ ಕುದುರೆ ಅಥವಾ ಶಾರ್ದೂಲ ಸವಾರರಲ್ಲದೆ, ದೇವಾನುದೇವತೆಗಳ, ಮನುಷ್ಯರ ನೈಜ ಅಳತೆಯನ್ನೂ ಮೀರಿದ ಆಕಾರಗಳನ್ನು ಹಂಪಿ, ಲೇಪಾಕ್ಷಿ, ಮಧುರೆ, ತಿರುವನಂತಪುರ ಇತ್ಯಾದಿ ದಕ್ಷಿಣ ಭಾರತದ ನೂರಾರು ದೇವಾಲಯಗಳಲ್ಲಿ ಕಾಣಬಹುದು.

ಶಿ.ಪ.

## ಸಂಭಾವ್ಯ (Happening)

೧೯೬೦,೭೦ರ ದಶಕಗಳಲ್ಲಿ ಪ್ರಚಲಿತವಿದ್ದ ಕಲಾಚಟುವಟಿಕೆ. ಇದರಲ್ಲಿ ಯೋಜಿತ ಅಥವಾ ಸ್ಥಳದಲ್ಲೇ ಸುಧಾರಿಸಿದ ರಂಗ ಕ್ರಿಯೆಯೊಂದಿಗೆ ಚಿತ್ರಗಳನ್ನು, ಅಕಸ್ಮಾತ್ ಸಿಕ್ಕ (Object Trouve's) ವಸ್ತುಗಳನ್ನು ಬಳಸಲಾಗುತ್ತಿತ್ತು. ಪ್ರೇಕ್ಷಕರು ಕೆಲವೊಮ್ಮೆ ಭಾಗವಹಿಸುತ್ತಿದ್ದರು. ೧೯೫೭ರಿಂದ ೫೯ರ ಅವಧಿಯಲ್ಲಿದ್ದ ಅಬ್‌ಸ್ಟ್ರಾಕ್ಟ್ ಎಕ್ಸ್‌ಪ್ರೆಷನಿಸಂ ಶೈಲಿಯ ಮುಂದುವರಿಕೆಯಾದ ಈ ಕಲಾಚಟುವಟಿಕೆಯ ಉಗಮಕ್ಕೆ ಜೌನ್‌ಕೇಜ್ ಎಂಬುವನ ಆಕಸ್ಮಿಕ ಶೋಧಗಳ ಕುರಿತ ವಿಚಾರಗಳು ಬುನಾದಿಯಾದವು. ಸಾಂಪ್ರದಾಯಿಕ ರೀತಿಯ ರಂಗ ಚಟುವಟಿಕೆಗೂ ಮತ್ತು ಹ್ಯಾಪೆನಿಂಗ್‌ಗೂ ಇರುವ ಒಂದೇ ವ್ಯತ್ಯಾಸವೆಂದರೆ ಇಲ್ಲಿ ಕಥಾಹಂದರವಿಲ್ಲದಿರುವುದು. ಜೋಸೆಫ್ ಬಯ್ಸ್ ಈ ಚಟುವಟಿಕೆಯ ಪ್ರಮುಖ ಕಲಾವಿದ.

ರ. ಕಾ

## ಸಂಯೋಜನೆ (Composition)

ಕಲಾವಿದನು ಚಿತ್ರಿಸಲಿರುವ ವಸ್ತು(Subject)ವಿಗೆ ಸಂಬಂಧಿಸಿದಂತೆ ಮಾನವಾಕೃತಿಗಳು, ಹಣ್ಣುಗಳು ಅಥವಾ ಕೇವಲ ಬೇರೆ ಬೇರೆ ಆಕೃತಿಗಳನ್ನು ಹೊಂದಿಸಿ ವರ್ಣಚಿತ್ರಗಳನ್ನು ರಚಿಸುವ ಕಲಾತ್ಮಕ ಕೃತಿ ಸಂಯೋಜನೆ ಅಥವಾ ಕಂಪೋಜಿಷನ್ ಎಂದು ಕರೆಯುತ್ತಾರೆ. ಚಿತ್ರ ಸಂಯೋಜನೆಯು ಚಿತ್ರಕಲೆಯ ಎಲ್ಲ ವಿಷಯಗಳಲ್ಲಿ ಅತಿ ಪ್ರಾಮುಖ್ಯ ಹಾಗೂ ಮಹತ್ವದ ವಿಷಯವಾಗಿರುತ್ತದೆ. ಕಲಾವಿದನ ಬುದ್ಧಿಮತ್ತೆಯು ಚಿತ್ರ ಸಂಯೋಜನೆಯಿಂದಲೇ ಪ್ರಕಟಗೊಳ್ಳುತ್ತದೆ. ಕಲಾವಿದನ ರಚನಾತ್ಮಕ, ಕ್ರಿಯಾತ್ಮಕ, ಅಭಿವ್ಯಕ್ತಿ ಕೌಶಲಗಳು ಚಿತ್ರ ಸಂಯೋಜನೆಯ ಮುಖಾಂತರವೇ ಬೆಳಕಿಗೆ ಬರುತ್ತವೆ. ಪ್ರಾಯಶಃ ಇದೇ ಕಾರಣದಿಂದಲೇ ಅನೇಕ ಪಂಥಗಳ ಸೃಷ್ಟಿಯಾಯಿತು.

ಪ್ರಾರಂಭಿಕವಾಗಿ ಕಲಾವಿದ್ಯಾರ್ಥಿಯು ಸಾಮಾನ್ಯ ವಸ್ತು(ವಿಷಯಗಳು)ಗಳ ಸಂಯೋಜನೆಯು

ಚಿತ್ರಣಗಳ ಮೂಲಕ ಅಭ್ಯಸಿಸಬೇಕಾಗುತ್ತದೆ. ಚಿತ್ರ ಸಂಯೋಜನೆಯ ಮೂಲತತ್ವಗಳಾದ ವರ್ಣ, ರೇಖೆ, ಆಕೃತಿ, ವರ್ಣವಿನ್ಯಾಸ, ಮೈವಳಿಕೆ(Texture) ಮತ್ತು ಸ್ಥಳಾವಕಾಶ ಮುಂತಾದವುಗಳ ಅರ್ಥವ್ಯಾಪ್ತಿಗಳನ್ನೂ ಐಕ್ಯತೆ(Unity) ಸಾಮರಸ್ಯತೆ(Harmony) ಸಮತೂಕ(Balance) ತರಂಗ ಬದ್ಧತೆ(Rhythm) ಒತ್ತು (Emphasis) ಮತ್ತು ಪ್ರಮಾಣ ಮುಂತಾದ ಚಿತ್ರ ಸಂಯೋಜನೆಯ ನಿಯಮಗಳನ್ನೂ ತಿಳಿದಲ್ಲದೆ "ಚಿತ್ರ ಸಂಯೋಜನೆ"ಯ ಪರಿಪೂರ್ಣಕೃತಿಯೆನಿಸಲು ಸಾಧ್ಯವಿಲ್ಲ. ಪ್ರತಿಯೊಂದು ರೇಖೆ, ವರ್ಣಗಳಿಗೆ ಪ್ರತ್ಯೇಕವಾದ ಗುಣ ಸ್ವಭಾವಗಳಿರುವದರಿಂದ ಕಲಾವಿದನು ಚಿತ್ರಿಸಲಿರುವ ವಿಷಯಕ್ಕೆ ಸಂಬಂಧಪಟ್ಟಂತೆ ಗುಣ-ವಿಶೇಷಗಳ ವರ್ಣಗಳನ್ನು ರೇಖೆಗಳನ್ನೂ ಚಿತ್ರಿಸಿದಾಗಲೇ ಚಿತ್ರವು ಅರ್ಥಪೂರ್ಣವಾಗುತ್ತದೆ. ಚಿತ್ರ ಸಂಯೋಜನೆಯು ಸಾಂಪ್ರದಾಯಕವಾಗಿರಲಿ, ಆಧುನಿಕವಾಗಿರಲಿ, ಆಧುನಿಕ ಪಂಥಗಳಿಗನುಸಾರವಾಗಿರಲಿ, ಸಮಕಾಲೀನ ಕೃತಿಯಾಗಿರಲಿ ಅದರಲ್ಲಿ ಚಿತ್ರ ಸಂಯೋಜನೆಯ ಮೂಲತತ್ವಗಳಾಗಲಿ, ನಿಯಮ ನಿಬಂಧನೆಗಳಾಗಲೀ ಇಲ್ಲದೇ ಹೋದಲ್ಲಿ ಅದೊಂದು ಪರಿಪೂರ್ಣ ಕಲಾಕೃತಿಯಾಗಲಾರದು.

ವಿ. ಟಿ. ಕಾ.

## ಸಂಯೋಜನಾ ತತ್ವಗಳು

ಚಿತ್ರ, ಶಿಲ್ಪಗಳಲ್ಲಿ 'ಸಂಯೋಜನೆ' (Composition) ಎಂಬುದು ಪ್ರತ್ಯೇಕವಾಗಿ ಹೇಳಬೇಕಿಲ್ಲ, ಒಂದೇ ಆಕೃತಿಯಿದ್ದರೆ ಅದು ತನ್ನಷ್ಟಕ್ಕೆ, ಅಥವ ಹಲವಾರು ಆಕೃತಿಗಳಿದ್ದರೆ



ಅದು ನೋಡಲು ದೃಷ್ಟಿಗೆ ಹಿತವಾಗಿರುವಂತೆ ಇರಿಸುವುದೇ ಸಂಯೋಜನೆಯಾಗುತ್ತದೆ. ಸೃಜನಶೀಲ ಕಲಾವಿದ ತನ್ನಷ್ಟಕ್ಕೆ ಯಶಸ್ವಿಯಾಗಿ ಆಕಾರಗಳನ್ನು ಫಲಕದ ಮೇಲೆ ಇರಿಸಬಲ್ಲ. ಆದರೂ ಪಾಶ್ಚಿಮಾತ್ಯರಲ್ಲಿ ಯಾವ ಬಗೆಯ, ಭಾವನೆಯ ಆಕಾರಗಳನ್ನು ಯಾವ ಕಥಾ ಸಂದರ್ಭದಲ್ಲಿ ಹೇಗೆ ಇರಿಸಬೇಕೆಂಬ, ಅವುಗಳಿಗೆ ಪೂರಕವಾಗಿ ಹಿನ್ನೆಲೆ ಮುನ್ನೆಲೆಗಳನ್ನು ತುಂಬಬೇಕೆಂಬ, ಬಗ್ಗೆ ಒಂದು ನಿಶ್ಚಿತ ತತ್ವ(ಥಿಯರಿ)ಗಳನ್ನು ಪ್ರತಿಪಾದಿಸಿದೆ.

ಸಾಮಾನ್ಯವಾಗಿ ಅಡ್ಡಗಲವಿರುವ ಫಲಕದಲ್ಲಿ ದೃಷ್ಟಿ ಅಡ್ಡಕ್ಕೆ ಹಾಯುವುದರಿಂದ ಆಕಾರಗಳನ್ನು ಸಾಲಾಗಿ ಇರಿಸಬೇಕೆಂದೂ, ಎತ್ತರ ಹೆಚ್ಚಿರುವ ಫಲಕದಲ್ಲಿ ದೃಷ್ಟಿ ಕೆಳಗಿನಿಂದ ಮೇಲೆ ಹಾಯುವುದರಿಂದಲೂ; ಚಚ್ಚೌಕವಾದ ಆಕೃತಿಯಲ್ಲಿ ವೃತ್ತಾಕಾರವಾಗಿ ದೃಷ್ಟಿ ಹರಿಯುವುದರಿಂದ ಇವುಗಳಿಗೆ ಪೂರಕವಾಗಿ ಆಕೃತಿಗಳನ್ನು ಇರಿಸಬೇಕೆಂದೂ ಹೇಳಿಕೆಗಳಿವೆ.

ಆಕೃತಿಗಳು ಉದ್ದವಾಗಿದ್ದರೆ ಮುಖಂಡನಂತೆ ಕಾಣವುದೆಂದೂ, ಅಡ್ಡವಾಗಿದ್ದರೆ ಮಲಗಿದ ವಿಶ್ರಾಂತ ಸ್ಥಿತಿಯದೆಂದೂ, ಮೂಲೆಯಿಂದ ಮೂಲೆಗೆ ಅಡ್ಡ ಹಾಯ್ದಿದ್ದರೆ ಹಾರಾಟದ ಅನುಭವ ನೀಡುವುದೆಂದೂ, ತ್ರಿಕೋಣಾಕಾರದ ರಚನೆಯಲ್ಲಿ ಬಲಿಷ್ಠತೆಯನ್ನು ಕಾಣಬಹುದೆಂದೂ ವ್ಯಾಖ್ಯಾನಗಳಿವೆ.

ಅಜಂತದಲ್ಲಿ ಹಲವಾರು ವಸ್ತುಗಳ ಮೇಲೆ ನಮ್ಮ ದೃಷ್ಟಿ ಬಿದ್ದು ವೃತ್ತಾಕಾರವಾಗಿ ಹರಿಯುತ್ತಾ ಹೋಗಿ ಅಂತಿಮವಾಗಿ ಬುದ್ಧನ ಮುಖದ ಮೇಲೆ ಕೇಂದ್ರೀಕರಿಸುವಂತೆ ಕಲಾವಿದ ಸಂಯೋಜಿಸಿದ್ದಾನೆಂದೂ ಇದೊಂದು 'ಮಂಡಲಾಕಾರ'ದ ರಚನೆಯೆಂದೂ ವಿದ್ವಾಂಸರು ತಿಳಿಸುತ್ತಾರೆ. ವಿಜಯನಗರ ಕಾಲದ ಚಿತ್ರ, ಶಿಲ್ಪಗಳಲ್ಲಿ ಅಂಕಣಗಳ ರಚನೆ ಬಂದು, ಒಂದು ಅಂಕಣದಿಂದ ಆರಂಭವಾದ ಕಥೆ ಮುಂದುವರಿಯುವಂತೆ ಆಕಾರಗಳನ್ನು ಇರಿಸುವಿಕೆ ಆರಂಭವಾಯಿತು. ಎಂದರೆ ಒಂದು ಅಂಕಣದ ಕೊನೆಯ ವ್ಯಕ್ತಿ-ಕಥಾ ಸಂದರ್ಭವನ್ನು ಅನುಸರಿಸಿಯೇ ಮುಂದಿನ ಅಂಕಣದತ್ತ ಕೈತೋರುತ್ತಿರುವಂತೆ ಇಲ್ಲವೆ ಯಾವುದಾದರೂ ಆಕೃತಿ ಅಥವಾ ಉಪಕರಣಗಳು ಮುಂಚಾಚಿದಂತೆ ರೂಪಿಸಿರುವುದುಂಟು. ಆಕೃತಿಗಳು ಇಲ್ಲದ ಜಾಗದಲ್ಲಿ ಬರಡುತನ ಹೋಗಲಾಡಿಸಲು ತೆರೆ, ಹೂ ಬಳ್ಳಿ ಇತ್ಯಾದಿಗಳಿಂದ ಪೂರೈಸುವುದು ಕಂಡು ಬರುತ್ತದೆ. ಮೈಸೂರು ಅರಸರ ಕಾಲದ ಚಿತ್ರಣಗಳಲ್ಲಿ ಗಾಜಿನ ಗೋಳಾಪು, ಗಡಿಯಾರಗಳನ್ನು [illegible] ಬರೆದೂ ಸಂಯೋಜಿಸಿದ್ದಾರೆ

ಸುವರ್ಣ ಮಾಧ್ಯಮ(ಗೋಲ್ಡನ್ ಸೆಕ್ಷನ್)ದಂತಹ ಸಂಯೋಜನಾ ತತ್ವವೊಂದನ್ನು ಹೀಗೆ ನಿರೂಪಿಸಿದೆ.

ಆಲನ

## ಸಂರಚನಾವಾದ (Constructivism)

ಇದೊಂದು ಅಮೂರ್ತಕಲೆಯ ಪಂಥ. ಇದು ವರ್ಣಚಿತ್ರ, ವಾಸ್ತುಶಿಲ್ಪ ಮತ್ತು ನಕ್ಷೆ ಅಥವಾ ವಿನ್ಯಾಸ(design) ಕಲೆಯನ್ನು ಒಳಗೊಳ್ಳುತ್ತದೆ. ಈ ಪಂಥದ ಇತಿಹಾಸವು ತೊಡಕಿನದಾಗಿದೆ. ಪಿಕಾಸೋನ ಕ್ಯೂಬಿಜಂ (ಘನಾಕೃತಿ ವಾದ)ದಲ್ಲಿ ಇದರ ಮೂಲವನ್ನು

ಕಾಣಲಾಗುತ್ತದೆ. ಇದು ಟ್ಯಾಟಲಿನ್ ಮತ್ತು ಪೆವ್ಸನರ್ ಮತ್ತು ಗ್ಯಾಬೋ ಸಹೋದರರ ರಚನೆಗಳಲ್ಲಿ ಇಮ್ಮುಖವಾದ ಬೆಳವಣಿಗೆಯನ್ನು ಪಡೆಯಿತು. ೧೯೧೭ರಲ್ಲಿ ಈ ಎರಡೂ ಮಾಸ್ಕೋದಲ್ಲಿ ರೂಢವಾಗಿದ್ದವು. ೧೯೨೦ರಲ್ಲಿ ಈ ವಾದದವರ ಪ್ರಥಮ ಪ್ರದರ್ಶನ ಜರುಗಿತು. ಇದೇ ಸಂದರ್ಭದಲ್ಲಿ ಪ್ರಣಾಲಿಕೆ ಹೊರಡಿಸಿ ಅದರಲ್ಲಿ ತಮ್ಮ ರಚನೆಗಳ ಹಿನ್ನೆಲೆಯಲ್ಲಿ Construction ಪದದ ಬಗೆಗೆ ವಿವರಣೆ ಕೊಡಲಾಗಿತ್ತು. ಅದೇ ವರ್ಷ ಈ ಪಂಥಕ್ಕೊಂದು ನಿಶ್ಚಿತ ಚೌಕಟ್ಟು ನಿರ್ಮಾಣಗೊಂಡಿದ್ದರೂ ಆಗಲೇ ಈ ಸಂಘಟನೆ ಇಬ್ಭಾಗವಾಯಿತು.

ಕಲೆ ಸಮಾಜಕ್ಕೆ ಪ್ರಯೋಜನಕಾರಿಯಾಗಿರಬೇಕೆಂದು ಟ್ಯಾಟಲಿನ್, ಅದರಿಂದ ಮುಕ್ತವಾಗಿ ರಬೇಕೆಂದು ಗ್ಯಾಬೋ ಮತ್ತು ಪಾವ್ಸನರ್ ಹೀಗೆ ಇಬ್ಬಣವಾಯಿತು. ಈ ಕಾರಣಕ್ಕಾಗಿಯೇ ರಶಿಯಾ ಬಿಟ್ಟು ಹೋದ ಗ್ಯಾಬೋ, ಪಾವ್ಸನರ್‌ರು ಮಾಡರ್ನಿಜಂ, ಮಿನಿಮಲ್ ಕಲೆ ಮುಂತಾದ ಹಲವಾರು ಪಂಥಗಳ ಮೇಲೆ ಗಮನಾರ್ಹ ಪರಿಣಾಮ ಬೀರಿದರು.

ಶಂ. ಮೂ.

## ಸಮತೋಲನ (Balance)

ಒಂದು ಚಿತ್ರದ ಚೌಕಟ್ಟಿನಲ್ಲಿ ಬರುವ ಎಲ್ಲ ಘಟಕಗಳ ದಾರ್ಶನಿಕ ತೂಕಗಳು ಚಿತ್ರದ ಒಟ್ಟಾರೆ ಹದಕ್ಕೆ ಅವಶ್ಯ. ತಕ್ಕಡಿಯಲ್ಲಿ ತೂಗಿದಾಗ ತಕ್ಕಡಿಯ ಕೋಲು ಲಂಬವಾಗಿ ನಿಂತತೆಯೇ ಇದೂ ಸಹ. ಸ್ಥೂಲವಾಗಿ ವಿವರಿಸುವುದಾದರೆ ತೂಕದ ಬೊಟ್ಟಿಗೂ ಅಳೆಯುವ ವಸ್ತುವೂ ಒಂದೇ ಭಾರ ಹೊಂದಿರಬೇಕು. ಹಾಗಿಲ್ಲದೇ ಇದ್ದೂ ಕೋಲು ಲಂಬವಾಗಿರಬೇಕೆಂದರೆ ಮಧ್ಯದ ಹಿಡಿಯನ್ನೇ ಆಚೀಚೆ ಜರುಗಿಸಬೇಕಾಗುತ್ತದೆ. ಒಟ್ಟಿನಲ್ಲಿ ಎಲ್ಲಾ ಘಟಕಗಳೂ ಒಮ್ಮತ್ರದಿಂದಿರುವಂತೆ ಕಂಡರೆ ವೀಕ್ಷಕನ ಕಣ್ಣಿಗೆ ಶ್ರಮ ಕಡಿಮೆ. ಇದರಲ್ಲಿ ಅನೂಚಾನವಾಗಿ ನಾವು ರೂಢಿಸಿಕೊಂಡ ಕೆಲವು ಅಭ್ಯಾಸಗಳೂ ಸಹ ನಮ್ಮ ಕಲ್ಪನೆಯನ್ನು ಅಡ್ಡದಾರಿಗೆಳೆಯಬಹುದು. ಉದಾಹರಣೆಗೆ, ನಾವು ಯಾವತ್ತೂ ನೋಡುವ ದೃಷ್ಟಿಯಲ್ಲಿ ಆಕಾಶ ಮೇಲೆ, ಭೂಮಿ ಕೆಳಗೆ-ಅರ್ಥಾತ್ ತೆಳುಭಾಗ ಮೇಲೆ ಹಾಗೂ ಗಾಢ ಭಾಗ ಕೆಳಗೆ. ಹಾಗಾಗಿ ಚಿತ್ರದಲ್ಲಿ ನಮಗೆ ಈ ತ್ರಿಕೋನಾಕೃತಿಯ ಸಮತೋಲನ ಸಹಜವೆನ್ನಿಸುತ್ತವೆ. ಅಂತೆಯೇ ನಾವು ಓದುವುದನ್ನು ಕಲಿತದ್ದು ಎಡದಿಂದ ಬಲಕ್ಕೆ. ಹಾಗಾಗಿ ಬಲಭಾಗದಲ್ಲಿ ಗಾಢ ಅಥವಾ ಪ್ರಮುಖ ವಸ್ತು ಸಹಜವೆನ್ನಿಸುತ್ತದೆ. ಸಮತೋಲನವು ಏಕತಾನತೆಯನ್ನು ಹೊಂದಬಾರದೆಂದು ಹಿರಿಯ ಕಲಾವಿದರು ಕೆಲವು ಉಪಾಯಗಳನ್ನು ಕಂಡುಕೊಂಡಿದ್ದರು. ಉದಾ: ಚಿತ್ರದ ಯಾವುದೇ ಮುಖ್ಯ ಅಂಗವನ್ನು ಚಿತ್ರದ ನಟ್ಟ ನಡುವಿನಲ್ಲಿ ಇಡದೇ ಯಾವುದಾದರೂ ಪಾರ್ಶ್ವದಲ್ಲಿಡುವುದು. ತೀರಾ ಎರಡೂ ಪಾರ್ಶ್ವಗಳಲ್ಲೂ ಒಂದೇ ತೂಕದ ವಸ್ತುಗಳಿದ್ದರೆ ನಮಗೆ ಅಕ್ಷವನ್ನು ಮಧ್ಯದಲ್ಲಿ ಕಾಣುವುದು ಸಹಜ ಎನ್ನಿಸುತ್ತದೆ. ಆದರೆ ಅಷ್ಟು ಆಕರ್ಷಕವೆನ್ನಿಸಲಾರದು. ಹೊಬ್ಬೀಮಾನ ಹೈವೇಯನ್ನು ಗಮನಿಸಿದರೆ ನಮ್ಮ ದೃಷ್ಟಿ ಇಕ್ಕೆಡೆಗಳಲ್ಲಿರುವ ಗಗನಚುಂಬೀ ಸಾಲುಮರಗಳ ಜೊತೆಯೇ ಹಿಂದಕ್ಕೆ ಹೋಗಿ ಕ್ಷಿತಿಜದ ಬಳಿ ಹೆದ್ದಾರಿಯೊಡನೆ ಒಂದುಗೂಡಿ ಅಲ್ಲಿಂದ ವಾಪಸ್ ಮುಂಭಾಗಕ್ಕೆ ಬರುತ್ತದೆ. ಆದರೆ ಮುಂಭಾಗದ ಕಚ್ಚಾ ರಸ್ತೆಯ ಜೀವಂತ ಚಿತ್ರಣ ನಮ್ಮ ದೃಷ್ಟಿಯನ್ನು ಅಲ್ಲಿ ಹಿಡಿದಿಡುತ್ತದೆ. ಇದು ಅತ್ಯಂತ ಮಹತ್ವಪೂರ್ಣ ತ್ರಿಕೋನ



[illegible]

ಸಂಯೋಜನೆ. ಸಂಯೋಜನೆಯಲ್ಲಿರುವ ಅಸಮತೋಲನವನ್ನು ಬಣ್ಣ. ಗಾತ್ರ, ಆಕಾರ ಇತ್ಯಾದಿಗಳಿಂದ ಸರಿತೂಗಿಸುತ್ತಾರೆ. ಇದು ಒಂದು ರೀತಿಯ ದೃಶ್ಯಕೌತುಕಗಳಲ್ಲಿ ಒಂದು. ಸುಲಭ ಉದಾಹರಣೆ ಎಂದರೆ, ಥಾಮಸ್‌ಗೇನ್ಸ್ ಬರೋನ ಶ್ರೀ ಮತ್ತು ಶ್ರೀಮತಿ ಆಂಡ್ರ್ಯೂ ಚಿತ್ರ. ಮುಖ್ಯ ಅಂಶಗಳನ್ನು ಎಡಭಾಗದಲ್ಲಿ ಕ್ರೋಡಿಕರಿಸಿದ ಕಲಾವಿದ ಅದರಿಂದುಂಟಾಗಬಹುದಾದ ಅಸಮತೋಲನವನ್ನು ಸರಿಪಡಿಸಲು ಬಲಭಾಗವನ್ನು ಸಾಧ್ಯವಾದಷ್ಟೂ ತೆಳು ಹಾಗೂ ಜಾಸ್ತಿ ವಿವರಗಳಿಲ್ಲದ ಭಾಗಗಳಿಂದ ತುಂಬಿದ್ದಾನೆ.

ರ.ಶಾಶಿ

## ಸಮರಾಂಗಣ ಸೂತ್ರಧಾರ

ಭೋಜರಾಜನು [illegible] 'ಸಮರಾಂಗಣ ಸೂತ್ರಧಾರ' ಗ್ರಂಥವನ್ನು ರಚಿಸಿದಂತೆ ತಿಳಿದು ಬರುತ್ತದೆ. ಮುಖ್ಯವಾಗಿ ಇದು ಶಿಲ್ಪ ವಾಸ್ತುಶಿಲ್ಪ ಮತ್ತು ಆಳರಸರಿಗೆ ಬೇಕಾದ ಜ್ಞಾನವನ್ನು ಬೋಧಿಸುವಂತಿದ್ದು ೭೧ರಿಂದ ೮೩ನೇ ಅಧ್ಯಾಯದವರೆಗೆ ಚಿತ್ರಕಲೆಯನ್ನು ಕುರಿತು ಕೆಲವು ಉಪಯುಕ್ತ ವಿಷಯಗಳನ್ನು ತಿಳಿಸುತ್ತದೆ. ಬೇರೆ ಬೇರೆ ಋತುಗಳಲ್ಲಿ ಲವಣದ ತೇವಾಂಶವೂ ಇಲ್ಲದಂತಹ ಮಣ್ಣು ದೊರೆಯುವ ಪ್ರದೇಶ. ಬೇರೆ ಬೇರೆ ಮರಗಳ ಅಡಿಯಲ್ಲಿ ದೊರೆಯುವ ವಿವಿಧ ಬಗೆಯ ಮೃತ್ತಿಕೆಗಳು, ಗೆದ್ದಲು ಮಣ್ಣು ಕುರಿತು ಹೇಳುತ್ತದೆ.

ಮುಂದೆ ಋತುಮಾನಕ್ಕೆ ಅನುಸಾರವಾಗಿ ಅಕ್ಕಿಹಿಟ್ಟು ಇತ್ಯಾದಿ ಬೆರೆಸುವ ಬಗ್ಗೆ, ಗೋಡೆಗೆ ಕಲ್ಕವನ್ನು ಲೇಪಿಸುವ ಬಗ್ಗೆ, ಅವುಗಳ ಮೇಲೆ ಬೆಲ್ಲದ ನೀರು ಮರಳು ಇತ್ಯಾದಿ ಹಚ್ಚುವ ಬಗ್ಗೆ ಅದರ ಆರೈಕೆಯ ಬಗ್ಗೆ ಹೇಳುತ್ತದೆ. ಕಲ್ಕಕ್ಕೆ ಬಿಲ್ವರಸ, ಕುದುರೆ ಅಥವಾ ಗೋವಿನ ಕೂದಲು, ತೆಂಗು, ತೌಡು, ಹತ್ತಿ ಗಟ್ಟಿಯಾದ ಮರಳುಗಳ ಮಿಶ್ರಣ ಮಾಡಿಕೊಳ್ಳುವ ವಿಧಾನ ತಿಳಿಸುತ್ತದೆ. ಪ್ರಶಸ್ತ ದಿನ ನೋಡಿ ಚಿತ್ರ ರಚಿಸಬೇಕೆಂದು ತಿಳಿಸುತ್ತ ರೋಹಿಣಿ ಅಥವಾ ಉತ್ತರಾ ನಕ್ಷತ್ರದ ಕಾಲದಲ್ಲಿ ಚಿತ್ರರಚನೆ ಆರಂಭಿಸಲು ಪ್ರಶಸ್ತವೆಂದು ಹೇಳುತ್ತದೆ. ಕುಂಚಗಳ ತಯಾರಿಕೆಯಲ್ಲಿ ದರ್ಭೆಯ ಮೊನೆ, ಎತ್ತಿನ ಕಿವಿಯ ಕೂದಲು, ಬತ್ತದ ಮೇಲಿರುವ ಮುಳ್ಳು ಇತ್ಯಾದಿಯಷ್ಟು ಸೂಕ್ಷ್ಮವಾದ ಲೇಖನಿಯಿಂದ ಹಿಡಿದು ೩-೪ ಅಂಗುಲಗಳಷ್ಟು ಅಗಲವಾದ ಕುಂಚಗಳವರೆಗೆ ವಿವರಿಸಿದೆ. ಹತ್ತಿಯಿಂದ ಮಾಡಿಕೊಳ್ಳಬಹುದಾದ ಕುಂಚದ ಬಗ್ಗೆಯೂ ಉಲ್ಲೇಖವಿದೆ. ಮುಂದೆ ತಾಳಮಾನ ಪ್ರಮಾಣಗಳೂ ದೇವಾನು ದೇವತೆಗಳ ಗುಣಲಕ್ಷಣಗಳೂ ಹಲವಾರು ರಸಭಾವಗಳ ಬಗ್ಗೆಯೂ ಪ್ರಸ್ತಾಪವಿದೆ.ಯಾವುದೇ ವಿಷಯ ಲಾಲಸೆಯಿಲ್ಲದ 'ಶಾಂತ'ರಸದ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಿರುವುದು ವಿಶೇಷ. ಕೊನೆಗೆ ಚಿತ್ರದೋಶವನ್ನು ನೀಡಿ ಆದಾಗದಂತೆ ನೋಡಿಕೊಳ್ಳಬೇಕೆಂದು ಕಲಾವಿದನನ್ನು ಎಚ್ಚರಿಸುತ್ತದೆ.

ರೇಶ್ಮೆ ಬಟ್ಟೆಯ ಮೇಲೆ ಕಲ್ಕವನ್ನು ಹಚ್ಚಿ ಚಿತ್ರಕ್ಕೆ ಬೇಕಾದಂತೆ ಪಟವನ್ನು (ಕ್ಯಾನ್ವಾಸ್) ತಯಾರಿಸಿಕೊಳ್ಳುವ ಬಗ್ಗೆಯೂ ಇಲ್ಲಿ ವಿವರಿಸಿರುವುದು ಕುತೂಹಲಕಾರಿಯಾಗಿದೆ.

ಅಲನ

## ಸ್ಮರಣ ಚಿತ್ರಲೇಖನ

ನಾವು ನೋಡಿದ ಯಾವುದೇ ವಸ್ತು, ಪಶು-ಪಕ್ಷಿ, ಸನ್ನಿವೇಶಗಳನ್ನು ಕೇವಲ ನೆನಪಿನಿಂದ ಚಿತ್ರಿಸುವ ವಿಧಾನವನ್ನು ಸ್ಮರಣಚಿತ್ರಲೇಖನವೆನ್ನುತ್ತಾರೆ. ಸ್ಮರಣಚಿತ್ರಲೇಖನದಿಂದ ನಿರೀಕ್ಷಣಾಶಕ್ತಿಯೂ ಬುದ್ಧಿಯ ವಿಕಾಸವೂ ವೃದ್ಧಿಗೊಳ್ಳುತ್ತವೆ. ಸ್ವಭಾವಜನ್ಯವಾದ ನಿರೀಕ್ಷಣಾ ಶಕ್ತಿ ತನ್ನ ಅಪರಿಮಿತವಾದ ಶಕ್ತಿವೈಶಿಷ್ಟ್ಯದಿಂದ ನಮ್ಮ ಸ್ಮರಣಶಕ್ತಿಗೆ ಪುಷ್ಟಿಯನ್ನು ಕೊಡುತ್ತದೆ. ಅದರಿಂದಾಗಿ ನಾವು ನೋಡಿದ ಯಾವುದೇ ವಸ್ತು, ಪಶು-ಪಕ್ಷಿ, ಸನ್ನಿವೇಶಗಳು ನಮ್ಮ ಸ್ಮೃತಿಪಟಲದ ಮೇಲೆ ಅಚ್ಚಳಿಯದಂತೆ ಉಳಿಯುತ್ತವೆ. ಅದರಿಂದಾಗಿಯೇ ನಮ್ಮ ಮನಸ್ಸು ಸ್ಮರಣಚಿತ್ರಗಳನ್ನು ರಚಿಸಲು ಪ್ರೇರೇಪಣೆಗೊಳ್ಳುತ್ತದೆ, ಸ್ಫೂರ್ತಿಯುತವಾಗುತ್ತದೆ. ಸ್ಮರಣಚಿತ್ರ ಲೇಖನದಿಂದ ಎಳೆಯ ಮನಸ್ಸಿನಲ್ಲಿ ಸುಪ್ತವಾಗಿರುವ ರಸಾಭಿಜ್ಞತೆ(Aesthetic) ಜಾಗೃತಗೊಳ್ಳುತ್ತದೆ; ಮೆದುಳಿಗೆ ಸಾಕಷ್ಟು ವ್ಯಾಯಾಮ ದೊರೆತು ಆರೋಗ್ಯಕರವಾಗಿ ಬೆಳೆಯುವುದಲ್ಲದೆ ವಿಚಾರಶಕ್ತಿ, ಕಲ್ಪನಾಶಕ್ತಿ, ಹಾಗೂ ನೆನಪಿನ ಶಕ್ತಿಗಳು ಪ್ರಬಲವಾಗುತ್ತವೆ.

ವಿ. ಟಿ. ಕಾ.

## ಸ್ವ-ನಾಶಕಾರಿ ಕಲೆ (Autodestruction Art)

೧೯೬೦-೭೦ರ ಕಾಲಕ್ಕೆ ಪ್ರಚಲಿತವಿದ್ದ ಶೈಲಿ ಇವು ತಮ್ಮದೇ ಕ್ರಿಯೆಯಿಂದ ನಾಶವಾಗುವ ಕಲಾಕೃತಿಗಳು ೧೯೬೦ರಲ್ಲಿ ಜೀನ್ ಟಿಂಗುಲೆಯ'Homage To New York'

ಎಂಬ ಕೃತಿಯು ನೆರೆದಿದ್ದ ಸಹಸ್ರಾರು ಸಾರ್ವಜನಿಕರ ಮುಂದೆ ತನ್ನಿಂತಾನೇ ವಿಘಟಿತವಾಗಿ ಛಿದ್ರವಾದದ್ದು ಪ್ರಸಿದ್ಧ ಉದಾಹರಣೆ

ರ. ಕಾಶಿ

## ಸರಣಿ ಕಲೆ(Serial Art)

ಒಂದು ನಿರ್ದಿಷ್ಟ ವಸ್ತುವನ್ನು (ಉದಾಹರಣೆಗೆ: ಸರಳ ಆಕಾರದ ಇಟ್ಟಿಗೆ) ಸರಣಿಯಾಗಿ ಜೋಡಿಸುವುದರ ಮೂಲಕ ಕಲಾವಿದ ತನ್ನ ವೈಯಕ್ತಿಕ ಆಸೆ-ಅಭಿರುಚಿಗಳನ್ನು ಕಲೆಯ ಮೇಲೆ ಆರೋಪಿಸುವುದನ್ನು ತಪ್ಪಿಸಿಕೊಳ್ಳಬಲ್ಲ. ಇದೇ ಅರ್ಥದಲ್ಲಿ 'ಸರಣಿ ಕಲೆ' ಜನಿಸಿತು. ಇದೇ ಅರ್ಥದಲ್ಲಿ Sol-Le-Witt (ಸೋಲೇವಿಟ್)ಎಂಬಾತ ಕಾಯಿಸಿದ ಎನಾಮಲ್ ಬಣ್ಣವನ್ನು ಅಲ್ಯೂಮಿನಿಯಂ ಪೆಟ್ಟಿಗೆಗಳಿಗೆ ಬಳಿದ ತನ್ನ ಸಂಕೀರ್ಣ-ನಿರ್ಮಾಣಗಳಿಗೆ(Complex structures) ಬಳಸಿಕೊಂಡ.

ಮಾರುಕಟ್ಟೆಯಲ್ಲಿ ದೊರೆಯುವ ತಯಾರಾದ ವಸ್ತುಗಳೇ ಈ ಸರಣಿ ಕಲೆಯ ಜೀವಾಳ. ಪ್ರಮುಖವಾಗಿ ಈ ಕಲಾ ಪ್ರಕಾರವು ೧೯೬೦ರ ದಶಕದಲ್ಲಿ ಯುನೈಟೆಡ್ ಸ್ಟೇಟ್ಸ್‌ನಲ್ಲಿ ರೂಢಿಗತವಾಯಿತು. ಆದರೆ ನಂತರ ಅನೇಕ ಇತರ ದೇಶಗಳಲ್ಲಿಯೂ ಚಾಲ್ತಿಗೊಂಡಿತು. ಉದಾಹರಣೆಗೆ: ಸ್ವಿಟ್ಸರ್ಲೆಂಡಿನ ಕಾಂಕ್ರೀಟ್‌ಕಲೆಯಲ್ಲಿ(Concrete Art) ಈ ಭಾವವಿದೆ. ೧೯೬೬ರಲ್ಲಿ ನ್ಯೂಯಾರ್ಕ್ ನಗರದ ಜೇವಿಶ್(Jewish) ಮ್ಯೂಸಿಯಂನಲ್ಲಿ ಪ್ರದರ್ಶಿತವಾದ ಕಾರ್ಲ್‌ಆಂಡ್ರೆನ ಪ್ರದರ್ಶನ ಈ 'ಸರಣಿ-ಕಲೆಗೊಂದು' ಅತ್ಯುತ್ತಮ ಉದಾಹರಣೆ.

ಎಚ್. ವಿ. ಅ.

## ಸರಿ ಅಥವಾ ಲೇಹ್ಯ (Paste)

ಸಾಮಾನ್ಯವಾಗಿ ಎರಡು ವಸ್ತುಗಳನ್ನು ಗಟ್ಟಿಯಾಗಿ ಅಂಟಿಸಲು ಉಪಯೋಗಿಸುವ ವಸ್ತುವಿಗೆ Paste ಅಥವಾ ಸರಿ ಎನ್ನುತ್ತಾರೆ. ಗಂಜಿಹಿಟ್ಟು ಮತ್ತು ನೀರಿನಿಂದ ವಿಶೇಷವಾಗಿ ತಯಾರಿಸಲ್ಪಟ್ಟ ಇದು ದಪ್ಪ, ಗೋಂದಿನಂತಹ ಅಂಟಿಕೊಳ್ಳುವ ದ್ರವಪದಾರ್ಥ ಅಥವಾ ಗೋಂದಿನಂತೆ ಬಳಸಲ್ಪಡುವ ಅತೀ ಮೃದುವಾದ ವಸ್ತುವಾಗಿದೆ. ಇದರಲ್ಲಿ ಅಂಟುವ ಮತ್ತು ಬಂಧಕಗುಣವಿದ್ದು ಚಿತ್ರಕಲೆಯ ಮಾಧ್ಯಮವಾಗಿಯೂ ಬಳಕೆಯಾಗುತ್ತದೆ.

ಎಸ್. ಎಂ. ವಿ.

## ಸರ್ರಿಯಲಿಸಂ

ಇಪ್ಪತ್ತನೆಯ ಶತಮಾನದಲ್ಲಿ ಚಿತ್ರಕಲೆಯಲ್ಲಿ ವಿಶೇಷವಾಗಿ ಕಾಣಿಸಿಕೊಂಡ ಹೊಸ ಪ್ರವೃತ್ತಿಯನ್ನು ಸೂಚಿಸುವ ಕಲಾ ಪಂಥಗಳಲ್ಲಿ ಸರ್ರಿಯಲಿಸಂ ಪಂಥ ಮುಖ್ಯವಾದುದು, ಕಲಾವಿದನ ಊಹಾ ವಿಲಾಸಕ್ಕೆ, ವಿಚಾರ ಸರಣಿ ಕನಸುಗಾರಿಕೆ ಮತ್ತು ಸುಪ್ತ ಭಾವನೆಗಳಿಗೆ



ಡಿ ಚಿರಿಕೊ

ಅವಕಾಶವಿದೆ. ಬುದ್ಧಿ ಪ್ರಚೋದಿತವಾದ ಅಥವಾ ಕೇವಲ ಸಾಂಪ್ರದಾಯಿಕ ವಿಚಾರಗಳನ್ನು ಅವಾಸ್ತವಿಕ ವಾತಾವರಣದಲ್ಲಿ ತಂದಿಟ್ಟು, ತೋರಿಸಿ ಚಕಿತಗೊಳಿಸಬಹುದು, ವಿಚಾರಕ್ಕೆ ಗುರಿ ಮಾಡಬಹುದು. ಮಾನವನ ವಾಸ್ತವಿಕ ಅವಯವಗಳನ್ನು ಅವಾಸ್ತವಿಕವೂ, ಭೀತಿಕಾರಕವೂ ಆಗಿ ತೋರಿಸಿರುವ ವಿಕೃತಿಗಳು ಸರ್‍ರಿಯಲಿಸಂ ಪಂಥದ ಹಿನ್ನೆಲೆ ಚಿತ್ರಕಾರನ ವ್ಯಕ್ತಿಗತ ಮನೋಧರ್ಮಕ್ಕೆ ಸಂಬಂಧಿಸಿರುತ್ತದೆ. ಕಲ್ಪನೆ ಮತ್ತು ಊಹೆಗಳಿಗೆ ಅದು ಸಂಬಂಧಪಟ್ಟಂತೆಯೇ ಅವರವರ ಸುಪ್ತ ಮನಸ್ಸಿಗೂ ಸಂಬಂಧಪಟ್ಟಿರುತ್ತದೆ. ಪ್ರಖ್ಯಾತ ಮನಶಾಸ್ತ್ರಜ್ಞ ಫ್ರಾಮಿಕ್ ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿರುವನು.

ಸರ್‍ರಿಯಲಿಸಂ ಪಂಥ ಈ ಶತಮಾನದ ಅತ್ಯಂತ ಮಹತ್ವದ ಚಳವಳಿಗಳಲ್ಲಿ ಒಂದಾಗಿದ್ದು, ಕಲಾವಿದರು, ಶಿಲ್ಪಿಗಳು, ಲೇಖಕರು, ಚಲನಚಿತ್ರದವರು ಸಮಾನ ಮನೋಭಾವದಿಂದ ಭಾವಿಸಿದ ವಿಶ್ವವೊಂದರ ಪರಿಶೋಧನೆಯನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸಿತು. ೧೯೨೪ರಲ್ಲಿ ಸರ್‍ರಿಯಲಿಸಂ ಪಂಥದ ಬಗ್ಗೆ ಒಂದು ಘೋಷಣೆಯನ್ನು ಆಂಡ್ರೆ ಬ್ರೆಟನ್ ಪ್ರಕಟಿಸಿದ ಹಾಗೂ ಈ ವರ್ಷವನ್ನೇ ಸರ್‍ರಿಯಲಿಸಂನ ಸ್ಥಾಪನೆಯ ವರ್ಷವಾಗಿ ತಿಳಿಯಬಹುದು. ಈ ಪಂಥ ದಾದಾಯಿಸಂನ ವಿಮರ್ಶಾತ್ಮಕ ಧೋರಣೆಯನ್ನು ಉಳಿಸಿಕೊಂಡು, ಮಾನವ ವಿಶ್ವದ ಸಂಬಂಧತೆಯ ವಿಶೇಷ ಲಕ್ಷಣಗಳ ಮೇಲೆ ದಾಳಿ ಮಾಡಿತು. ಸರ್‍ರಿಯಲಿಸಂ ಪಂಥ ಎರಡು ವಿಭಾಗಗಳಾಗಿ ಬೆಳೆದು, ಒಂದು ಭ್ರಾಂತಿ ಮತ್ತು ಇನ್ನೊಂದು ಕನಸು. ಪಾಲ್‌ಕ್ಲೀ, ಪಿಕಾಬಿಯೋ ಅವರು ಭ್ರಾಂತಿಯ ಬಗ್ಗೆ ಕೃತಿಗಳನ್ನು ರಚಿಸಿದರೆ, ಚಿರಿಕೋ, ಡಾಲಿ ಕನಸುಗಳನ್ನು ಚಿತ್ರಿಸಿದರು.

ಈ ಪಂಥದ ಮೊದಲ ಕಲಾಪ್ರದರ್ಶನ ೧೯೨೫ರಲ್ಲಿ ಪ್ಯಾರಿಸ್‌ನಲ್ಲಿ ನಡೆದಾಗ, ಚಿರಿಕೋ, ಮ್ಯಾಕ್ಸ್ ಅರ್ನೆಸ್ಟ್, ಮಿರೋ, ಪಿಕಾಸೋ ಪಾಲಕ್ಲೇ ಮುಂತಾದವರ ಕೃತಿಗಳು ಪ್ರದರ್ಶಿತವಾಗಿದ್ದವು. ೧೯೨೯ರಲ್ಲಿ ಬ್ರಿಟನ್ 'ಎರಡನೆಯ ಸರ್‍ರಿಯಲಿಸ್ಟ್ ಮ್ಯಾನಿಫೆಸ್ಟೋ' ಪ್ರಕಟಿಸಿದ ಮತ್ತು ಇವರ ಚಿತ್ರಗಳಲ್ಲಿ ಕಾಲ್ಪನಿಕತೆ ಹೆಚ್ಚಾಗಿ ಚಿತ್ರಿತವಾಯಿತು. ಅಲ್ಲದೆ ಸಾಲ್ವಡಾರ್ ಡಾಲಿ ಈ ಗುಂಪನ್ನು ಸೇರಿಕೊಂಡಾಗ, ಈ ಚಳವಳಿಗೆ ಹೊಸ ಚೈತನ್ಯ ಬಂದಿತು. ೧೯೩೬ರಲ್ಲಿ ಲಂಡನ್‌ನಲ್ಲಿ ಅಂತರರಾಷ್ಟ್ರೀಯ ಕಲಾ ಪ್ರದರ್ಶನ ನಡೆಯಿತು. ಎರಡನೆ ಮಹಾಯುದ್ಧದ ನಂತರ ಸರ್‍ರಿಯಲಿಸ್ಟ್ ಪಂಥ ತನ್ನ ಕ್ರಿಯಾಶೀಲತೆಯನ್ನು ಕಳೆದುಕೊಂಡರೂ, ಈ ಪಂಥದ ಪ್ರಾರಂಭದ ಕಲಾವಿದರು ವಿಶ್ವಖ್ಯಾತಿಯನ್ನು ಪಡೆದರು.

ಸರ್‍ರಿಯಲಿಸ್ಟ್ ಪದ್ಧತಿಯು ವಿಶಿಷ್ಟ ಪ್ರವೃತ್ತಿಯನ್ನು ತೋರಿ, ಅಭಿವ್ಯಕ್ತಿಯ ಭಾಷೆಯನ್ನು ರಚಿಸುವಲ್ಲಿ ಅದು ವಿಭಿನ್ನವಾಗಿತ್ತು ಹಾಗೂ ಸರ್‍ರಿಯಲಿಸ್ಟ್ ಘಟನೆಗಳನ್ನು ಚಿತ್ರಿಸುವಾಗ ಅದು ಅತ್ಯಂತ ಸಾಮಾನ್ಯವಾದ ವಾಸ್ತವತೆಯ ಸೂತ್ರಗಳನ್ನು ಪಡೆದುಕೊಂಡಿತು. ಕೆಲವು ಸರ್‍ರಿಯಲಿಸ್ಟ್ ಕಲಾವಿದರು ಸೌಂದರ್ಯ ಪ್ರಜ್ಞೆಯ ಕ್ಷೇತ್ರದಲ್ಲಿ ಪ್ರಧಾನವಾಗಿ ಬಂದಿರುವ ಕೆಲವು ಅಭಿವೃದ್ಧಿ ಪರ ಮಾದರಿಗಳಿಗೆ ತಮ್ಮ ಸಂಬಂಧವನ್ನು ಹೇಳುವ ಬದಲು ತಾವು ಮೂಲವಾದ ಮತ್ತು ಅರ್ಥವತ್ತಾದ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿದ್ದೇವೆ ಎಂದು ಹೇಳಿಕೊಂಡಿತು.

ಈ ಪಂಥದ ಜಾನ್ ಮಿರೋ ಚಿತ್ರಗಳಲ್ಲಿ ಸಂಕೇತಗಳು ತಮ್ಮ ಸಾಂಕೇತಿಕ ಅಂಶವು ಹಂತ ಹಂತವಾಗಿ ಹುಟ್ಟಿಕೊಂಡು, ವಾಸ್ತವತೆಯನ್ನು ಅಗತ್ಯತೆಯ ಮಟ್ಟಕ್ಕೆ ಅಸಾಮಾನ್ಯ ಮಟ್ಟದಲ್ಲಿ ನಿರೂಪಿಸಲು ನಿರಂತರವಾದ ಆಸೆಯು ಕನಸಿನ ಅಥವಾ ಇನ್ನಾವುದೇ ಸ್ಥಿತಿಯನ್ನು ಪ್ರಚೋದಿಸುತ್ತದೆ. ಮಾರ್ಕ್ ಶೆಗಾಲ್‌ನ ಕೃತಿಗಳಲ್ಲಿ ಕಾಲ್ಪನಿಕತೆ ಹೆಚ್ಚಾಗಿದ್ದು, ಬಣ್ಣಗಳ ಸಮೃದ್ಧತೆಯನ್ನು ಕಾಣಬಹುದು. ಅವನ ಚಿತ್ರಗಳು ಹೆಚ್ಚಾಗಿ ಅವನ ಬಾಲ್ಯ ಜೀವನದ ಮುಗ್ಧ ಅನುಭವಗಳನ್ನು ಕಾಣಬಹುದು. ನಾವು ಇತರ ಚಿತ್ರಕಾರರಲ್ಲಿ ಕಾಣುವ ಪ್ರಪಂಚದ ಪ್ರತಿಪಾದನೆಗಳಿಗಿಂತ, ಶೆಗಾಲ್‌ನಲ್ಲಿ ಭಿನ್ನವಾಗಿದೆ. ಆದ್ದರಿಂದಲೇ ಅವನ ಕಲಾಕೃತಿಗಳಲ್ಲಿ ಕನಸೊಂದರ ಆದರ್ಶ ಪ್ರೇರಣೆಯನ್ನು ಮಾತ್ರ ಕಾಣಬೇಕು. ಸಾಲ್ವಿಡಾರ್ ಡಾಲಿ ಈ ಶತಮಾನದ ಅತ್ಯಂತ ಹೆಸರಾಂತ ಕಲಾವಿದ. ಸರ್‍ರಿಯಲಿಸಂ ಪಂಥದ ಸ್ಫೂರ್ತಿಯಿಂದ ಅಲೌಕಿಕ ಪ್ರಪಂಚವನ್ನು ಚಿತ್ರಿಸುವುದರಲ್ಲಿ ಅಗ್ರಗಣ್ಯ. ಡಾಲಿ ಫ್ರಾಯಿಡ್‌ನ ಮನಶಾಸ್ತ್ರದಿಂದ ಪ್ರಭಾವಿತನಾಗಿದ್ದನು ಮತ್ತು ಹೊಸ ಚಿಂತನೆ, ಪ್ರಯೋಗಗಳನ್ನು ನಡೆಸಿ, ನಿಜ ಜೀವನದಲ್ಲಿ ಕಾಣದೆ ಇರುವುದನ್ನು, ಅಂದರೆ ಸ್ವಪ್ನಗಳಲ್ಲಿ ಉನ್ಮಾದಾವಸ್ಥೆಯ ಅನುಭವಗಳನ್ನು ಚಿತ್ರದಲ್ಲಿ ಚಿತ್ರಿಸಿದ. ಅವನ ಅಲೌಕಿಕ ಆಕಾರಗಳು, ಮೈಥುನಾ ಮುಂತಾದ ಚಿತ್ರಗಳು ಹೊಸ ಸಂವೇದನೆಯನ್ನುಂಟು ಮಾಡಿ, ಚಿತ್ರಕಲಾ ಕ್ಷೇತ್ರದಲ್ಲಿ ದಿಗ್ಭ್ರಮೆಗೊಳಿಸಿದವು.

ನಮ್ಮ ದೇಶದ ಪುರಾಣ ಕತೆಗಳಲ್ಲಿ ಬರುವ ಸ್ವರ್ಗ, ನರಕಗಳ ಕಲ್ಪನೆ, ನರಸಿಂಹ, ಗಣಪನ, ಮತ್ಸ್ಯಾವತಾರ ಹಾಗೂ ಯಕ್ಷ, ನಾಗ, ಕಿನ್ನರ, ಅಪ್ಸರೆ, ಮಾಂತ್ರಿಕ, ಭೂತ ಮುಂತಾದವು ಸರ್‍ರಿಯಲಿಸಂ ಕಲ್ಪನೆಗಳು, ಭಾರತದ ಸಮಕಾಲೀನ ಕಲೆಯಲ್ಲಿ ಲಕ್ಷ್ಮಾ ಪೈ ಭಿಕಾಸ್ ಭಟ್ಟಾಚಾರ್‌ಜೀ, ಪರ್‌ಮ್‌ಜೀತ್ ಸಿಂಗ್ ಮುಂತಾದವರು ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕದಲ್ಲಿ ಚಂದ್ರನಾಥ ಆಚಾರ್ಯ, ಸಿ. ಚಂದ್ರಶೇಖರ್, ಕೆ.ಆರ್. ಸುಬ್ಬಣ್ಣ, ಜೆ. ಎಂ. ಎಸ್. ಮಣಿ ಮುಂತಾದವರು ಕೃತಿಗಳನ್ನು ರಚಿಸಿದ್ದಾರೆ.

ಮರಿ

## ಸಲಾನ್ (Salon-Saloon)

ಸಲಾನ್, ಸಾಲಾನ್, ಸಲೂನ್ ಇತ್ಯಾದಿಯಾಗಿ ಉಚ್ಛರಿಸಬಹುದಾದ ಈ ಪದಕ್ಕೆ ದಿವಾನ ಖಾನೆ, ಸ್ವಾಗತ ಶಾಲೆ, ಸಾರ್ವಜನಿಕರ ಸಭೆ, ಪ್ರದರ್ಶನಗಳಿಗೆ ಯೋಗ್ಯವಾದ ದೊಡ್ಡಕೋಣೆ, ಇತ್ಯಾದಿಯಾದ ಅರ್ಥಗಳು ಬಳಕೆಯಲ್ಲಿವೆ. ಆದರೆ ಕಲೆಯ ಕ್ಷೇತ್ರದಲ್ಲಿ 'ಪ್ಯಾರಿಸ್‌ನಲ್ಲಿ ನಡೆಯುವ ಜೀವಂತ ಕಲೆಗಾರರ ಕಲಾಕೃತಿಗಳ ವಾರ್ಷಿಕ ಪ್ರದರ್ಶನ' ಎಂಬ ಅರ್ಥವೇ ಪ್ರಚಲಿತವಾಗಿದೆ. ಪ್ಯಾರಿಸ್‌ನಲ್ಲಿ ೧೭೯೧ರಲ್ಲಿ ಕಲಾವಿದರು ಸೇರಿ ಸ್ಥಾಪಿಸಿದ "ಚಿತ್ರಗಾರರು ಮತ್ತು ಶಿಲ್ಪಗಾರರ ಫ್ರೆಂಚ್ ರಾಯಲ್ ಅಕಾಡೆಮಿ" ಎಂಬ ಸಂಸ್ಥೆ ವಾರ್ಷಿಕ ಪ್ರದರ್ಶನವನ್ನು ನಿಯಮಿತವಾಗಿ ನಡೆಸುತ್ತಿತ್ತು. ಈ ಪ್ರದರ್ಶನಾಂಗಣಕ್ಕೆ 'ಸಲಾನ್' ಎಂದು ಕರೆಯಲಾಗುತ್ತಿತ್ತು. ಇದು ಎಲ್ಲ ಕಲಾವಿದರಿಗೆ ಮುಕ್ತವಾಗಿದ್ದು ಬಹುಮಾನ, ಪದಕ ಇತ್ಯಾದಿಗಳನ್ನು ನೀಡಲಾಗುತ್ತಿತ್ತು. ಇದಕ್ಕೆಂದು ನಿರ್ದೇಶಿಸಿದ ತೀರ್ಪುಗಾರರು ಕೃತಿಗಳನ್ನು ಆಯ್ಕೆ ಮಾಡಿ ಪ್ರದರ್ಶಿಸಬೇಕೆಂದು ಬಯಸಿದರು. ಮ್ಯೂಸಿಯಂಗಳ ನಿರ್ದೇಶಕ ತೀರ್ಪುಗಾರರನ್ನು ನೇಮಿಸುತ್ತಿದ್ದು, ಕೆಲವೇ ಪ್ರತಿಷ್ಠಿತ ಕಲಾವಿದರ ಕೃತಿಗಳಷ್ಟೇ ಆಯ್ಕೆಯಾಗುವಂತಾಯಿತು. ಇದು ಉಳಿದವರಿಗೆ ಬೇಸರ ತಂದಿತು ೧೮೪೮ರಲ್ಲಿ ಈ ಪದ್ಧತಿ ತೆಗೆದುಹಾಕಿ, ಪ್ರದರ್ಶನ ಸಮಿತಿಯೊಂದನ್ನು ಹಲವಾರು ಕಲಾವಿದರು ಸೇರಿ ರೂಪಿಸಿದರು ಆದರೆ ಇವರು ೫೦೦೦ಕ್ಕೂ ಹೆಚ್ಚು ಕೃತಿಗಳನ್ನು ಆಯ್ಕೆ ಮಾಡಿದ್ದು ಇನ್ನಷ್ಟು ಗೊಂದಲವುಂಟಾಯಿತು. ಮತ್ತೆ ಹಳೆಯ ಪದ್ಧತಿಗೆ ಹಿಂತಿರುಗಲಾಯಿತು. ಇಂದಿಗೂ ಇದೇ ಪದ್ಧತಿ ಸಣ್ಣಪುಟ್ಟ ಬದಲಾವಣೆಗಳೊಂದಿಗೆ ಉಳಿದಿದೆ. ೧೮೭೦ರಲ್ಲಿ ೩ನೇ ನೆಪೋಲಿಯನ್ ಕೆಲವು ಕಲಾವಿದರಿಗೂ ಆಯ್ಕೆ ಸಮಿತಿಯಲ್ಲಿ ಅವಕಾಶ ಮಾಡಿಕೊಟ್ಟ. ಹಿಂದೆ ಪ್ರಶಸ್ತಿ ಪಡೆದವರನ್ನು ಮಾತ್ರ ಮುಂದಿನ ಆಯ್ಕೆ ಸಮತಿಗೆ ಉಳಿದರವರೊಂದಿಗೆ ಸೇರಿಸಿಕೊಳ್ಳುವಂತಾಯಿತು.

೧೮೬೧ರಲ್ಲಿ ೭೦೦೦ ಕೃತಿಗಳು ಬಂದಾಗ ೪೦೯೭ ಆಯ್ಕೆಯಾಯಿತು. ೧೮೬೩ರಲ್ಲಿ ೫೦೦೦ಕ್ಕೆ ಆಯ್ಕೆ ಆದುದು ೨೨೧೭ ಮಾತ್ರ ಆ ವರ್ಷದಿಂದ ಬಹುಮಾನ ಗಳಿಸಿದವರು ಮುಂದಿನ ಪ್ರದರ್ಶನಗಳಲ್ಲಿ ಭಾಗವಹಿಸುವಂತಿಲ್ಲವೆಂದು ಹಾಗೂ ಒಬ್ಬರು ಮೂರು ಕೃತಿಗಳಿಗಿಂತ ಹೆಚ್ಚಿಗೆ ನೀಡಬಾರದೆಂದೂ ನಿರ್ಣಯ ತೆಗೆದುಕೊಳ್ಳಲಾಯಿತು. ಇದರಿಂದಾಗಿ 'ತಿರಸ್ಕೃತರ ಸೆಲೂನ್'ಗೆ ಅವಕಾಶವಾಯಿತು. ಮೊದಲಿಗೆ ಪ್ರದರ್ಶನದ ಆರಂಭ ನಿಯಮಿತ ವಾಗಿರಲಿಲ್ಲ. ೧೮೩೦ರಿಂದ ೧ನೇ ಮಾರ್ಚ್‌ನಿಂದ ೧೫ನೇ ಜೂನ್ ತನಕ ಎಂದು ನಿಗದಿ ಮಾಡಲ್ಪಟ್ಟಿತು. ಮೊದಲು ಲೂರ್ವೆ ಅರಮನೆಯ ಭಾಗದಲ್ಲೇ ಇತ್ತು ನಂತರ ಹಲವಾರು ಸ್ಥಳ ಬದಲಿಸಿ ಸ್ವಂತ ಕಟ್ಟಡ ಹೊಂದಿತು. ಪ್ರವೇಶಧನ ವಹಿಸುವ ಪದ್ಧತಿ ಮೊದಲಿನಿಂದಲೂ ಇತ್ತು. ಭಾನುವಾರ, ಗುರುವಾರದಂದು ಉಚಿತ ಪ್ರವೇಶವಿತ್ತು. ೧೮೬೭ರಲ್ಲಿ ೫,೧೮,೮೯೨ ಜನ ವೀಕ್ಷಿಸಿದರು ಅವರಲ್ಲಿ ೧,೮೫,೦೦೦ ಜನ ಹಣಕೊಟ್ಟು ಬಂದಿದ್ದರು.

ಮರಿ/ಅಲನ

## ಸಲಾನ್, ತಿರಸ್ಕೃತರ (Salon-des-refuses)

ಫ್ರಾನ್ಸ್‌ನಲ್ಲಿ ವಾರ್ಷಿಕ ಪ್ರದರ್ಶನ ಮಾಡುತ್ತಿದ್ದ ಸಲಾನ್ ಸಾಕಷ್ಟು ಬಲಿಷ್ಠವಾಗಿತ್ತು. ತೀರ್ಪುಗಾರರೂ ಬಿಗಿಯಿಂದಿದ್ದರು. ೧೮೬೩ರಲ್ಲಿ ಕೃತಿಗಳ ನಿಯಂತ್ರಣಕ್ಕಾಗಿ ಒಮ್ಮೆ ಬಹುಮಾನ ಬಂದವರು ಮತ್ತೆ ಪ್ರದರ್ಶಿಸಲು ಅವಕಾಶವಿಲ್ಲವೆಂಬ ಹಾಗೂ ಒಬ್ಬರ ಮೂರು ಕೃತಿಗಳಿಗೆ ಮಾತ್ರ ಸೀಮಿತಗೊಳಿಸಿದ್ದು ಅನೇಕ ಕಲಾವಿದರಲ್ಲಿ ಅಸಮಾಧಾನ ತಂದಿತ್ತು. ಸಲಾನ್‌ನಲ್ಲಿ ಆಯ್ಕೆಯಾಗದ ಕೃತಿಗಳ ಹಿಂದೆ(R) ಎಂದು(Refuse- ತಿರಸ್ಕೃತ) ಎಂದು ಮುದ್ರೆಯೊತ್ತಲಾಗುತ್ತಿತ್ತು. ಹೀಗೆ ತಿರಸ್ಕೃತವಾದ ಕೃತಿಗಳನ್ನು ಗ್ರಾಹಕರು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಸಲಾನ್‌ನಲ್ಲಿ ಆಯ್ಕೆಯಾಗಿದ್ದೇ ಶ್ರೇಷ್ಠ ಎನ್ನುವಂತಹ ಸ್ಥಿತಿಯನ್ನು ಪ್ರದರ್ಶನಕಾರರು, ಪತ್ರಿಕೆಗಳು ಮೂಡಿಸಿದ್ದವು. ಇದೇ ವೇಳೆಗೆ ಫ್ರಾನ್ಸ್‌ನಲ್ಲಿ ಭಾವಮುದ್ರಾಪಂಥ (ಇಂಪ್ರೆಷನ್ ಇಸಂ) ತಲೆ ಎತ್ತುತ್ತಿತ್ತು. ಸಹಜವಾಗಿ ಈ ಹೊಸ ಪದ್ಧತಿ ಸಂಪ್ರದಾಯ ಬದ್ಧ ತೀರ್ಪುಗಾರರಿಗೆ ಹಿಡಿಸದೆ ತಿರಸ್ಕೃತಗೊಳ್ಳುತ್ತಿತ್ತು. ಪಂಥದ ಪ್ರವರ್ತಕ ಮಾನೆಯದೂ ಸೇರಿದಂತೆ ಹಲವರ ಕೃತಿಗಳು ತಿರಸ್ಕೃತವಾದಾಗ ಕಲಾವಿದರು ಬಂಡೆದ್ದರು. ೩ನೇ ನೆಪೋಲಿಯನ್ ಮಧ್ಯಸ್ಥಿಕೆ ವಹಿಸಿ ತಿರಸ್ಕೃತರ (ಕೃತಿಗಳ) ಪ್ರದರ್ಶನವನ್ನು ಪ್ರತ್ಯೇಕವಾಗಿ ಮಾಡುವುದಾಗಿ ಪ್ರಚಾರ ಪತ್ರ ಹೊರಡಿಸಿದ. ತಮ್ಮ ಕೃತಿಗಳ ಬಗ್ಗೆ, ತಮ್ಮ ಸಾಮರ್ಥ್ಯದ ಬಗ್ಗೆ ನಂಬಿಕೆಯಿಲ್ಲದ ಕಲಾವಿದರು ಪ್ರದರ್ಶಿಸಲು ಹಿಂಜರಿದರು. ಆದರೆ ಬಹುತೇಕ ಇಂಪ್ರಷನಿಸ್ಟ್ ಕಲಾವಿದರೂ ಇತರರೂ ಪ್ರದರ್ಶಿಸಿದ್ದು ೧೭ನೇ ಮೇ ೧೮೬೩ರಲ್ಲಿ ಪ್ರದರ್ಶನ ನಡೆದು ಮೊದಲ ದಿನವೇ ೧೦,೦೦೦ ಜನ ಪ್ರೇಕ್ಷಕರು ಬಂದರು. ಬೇರೊಂದು ಅರಮನೆಯ ಆವರಣದಲ್ಲಿ ಪ್ರದರ್ಶಿಸಿದ್ದು ದಿನ ನಿತ್ಯ ಇದೇ ಸಂಖ್ಯೆಯಲ್ಲಿ ಜನ ಬಂದರು. ಆ ವರ್ಷ ಅಧಿಕೃತ ಸಲೂನ್‌ಗೂ ಇಷ್ಟು ಪ್ರೇಕ್ಷಕರು ಬಂದಿರಲಿಲ್ಲ. ಜನ ಹಾಗೂ ವಿಮರ್ಶಕರು ಕೇವಲ ಕುತೂಹಲದಿಂದ ಬಂದರೂ ಮಿಶ್ರ ಪ್ರತಿಕ್ರಿಯೆಗಳು ಬಂದವು. ಪ್ರತಿಷ್ಠಿತ ಸಲೂನ್‌ನ ನಡವಳಿಕೆಯ ಬಗ್ಗೆ ಬೇಸರ ತಂದಿದ್ದ ಎಮಿಲಿ ಜೋಲ ಮತ್ತಿತರರು ಇಂಪ್ರಷನಿಸಂ ಕೃತಿಗಳ ಪರವಾಗಿ ನಿಂತರು. ಮುಂದೆ ತಿರಸ್ಕೃತರ ಕೃತಿ ಪ್ರದರ್ಶನಕ್ಕೇ ಅವಕಾಶವಿಲ್ಲವಾಯಿತಾದರೂ ಇಂಪ್ರಷನಿಸ್ಟರು ಸೇರಿ ಮುಂದೆ ಹತ್ತು ವರ್ಷಗಳ ನಂತರ ೧೮೭೩ರಲ್ಲಿ ತಮ್ಮದೇ ಕೃತಿಗಳ ಪ್ರದರ್ಶನಕ್ಕೆ ಸಂಸ್ಥೆಯೊಂದನ್ನು ರೂಪಿಸಿಕೊಳ್ಳುವಂತಾಯಿತು.

ಅಲನ

## ಸಸೇನಿಯನ್ ಕಲೆ (Sassanian Art)

ಇದು ಸಸೇನಿಯನ್ ರಾಜಮನೆತನದಲ್ಲಿ (ಕ್ರಿ. ಶ. ೨೨೪-೬೫೧) ಸಮೃದ್ಧವಾಗಿ ಬೆಳೆದು ಬಂದ ಒಂದು ಪರ್ಶಿಯನ್ ಕಲೆ. ಅರಡಾಶಿರ್-೧ನ ಆಡಳಿತದಲ್ಲಿ ಪರ್ಶಿಯನ್ ಸಾಮ್ರಾಜ್ಯವು ವಿಸ್ತಾರಗೊಂಡಿತು ಮತ್ತು ಸಸೇನಿಯನ್ ಅವಧಿಯು ಪ್ರಬಲವಾದ ಕೇಂದ್ರ ಸರಕಾರದ ಆಡಳಿತವನ್ನು ರಾಜ್ಯದ ಕಲೆ-ವಾಸ್ತುಶಿಲ್ಪಗಳ ಪುನರ್ ಜಾಗೃತಿಯ ಸ್ಥಿತಿಯನ್ನೂ ಕಂಡಿತು. ಲೋಹದ ಕೆಲಸವು ಅತೀ ಮುಖ್ಯವಾದ ಕಲಾವೃದ್ಧಿಯದಾಗಿತ್ತು. ಅಂದರೆ, ಲೋಹದೊಳಗೆ ಉಬ್ಬುಚಿತ್ರ, ಕೆತ್ತಿಕೂಡಿಸುವ ಚಿತ್ರ, ಕೊರೆಯುವ ಕೌಶಲ್ಯವು ಮೆಚ್ಚುವಂತಹದಾಗಿತ್ತು. ಅತಿಮಾನುಷ ವ್ಯಕ್ತಿಗಳ ಪ್ರತಿಮೆ ಮತ್ತು ನಿತ್ಯಜೀವನದ ಚಿತ್ರಗಳನ್ನು ಈ ಕೆತ್ತನೆಯಲ್ಲಿ

ಕಾಣಬಹುದು. ಈ ಅವಧಿಯ ಹರಳು ಮತ್ತು ಗಾಜಿನ ಕೆಲಸವು ಕೂಡ ಅತ್ಯಂತ ಸೂಕ್ಷ್ಮವಾದುದು. ಸ್ಫಟಿಕದ ಹರಳಿನಲ್ಲಿ ಸಿಂಹಾಸನಾರೂಢನಾದ ರಾಜನ ಆಕೃತಿಯಲ್ಲಿ ಬಿಳಿ ಹಾಗೂ ಕೆಂಪು ಹರಳುಗಳನ್ನು ಖಚಿತಪಡಿಸಲಾಗಿದ್ದುದು ಇದಕ್ಕೊಂದು ನಿದರ್ಶನ. ಸುಣ್ಣದ ಕಲ್ಲಿನ ಶಿಲ್ಪಗಳು ಭವ್ಯ ಸ್ಮಾರಕಗಳಾಗಿವೆ. ಅಲ್ಲಲ್ಲಿ ಎತ್ತರವಾದ ಬಂಡೆಗಲ್ಲುಗಳ ಮೇಲೆ ಇಂತಹ ಶೈಲಿಯನ್ನು ಕಾಣಬಹುದಾಗಿದೆ. ಉದಾಹರಣೆಗೆ ಅರ್‌ಮಜ್ದ ದೇವತೆಯು ಅರ್ಧಶಿಗೆ ಅಧಿಕಾರವನ್ನು ವಹಿಸಿಕೊಟ್ಟ ಚಿತ್ರಣವನ್ನು ನಕ್ಷ್-ಇ-ರಜಾಬ್‌ದಲ್ಲಿ ಕಾಣಬಹುದು.

ಅ.ಜಾ.

## ಸ್ಯಾಂಡ್ ಪೇಂಟಿಂಗ್ (Sand painting)

ಒಣಗಿದ ಉಸುಕಿನ ಮೇಲೆ ಚಿತ್ರ ಬಿಡಿಸುವ ಮೂಲ ನಿವಾಸಿಗಳ ಈ ಕಲೆಗೆ ಸ್ಯಾಂಡ್ ಪೇಂಟಿಂಗ್ ಎನ್ನುತ್ತಾರೆ. ಇದನ್ನು ನಮ್ಮಲ್ಲಿನ ರಂಗೋಲಿ ಮತ್ತು ಮಂಡಲ ರಚನೆಗೆ ಹೋಲಿಸಬಹುದು. ಈ ಕಲೆಯು ಆಸ್ಟ್ರೇಲಿಯಾ, ಭಾರತ, ಜಪಾನ್, ಟಿಬೇಟ್ ಮತ್ತು ದಕ್ಷಿಣ ಅಮೆರಿಕಾದಲ್ಲಿ ರೂಢಿಯಲ್ಲಿತ್ತು. ಇದು ಇನ್ನೂ ನವಾಜೋ ಇಂಡಿಯನ್ಸ್‌ರಲ್ಲಿ ಪ್ರಚಲಿತವಿದೆ. ಅವರ ಸ್ಯಾಂಡ್ ಪೇಂಟಿಂಗ್‌ಗಳು ಮೂರು ಮೀಟರ್ ಚೌರಸದಲ್ಲಿ ರಚಿಸಲಾದ ದೇವತೆಗಳು, ಎಲೆಗಳು, ಪ್ರಾಣಿಗಳು, ಕಾಮನಬಿಲ್ಲು, ಮಿಂಚಿನ ಚಿತ್ರಗಳಿಂದ ಕೂಡಿದ ಉಚ್ಚ ಶೈಲಿಯವುಗಳಾಗಿವೆ. ಬಣ್ಣದ ಕಲ್ಲುಗಳನ್ನು ಅರೆದು ಉಸುಕಿನ ಪುಡಿಯನ್ನು ತಯಾರಿಸುತ್ತಾರೆ. ಹಳದಿ ಮಿಶ್ರಿತ ಬಿಳಿ ಉಸುಕಿನ ತಳಹದಿಯ ಮೇಲೆ ವಿವಿಧ ಬಣ್ಣಗಳ ಉಸುಕಿನ ಮೇಲೆ ಬೆರಳುಗಳಿಂದ ಗೆರೆ ಎಳೆಯುತ್ತಾರೆ. ಸಾಂಪ್ರದಾಯಿಕವಾಗಿ ಬಳಸುವ ಬಣ್ಣಗಳು - ಕಪ್ಪು (ಉತ್ತರ ದಿಕ್ಕು ಮತ್ತು ಪುರುಷ ಸಂಕೇತ) ನೀಲಿ (ದಕ್ಷಿಣ ದಿಕ್ಕು ಮತ್ತು ಸ್ತ್ರೀ ಸಂಕೇತ) ಬಿಳಿ(ಪೂರ್ವ), ಹಳದಿ(ಪಶ್ಚಿಮ) ಮತ್ತು ಕೆಂಪು (ಸೂರ್ಯನ ಪ್ರಖರ) ಇವುಗಳನ್ನು ನಿರ್ದೇಶಿಸುತ್ತವೆ. ಕಂದು ಹಾಗೂ ಎಳೆಗೆಂಪು ಬಣ್ಣಗಳು ನೂತನ ಅಳವಡಿಕೆಗಳಾಗಿವೆ. ಇಂತಹ ಸುಮಾರು ೬೫ ಆಕೃತಿಗಳ(ಚಿತ್ರಗಳ) ಒಂದು ಭಾಗವು ಒಂದೊಂದು ಚಿಕಿತ್ಸಾ ಆಚರಣೆ ಅಥವಾ ಮಾಂತ್ರಿಕ ಸಮಾರಂಭಕ್ಕೆ ಸಂಬಂಧಪಟ್ಟಂತಿರುತ್ತವೆ. ಆಚರಣೆಯ ನಂತರ ಈ ಚಿತ್ರಗಳನ್ನು ಅವಶೇಷ ಉಳಿಯದಂತೆ ಅಳಿಸಿ ಹಾಕುತ್ತಾರೆ ಹಾಗೂ ಈ ನಕ್ಷೆಗಳನ್ನು ಸ್ಮೃತಿರೂಪದಲ್ಲಿ ಕಾಯ್ದುಕೊಂಡು ಬರುತ್ತಾರೆ.

ಅ.ಜಾ.

## ಸಾಂಪ್ರದಾಯಿಕ ಕಲೆ, ಮೈಸೂರು

ವಿಜಯನಗರದ ಪತನಾನಂತರ ಮೈಸೂರು ಅರಸರ ಪೋಷಣೆಯಲ್ಲಿ ಬೆಳೆದು ಬಂದ ಕಲಾಶೈಲಿಯನ್ನು ಮೈಸೂರು ಸಾಂಪ್ರದಾಯಿಕ ಕಲೆ ಎಂದು ಗುರುತಿಸಲಾಗುತ್ತದೆ. ಇಲ್ಲಿಯೂ ಚಿತ್ರಿತ ವಿಷಯ ರಾಜಪರಿವಾರದ ಹಾಗೂ ದೇವದೇವಿಯರದೇ ಆದರೂ, ಗುಂಡನೆಯ ಅಂಗಾಂಗಗಳ ಕುಬ್ಜ ಆಕೃತಿಗಳ ಸುಂದರವಾದ ದುಂಡು ಮುಖಭಾವದ, ಅಗಲ ಕಂಗಳ, ಮಂದಸ್ಮಿತವಾದ ಆಕಾರಗಳು ತಮ್ಮದೇ ಶೈಲಿಯಿಂದ ಪ್ರಸಿದ್ಧಿಯನ್ನು ಪಡೆದಿವೆ. ಆಕಾರಗಳಿಗೆ ಹಾಗೂ ಹಿನ್ನೆಲೆಗೆ ಸಪಾಟಾಗಿ ಬಣ್ಣಗಳನ್ನು ಹಚ್ಚಿರುವುದೇ ಅಧಿಕ. ತೀರ ತೆಳುವಾಗಿ



ಆಕಾರಗಳಿಗೆ ಛಾಯಾಂಕನ ಮಾಡಿ ದುಂಡು ತನವನ್ನು ಹೆಚ್ಚಿಸಿರುವುದುಂಟು. ಮೋಡಗಳ ಚಿತ್ರಣದಲ್ಲಿ ಛಾಯಾಂಕನ ಸ್ವಲ್ಪ ಅಧಿಕವಾಗಿ ಕಂಡುಬರುತ್ತದೆ. ಆರಂಭಕಾಲದ ಚಿತ್ರಗಳಲ್ಲಿ ಹಿನ್ನೆಲೆಗೆ ಗಾಢವಾದ ಹಸಿರು ಬಣ್ಣವಿದ್ದು ನಂತರದ ಕಾಲದಲ್ಲಿ ನೀಲಿಯನ್ನು ಬಳಸಿದೆ. ಅಲ್ಲದೆ ಇಂಗ್ಲಿಷ್ ಚಿತ್ರಗಳಲ್ಲಿ ಕಂಡುಬರುವ ಬಾಲಕ ಕ್ಯೂಪಿಡ್‌ನನ್ನು ಹೋಲುವಂತೆ ಮಾಲೆ ಹಿಡಿದಿರುವ ಇಲ್ಲವೆ ಹೂ ಚಲ್ಲುತ್ತಿರುವ, ಹಾರುವ ಗಂಧರ್ವರನ್ನು ಚಿತ್ರದ ಮೇಲು ತುದಿಯ ಎರಡು ಮೂಲೆಗಳಲ್ಲಿ ಚಿತ್ರಿಸಿರುವುದುಂಟು.

ಕಲಾವಿದನಲ್ಲಿ ಸಿದ್ಧವಾದ ಹಲವಾರು ಆಕಾರಗಳಿದ್ದು ಬೇಡಿಕೆಯನ್ನು ಅನುಸರಿಸಿ ಒಂದೆರಡೇ ಆಕೃತಿಗಳುಳ್ಳ ಚಿತ್ರಗಳಿಂದ ಹಿಡಿದು, ವಿವಾಹ ಮಂಟಪ ಅಥವಾ ರಾಜನ ಆಸ್ಥಾನ ದೃಶ್ಯಗಳು ಬಂದಾಗ ಗುಂಪು ಚಿತ್ರಣವನ್ನೂ ರಚಿಸುತ್ತಿದ್ದರು. ಕೆಲವೇ ಆಕೃತಿಗಳಿದ್ದಾಗ ಸುತ್ತಲೂ ಹೂ ಬಳ್ಳಿಗಳ ಡಿಸೈನ್‌ಗಳಿಂದ ಅಲಂಕರಿಸಿರುವುದು, ಚಿತ್ರದ ಒಳಭಾಗದಲ್ಲಿ ಗಾಜಿನ ಗೋಳಾಪು ಇಲ್ಲವೆ ಗಡಿಯಾರ, ಮೇಜು, ಹೂದಾನಿ, ಬಟ್ಟೆಯ ತೆರೆ ಇತ್ಯಾದಿಗಳಿಂದ ಸಂಯೋಜನೆಯನ್ನು ನಿರ್ವಹಿಸಿರುವುದನ್ನು ಕಾಣಬಹುದು.

ಮೈಸೂರು ಸಾಂಪ್ರದಾಯದ ಇನ್ನೊಂದು ಮುಖ್ಯ ಅಂಶವೆಂದರೆ 'ಜಸ್ಸೋ' ಕೆಲಸ ಚಿನ್ನದ ಬಣ್ಣ ಅವಶ್ಯಕತೆಯಿರುವಲ್ಲಿ ಸಫೇದ (ಬಿಳಿ) ಮಕ್ಕ ಗ್ಯಾಂಬೋಜ್ (ಹಳದಿ) ರಾವಣಚಿನ್ನಿ ಹಾಲುಗಳು ಮಿಶ್ರಣವನ್ನು ಹಚ್ಚಿ ಚಿನ್ನದ ರೇಕು ಇರಿಸಿ ಮೃದುವಾಗಿ ಒತ್ತಿ ಛಾಯಾಂಕನ ಮಾಡಿ ಇಡಿ ಕೃತಿ ಒಣಗಿದ ಮೇಲೆ ತೆಳುವಾದ ಕಾಗದದಿಂದ ಹೊದಿಸಿ

ಕಲುಪದ ಕಲ್ಲು ಇಲ್ಲವೆ ಗಜ್ಜುಗದ ಬೀಜದಿಂದ ಉಜ್ಜಿದಾಗ ಚಿತ್ರಕ್ಕೆ ಒಂದು ವಿಧವಾದ ಹೊಳಪು ಬಂದು ಆಕರ್ಷಕವಾಗಿ ಕಾಣುವಂತಾಗುತ್ತದೆ. ಕೆಳಗಿನ ಚಿತ್ರ ನಾಶವಾಗದಂತೆ ತೀರ ಎಚ್ಚರಿಕೆಯಿಂದ ಮಾಡಬೇಕಾದ ಕೆಲಸವಿದು.

ಮೈಸೂರು ಸಂಪ್ರದಾಯ ಶೈಲಿಯಲ್ಲಿಯೇ, ಮೈಸೂರು ಅರಮನೆಯ ಆವರಣದಲ್ಲಿರುವ ವರಾಹಸ್ವಾಮಿ, ಪ್ರಸನ್ನ ಕೃಷ್ಣಸ್ವಾಮಿ ಗುಡಿಗಳಲ್ಲಿ ಅನೇಕ ಭಿತ್ತಿಚಿತ್ರಗಳನ್ನು ಕಾಣಬಹುದು. ಮೈಸೂರು ಅರಮನೆಯಿಂದ ಕಳೆದ ಶತಮಾನದಲ್ಲಿ ಕಲ್ಲಚ್ಚಿನಲ್ಲಿ ಮುದ್ರಿತವಾದ ಸೌಗಂಧಿಕಾಪಹರಣ, ಸಂಖ್ಯಾರತ್ನಕೋಶ ಇತ್ಯಾದಿಗಳಲ್ಲೂ ಶ್ರೀ ತತ್ವನಿಧಿ ಇತ್ಯಾದಿ ಹಸ್ತಪ್ರತಿ ಗ್ರಂಥಗಳಲ್ಲೂ ಮೈಸೂರು ಸಂಪ್ರದಾಯದ ಸಾವಿರಾರು ಚಿತ್ರಗಳನ್ನು ಕಾಣಬಹುದು.

ಮೂ.ಮಂ.

## ಸಾಂಪ್ರದಾಯಿಕ ಕಲೆ, ತಂಜಾವೂರು

ದಖ್ಖನಿ ಚಿತ್ರಗಳಿಂದ ಪ್ರೇರಿತಗೊಂಡ ಶೈಲಿಯೊಂದು ಮರಾಠರಲ್ಲಿ ಕಾಣಿಸಿಕೊಂಡಿತು. ಈ ಮರಾಠರು ತಂಜಾವೂರು, ಮಧುರೆಗಳನ್ನು ರಾಜಕೀಯ ಕ್ಷೇತ್ರವಾಗಿ ಮಾಡಿಕೊಂಡಾಗ, ಸ್ಥಳೀಯ ವಿಜಯನಗರ ಶೈಲಿಯೊಂದಿಗೆ ಮಿಳಿತವಾಗಿ 'ತಂಜಾವೂರು ಶೈಲಿ' ಉದಯವಾಯಿತೆನ್ನಬಹುದು. ಶರಭೋಜಿ ಇತ್ಯಾದಿ ರಾಜರು ಸಾಹಿತ್ಯ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ್ದು ತಂಜಾವೂರು ಶೈಲಿ ಗಟ್ಟಿಯಾಗಿ ಇಂದಿಗೂ ಉಳಿದು ಬರುವಂತೆ ಮಾಡಿತು.

ಮರದ ಹಲಗೆಯ ಮೇಲೆ ಬಟ್ಟೆಯನ್ನು ಅಂಟಿಸಿ, ಕಚ್ಚಾ ಸುಣ್ಣದ ಪುಡಿಯನ್ನು ಹುಣಸೇ ಬೀಜದ ಸರಿಯಿಂದ ಕಲಸಿ ಹೊರ ರೇಖೆಗಳಿಗೆ ಬಳಸಿಕೊಳ್ಳುತ್ತಾರೆ. ನೀಲಿ, ಕೆಂಪು ಇತ್ಯಾದಿಗಳನ್ನು ಗಾಢವಾಗಿ ಹಿನ್ನೆಲೆಯಲ್ಲಿ ಬಳಸಿ ಆಕಾರಗಳು ಎದ್ದು ಕಾಣುವಂತೆ ಮಾಡುವುದೇ ಅಧಿಕ. ಇಲ್ಲಿಯ ಆಕಾರಗಳೂ ಹೆಚ್ಚು ಚಲನಶೀಲವಲ್ಲದೆ, ಸ್ಥೂಲಕಾಯವಾಗಿರುತ್ತವೆ. ದೇಹದ ದುಂಡುತನ ಹೆಚ್ಚಿರುತ್ತದೆ. ರಾಜಪರಿವಾರದ ಚಿತ್ರಣದಲ್ಲಿ ಬ್ರಿಟಿಷ್ ಚಿತ್ರ ಪ್ರೇರಿತವಾಗಿ ಹೆಚ್ಚಿನ ಛಾಯಾಂಕನ ಕಾಣಬಹುದು. ಆಭರಣ ಇಲ್ಲವೆ ಡಿಸೈನ್‌ಗಳಿಗೆ ಹಾಕುವ ಹೊರರೇಖೆಗಳು ಎದ್ದು ಕಾಣುವಂತೆ ರೂಪಿಸಿರುತ್ತಾರೆ. ಆಭರಣಗಳ ರಚನೆಯನ್ನು ನೈಜವಾಗಿ ಕಾಣಿಸಲೆಂಬಂತೆ ಉಬ್ಬಿದ ಆಕಾರ ನೀಡಿ ರಚಿಸುವುದಲ್ಲದೆ ನಿಜವಾದ ಆಭರಣಗಳನ್ನೇ ಹದ್ದಿಸುವುದೂ ಉಂಟು. ಇದರಿಂದಾಗಿ ಅವುಗಳ ಖರೀದಿ ಬೆಲೆಯೂ ಹೆಚ್ಚಾಗಿರುತ್ತದೆ.

ಇದೇ ಶೈಲಿಯಲ್ಲಿ ಗಾಜಿನ  ಮೇಲೂ ಚಿತ್ರಿಸುವುದು ಇಂದಿಗೂ ಉಳಿದು ಬಂದಿದೆ. ಇವು ಕಿರು ಆಕಾರಗಳಿಂದ ಹಿಡಿದು ದೊಡ್ಡ ಅಳತೆಯವರೆಗೂ ಇರುತ್ತದೆ. ಸ್ತನ್ಯಪಾನ ಮಾಡುತ್ತಿರುವ ಬಾಲಕೃಷ್ಣ ಇಲ್ಲವೆ ಕೃಷ್ಣನ ಬಾಲಲೀಲೆಗಳು, ರುಕ್ಮಿಣಿ, ಸತ್ಯಭಾಮರೊಂದಿಗೆ ಕೃಷ್ಣ ಇತ್ಯಾದಿ ಪೌರಾಣಿಕ ದೃಶ್ಯಗಳೂ, ಮಧುರೆಯ ಪಾಂಡ್ಯರಾಜ ಇತ್ಯಾದಿ ಐತಿಹಾಸಿಕ ದೃಶ್ಯಗಳೂ ಅಧಿಕವಾಗಿ ರಚನೆಯಾಗುತ್ತವೆ. ಇತ್ತೀಚೆಗೆ ಕಂಚಿ, ತಂಜಾವೂರು, ಮಧುರೆ ಇತ್ಯಾದಿ ಕಡೆಗಳಲ್ಲಿ ಈ ಸಾಂಪ್ರದಾಯಿಕ ಚಿತ್ರ ರಚನೆ ಉದ್ಯಮದಂತೆ ರೂಪುಗೊಂಡಿದೆ.

ಮೂ.ಮಂ.

## ಸಾರನಾಥ

ಇದು ಕಾಶಿಯಿಂದ ನಾಲ್ಕು ಮೈಲಿ ದೂರದಲ್ಲಿದೆ. ಗೌತಮಬುದ್ಧನು ಮೊದಲು ತನ್ನ ಬೋಧೆಯನ್ನು ಗೈದ ಪವಿತ್ರ ತಾಣ. ಹಾಗೂ ಐತಿಹಾಸಿಕ ದೃಷ್ಟಿಯಲ್ಲಿ ಸಾರನಾಥವು ಒಂದು ಪುರಾತನ ನಿವೇಶನ. ಇಲ್ಲಿಯೇ ನ್ಯಗ್ರೋಧಮೃಗದ (ಭಾರ್ಹೂತ್‌ನಲ್ಲಿ ಕಾಣಬರುವಂತೆ) ಪ್ರಸಂಗ ಜರುಗಿತೆಂಬ ನಂಬಿಕೆಯಿದೆ.

ಸಾರಂಗನಾಥ, ಜಿಂಕೆಯೊಡೆಯದ-ಸಂಕ್ಷಿಪ್ತರೂಪ 'ಸಾರನಾಥ' ಸನಿಹದ ಶಿವನ ಹೆಸರು ಕೂಡ. ಕುಶಾನರ ಒಂದು ಶಾಸನ ಇಲ್ಲಿ ದೊರೆತಿದ್ದು ಈ ಕಥೆಯನ್ನು ಭಾಗಶಃ ತಿಳಿಸುತ್ತದೆ. ಹ್ಯುಯೆನ್‌ಸಾಂಗ್, ಫಾಹಿಯಾನರು ಸಂದರ್ಶಿಸಿದ ತಾಣ ಇದು ಆ ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿದ್ದ ಅನೇಕ ಸ್ತೂಪ-ವಿಹಾರಗಳ ಬಣ್ಣನೆ, ಇಬ್ಬರ ಬರಹದಲ್ಲೂ ದಾಖಲಾಗಿದೆ.

ಇಲ್ಲಿರುವ ಅಶೋಕಸ್ತಂಭದ ತುದಿಯಲ್ಲಿ ನಾಲ್ಕು ಸಿಂಹಗಳ ಮುಖದ ಶಿಲ್ಪವಿದೆ. ಇಂಡಿಯಾದ ರಾಷ್ಟ್ರ ಸಂಕೇತವಾಗಿ ಸಾರನಾಥದ ಶಿಲ್ಪವನ್ನು ಸ್ವೀಕರಿಸಲಾಗಿತ್ತು. ಈ ಸ್ಮಾರಕ, ಈಗ ಸ್ಥಳೀಯ ಮ್ಯೂಜಿಯಂನಲ್ಲಿದೆ. ಅಶೋಕನೆ ಸಾರನಾಥ ಧರ್ಮರಾಜಿಕ ಸ್ತೂಪವನ್ನು ಸ್ಥಾಪಿಸಿದ್ದು. ಬುದ್ಧನ ಜೀವನ, ಬೋಧೆಗಳಿಗೆ ಸಂಬಂಧಿಸಿದಂತೆ ಪ್ರಮುಖ ಸ್ಥಳಗಳಲ್ಲಿ ಮಂದಿರ, ವಿಹಾರಗಳನ್ನೂ ಅಶೋಕ ನಿರ್ಮಿಸಿದ. ಕೆಮ್ಮರಳು ಶಿಲೆಯ ಬೋಧಿಸತ್ವನ ವಿಗ್ರಹ ಅಪರೂಪದ್ದು.

ಸಾರನಾಥ, "ಎಂಟು ಮಹತ್ವದ ಸ್ಥಾನ"ಗಳಲ್ಲೊಂದಾದ್ದರಿಂದ, ಬುದ್ಧನ ಬದುಕಿನ ಚಿತ್ರಣ ನೀಡುವ ಶಿಲ್ಪ ಇವೆ. ಕ್ರಿ.ಶ. ೧೨ನೆಯ ಶತಮಾನದಲ್ಲಿ ಗೋವಿಂದಚಂದ್ರನೆಂಬಾತನ ಮಡದಿ ಕುಮಾರಿದೇವಿ, "ಧರ್ಮಚಕ್ರಜಿನ ವಿಹಾರ"ವೆಂಬ ದೊಡ್ಡ ಬೌದ್ಧ ವಿಹಾರವನ್ನ ನಿರ್ಮಿಸಿದಳು ಈಚೆಗೆ ನಡೆದ ಉತ್ಖನನಗಳಲ್ಲಿ ಸಾಕಷ್ಟು ಶಿಲ್ಪಗಳು ದೊರೆತಿವೆ.

ವಿಕೃನಾ

## ಸಾಲಿಗ್ರಾಮ

ಸಾಲಿಗ್ರಾಮ ಮೈಸೂರು ಜಿಲ್ಲೆಯ ಕೆ.ಆರ್. ನಗರ ತಾಲ್ಲೂಕಿನಲ್ಲಿದೆ ಇಲ್ಲಿಯ ಅನಂತನಾಥ ಬಸ್ತಿಯನ್ನು ೧೮೭೭ರಲ್ಲಿ ನಿರ್ಮಿಸಲಾಯಿತು.

ಇಲ್ಲಿಯ ನವರಂಗದ ದೂಲದ ಮೇಲೆ ಹಾಗೂ ಒಳಭಾಗದಲ್ಲಿ ಜೈನ ತೀರ್ಥಂಕರರಿಗೆ ಸಂಬಂಧಿಸಿದ ಕಥೆಗಳನ್ನುಚಿತ್ರಿಸಿದೆ. ತೀರ ಸರಳವಾಗಿ, ರೇಖಾ ಪ್ರಧಾನವಾಗಿ ಚಿತ್ರಿತವಾಗಿರುವ ಇವು ಮೂಲತಃ ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿದ್ದವು. ಈಚೆಗೆ ಹಳೆಯ ಚಿತ್ರದ ಆಕಾರಗಳನ್ನು ಉಳಿಸಿಕೊಂಡು ತೈಲ ವರ್ಣದಲ್ಲಿ ಇಡೀ ಚಿತ್ರಗಳನ್ನು ತಿದ್ದಿ ಬರೆದಿದ್ದಾರೆ. ಹಿನ್ನೆಲೆಯ ಪ್ರೌಢವಾದ ಕೆಂಪು ಬಣ್ಣ ತೀಕ್ಷ್ಣವಾಗಿದ್ದು ಹೊಂದಲಾರದೆ ಹೋಗಿದೆ.

ಅಲವ

## ಸ್ಕ್ರ್ಯಾಚ್ ಬೋರ್ಡ್

ಮೇಲಿನ ತಂತ್ರಕ್ಕೆ ಸಮೀಪವಾದ ಈ ವಿಧಾನದಲ್ಲಿ ಚಾಕ್ ಸವರಿರುವ ತಳಹದಿಯನ್ನು ಇಂಕ್ ಮತ್ತು ಕ್ರೆಯಾನ್‌ಗಳಲ್ಲಿ ಚಿತ್ರಿಸಲು ಬಳಸಲಾಗುತ್ತದೆ. ತಪ್ಪುಗಳಿದ್ದಲ್ಲಿ ಅದನ್ನು ಚಾಕ್ ಇರುವ ಪದರಗಳನ್ನು ಕೆರೆದು ತೆಗೆಯುವುದರ ಮೂಲಕ ಸರಿಪಡಿಸಬಹುದು.

**ಸ್ಕ್ಯಾಪ್ ಬೋರ್ಡ್**

ತೆಳುವಾದ ಕಾರ್ಡ್‌ಬೋರ್ಡ್ ಹಾಳೆಯೊಂದರ ಮೇಲೆ ಮೊದಲು ಚೈನಾ ಕ್ಲೇಯನ್ನು ಹಚ್ಚಲಾಗುತ್ತದೆ. ನಂತರ ಅದರ ಮೇಲೆ ಇಂಡಿಯನ್ ಇಂಕನ್ನು ಹಚ್ಚಲಾಗುತ್ತದೆ. ಚೂಪಾದ ಮೊನೆಯಿರುವ  ಉಪಕರಣದಿಂದ ಕೆರೆದಾಗ ಮೇಲಿನ ಕರಿಬಣ್ಣವಷ್ಟೇ ಹೋಗಿ ಕೆಳಗಿನ ಬಿಳಿ ರೇಖೆಯಾಗಿ ಕಾಣುತ್ತದೆ.

**ರಕಾಶಿ**

## ಸಿಂಬಾಲಿಸಂ (Symbolism)

ಫ್ರಾನ್ಸ್ ದೇಶದಲ್ಲಿ ಜನ್ಮತಳೆದ ಒಂದು ಸಾಹಿತ್ಯ ಚಳುವಳಿ. "ಕವನಗಳು, ದೈಹಿಕ ಮತ್ತು ನೀತಿಯ(moral) ಪ್ರಪಂಚಗಳನ್ನು ಮಾನವ ಆತ್ಮದ ಅತಿ ಗುಟ್ಟಿನ ಸಂಕೇತಗಳ ಮೂಲಕ ಸಂಬಂಧ ಕಲ್ಪಿಸಬೇಕೆಂದು" ಅವರುಗಳ(ಸಿಂಬಾಲಿಸ್ಟ್ ಕವಿಗಳ) ನಂಬಿಕೆ/ಆಶಯವಾಗಿದ್ದಿತು. ಆಲ್‌ಫ್ರೆಡ್-ಡಿ ವಿಗ್ನಿ ಎಂಬಾತನ ಮೂಲಕ ಈ ಕಲಾ ಚಳುವಳಿ ಪ್ರಾರಂಭಗೊಂಡರೂ, ಇದು ಪ್ರಖ್ಯಾತಿಗೆ ಬಂದುದು ಕವಿಗಳಾದ ಮಲ್ಲಾರ್ಮ್ ಬೋದಿಲೇರ್ ಮತ್ತು ವರ್ಲೇಯ್ನ್‌ರ ಮೂಲಕ. ಈ ಕಾವ್ಯ ಚಳುವಳಿಗೆ ಹತ್ತಿರವಾದ ಸಿಂಬಾಲಿಸ್ಟ್ ದೃಶ್ಯಕಲಾ ಪಂಥದ ಮುಂಚೂಣಿಯಲ್ಲಿದ್ದಾತ ಓಡಿಲಾನ್  ರೆಡಾನ್ ಎಂಬಾತ. ಈತನ ಕನಸು ಫ್ಯಾಂಟಸಿಯಂತಹ ಚಿತ್ರಗಳು ಬದುಕಿನ ನೈಜತೆಯ ವಿವಿಧ ಮಜಲುಗಳನ್ನು ಅನುಭವಿಸುವುದರ ಮೂಲಕ ದೊರಕಿತ್ತು.

ಗುಸ್ತೇವ್ ಮೋರ್ರೂ ಎಂಬಾತ ಮತ್ತೊಬ್ಬ ಸಿಂಬಾಲಿಸ್ಟ್ ಕಲಾಕಾರ. ಬೈಬಲ್ ಕಥೆಗಳು ಹಾಗೂ ಪೌರಾಣಿಕ ಫ್ಯಾಂಟಸಿ ವಿಷಯ ವಸ್ತುಗಳನ್ನು ರಚಿಸಿದ್ದಾನೆ. ಈ ಕೃತಿಗಳಲ್ಲೆಲ್ಲಾ ನಿಗೂಢ ಸಾಂಕೇತಿಕ ಮಹತ್ವಗಳುಂಟು.

ಸಾಂಕೇತಿಕ ವರ್ಣಗಳು: ಕೆಲವು ಬಣ್ಣಗಳನ್ನು ಮನುಷ್ಯನ ಗುಣ-ಸ್ವಭಾವಗಳೊಂದಿಗೆ ಸಾಂಕೇತಿಕವಾಗಿ ತಾಳೆ ಹಾಕಿ ನೋಡಲಾಗಿದೆ. ಬಿಳುಪು=ಶುದ್ಧತೆ; ಹಳದಿ=ಹೇಡಿತನ; ನೀಲಿ=ಮುಗ್ಧ ಸೌಮ್ಯ; ಕೆಂಪು= ಧೈರ್ಯ, ನಂಬಿಕೆ; ನೇರಳೆ=ದಿವ್ಯಗುಣಗಳು; ಹಸಿರು=ಆಶಾವಾದ ಮತ್ತು ಕಪ್ಪು=ದುಷ್ಟತೆ.

ಆಧುನಿಕ ಕಲೆಯಲ್ಲಿ ಅಷ್ಟೇನೂ ಮಹತ್ವದ ಪಾತ್ರವಹಿಸದಿದ್ದರೂ ಸಿಂಬಾಲಿಸಂ, ಸರ್ರಿಯಲಿಸಂನೊಂದಿಗೆ ಒಂದು ಸಾಮ್ಯತೆ ಹೊಂದಿದೆ: ಎರಡೂ ಕಲಾ ಪ್ರಕಾರಗಳು ದೃಶ್ಯಕಲೆಯಿಂದ ಹೊರತಾದ ಕಲೆಯಿಂದ (ಸಾಹಿತ್ಯದಿಂದ) ಜನಿಸಿ, ಮುಂದೆ ಇತರ ಕಲಾಪ್ರಕಾರಗಳಲ್ಲಿ ಹರಡಿಕೊಂಡಿದೆ.



ಗುಸ್ತಾವ್ ಮೊರೆಯೂ

ಕೆಲವು ಸಂಕೇತಗಳನ್ನು ಸುಲಭವಾಗಿ ಒಬ್ಬ ವ್ಯಕ್ತಿ ಅಥವಾ ಒಂದು ವಿಷಯವನ್ನು (ಕಲೆಯಲ್ಲಿ) ಕುರಿತಂತೆ ಸುಲಭವಾಗಿ ಗುರ್ತಿಸಬಹುದು. ಆದರೆ ಕೆಲವು ಕಲಾಸಾಂಕೇತಗಳನ್ನೂ ಅರ್ಥೈಸಲು ಅದರ ಹಿನ್ನೆಲೆಯು ತಿಳುವಳಿಕೆಯ ಅಗತ್ಯತೆಯೂ ಉಂಟು, ಉದಾಹರಣೆಗೆ ಅಭಯಹಸ್ತವು ರಕ್ಷಣೆಗೆ ಸಂಕೇತವಾದರೆ(ಭಾರತೀಯ ಮತ್ತು ಓರಿಯಂಟಲ್ ಕಲೆಗಳಲ್ಲಿ) ಇದೇ ಪುರಾಣಗಳಲ್ಲಿ ನವಿಲುಗರಿ, ದೇವತೆಗಳ ಅಸ್ತ್ರಗಳು, ವಾಹನಗಳು ಇತ್ಯಾದಿಗಳು. ಕೊಳಲು, ಗರುಡ, ಕುಂಕುಮ, ಮುಂತಾದುವು ಕಲೆಯಲ್ಲಿ ರೂಢಿಗತವಾಗಿ ಮೂಡಿಬಂದಿರುವ ಸಂಕೇತಗಳು.

ಭಾರತದ ಯಾವತ್ತೂ ದೇವದೇವತೆಯರನ್ನು ಗುರುತಿಸುವುದು ಅವರುಗಳ ಬಳಿಯಿರುವ ವಸ್ತು ಸಂಕೇತಗಳಿಂದಲೇ

ಎಚ್.ಎ.ಅ.

## ಸ್ಥಿರ ಚಿತ್ರಣ (Still life)

ಸ್ಥಿರಚಿತ್ರಣ ಸಂಯೋಜನೆಯನ್ನು ಅಭ್ಯಸಿಸಲು ಮತ್ತು ಬಣ್ಣದ ಪರಿಣಾಮವನ್ನು ಅರಿಯಲು ವಿವಿಧ ವಸ್ತುಗಳ ಬೆಳಕು ಮತ್ತು ಛಾಯೆಯಲ್ಲಿ ಹೊಂದುವ ಬಣ್ಣದ ಬದಲಾವಣೆ ಹಾಗೂ ಸಾಮರಸ್ಯ ತಿಳಿಯಲು ಸಹಕಾರಿಯಾಗಿದೆ. ಇದರಲ್ಲಿ ಬರುವ ವಿವಿಧ ಆಕೃತಿಗಳನ್ನು ಪರಸ್ಪರ ಹೊಂದಿಕೆಯಿಂದ ತೋರಿಸಲು ವಿಶೇಷ ರೀತಿಯ ಕೌಶಲ್ಯಬೇಕು. ಚಿತ್ರಕಾರರು ಆಕೃತಿ



ನಿರೂಪಣೆಗೆ ವಿಶೇಷ ಪ್ರಾಧಾನ್ಯ ನೀಡುವುದಲ್ಲದೇ ರೂಪಗಳನ್ನು ಸುಸಂಗತವಾಗಿ ನಿರೂಪಿಸುವತ್ತ ಗಮನ ನೀಡುವುದು ಸಾಮಾನ್ಯ ಅಂಶವಾಗಿದೆ. ಈ ಸ್ಥಿರ ಚಿತ್ರಣದಲ್ಲಿ ಹೂ, ಹಣ್ಣು ಪಿಂಗಾಣಿ ವಸ್ತುಗಳು, ಸಂಗೀತ ವಾದ್ಯಗಳು ಮತ್ತು ಇತರ ಜಡವಸ್ತುಗಳು ಕಲಾವಿದನಿಗೆ ವಿಷಯಗಳಾಗಿ ದೊರಕುತ್ತವೆ.

ಇಲ್ಲಿ ಮುಖ್ಯವಾಗುವುದು ಹಲವಾರು ಭಿನ್ನರೀತಿಯ ವಸ್ತುಗಳ ಮೈವಳಿಕೆ (ಟೆಕ್ಸ್‌ಚರ್)ಯ ಅಭ್ಯಾಸ. ಹತ್ತಿ, ರೇಶ್ಮೆ ಇತ್ಯಾದಿ ಬಟ್ಟೆಗಳಲ್ಲಿಯ ವ್ಯತ್ಯಾಸ ಮರ ಇತ್ಯಾದಿ ಜಡವಾದ, ಗಾಜು ಇತ್ಯಾದಿ ಪ್ರತಿಫಲಿಸುವ ವಸ್ತುವಿನ ಮೇಲೆ ಬೆಳಕು ಅಥವಾ ಬೇರೆ ಬಣ್ಣಗಳು ಬಿದ್ದಾಗ ಆಯಾ ವಸ್ತುಗಳು ಕಾಣುವ ಬಗೆ, ವಸ್ತುವಿನ ಉಬ್ಬು ತಗ್ಗುಗಳಲ್ಲಿ, ಸುಕ್ಕು ಸುರಳಿಗಳಲ್ಲಿ ಬೆಳಕು ಹಾಗೂ ನೆರಳು ಪ್ರತಿಫಲಿಸುವ ರೀತಿಯ ಅಭ್ಯಾಸ ಇಲ್ಲಿ ಮುಖ್ಯವಾದುದು. ಆದಷ್ಟು ಮೂಲಕ್ಕೆ ಹತ್ತಿರವಾಗುವಂತೆ ನೈಜಶೈಲಿಯಲ್ಲಿ ರಚಿಸುವುದೇ ಅಧಿಕ. ಇಲ್ಲಿಯ ಅಭ್ಯಾಸ ನಂತರ ಸಂಯೋಜನಾ ಚಿತ್ರ ರಚನೆಯಲ್ಲಿಯೂ ಇಲ್ಲಿಯ ಪ್ರಯೋಗಗಳನ್ನು ಬಳಸಿಕೊಳ್ಳಬಹುದು.

ರೇ. ಮಾ.

## ಸಿತ್ತನ್ನಾವಾಸಲ್

ತಮಿಳುನಾಡಿನ ಪುದುಕೋಟೆಯಿಂದ ೧೫ ಕಿ. ಮಿ. ದೂರದಲ್ಲಿರುವ ಜೈನ ಧಾರ್ಮಿಕ ಕೇಂದ್ರ. ಇತಿಹಾಸ ಪೂರ್ವಕಾಲದ ಹಲವಾರು ಅವಶೇಷಗಳು ಇಲ್ಲಿವೆ. ಬೆಟ್ಟದ ಒಂದು

ಬದಿಯಲ್ಲಿ ಚಿಕ್ಕದಾದ ಗುಹಾಲಯವಿದ್ದು ಅದರ ಮುಖಮಂಟಪದ ಮಾಳಿಗೆಯಲ್ಲಿ ಚಿತ್ರಗಳಿವೆ. ಗುಹಾಲಯ ಪಲ್ಲವರ ಕಾಲದ್ದಾದರೂ ಚಿತ್ರಗಳು ೯ನೇ ಶತಮಾನದ ಪಾಂಡ್ಯರದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಡಿಸೈನ್‌ಗಳು ಹಾಗೂ ಮಾನವಾಕಾರಗಳು ರೇಖಾ ಪ್ರಧಾನವಾಗಿವೆ. ರೇಖೆಯ ಬಾಗು-ಬಳಕುಗಳ ಮೂಲಕ ನಿಧಾನವಾಗಿ ದೃಷ್ಟಿ ಹರಿಯುವಂತೆ ಕಲಾವಿದ ಇರುವ ಜಾಗದಲ್ಲಿ ಜಾಣ್ಮೆಯಿಂದ ಚಿತ್ರಿಸಿದ್ದಾನೆ. ಉಳಿದಿರುವ ಚಿತ್ರಗಳಲ್ಲಿ ಕೊಳವೊಂದರ ದೃಶ್ಯ ಗಮನಾರ್ಹವಾಗಿದೆ. ಕಮಲದ ಎಲೆ, ದಂಟು ಹೂಗಳಿಂದ ತುಂಬಿದ ಕೊಳವೊಂದರಲ್ಲಿ ಇಬ್ಬರು ಸನ್ಯಾಸಿಗಳು ಹೂಗಳನ್ನು ಆರಿಸುತ್ತಿದ್ದಾರೆ. ಆನೆಗಳು, ಹಂಸಗಳು ಮೀನುಗಳೂ ಸಹ ಕೊಳದಲ್ಲಿವೆ. ಇದಲ್ಲದೆ ರಾಜದಂಪತಿಗಳ ಚಿತ್ರಣವಿದ್ದು. ಇದು ಪಾಂಡ್ಯ ಶ್ರೀವಲ್ಲಭನ ಭಾವಚಿತ್ರವೆಂದು ಗುರುತಿಸಲಾಗಿದೆ. ದೂಲದ ಇನ್ನೊಂದು ಬದಿಯಲ್ಲಿ ಇಬ್ಬರು ನರ್ತಕಿಯರ ಚಿತ್ರಣ ಬೇರೆ ಬೇರೆ ಕಡೆಗಳಲ್ಲಿದ್ದು ನಾಟ್ಯದ ಭಾವ ಬಂಗಿ, ಚಲನೆ, ಹಸ್ತ ವಿನ್ಯಾಸಗಳೆಲ್ಲವೂ ಆಕರ್ಶಕವಾಗಿದೆ. ತೆಳುಗೆಂಪು, ಹಳದಿ, ಕಿತ್ತಳೆ ಬಣ್ಣಗಳೇ ಅಧಿಕವಿದ್ದು ಹಸಿರು, ನೀಲಿಗಳನ್ನೂ ಬಳಸಿದೆ. ವರ್ಣಗಳನ್ನೂ ಚಪ್ಪಟೆಯಾಗಿ ಹಚ್ಚಿದ್ದು ತೆಳುವಾಗಿ ಛಾಯಾಂಕನ ಮಾಡಿದೆ. ಇಲ್ಲಿಯ ಬಣ್ಣಗಳ ಬಗ್ಗೆ ಅವುಗಳ ಸಾಂದ್ರತೆ, ಹರಡಿರುವಿಕೆಯ ಬಗ್ಗೆ ಪ್ರೌಢ ವೈಜ್ಞಾನಿಕ ಅಧ್ಯಯನ ಆಗಿದೆ.

ಮಾ. ಮಂ.

## ಸಿದ್ಧತೆ/ಮೂಲ ಅಭ್ಯಾಸ(Study)

ಒಂದು ಕಲಾಕೃತಿ ರಚನೆ ಮಾಡುವ ಮೊದಲು ಅಥವಾ ಮಾಡುವಾಗ ಮೂಲ ಅಭ್ಯಾಸವೆಂದು ರಚಿಸುವ ರೇಖಾಚಿತ್ರ ಅಥವಾ ವರ್ಣಚಿತ್ರ ಅಥವಾ ಶಿಲ್ಪರಚನೆಗೆ 'ಸ್ಟಡಿ' ಎನ್ನುತ್ತಾರೆ. ನಿಜವಾದ ಅರ್ಥದಲ್ಲಿ ಇದು ಸಿದ್ಧತಾ ಅಥವಾ ಮೂಲ ಅಭ್ಯಾಸ (preparatory study)ಮಾನವ ದೇಹಾಕೃತಿ ಅಥವಾ ದೇಹದ ಕೈ, ಕಣ್ಣು ಮುಂತಾದ ಭಾಗಗಳು, ಉಟ್ಟುಕೊಂಡ ಬಟ್ಟೆ, ಕುಳಿತ ಭಂಗಿ ಯಾವುದೇ ಪ್ರಾಣಿ, ನಿಸರ್ಗ ದೃಶ್ಯಗಳ ಅಭ್ಯಾಸ ಇದು. ಆಯಾ ಭಾಗಗಳ ವಿವರಗಳನ್ನು ತಿಳಿಯಲು ಇಲ್ಲವೆ ತಾವು ಚಿತ್ರಿಸುವ ಒಂದು ಚಿತ್ರದ ಭಾಗವನ್ನು ತುಂಬಲು ಅಥವಾ ರಚಿಸಲು ಇಂಥ ಅಭ್ಯಾಸವನ್ನು ಮಾಡುತ್ತಾರೆ.

**ತಿಟ್ಟ**

ಶಬ್ದಮಣಿದರ್ಪಣದಲ್ಲಿ 'ತಿಟ್ಟಮಿದು ಚಿತ್ರಪ್ರಾರಂಭ' ಎಂಬ ಪ್ರಯೋಗವಿದ್ದು, 'ಚಿತ್ರರಚನೆಯ ಆರಂಭದಲ್ಲಿ ಹಾಕಿಕೊಳ್ಳುವ ಕರಡು ನಕ್ಷೆ' ಎಂದು ಅರ್ಥೈಸಲಾಗಿದೆ (Rough-sketch:ಕಿಟ್ಟೆಲ್ ನಿಘಂಟು) ಚಿತ್ರ ಕಲೆಯಲ್ಲಿ ಈ ರೀತಿ ಕೈಕುದುರಲು ಹಾಕಿಕೊಳ್ಳುವ ಕರಡು ನಕ್ಷೆಗಳಿಗೆ ವರ್ಣಕ, ಹಸ್ತಕ, ಪ್ರತಿಬಂಧ, ಹಸ್ತಲೇಖ, ಪಾಣಿ ಪಾಟವ ಎಂದು ದಾಮೋದರನ ಕುಟ್ಟನೀ ಮತದಲ್ಲಿ ಕರೆದಿದೆ.

ಎಸ್. ಎಂ. ಮಿ.

## ಸಿರಾ

ತುಮಕೂರು ಜಿಲ್ಲೆಯ ತಾಲೂಕು ಕೇಂದ್ರವಾದ ಸಿರಾದ ರೇವಣಸಿದ್ದೇಶ್ವರ ದೇವಾಲಯ ಊರ ಹಿಂಬದಿಯಲ್ಲಿದ್ದು ಕುರುಬ ಜನಾಂಗದವರ ದೇವಾಲಯವಾಗಿದೆ. ಗುಡಿ ಚಿಕ್ಕದಾದರೂ ಹಿಂದೆ ಎಲ್ಲ ಕಂಬ ಮತ್ತು ಗೋಡೆಗಳ ಮೇಲೆ ಹಾಗೂ ಒಳ ಮೇಲ್ಭಾವಣಿಯಲ್ಲಿ ಚಿತ್ರಗಳಿದ್ದ ಗುರುತುಗಳಿವೆ. ಈಗ ಉಳಿದಿರುವ ಚಿತ್ರಗಳಲ್ಲಿ ಗರ್ಭಗುಡಿಯ ಅಕ್ಕಪಕ್ಕದ ಗೋಡೆಗಳಮೇಲೆ ವಿಶಾಲವಾದ ಅಂಕಣದಲ್ಲಿ ಗೋಪಾಲಕೃಷ್ಣ ಅಷ್ಟದಿಕ್ಪಾಲಕರು, ಗರುಡ, ರಾಮಪಟ್ಟಾಭಿಷೇಕ, ಗೋಪಿಕಾ ವಸ್ತ್ರಾಪಹರಣ ಹಾಗೂ ಹನುಮಂತರ ಚಿತ್ರಗಳಿವೆ. ಮೇಲ್ಭಾವಣಿಯಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಚಿತ್ರಣಗಳಿವೆ. ದೂಲದ ಮೇಲೆ ಒಳಮುಖದಲ್ಲಿ ವೆಂಕಟೇಶ್ವರ, ಹನುಮಂತ, ಗರುಡ,' ಪೂಜಾರಿ, ಮಂಗಳ ದ್ರವ್ಯಹಿಡಿದ ಮಹಿಳೆಯರು, ಚಾಮರ ಧಾರಿಣಿಯರು ಇತ್ಯಾದಿ ಕಾಣಬಹುದು. ಮುಮ್ಮಡಿ ಕೃಷ್ಣರಾಜರನ್ನು ಹೋಲುವಂತಹ ರಾಜರೊಬ್ಬನು ಕುದುರೆಯ ಮೇಲೆ ಕುಳಿತಿದ್ದಾನೆ. ಸುತ್ತಲೂ ಸಾಕಷ್ಟು ಟಗರು (ಕುರಿ?)ಗಳು ಇವೆ. ಈ ವ್ಯಕ್ತಿ ಜನಾಂಗದ ಮುಖ್ಯಸ್ಥನಿರಬಹುದು.

ರಾಮಾಯಣದ ಚಿತ್ರಗಳನ್ನು ಉದ್ದನೆಯ ಪಟ್ಟಿಕೆಗಳಾಗಿ ವಿಭಾಗಿಸಿ ಚಿತ್ರಿಸಿದೆ. ರಾಮಾಯಣದ ಯುದ್ಧದ ಪ್ರಸಂಗದಲ್ಲಿ ರಣರಂಗವನ್ನು ಭೀಕರವಾಗಿಯೇ ಚಿತ್ರಿಸಿದೆ. ಕೈಕಾಲುಗಳು ಕತ್ತರಿಸಿ ಬಿದ್ದಿರುವುದು. ರುಂಡ ಮುಂಡಗಳು ಬೇರ್ಪಟ್ಟಿದ್ದು ರುಂಡವನ್ನು ಶೂಲಕ್ಕೆ ಚುಚ್ಚಿ ಎತ್ತುತ್ತಿರುವುದು. ತಲೆ ಇಲ್ಲದ ಶರೀರವೊಂದು ಕುಣಿಯುತ್ತಿರುವುದು. ಹಾರಾಡುತ್ತಿರುವ ಬಾಣಗಳು ಇತ್ಯಾದಿಗಳಿವೆ. ಆಯುಧಗಳು, ಯುದ್ಧೋಪಕರಣಗಳು ಸೈನಿಕರ ವೇಶಭೂಷಣಗಳು ಅಭ್ಯಾಸ ಯೋಗ್ಯವಾಗಿದೆ. ಅಂಕಣಗಳು ಕಿರಿಯವಾಗಿದ್ದು ಆಕಾರಗಳು ಚಿಕ್ಕವಾದರೂ ಕಡುಪಾದ ಹೊರ ರೇಖೆಯಿಂದಲೂ, ಹಿನ್ನೆಲೆಗೆ ಗಾಢವಾದ ಕೆಂಪು ಬಣ್ಣ ತುಂಬಿಸಿರುವುದರಿಂದಲೂ ಆಕಾರಗಳು ಎದ್ದು ಕಾಣುತ್ತದೆ. ರಾಮಲಕ್ಷಣರು ಕಾಡಿಗೆ ಹೋಗುತ್ತಿರುವ ದೃಶ್ಯದಲ್ಲಿ ಚಿಂತಾಕ್ರಾಂತನಾದ ದಶರಥನ ಚಿತ್ರಣ ಶೋಕರಸಕ್ಕೆ ಉತ್ತಮ ಉದಾಹರಣೆಯಂತಿದೆ. ಗೋಪಿಕಾ ವಸ್ತ್ರಾಪಹರಣದ ನಗ್ನ ಗೋಪಿಕೆಯರು ಪ್ರಮಾಣಬದ್ಧ ಅಂಗಾಗಗಳನ್ನು ಹೊಂದಿದ್ದಾರೆ. ಈ ಚಿತ್ರಗಳು ಶೈಲಿಯ ದೃಷ್ಟಿಯಿಂದ ಹಂಪೆಯ ಚಿತ್ರಗಳನ್ನು ಹೋಲುವುದರಿಂದ ಕಳೆದ ಶತಮಾನದ ಮೊದಲ ಭಾಗದಲ್ಲಿ ರಚಿತವಾಗಿರಬಹುದು. ಮೈಸೂರು ಶೈಲಿಯ ಉಗಮ ಇಲ್ಲಿ ಕಾಣಬಹುದು.

ಅಲಸ

## ಸಿರ್‍ಯಾಮಿಕ್ಸ್

'ಸಿರ್‍ಯಾಮಿಕ್ಸ್' ಎಂಬ ಶಬ್ದ, ಕೆರಮೋಸ್ (Keramos) ಎಂಬ ಗ್ರೀಕ್ ಶಬ್ದದಿಂದ ಬಂದಿದೆ. ಹಾಗೆಂದರೆ "ಕುಂಬಾರರ ಕೆಮ್ಮಣ್ಣು" ಎಂದರ್ಥ. ಇಂದು ಈ ಶಬ್ದ, ಯಾವುದೇ ಪದಾರ್ಥದಿಂದ ರಚಿತವಾಗಿರಲಿ ಅಥವಾ ಯಾವುದೇ ಸಾಮಗ್ರಿಯನ್ನು ಬಳಸಿರಲಿ ಎಲ್ಲ ಬಗೆಯ ಕುಭ ಕಲೆಗೂ ಅನ್ವಯಿಸುತ್ತದೆ. ಎಲ್ಲ ಕುಂಭವಸ್ತುಗಳನ್ನು ನಾನಾ ಬಗೆಯ ಜೇಡಿಮಣ್ಣಿನಿಂದ ಫ್ಲಿಂಟ್, ಫೆಲ್ಸ್‌ಪಾರ್ ಮತ್ತು ಚೈನಾ ಸ್ಟೋನ್ ಮುಂತಾದವುಗಳನ್ನು ಸೇರಿಸಿ ತಯಾರಿಸಲಾಗುತ್ತದೆ.

ನಿರ್ದಿಷ್ಟವಾಗಿ ಹೇಳುವುದಾದರೆ, ಸಿಲಿಕಾನ್, ಕಾರ್ಬನ್ ಆಕ್ಸಿಜನ್ ಮತ್ತು ನೈಟ್ರೋಜನ್-ಇವು ಇತರ ಧಾತುಗಳೊಡನೆ ಸೇರಿ, ಉಂಟಾದ ಮಿಶ್ರಣಗಳೇ ಸಿರ್ಯಾಮಿಕ್ಸ್(Ceramics). ಸಿರ್ಯಾಮಿಕ್ಸ್‌ನ ತಯಾರಿಕೆಯಲ್ಲಿ ಬಳಸಲಾಗುವ ಮುಖ್ಯ ಕಚ್ಚಾ ಸಾಮಗ್ರಿಯೆಂದರೆ, ಜೇಡಿಮಣ್ಣು(Clay). ನಿಸರ್ಗದ ಬಂಡೆ ಕಲ್ಲುಗಳು ಗಾಲಿ ಮತ್ತು ನೀರಿನಿಂದ ಉಂಟಾದ ಪ್ರಕ್ರಿಯೆಯಿಂದ ಸವೆದು, ಕೊಳೆಯುತ್ತವೆ. ಕಾಲಾನುಕ್ರಮದಲ್ಲಿ ಅದು ಜೇಡಿಮಣ್ಣಾಗುತ್ತವೆ. ಗ್ರ್ಯಾನೈಟ್ ಬಂಡೆಯಿಂದ ಉಪಯುಕ್ತವಾದ ಮಣ್ಣುಗಳು ದೊರೆಯುತ್ತವೆ. ಈ ಗ್ರಾನೈಟ್ ಬಂಡೆಯಲ್ಲಿ ಕ್ವಾರ್ಟ್ಸ್, ಅಭ್ರಕ (Mica), ಫೆಲ್ಸ್‌ಪಾರ್ - ಮುಂತಾದವು ಇರುತ್ತವೆ. ಈ ಜೇಡಿಮಣ್ಣುಗಳನ್ನು ಚೆನ್ನಾಗಿ ಅರೆದು, ಸಣ್ಣ ಕಣಗಳಾಗುವಂತೆ ಪುಡಿ ಮಾಡಲಾಗುತ್ತದೆ. ಈ ಕಣಗಳನ್ನು ಬೆರೆಸಿ, ನೀರಿಗೆ ಸೇರಿಸಲಾಗುತ್ತದೆ. ನೀರು ಹಾಕುವುದರಿಂದ ಈ ಮಣ್ಣಿನ ಕಣಗಳನ್ನು ಬೇಕೆನಿಸಿದ ಆಕಾರಕ್ಕೆ ತಂದುಕೊಳ್ಳಬಹುದು. ಬೇಕಾದ ಆಕೃತಿಗೆ ತರಲು, ನಾನಾ ವಿಧಾನಗಳನ್ನು ಅನುಸರಿಸಲಾಗುವುದು.

ತಯಾರಿಸಿದ ವಸ್ತು ಒಣಗಬೇಕು, ಅನಂತರ ಅದನ್ನು ಸುಡಲಾಗುತ್ತದೆ ಅಥವಾ ಕಾಯಿಸಲಾಗುತ್ತದೆ. ವಿಶೇಷ ಬಗೆಯ ಕುಲುಮೆಯೊಂದರಲ್ಲಿ ಈ ವಸ್ತುಗಳನ್ನು ಸುಟ್ಟು ಗಟ್ಟಿ ಮಾಡಲಾಗುತ್ತದೆ. ಪಿಂಗಾಣಿ ವಸ್ತುಗಳನ್ನು ೬೫೦ ಡಿಗ್ರಿ ಸೆಂಟಿಗ್ರೇಡ್‌ನಿಂದ ೧೬೫೦ ಡಿಗ್ರಿ ಸೆಂಟಿಗ್ರೇಡ್‌ವರೆಗೆ ಉಷ್ಣಾಂಶದಲ್ಲಿ ಸುಡಲಾಗುವುದು. ಸುಡುವುದರಿಂದ ವಸ್ತು ಗಟ್ಟಿಯಾಗುತ್ತದೆ. ಇದರಿಂದ ಆ ವಸ್ತುವಿಗೆ ಹೆಚ್ಚು ಶಕ್ತಿ ಬರುತ್ತದೆ. ಅದರ ಬಾಳಿಕೆಯೂ ಹೆಚ್ಚುತ್ತದೆ.

ಬಹುತೇಕ ಪಿಂಗಾಣಿ ವಸ್ತುಗಳಿಗೆ ಹೊಳಪಿನ ಲೇಪನ ಕೊಡಲಾಗುವುದು. ಇಂತಹ ಲೇಪನವನ್ನು ಕೊಡುವುದರಿಂದ, ಆ ವಸ್ತು ದ್ರವಗಳನ್ನು ಹೀರುವುದಿಲ್ಲ. ಆ ವಸ್ತುವಿನ ಹೊರಮೈ ತುಂಬ ನಯವಾಗುತ್ತದೆ. ಅವನ್ನು ತೊಳೆಯುವುದು ಸಹ ಸುಲಭವಾಗುತ್ತದೆ. ಪಿಂಗಾಣಿ ವಸ್ತುಗಳ ಮೇಲೆ ಚಿತ್ರ ವಿನ್ಯಾಸಗಳನ್ನು ನೀಡಿ, ಅವನ್ನು ಅಲಂಕರಿಸಲಾಗುವುದು.

ಶಿಲ್ಪ, ಇಟ್ಟಿಗೆಗಳು ಮತ್ತು ನೀರು ಹರಿಯುವ ಕೊಳವೆಗಳು ಇತ್ಯಾದಿ ಕಟ್ಟಡ ನಿರ್ಮಾಣ ಸಾಮಗ್ರಿಗಳನ್ನು ತಯಾರಿಸಲು ಜೇಡಿಮಣ್ಣು(Clay) ಮತ್ತು ಜೇಡಿ ಪದರಗಳನ್ನು (Shade) ಬಳಸಲಾಗುವುದು. ಸಿಮೆಂಟ್‌ನ ತಯಾರಿಕೆಯಲ್ಲಿ ಕ್ಯಾಲ್ಸಿಯಂ ಸಿಲಿಕೇಟ್‌ಗಳನ್ನು ತಯಾರಿಕೆಯಲ್ಲಿ ಪೋರ್ಸಿಲಿನ್(Porcelain)ನಿಂದ ಸ್ನಾನದ ಟಬ್‌ಗಳು, ಸಿಂಕ್‌ಗಳು ಮತ್ತು ಶೌಚಗೃಹಕ್ಕೆ ಬೇಕಾದ ಸಾಧನಗಳು, ಬೊಗುಣಿಗಳು, ಕಪ್‌ಗಳು ಮತ್ತು ಪ್ಲೇಟ್‌ಗಳನ್ನು ತಯಾರಿಸಲಾಗುವುದು.

ಪೋರ್ಸಿಲಿನ್ ಅನ್ನು, ಜೇಡಿಮಣ್ಣು ಫೆಲ್ಸ್‌ಪಾರ್ ಮತ್ತು ಕ್ವಾರ್ಟ್-ಇವುಗಳ ಮಿಶ್ರಣದಿಂದ ತಯಾರಿಸಲಾಗುತ್ತದೆ. ಅಲ್ಯೂಮಿನಿ ಮತ್ತು ಪೋರ್ಸಿಲಿನ್ ನಂತಹ, ಕೆಲವು ಸಿರ್ಯಾಮಿಕ್ಸ್‌ನಲ್ಲಿ ವಿದ್ಯುತ್ ಹರಿಯುವುದಿಲ್ಲ. ಆದ್ದರಿಂದ ಇದನ್ನು ಸ್ಪಾರ್ಕ್ ಪ್ಲಗ್‌ಗಳು ವಿದ್ಯುತ್‌ವಾಹಕ ಮಾರ್ಗಗಳು ಮತ್ತು ಟೆಲಿವಿಷನ್ ಸೆಟ್‌ಗಳಲ್ಲಿ ವಿದ್ಯುತ್ ನಿರೋಧಕ(Insulators) ಸಾಮಗ್ರಿಗಳಾಗಿ ಬಳಸಲಾಗುವುದು. ಇನ್ನೊಂದು ಸಿರ್ಯಾಮಿಕ್ ಸಾಮಗ್ರಿಯಾದ ಬೆರಿಯಂ ಟೈಟನೇಟ್(Barium Titanate)ನಿಂದ ಕೆಲವು ಮಾದರಿಯ ಕೆಪ್ಯಾಸಿಟರ್‌ಗಳನ್ನು ತಯಾರಿಸಲಾಗುವುದು.

ರಿಫ್ರ್ಯಾಕ್ಟರಿಗಳು, ಸಿರ್ಯಾಮಿಕ್ ಉತ್ಪನ್ನಗಳ ಮತ್ತೊಂದು ಮುಖ್ಯ ಗುಂಪಿಗೆ ಸೇರಿದ್ದು. ಇವು ಶಾಖ ನಿರೋಧಕ. ಇವು ರಾಸಾಯನಿಕ ಪ್ರತಿಕ್ರಿಯೆಯನ್ನು ತಡೆಯುತ್ತವೆ. ಶಂಕುವಿನಾಕಾರದ ರಾಕೆಟ್‌ನ ತುದಿಗಳಲ್ಲಿ ಕೆಲವು ರಿಫ್ರ್ಯಾಕ್ಟರ್‌ಗಳನ್ನು ಬಳಸಲಾಗುತ್ತದೆ. ಏಕೆಂದರೆ, ಅತ್ಯುನ್ನತ ವೇಗದಲ್ಲಿ ಸಂಚರಿಸುವುದರಿಂದ ಉಂಟಾಗುವ ಶಾಖವನ್ನು ಇವು ತಡೆದುಕೊಳ್ಳಬಲ್ಲುವು.

ಅಲ್ಯೂಮಿನ, ಸಿಲಿಕ ಮತ್ತು ಮೆಗ್ನೀಷಿಯ- ಇವುಗಳ ಮಿಶ್ರಣಗಳನ್ನು ರಿಫ್ರ್ಯಾಕ್ಟರಿಗಳಾಗಿ ಬಳಸಲಾಗುವುದು.

## ಸಿಸ್ಟಮ್ಯಾಟಿಕ್ ಪೆಯಿಂಟಿಂಗ್ (Systematic painting)

ನ್ಯೂಯಾರ್ಕ್‌ನಲ್ಲಿ ೧೯೬೬ರಲ್ಲಿ, ಪ್ರದರ್ಶನಗೊಂಡ ಕಲಾಕೃತಿಗಳ, ಒಂದೇ ಕಲ್ಪನೆಯ (One image art) ಸರಳ ಹಾಗೂ ಜ್ಯಾಮಿತಿಯ ಆಕಾರ, ವಸ್ತುಗಳಾಗಿ ಚಿತ್ರಿತವಾದ ರೀತಿಯಿಂದ, 'ಸಿಸ್ಟಮ್ಯಾಟಿಕ್ ಪೆಯಿಂಟಿಂಗ್' ಎಂದು ಹೆಸರಿಸುವಂತಾಯಿತು. ಇಂಥ ಕಲಾಕೃತಿಗಳನ್ನು, ಚಿತ್ರರಚನೆಯ ಹಂತಗಳ ಆಧಾರದ ಮೇಲೆ, ಜೋಡಿಸಿಟ್ಟ ಪ್ರದರ್ಶನಾ ವಿಧಾನ, ಕೂಡ "Factual Display" ಆಗಿತ್ತು. ಈ ರೀತಿಯ ಪ್ರದರ್ಶನ ಮತ್ತು ಸಿಸ್ಟ್‌ಮ್ಯಾಟಿಕ್ ಕಲಾಕೃತಿಗಳನ್ನು ರಚಿಸಿದ್ದುದರ ಜಾಣ್ಮೆ ಲಾವರೆನ್ಸ್ ಅಲೊಮೇಯನದಾಗಿತ್ತು.

ಇತ್ತೀಚೆಗೆ ಸಿರೀಸ್ ಪೆಯಿಂಟಿಂಗ್ಸ್ ಎಂದು ರಚಿತವಾಗುತ್ತಿವೆ ಇವುಗಳನ್ನೇ ಸಿಸ್ಟಮ್ಯಾಟಿಕ್ ಅಥವಾ ಹಂತಗಳ ಚಿತ್ರಗಳೆಂದೂ ಕರೆಯಬಹುದು. ಇಲ್ಲಿ ಶೈಲಿಕೃತವಾದ ಚಿತ್ರ, ಭಾಷೆ, ತನ್ನದೇ ಆದ ವಿಚಾರಗಳ ಆಯಾಮ ಮತ್ತು ವಸ್ತುಗಳನ್ನು ಸ್ವತಂತ್ರವಾಗಿ ವ್ಯಕ್ತಪಡಿಸುತ್ತಿರುತ್ತವೆ. ಒಂದು ವಿಚಾರದ ಸರಣಿ ಭಾಗ-ವಿಭಾಗಗಳಾಗಿ ಬೇರ್ಪಟ್ಟಿರುತ್ತವೆಯಾದರೂ ಒಂದಕ್ಕೊಂದು ಹೋಲಿಕೆ ಅಥವಾ ಕೊಂಡಿಯಾಗಿರುತ್ತವೆ. ಇದರಿಂದ ಸರಣಿ ಚಿತ್ರಗಳನ್ನು ಭಾಗಶಃ ಎಂದು ಕರೆಯುವಲ್ಲಿ ಭಿನ್ನತೆ ಇಲ್ಲ.

ಆರ್. ಎ. ಶಾ.

## ಸಿಲ್ವರ್ ಪಾಯಿಂಟ್

ಪ್ರಾಯಶಃ ರೋಮನ್ನರು ಬೇರೆ ಲೇಖನಿಗಳ ಜೊತೆಗೆ ಸಿಲ್ವರ್ ಪಾಯಿಂಟನ್ನು ತೊಗಲಿನ ಮೇಲೆ ಬರೆಯಲು ಉಪಯೋಗಿಸುತ್ತಿದ್ದರು ಎಂದೆನಿಸುತ್ತದೆ. ಇದರ ಬಗೆಗೆ ಸ್ಪಷ್ಟ ದಾಖಲೆ ಸಿಕ್ಕಿರುವುದು ೧೫ನೆಯ ಶತಮಾನದ ಇಟಾಲಿಯನ್ ಚಿತ್ರಗಳಲ್ಲಿ. ೧೫ ಮತ್ತು ೧೬ನೆಯ ಶತಮಾನದ ಕೆಲವು ಉತ್ತಮ ಸಿಲ್ವರ್ ಪಾಯಿಂಟ್ ಕೃತಿಗಳು ಈಗಲೂ ಲಭ್ಯವಿವೆ. ಗೋಲ್ಡ್ ಪಾಯಿಂಟ್‌ಗಿಂತ ಅಗ್ಗ ಹಾಗೂ ನಾಜೂಕು ಮತ್ತು ಕ್ಲುಪ್ತ ರೇಖೆಗಳನ್ನು ಎಳೆಯುವ ಸಾಧ್ಯತೆ ಇರುವುದರಿಂದಲೂ ಇದು ಜನಪ್ರಿಯವಾಯ್ತು. ಬೆಳ್ಳಿಯಂತೆ ಕಾಣುವ ಈ ಗೆರೆಗಳು ಕಾಲಾನಂತರ ತುಕ್ಕು ಹಿಡಿದು ಕಂದು ಬಣ್ಣಕ್ಕೆ ತಿರುಗುತ್ತಿದ್ದವು. ಕಡು ಬಣ್ಣಗಳು ಬೇಕಾದಾಗ, ಬರೆದ ಗೆರೆಯ ಮೇಲೆಯೇ ಮತ್ತೆ ಮತ್ತೆ ಬರೆಯುವುದರ ಮೂಲಕ ರಚಿಸಬೇಕಾಗಿತ್ತು. ಮಧ್ಯಮ ವರ್ಣಗಳನ್ನು ಸಣ್ಣ ಸಣ್ಣ ಅಡ್ಡ ಗೆರೆಗಳನ್ನು ಕಾಟುಹಾಕುತ್ತಾ (crosshatching)ರಚಿಸಬೇಕಾಗುತ್ತಿತ್ತು. ಅಲ್ಲದೇ ಸುಲಭವಾಗಿ ಅಳಿಸಲು ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಕಲಾವಿದ ತುಂಬಾ ಕರಾರುವಾಕ್ಕಾಗಿ ಕೆಲಸ ಮಾಡಬೇಕಾಗುತ್ತಿತ್ತು. ಎಲ್ಲಾ ರೇಖಾ ಚಿತ್ರ ಸಾಧನಗಳಂತೆ ಇದರಿಂದ ಕೂಡ ನಯವಾದ ಹಾಳೆಯ ಮೇಲೆ ಗೆರೆ ಎಳೆಯಲು ಸಾಧ್ಯವಾಗುತ್ತಿರಲಿಲ್ಲ. ಇದಕ್ಕಾಗಿ ವಿಶೇಷವಾದ ತರಿ ಮೇಲ್ಪ್ಟ್ರ ಮಾಡಬೇಕಾಗುತ್ತಿತ್ತು. ಸೆನ್ನಿನಿ ಈ ತರಹ ಕಾಗದಗಳನ್ನು ತಯಾರಿಸಲು ಹಲವಾರು ರೀತಿಗಳನ್ನು ನಮೂದಿಸಿದ್ದಾನೆ.



ಆಲ್ಬರ್ಟ್ ಡೂರರ್

ತೆಳುವಾದ ಬಣ್ಣಗುಳುಳ್ಳ ಕಾಗದದ ಮೇಲೆ ಚಿತ್ರಣ ನಡೆಸಿ ಹೈಲೈಟ್ ಭಾಗಗಳನ್ನು ಮಾತ್ರ ಬಿಳಿಯಿಂದ ತಿದ್ದಿ ವಿಶೇಷವಾಗಿ ಮೂರನೆಯ ಆಯಾಮ ದೊರೆಯುವಂತೆ ಮಾಡುವುದು ಆಗಿನಿಂದಲೇ ಆರಂಭವಾಯ್ತು. ಇಟಾಲಿಯನ್ನರು ಕೆಂಪು, ಊದಾ, ಹಸಿರು ಕಾಗದಗಳನ್ನು ಇದಕ್ಕಾಗಿ ಉಪಯೋಗಿಸುತ್ತಿದ್ದರು. ಜರ್ಮನಿಯ ಡ್ಯೂರೆರ್‌ಅನ್ನು ಈ ವಿಧಾನದ ಬ್ರಹ್ಮಗುರು ಎಂದು ಮಾನ್ಯ ಮಾಡಲಾಗುತ್ತದೆ. ಅಕ್ಕಸಾಲಿಯ ಮಗನಾದ ಅವನಿಗೆ ಸೂಕ್ಷ್ಮ ರೇಖಾಸಂವೇದನೆ ಹುಟ್ಟಿನಿಂದಲೇ ಬಂದಿತ್ತು. ತನ್ನ ೧೩ನೆಯ ವಯಸ್ಸಿನಲ್ಲಿ ಆತ ರಚಿಸಿದ ಸ್ವಚಿತ್ರಣ ಹಾಗೂ ಕಿನ್ನರಿ ನುಡಿಸುವ ಕಿಶೋರಿಯ ಚಿತ್ರಗಳು ನಮಗೆ ಲಭ್ಯವಿವೆ. ಮೊದಲು ಕರಡು ಪ್ರತಿಮಾಡಿ ಅದರ ಮೇಲೆ ಶುದ್ಧ ಚಿತ್ರ ರಚಿಸುವುದು ಅವನ ರೀತಿಯಾಗಿತ್ತು. ಈ ಹಂತದಲ್ಲಿ ಕರಡಿನಲ್ಲಿ ಕ್ರಮವಾಗಿ ತಿದ್ದದೆ ಹೋದುದರಿಂದ ಮತ್ತು ತಪ್ಪು ಭಾಗಗಳನ್ನು ಅಳಿಸುವುದು ಸುಲಭ ಸಾಧ್ಯವಾಗದುದರಿಂದ ಅವು ನಮಗೆ ಈಗಲೂ ಸ್ಪಷ್ಟವಾಗಿ ಕಾಣುತ್ತವೆ. ಬಣ್ಣಗಳ ಮೌಲ್ಯವನ್ನು ವ್ಯತ್ಯಸ್ತಗೊಳಿಸಲು ಅಡ್ಡ ಕಾಟು ಗೆರೆಗಳನ್ನು ಉಪಯೋಗಿಸಲಾಗುತ್ತಿತ್ತು. ಚಾಕ್ ಮತ್ತು ಚಾರ್‌ಕೋಲ್‌ನ ಜನಪ್ರಿಯತೆಯೊಂದಿಗೆ ಇದರ ಬಳಕೆ ಕುಗ್ಗಿತು. ಪೆನ್ಸಿಲ್ ಹಾಗೂ ರಬ್ಬರ್‌ನ ಆವಿಷ್ಕಾರದೊಂದಿಗೆ ಇದು ಇತಿಹಾಸಕ್ಕೆ ಸೇರಿದ ವಸ್ತುವಾಯ್ತು.

ರ.ಕಾ.

## ಸಿಲೋನ್

ಸಿಲೋನ್ ಅಥವಾ ಲಂಕದ ಸಿಗಿರಿಯಾ ಹಾಗೂ ಪೋಲುನ್ನಾರ್ವಗಳಲ್ಲಿ ಚಿತ್ರಕಲೆ

ಕಂಡುಬರುತ್ತದೆ. ಸಿಗಿರಿಯ ಅರಣ್ಯ ಮಧ್ಯದಲ್ಲಿ ಪ್ರಶಾಂತವಾದ ಪ್ರಕೃತಿಯ ಮಧ್ಯದಲ್ಲಿದೆ ಸಿಗಿರಿಯಾ ಎಂದರೆ ಸಿಂಹಗಿರಿ ಎಂದು ಬೃಹದಾಕಾರಾದ ಬಂಡೆಗಳು ಪೇರಿಸಿಟ್ಟಂತೆ ಭೂಮಿಯ ಮೇಲೆ ನಿಂತಿದೆ. ಬಂಡೆಯ ಒಳಭಾಗವನ್ನು ಕೊರೆದು ರಚಿಸಿದ ಗುಹಾಲಯವಿದು. ಐದನೆಯ ಶತಮಾನದ ಕೊನೆಯ ಭಾಗದಲ್ಲಿ ಈ ಪ್ರದೇಶ ವೈಭವಯುತವಾಗಿ ಬಾಳಿತು ಅರಸರಾದ ಕಸ್ಸಪ ಇದರ ನಿರ್ಮಾತೃ. ಈತ ಕವಿ ಹೃದಯಿ ಈತನ ನಂತರ ಇವನ ಮಲ ಸಹೋದರ ಮೊಗ್ಗಲನನು ಬಂದನು. ಇವರ ಕಾಲದಲ್ಲಿ ರಚಿತವಾದ ಭಿತ್ತಿಚಿತ್ರಗಳು ಇಲ್ಲಿವೆ. ಗೋಡೆಗೆ ತೆಳುವಾದ ಗಾರೆಯ ಲೇಪನ ಮಾಡಿ ಚಿತ್ರ ರಚನೆ ಮಾಡಿದೆ. ನಾಲ್ಕಾರು ಅಪ್ಸರೆಯರ ಚಿತ್ರಣವಿದ್ದು ಆಕಾಶದಲ್ಲಿ ಮೋಡದಲ್ಲಿ ತೇಲುತ್ತಿರುವಂತೆ ಸೊಂಟದವರೆಗಿನ ಭಾಗವನ್ನಷ್ಟೇ ತೋರಿಸಿದೆ. ಉಳಿದ ಭಾಗ ಮೋಡದಲ್ಲಿ ಮುಚ್ಚಿರುವ ಕಲ್ಪನೆಯಿದೆ. ರೇಖಾ ಪ್ರಧಾನವಾದ ತೆಳು ಶರೀರವುಳ್ಳ ಗುಂಡನೆಯ ಉನ್ನತ ವಕ್ಷಸ್ಥಳ ಹೊಂದಿದ, ಕೈಗಳಲ್ಲಿ ತಾವರೆ ಹೂ ಹಿಡಿದಿರುವ, ಅರೆ ಪಾರ್ಶ್ವಗತ ನೋಟದ ಈ ಸುಂದರಿಯರನ್ನು ದೇವಲೋಕದ ಅಪ್ಸರೆಯರು ಎಂದು ಕರೆದಿದೆ. ಕಿವಿಗಳಿಗೆ ದೊಡ್ಡದಾದ ಕರ್ಣಾಭರಣ, ಕೈಗಳಿಗೆ ಕಡಗ ತೋಳಬಂದಿ, ಸರಗಳು ಹಿತಮಿತವಾಗಿವೆ. ಹಲವಾರು ಕೇಶ ವಿನ್ಯಾಸಗಳು ಅವುಗಳನ್ನು ಅಲಂಕರಿಸಿರುವ ಆಭರಣಗಳು ಗಮನಾರ್ಹವಾಗಿವೆ. ಅಧೋವಸ್ತ್ರ ನೆರಿಗೆಯುಳ್ಳ ಸೀರೆಯಾಗಿದ್ದು ಎದೆ ಮುಚ್ಚುವಂತೆ ರವಿಕೆಗಳನ್ನು ಧರಿಸಿದಂತೆ ಚಿತ್ರಿಸಿದೆ. ಮೈಗೆ ಹತ್ತಿದಂತಿರುವ ಇವು ನಿಜವಾಗಿಯೂ ರವಿಕೆಗಳೋ ಅಥವ ಅದನ್ನು ಹೋಲುವಂತೆ ವರ್ಣ ತೊಡೆದುಕೊಂಡಿರುವುದೋ ಹೇಳಲಾಗದು.

ಪೋಲುನ್ನಾರ್ವ ಅನುರಾಧಪುರದಿಂದ ಆಗ್ನೇಯಕ್ಕೆ ಐವತ್ತು ಮೈಲಿ ದೂರದಲ್ಲಿದ್ದು ಹನ್ನೊಂದನೆಯ ಶತಮಾನದಲ್ಲಿ ಹಲವು ಪ್ರಸಿದ್ಧ ರಾಜರುಗಳಾದ ವಿಜಯಬಾಹು, ಪರಾಕ್ರಮ ಬಾಹು, ನಿಸ್ಸಂಕಮಲ್ಲ ಮುಂತಾದವರಿಂದ ಆಳಲ್ಪಟ್ಟಿತು. ಇಲ್ಲಿಯ ಉತ್ತರ ದಿಸೆಯಲ್ಲಿರುವ ದೇವಾಲವೊಂದರಲ್ಲಿ ಭಿತ್ತಿಚಿತ್ರಗಳಿವೆ. ಸಿಲೋನ್‌ನಲ್ಲಿ ಬೌದ್ಧಧರ್ಮವಿದ್ದು ಈ ಎಲ್ಲ ಭಿತ್ತಿಚಿತ್ರಗಳು ಅಜಂತೆಯಿಂದ ಪ್ರೇರಿತವಾಗಿದೆಯೆಂದು ವಿದ್ವಾಂಸರ ಅಭಿಪ್ರಾಯ.

**ಮೂ.ಮಂ.**

## ಸೀಬಿ

ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕಿನ ಸೀಬಿಯ ಲಕ್ಷ್ಮಿನರಸಿಂಹ ದೇವಾಲಯವನ್ನು ಹೈದರ್‌ನ ಫೌಜುದಾರ ನಲ್ಲಪ್ಪ ಎಂಬಾತ ಸುಮಾರು ೧೭೬೬ರ ವೇಳೆಯಲ್ಲಿ ಜೀರ್ಣೋದ್ಧಾರ ಮಾಡಿ ಪುನರ್ ರೂಪಿಸಿದ. ಹಾಗೂ ಚಿತ್ರಗಳಿಂದ ಅಲಂಕರಿಸಿದ. ಇಲ್ಲಿಯ ಚಿತ್ರಗಳನ್ನು ಪೌರಾಣಿಕ, ಸಾಮಾಜಿಕ ಹಾಗೂ ಐತಿಹಾಸಿಕ ಚಿತ್ರಗಳೆಂದು ವಿಭಾಗಿಸಿ ಅಧ್ಯಯನ ಮಾಡಬಹುದಾಗಿದೆ. ಗರ್ಭಗುಡಿಯ ಮುಂದಿನ ಮುಖಮಂಟಪವನ್ನು ನವರಂಗದಂತೆ ಒಂಬತ್ತು ಅಂಕಣಗಳಾಗಿ ವಿಭಾಗಿಸಿ ಅವುಗಳ ಮಧ್ಯದಲ್ಲಿ ರಾಮಾಯಣ ಭಾರತ, ಭಾಗವತ, ಶಿವನ ಪಂಚವಿಂಶತಿ ಲೀಲೆಗಳು, ನರಸಿಂಹ ಚೆಂಚು ಲಕ್ಷ್ಮಿಯರ ವಿವಾಹಗಳನ್ನು ಹಲವಾರು ಉಪ ಅಂಕಣಗಳಲ್ಲಿ ವಿವರವಾಗಿ ಚಿತ್ರಿಸಿದೆ. ಮಧ್ಯದ ಅಂಕಣದಲ್ಲಿ ವಿಸ್ತಾರವಾಗಿ ವಿಷ್ಣುವಿನ ವಿಶ್ವರೂಪ ದರ್ಶನವಿದೆ.



ಮಹಾದ್ವಾರದ ಕೆಳಗೆ ಒಳಭಾವಣಿಯಲ್ಲಿ ವಿಶಾಲವಾದ ಹರಹಿನಲ್ಲಿ ಸಾಮಾಜಿಕ ಸಂದರ್ಭದ ಚಿತ್ರಣವಿದೆ. ಹಳ್ಳಿ, ಕೆರೆ, ಭಾವಿ, ಕಾಡು, ಶಿಖಾರಿ, ವನ್ಯಮೃಗಗಳು ಅವುಗಳ ಬೇಟೆ, ಕೂಟಗಳು, ಗ್ರಾಮಾಂತರ ಕಾರ್ಯದಲ್ಲಿ ನಿರತರಾದ ಗ್ರಾಮೀಣರು, ಇವರುಗಳ ವೇಶಭೂಷಣಗಳು, ಕ್ರಿಯೆಗಳು ಇತ್ಯಾದಿಗಳನ್ನು ಕಲಾವಿದ ತೀರಾ ಗಮನಿಸಿಯೇ ರಚಿಸಿದ್ದಾನೆ. ಈ ಅಂಕಣದ ಆಚೆ ಬದಿಯಲ್ಲಿ ನಲ್ವತ್ತಕ್ಕೂ ಹೆಚ್ಚು ಮಿಥುನ ಚಿತ್ರಗಳಿವೆ. ಇದರ ಬದಿಯಲ್ಲಿಯೇ ಕೆಲವು ಆಸ್ಥಾನಿಕರ ಚಿತ್ರಣ ಹಾಗೂ ಬಣ್ಣದ ಲಿಪಿಯಲ್ಲಿ ಬರೆದ ಶಾಸನವೂ ಇದೆ. ಆಸ್ಥಾನಿಕರು ಹೈದರ್ ಹಾಗೂ ಶಾಸನದಲ್ಲಿ ಉಲ್ಲೇಖಿತರಾದ ನಲ್ಲಪ್ಪ ಇತ್ಯಾದಿಯವರಿರಬೇಕು.

ಇಲ್ಲಿಯ ಚಿತ್ರಗಳನ್ನು ಹಲವಾರು ಕಲಾವಿದರು ಬರೆದಂತೆ ವಿಭಿನ್ನ ಶೈಲಿಯಲ್ಲಿ ಕಂಡು ಬರುತ್ತದೆ. ಕೆಲವು ಚಿತ್ರಣಗಳು ಸಂಪ್ರದಾಯದ ಶಿಷ್ಟ ರಚನೆಯಲ್ಲಿದ್ದರೆ ಉಳಿದವು ಜನಪದ ಶೈಲಿಯಲ್ಲಿ ದುರ್ಬಲ ರೇಖೆಗಳಿಂದ ಕೂಡಿದೆ. ವರ್ಣ ವಿನ್ಯಾಸ, ಆಕಾರಗಳ ನಿಲವು, ಸಂಯೋಜನಾ ತಂತ್ರ ಇತ್ಯಾದಿಗಳು ಅಭ್ಯಾಸ ಯೋಗ್ಯವಾಗಿದೆ. ದೂಲದ ಮೇಲೆ ಅಲಂಕಾರಯುತ ವಿನ್ಯಾಸಗಳು ಮುಸ್ಲಿಂ ಶೈಲಿಯನ್ನು ನೆನಪಿಸುವುದರಿಂದ ಮುಸ್ಲಿಂ ಕಲಾವಿದರೂ ಈ ಚಿತ್ರಣಗಳಲ್ಲಿ ಭಾಗಿಗಳಾಗಿರಬಹುದಾದ ಸಂಭವವಿದೆ.

## ಸೀಸಕಡ್ಡಿ (Pencil)

ಕಟ್ಟಿಗೆ ನಳಿಕೆಯಲ್ಲಿ ಸೇರಿಸಲ್ಪಟ್ಟ, ಜೇಡಿಮಣ್ಣು ಮಿಶ್ರಿತ ಗ್ರಾಫಾಯಿಟ್ ಕಡ್ಡಿಗೆ ಸೀಸಕಡ್ಡಿ ಅಥವಾ ಪೆನ್ಸಿಲ್ ಎನ್ನುತ್ತಾರೆ. ಇದು ಚಿತ್ರ ಬರೆಯುವ ಸಾಧನ. ಮೆದುವಾದ ಪೆನ್ಸಿಲ್ಲು ಗ್ರಾಫಾಯಿಟನ್ನು ಮಾತ್ರ ಹೊಂದಿರುತ್ತದೆ. ಆದರೆ ಜೇಡಿಮಣ್ಣಿನ ಪ್ರಮಾಣವು ಹೆಚ್ಚಿದಂತೆ ಇದರ ಕಠಿಣತನವೂ ಹೆಚ್ಚಾಗುತ್ತದೆ. ಈಚೆಗೆ ಸತುವಿನ (ಸೀಸ) ಕಡ್ಡಿಗೆ ಬದಲಾಗಿ ಗ್ರಾಫಾಯಿಟನ್ನು ಬಳಸಲಾಗುತ್ತಿದೆ.

೧೮ನೆಯ ಶತಮಾನದಲ್ಲಿ 'ಪೆನ್ಸಿಲ್' ಎಂದರೆ 'ಕುಂಚ' ಎಂದು 'ಪೆನ್ಸಿಲಿಂಗ್' ಎಂದರೆ 'ಕುಂಚದ ಕೆಲಸ' ಎಂದೂ ಕರೆಯುವ ರೂಢಿಯಿತ್ತು. ಸೇಬಲ್ ಪೆನ್ಸಿಲ್, ಕ್ಯಾಮೆಲ್ ಹೇರ್ ಪೆನ್ಸಿಲ್ ಎನ್ನುವ ಪ್ರಯೋಗಗಳನ್ನು ಗಮನಿಸಬಹುದು.

ಪೆನ್ಸಿಲ್‌ಗಳು ಸಾಮಾನ್ಯವಾಗಿ "HB" ಎಂಬ ಅಂಕಿತವನ್ನು ಹೊಂದಿರುತ್ತವೆ. ಗಡುಸಾದಷ್ಟೂ "H" ಎಂಬ ಅಂಕಿತಕ್ಕೆ ೨,೩,೪ ಇತ್ಯಾದಿ ಸಂಖ್ಯೆಯನ್ನು ಸೇರಿಸುತ್ತಲೂ; ಮೃದುವಾದಷ್ಟು "B" ಎಂಬ ಅಂಕಿತಕ್ಕೆ ೨,೩,೪ ಇತ್ಯಾದಿ ಸಂಖ್ಯೆಯನ್ನು ಸೇರಿಸುತ್ತಲೂ ಹೋಗುವುದರಿಂದ ಸೀಸದ ಕಡ್ಡಿಯ ಕಡುಪನ್ನು ಗುರುತಿಸಬಹುದು.

ಅ.ಜಾ.

## ಸುಮೇರಿಯನ್ ಕಲೆ ಮತ್ತು ನೆರೆಕೆರೆ

ಸುಮೇರಿಯನ್ನರು ಕ್ರಿ. ಪೂ. ೪,೦೦೦ ವರುಷಗಳ ಸುಮಾರಿಗೆ ಬ್ಯಾಬಿಲೋನಿಯನ್ ಮತ್ತು ಅಸ್ಸೀರಿಯನ್ನರಿಗಿಂತ ಮುಂಚಿತವಾಗಿಯೇ ಟೈಗ್ರಿಸ್ ಮತ್ತು ಯೂಫ್ರೆಟಿಸ್ ನದಿಗಳ ಮಧ್ಯದಲ್ಲಿ ನೆಲೆಸಿದ್ದರು.ಇವರ ಸಂಸ್ಕೃತಿಯು ಕ್ರಿ. ಪೂ. ೨,೮೦೦ರಿಂದ ಕ್ರಿ. ಪೂ. ೨,೩೦೦ರ ವರೆಗೂ ಮತ್ತು ಕ್ರಿ. ಪೂ. ೨,೧೦೦ರಿಂದ ಕ್ರಿ. ಪೂ. ೧,೮೦೦ರ ವರೆಗೂ ಜಾಜ್ವಲ್ಯಮಾನವಾಗಿ ಬೆಳೆದಿತ್ತು. ಈ ಶತಮಾನಗಳ ಕಲಾಸಂಸ್ಕೃತಿಯಿಂದಲೇ ನಂತರದ ಬ್ಯಾಬಿಲೋನಿಯನ್ ಮತ್ತು ಅಸ್ಸೀರಿಯನ್ ಕಲಾಸಂಸ್ಕೃತಿಗಳು ಸ್ಫೂರ್ತಿಗೊಂಡವಲ್ಲದೇ ಸುಮೇರಿಯನ್ ಕಲಾಸಂಸ್ಕೃತಿಯ ತಳಹದಿಯ ಮೇಲೆಯೇ ಬೆಳೆದು ಬಂದವು. ಸುಮೇರಿಯನ್ನರ ಪ್ರಮುಖ ಪಟ್ಟಣಗಳಾದ ಉರ್, ಕಿಶ್, ಲಾಗಾಷ್, ಎರೇಷ್ ಮತ್ತು ನಿಪ್ಪೂರ್‌ಗಳ ಉತ್ಖನನದ ನಂತರ ನಮಗೆ ಪ್ರಾಚೀನ ಸುಮೇರಿಯನ್ ಕಲೆಯ ವಿಷಯದಲ್ಲಿ ವ್ಯಾಪಕವಾದ ತಿಳುವಳಿಕೆಯುಂಟಾಯಿತು. ಝಿಗ್ಗುರಾಟ್ (Ziggurat)ಎಂದು ಕರೆಯಲ್ಪಡುವ ದೇವಾಲಯಗಳ ಗೋಪುರಗಳು ಮೂರರಿಂದ ಏಳು ಹಂತಗಳಲ್ಲಿ ಕಟ್ಟಲ್ಪಟ್ಟವುಗಳಾಗಿದ್ದು ಸುಮೇರಿಯನ್ ಕಲೆಯ ಪ್ರಮುಖ ಲಕ್ಷಣವಾಗಿದೆ. ಈ ಝಿಗ್ಗುರಾಟಗಳನ್ನು ಒಲೆಯಲ್ಲಿ(ಆವಿಗೆ)ಸುಟ್ಟ ಮಣ್ಣಿನ ಇಟ್ಟಿಗೆಗಳಿಂದ ಕಟ್ಟಲಾಗುತ್ತಿತ್ತು. ಈ ಇಟ್ಟಿಗೆಗಳನ್ನು ಬಿಳಿ, ಕಪ್ಪು, ನೇರಳೆ, ದಟ್ಟನೀಲಿ, ಕೆಂಪು, ರಜತ ಇಲ್ಲವೆ ಕನಕ ವರ್ಣಗಳಿಂದ ಅಲಂಕರಿಸಲಾಗುತ್ತಿತ್ತು. ಅಲ್ಲದೇ ಕಟ್ಟಡದ ಪ್ರತಿಹಂತವನ್ನೂ ವರ್ಣವೈವಿಧ್ಯತೆಯಿಂದ ಅಲಂಕರಿಸಲಾಗುತ್ತಿತ್ತು.

ಕ್ರಿ. ಪೂ. ೩,೦೦೦ಕ್ಕಿಂತ ಮುಂಚೆಯೇ "ಕ್ಯೂನಿಫಾರ್ಮ್" ಎಂದು ಕರೆಯಲ್ಪಡುವ ಶಬ್ದಗಳನ್ನು ಬರೆಯುವ ಕಲೆಯನ್ನು ಸುಮೇರಿಯನ್ನರು ವೃದ್ಧಿಪಡಿಸಿಕೊಂಡಿದ್ದರಲ್ಲದೇ ಈ ಬರಹಗಳನ್ನು ಮಣ್ಣಿನ ಇಟ್ಟಿಗೆಗಳ ಮೇಲೆ ತ್ರಿಕೋನಾಕೃತಿಯಲ್ಲಿ ಬರೆಯುತ್ತಿದ್ದರು.

ಪರಕೀಯರ ದಾಳಿಯಿಂದಾಗಿ ಸುಮೇರಿಯನ್ ಸಂಸ್ಕೃತಿಯು ನಾಶವಾಯಿತಾದರೂ ಸುಮೇರಿಯನ್ ಕಲೆ, ವಾಸ್ತುಶಿಲ್ಪಗಳು ಶ್ರೇಷ್ಠವೆನಿಸಿದ್ದರಿಂದ ದಾಳಿಕಾರರು ಸುಮೇರಿಯನ್ನರಿಂದ ಕಲೆ, ವಾಸ್ತುಶಿಲ್ಪ ಗ ಳನ್ನು ಕಲಿತುಕೊಂಡರು. ಅಲ್ಲದೇ ಅವುಗಳ ನಕಲನ್ನು ಸಹ ಮಾಡಿಕೊಂಡರು.

ಬ್ಯಾಬಿಲೋನ್-ಬ್ಯಾಬಿಲೋನಿಯನ್ನರೂ ಸಹ ಟೈಗ್ರೀಸ್ ಮತ್ತು ಯೂಫ್ರೆಟಿಸ್ ನದಿಗಳ ಮಧ್ಯದಲ್ಲಿಯೇ (ಈಗಿನ ಇರಾಕ್)ವಾಸಿಸಿದ್ದರು. ಇವರ ಕಾಲ ಕ್ರಿ.ಪೂ. ೧೯೦೦ರಿಂದ ಕ್ರಿ.ಪೂ. ೫೩೮. ಬ್ಯಾಬಿಲೋನದ ತೂಗಾಡುವ ತೋಟವು ಬ್ಯಾಬಿಲೋನಿಯನ್ ಕಲೆಯ ದ್ಯೋತಕವಾಗಿದೆ. ಬ್ಯಾಬಿಲೋನಿಯನ್ನರು ಕಾನೂನು ರಚನೆಯಲ್ಲಿ ಘನತೆವೆತ್ತವರು. ಬ್ಯಾಬಿಲೋನ್ ಇವರ ಪ್ರಮುಖ ಪಟ್ಟಣವಾಗಿತ್ತು. ಕ್ರಿ ಪೂ ೫೩೮ರಲ್ಲಿ ಬ್ಯಾಬಿಲೋನ್ ಪರ್ಷಿಯನ್ನರ ದಾಳಿಗೆ ತುತ್ತಾಯಿತು.

ಅಸ್ಸೀರಿಯನ್–ಅಸ್ಸೀರಿಯನ್ನರು ಟೈಗ್ರಿಸ್ ನದಿಯ ದಂಡೆಗುಂಟ ವಾಸವಾಗಿದ್ದ ಮಹಾಯೋದ್ಧರಾಗಿದ್ದರೆಂಬುದನ್ನು ಅಸ್ಸೀರಿಯನ್ ಶಿಲ್ಪ, ವಾಸ್ತುಶಿಲ್ಪಗಳಲ್ಲಿ ಕಂಡುಬರುವ ಯುದ್ಧಾವೇಶದಲ್ಲಿ ರಥಗಳಲ್ಲಿ ಮುನ್ನುಗ್ಗುತ್ತಿರುವ ಯೋಧರ ಉಬ್ಬು ಚಿತ್ರಗಳಿಂದ ತಿಳಿದು ಬರುತ್ತದೆ. ಇವರ ಕಾಲ ಕ್ರಿ. ಪೂ. ೮೦೦ರಿಂದ ಕ್ರಿ. ಪೂ. ೬೧೨. ಅಸ್ಸೂರ್, ನಿನೆವೆಗಳು ಅಸ್ಸೀರಿಯನ್ನರ ಪ್ರಮುಖ ಪಟ್ಟಣಗಳಾಗಿದ್ದವು. ಕೊನೆಯಲ್ಲಿ ಅಸ್ಸೀರಿಯನ್ನರು ಬ್ಯಾಬಿಲೋನಿಯನ್ನರ ದಾಳಿಗೆ ತುತ್ತಾಗಿ ಸೋಲನ್ನನುಭವಿಸಬೇಕಾಯಿತು.

ವಿ.ಟಿ.ಕಾ.

## ಸ್ಟುಡಿಯೋ (Studio)

ಸ್ಟುಡಿಯೋವು(ಕಲಾಶಾಲೆ) ಚಿತ್ರಕಾರ, ಶಿಲ್ಪಿ, ಛಾಯಾಗ್ರಾಹಕ ಮುಂತಾದ ಕಲಾವಿದರ ಕೆಲಸದ ಕೋಣೆಯಾಗಿದೆ. ಮಧ್ಯಕಾಲ ಹಾಗೂ ಕಲಾ ಪುನರುಜ್ಜೀವನ ಕಾಲದಲ್ಲಿ ಸಾಮಾನ್ಯವಾಗಿ ಕಲಾಕಾರರು ತಮ್ಮ ಮನೆಯ ಒಂದು ಭಾಗವನ್ನೇ ಕಲಾಶಾಲೆಯನ್ನಾಗಿ ಮಾಡಿಕೊಂಡಿರುತ್ತಿದ್ದರು. ಅವರು ಒಂದು ಅಥವಾ ಒಂದಕ್ಕಿಂತ ಹೆಚ್ಚು ಕಲಾಶಾಲೆಗಳನ್ನು ಕೂಡ ಹೊಂದಿರುತ್ತಿದ್ದರು. "ಸ್ಟುಡಿಯೋದಲ್ಲಿ ಬೆಳಕು ಉತ್ತರ ದಿಕ್ಕಿನಿಂದಲೇ ಬರಬೇಕು. ಇದರಿಂದ ಬೆಳಕಿನಲ್ಲಿ ಹೆಚ್ಚಿನ ವ್ಯತ್ಯಾಸವಾಗಲಾರದು" ಎಂಬುದಾಗಿ ವರ್ಚುವಿಯಸ್ ಹಾಗೂ ಲಿಯೊನಾರ್ಡೋ-ಡ-ವಿಂಚಿ ಪ್ರತಿಪಾದಿಸಿದ್ದಾರೆ. ಕೆಲವು ಕಲಾಕಾರರು 'ದಕ್ಷಿಣ ದಿಕ್ಕಿನ ಬೆಳಕು ಸ್ವಲ್ಪ ಮಂದವಾಗಬಹುದಾದರೂ ಯೋಗ್ಯವಾದುದು' ಎಂಬ ಅಭಿಪ್ರಾಯದವರಾಗಿದ್ದಾರೆ. 'ಸ್ಟುಡಿಯೊ' ಎಂಬ ಶಬ್ದವನ್ನು ಕಲಾಕಾರ ಹಾಗೂ ಅವನ ಸಹಾಯಕರನ್ನು ಒಟ್ಟಿಗೆ ಸೂಚಿಸಲು ಸಹ ಬಳಸಲಾಗಿದೆ. 'Studio of Rubens'ಎಂಬ ಪದದಲ್ಲಿ ಅದನ್ನು ಗುರುತಿಸಲಾಗಿದೆ. ತುಂಬಾ ಪ್ರಸಿದ್ಧರಾದ ಕಲಾಕಾರರು ತಮ್ಮ ಸ್ಟುಡಿಯೋದಲ್ಲಿ ಅನೇಕ ಸಹ ಕಲಾಕಾರರನ್ನು

ಕೆಲಸಕ್ಕಾಗಿ ಇಟ್ಟುಕೊಳ್ಳುತ್ತಿದ್ದರು. 'ಸ್ಟುಡಿಯೊ ವರ್ಕ್' ಎಂದರೆ ಅನೇಕ ಸಹಾಯಕ ಕಲಾವಿದರೇ ಕಲಾಕೃತಿಯ ಹೆಚ್ಚಿನ ಭಾಗವನ್ನು ಪ್ರಸಿದ್ಧ ಕಲಾಕಾರರ ಮಾರ್ಗದರ್ಶನದಲ್ಲಿ ನಿರ್ಮಿಸಿದ ಕಲಾಕೃತಿ-ಎಂದೇ ಅರ್ಥ. ನಿಸರ್ಗ ದೃಶ್ಯ ಚಿತ್ರಣವನ್ನು ಸ್ಥಳದಲ್ಲೇ ಚಿತ್ರಿಸದೆ ಸ್ಟುಡಿಯೋದಲ್ಲಿ ಕುಳಿತು ಚಿತ್ರಿಸಿದಾಗಲೂ ಅದನ್ನು 'ಸ್ಟುಡಿಯೋ ವರ್ಕ್' ಎಂದೇ ಗುರುತಿಸುತ್ತಿದ್ದರು. ಕ್ರಿ. ಶ. ೧೮೦೦ರ ನಂತರ 'ಸ್ಟುಡಿಯೋ' ಎಂಬುದು 'ಸ್ಕೂಲ್'(School) ಎಂಬ ಅರ್ಥದಲ್ಲಿ ಬಳಕೆಗೊಳ್ಳತೊಡಗಿತು. ಈಗ ಛಾಯಾಚಿತ್ರತೆಗೆಯುವ ಅಂಗಡಿಗಳೂ ಸೇರಿದಂತೆ ಚಲನಚಿತ್ರ ನಿರ್ಮಾಣದ ನೆಲೆ ಹಾಗೂ ರೇಡಿಯೊ, ಟಿ.ವಿ. ಕೇಂದ್ರಗಳನ್ನು ಕೂಡ ಸ್ಟುಡಿಯೊ ಎನ್ನುತ್ತಾರೆ.

ಎಸ್.ಎಂ. ಮಿ.

## ಸುರುಳಿ ಚಿತ್ರಪಟಗಳು (Scroll)

ಬರಹ ಇಲ್ಲವೆ ಚಿತ್ರಗಳನ್ನು ಒಳಗೊಂಡ, ಸುರುಳಿಮಾಡಿ ಇಡಬಹುದಾದ ವಸ್ತುವಿಗೆ ಸ್ಕ್ರೋಲ್ ಅಥವಾ ಸುರುಳಿ ಎನ್ನುತ್ತಾರೆ. ಆಧುನಿಕ ಪುಸ್ತಕವನ್ನು ಹೋಲುವ ಪ್ರಾಚೀನ ಕೋಡೆಕ್ಸ್(Codex)ಗಳು ಮತ್ತು ಚೀನಾದ ಸುರುಳಿ ಅಥವಾ ಪಟಚಿತ್ರಗಳು ಇದಕ್ಕೆ ಒಳ್ಳೆಯ ಉದಾಹರಣೆಗಳು. ಜಪಾನ್ ಮತ್ತು ಚೀನಾಗಳಲ್ಲಿ ಸಾಮಾನ್ಯವಾಗಿ ರೇಶ್ಮೆ ಅಥವಾ ಕಾಗದದ ಮೇಲೆ ಬರೆದ ಅಲಂಕಾರ ಚಿತ್ರಪಟಗಳಿಗೂ ಈ ಪದ ಅನ್ವಯಿಸುತ್ತದೆ. ತಿಬೇಟನ ಬೌದ್ಧ ಮಠಗಳಲ್ಲಿ ಇಂಥ ಚಿತ್ರಗಳನ್ನು ಸಾಧಕರು ಧ್ಯಾನಕ್ಕಾಗಿ, ಏಕಾಗ್ರತೆಗಾಗಿ ಬಳಸುತ್ತಾರೆ. ಉಪಾಸನೆಯ ಸಂದರ್ಭದಲ್ಲಿ ಬಿಚ್ಚಿ ಅನಂತರ ಅವುಗಳನ್ನು ಸುರುಳಿಮಾಡಿ ಇಡುತ್ತಾರೆ. ತಿಬೇಟನ ಇಂಥ ಚಿತ್ರಗಳಿಗೆ ಟಂಕಾ(Tanka)ಎನ್ನುತ್ತಾರೆ. ಕರ್ನಾಟಕದಲ್ಲಿಯೂ ಜೈನ, ವೀರಶೈವ ಹಾಗೂ ವೈಷ್ಣವ ಪಂಥೀಯರು ಇಂಥ ಚಿತ್ರರಚನೆಗಳನ್ನು ಉಪಾಸನೆಗಾಗಿ ಬಳಸುತ್ತಿದ್ದುದು ಗೊತ್ತಾಗುತ್ತದೆ. ಉದ್ಧರಣೆಗಳು ವೀರಶೈವದ ಸುರುಳಿ ಚಿತ್ರಪಟಗಳಾಗಿವೆ.

ಆಭರಣಗಳಲ್ಲಿನ ಕಲಾತ್ಮಕ ಸುರಳಿ ಬಳ್ಳಿ (Scrolling) ನಕ್ಷೆಗಳು, ಅಲಂಕಾರಿಕ ಚರ್ಮದ ಪಟ್ಟಿಕೆಗಳು, ಗೋಡೆಗಳ ಅಂಚು ನಕ್ಷೆಗಳು, ಅಲಂಕೃತ ಕನ್ನಡಿಯ ಚೌಕಟ್ಟುಗಳಲ್ಲಿನ (Rococo mirror frame)ಬಳ್ಳಿಯ ಕುಡಿಗಳು, ಎಲೆಗಳ ಗೊಂಚಲು(Tendrils, Foliage) ಮುಂತಾದ ನಕ್ಷಾರಚನೆಗಳಿಗೂ ಸ್ಕ್ರೋಲ್ ಎನ್ನುತ್ತಾರೆ.

ಶಂ. ಮೂ.

## ಸೈಕ್ಲಾಡಿಕ್ ಕಲೆ (Cycladic Art)

೩೦೦೦ ಕ್ರಿಸ್ತಪೂರ್ವದಿಂದಲೇ ಸೈಕ್ಲಾಡ್ ದ್ವೀಪದ(ಏಜಿಯನ್ -Aegean- ಪ್ರದೇಶದ) ಜನರು ಗಮನಾರ್ಹವಾದ ಮಡಕೆಗಳು, ಒಡವೆ, ವಸ್ತ್ರಾಭರಣ, ಲೋಹಕೆತ್ತನೆ ಮತ್ತು ಕಲ್ಲಿನ ಕೆತ್ತನೆಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಪೂರ್ಣ ಗುಣ ಸಾಧಿಸಿದ್ದರು. ಇವುಗಳಲ್ಲಿ ಮಡಕೆಗಳನ್ನು ಸುಲಲಿತವಾಗಿ ಚಿತ್ರಿಸಲಾಗಿದೆ, ಮತ್ತು ಅದರ ಮೇಲೆ ಜ್ಯಾಮಿತಿಯ ಅಥವಾ ನೈಜ ಶೃಂಗಾರ

ರೀತಿಗಳನ್ನು (motifs) ಅಳವಡಿಸಲಾಗಿದೆ. ಆದರೆ ಅವರ (ಸೈಕ್ಲಾಡ್ ಜನರ) ಬೊಂಬೆಗಳು (ಅಮೃತಶಿಲೆಯಿಂದ ನಿರ್ಮಿತ) ಹೆಚ್ಚು ಆಕರ್ಷಕವಾಗಿವೆ. ಆ ಶಿಲ್ಪಗಳು ಆಳತೆಯಲ್ಲಿ ವ್ಯತ್ಯಾಸಗೊಳ್ಳುತ್ತವೆ (೦.೫ ಮೀಟರಿಗಿಂತ ಹೆಚ್ಚು ೧.೫ ಮೀಟರಿಗಿಂತಲೂ ಕಡಿಮೆ) ಇವುಗಳು ನೋಡಲು ನೈಜವಾಗಿಯೂ ಇರಬಹುದು ಅಥವಾ ಜ್ಯಾಮಿತಿಯ ಆಕಾರ ಹೊಂದಿರಬಹುದು.

ಈ ಸೈಕ್ಲಾಡಿಕ್ ಕಲೆಯಲ್ಲಿಯೇ ಹೆಚ್ಚು ವಿರಳ/ಸಂಕೀರ್ಣ/ವಿಸ್ತಾರವೆನಿಸಿದ ಉದಾಹರಣೆಗೆ ಕೊಳಲು ಬಾರಿಸುತ್ತಿರುವ, ಹಾರ್ಪ್(Harp-ಒಂದು ವಾದ್ಯ) ಬಾರಿಸುತ್ತಿರುವ ಆಕಾರಗಳು; ಕೆರೋಸ್(Keros) ಮತ್ತು ಥೇರ(Thera) ಎಂಬಲ್ಲಿ ದೊರಕಿದೆ) ಆಕರ್ಷಕ ಸರಳತೆಯನ್ನು ಹೊರರೇಖೆಗಳಲ್ಲಿ ಇವು ಉಳಿಸಿಕೊಂಡಿದೆ. ಇದೇ ರೀತಿಯ ಅನೇಕ ಶಿಲ್ಪಗಳು ಹಾಗೂ ಮಡಕೆಗಳು ಇಡೀ ಸೈಕ್ಲಾಡ್(ಏಜಿಯನ್) ದ್ವೀಪದಾದ್ಯಂತ ದೊರಕಿದ್ದು, ಈ ಕಲೆ ಕಂಡು ಬರುವ ಇತರ ಪ್ರದೇಶಗಳೆಂದರೆ ಕ್ರೇಟ್ (Crete) ಹಾಗೂ ಇತರ ಗ್ರೀಕ್ ಪ್ರಮುಖ ಪ್ರಾಂತ್ಯಗಳು.

**ಎಚ್.ಎ.ಅ.**

## ಸುರಳೀಕರಣ (Coiling)

ಪಾತ್ರೆ ಮತ್ತು ಪೊಳ್ಳಾದ ಶಿಲ್ಪ ನಿರ್ಮಾಣದಲ್ಲಿ ಮಣ್ಣನ್ನು ಮಿತವಾಗಿ ಬಳಸಿಕೊಳ್ಳುವ ತಂತ್ರವಿದು. ಉದ್ದದ ಜೇಡಿಮಣ್ಣಿನ ಸುರುಳಿಗಳನ್ನು ಒಂದರ ಮೇಲೊಂದರಂತೆ ಇರಿಸಿ ಭಿತ್ತಿಯನ್ನು ತಯಾರಿಸಿ, ಆಕಾರವು ಪೂರ್ಣವಾದ ಬಳಿಕ ಭಿತ್ತಿಯನ್ನು ನಯಗೊಳಿಸುತ್ತಾರೆ. ಆಗ ವಿಭಿನ್ನ ಪಟ್ಟಿಗಳು ಒಂದಕ್ಕೊಂದು ಅಂಟಿಕೊಂಡು ಒಂದೇ ಮೇಲ್ಮೈ ಸಿದ್ಧಗೊಳ್ಳುತ್ತದೆ.

**ಶಿ.ಷ.**

## ಸುರಪುರ

ಸುರಪುರ ಇಂದು ಗುಲಬರ್ಗ ಜಿಲ್ಲೆಯ ಒಂದು ತಾಲೂಕು ಕೇಂದ್ರ. ಸ್ವಾತಂತ್ರ್ಯ ಪೂರ್ವದಲ್ಲಿ ಸುಮಾರು ಎರಡು ಶತಮಾನಗಳ ಕಾಲ ಇಲ್ಲಿ ನಾಯಕ ರಾಜಮನೆತನವೊಂದು ಆಳುತ್ತಿತ್ತು. ಇವರ ಅರಮನೆ ಹಾಗೂ ಮಠಗಳಲ್ಲಿ ಭಿತ್ತಿ ಚಿತ್ರಗಳು ಇದ್ದುದಾಗಿ ತಿಳಿದು ಬರುತ್ತದೆ. ಆದರೆ ಈ ಪ್ರದೇಶದಲ್ಲಿ ರಚಿತವಾದ ಬಿಡಿಚಿತ್ರಗಳು ಇಂದಿಗೂ ಅಲ್ಲಲ್ಲಿ ನೋಡಲು ಸಿಗುತ್ತದೆ. ಈ ಚಿತ್ರಗಳಲ್ಲಿ ೧೮ನೇ ಶತಮಾನದ ಆರಂಭದಿಂದಲೇ 'ಗರುಡಾದ್ರಿ' ಎಂಬ ಅಂಕಿತನಾಮವಿದ್ದು ಇದೊಂದು ಚಿತ್ರಗಾರರ ವಂಶವಾಗಿರಬಹುದು. ಸುರಪುರದ ಅರಸರಲ್ಲಿ ಇಮ್ಮಡಿ ವೆಂಕಟಪ್ಪನಾಯಕ(೧೭೭೩-೧೮೦೨) ಮತ್ತು ಮುಮ್ಮಡಿ ವೆಂಕಟಪ್ಪನಾಯಕರು (೧೮೧೮-೨೭) ಕಲೆ ಸಾಹಿತ್ಯಗಳಿಗೆ ಪ್ರೋತ್ಸಾಹ ನೀಡಿದ್ದು ಇವರ ಆಸ್ಥಾನದಲ್ಲಿ ಚಿತ್ರಕಲಾವಿದರೂ ಇದ್ದು ಅವರಿಗೆ ಜಹಗೀರುಗಳನ್ನು ನೀಡಲಾಗಿತ್ತು. ಮುಂದೆ ೧೮೪೨ರಿಂದ ೫೩ರ ವರೆಗೆ ಇಲ್ಲಿಗೆ ಬ್ರಿಟಿಷ್ ಪ್ರತಿನಿಧಿಯಾಗಿ ಬಂದಿದ್ದ ಮೆಡೋಸ್ ಟೈಲರ್ ಎಂಬಾತ ಸ್ವತಃ ವಿದ್ವಾಂಸ, ಲೇಖಕ ಚಿತ್ರಗಾರ ಹಾಗೂ ಛಾಯಾಚಿತ್ರಗಾರನಾಗಿದ್ದು ಕಲಾವಿದ ಗರುಡಾದ್ರಿ ಎಂಬಾತನ ಗೆಳೆಯನೂ ಆಗಿದ್ದು ಆತನ ಬಗ್ಗೆ ತನ್ನ ಗ್ರಂಥದಲ್ಲಿ ಉಲ್ಲೇಖಿಸಿರುವುದಾಗಿ ತಿಳಿದು ಬರುತ್ತದೆ.

ಲ್ಲಿ ರಚಿತವಾದ ಚಿತ್ರಗಳು ಹೈದ್ರಾಬಾದ್ ಹಾಗೂ ಬ್ರಿಟಿಷ್ ಮ್ಯೂಸಿಯಂಗಳಲ್ಲದೆ ಜಿಲ್ಲೆಯ ಲವು ಖಾಸಗಿ ಸಂಗ್ರಹಕಾರರಲ್ಲಿವೆ. ಇವು ಕಿರು ಆಕಾರದಲ್ಲಿ ಚಿಕಣಿ ಚಿತ್ರಗಳ ರೂಪದಲ್ಲಿದ್ದು ಖ್ಖನಿ ಶೈಲಿಯ ಚಿತ್ರಗಳನ್ನು ಬಹಳವಾಗಿ ಹೋಲುತ್ತವೆ. ಸುರಪುರದವೆಂದು ಹೇಳಲಾಗುವ ಟ್ಟು ಚಿತ್ರಗಳನ್ನು ಗಮನಿಸಿದಾಗ ಆಕೃತಿಯನ್ನು ಇರಿಸುವಲ್ಲಿ, ನಿಲವು, ಶೈಲಿ ಹಾಗೂ ಣ್ಣಗಾರಿಕೆಯಲ್ಲಿ ವ್ಯತ್ಯಾಸ ಕಂಡು ಬರುವುದರಿಂದ ಇವು ಬೇರೆ ಬೇರೆ ಕಲಾವಿದರ ತಿಗಳೆಂದು ಹೇಳಬಹುದು. ಮೊದಲ ಕಾಲದಲ್ಲಿ ರಾಜರ ಹಾಗೂ ರಾಜಪರಿವಾರದವರ ಕಿತ್ರಣ ಕಂಡುಬಂದರೆ ನಂತರದ ಕಾಲದಲ್ಲಿ ವೈಷ್ಣವ ದೇವರುಗಳು ಚಿತ್ರಿತರಾಗಿದ್ದಾರೆ. ಗಾಜಿನ ಲಕದ ಮೇಲಿನ ಚಿತ್ರಗಳಲ್ಲಿ ಸುಂದರ ಸ್ತ್ರೀಯರ ಶೃಂಗಾರ ಪರವಾದ ಚಿತ್ರಣಗಳನ್ನು ೋಡಬಹುದು. ಗುಲಬರ್ಗದ ಕಲಾವಿದ ವಿಜಯ ಹಾಗರಗುಂಡಿಗಿ ಅವರು ಸುರಪುರದ ಲವು ಚಿತ್ರಗಳನ್ನು ಸಂಗ್ರಹಿಸಿ ಪ್ರತಿಮಾಡಿ ಇರಿಸಿಕೊಂಡಿದ್ದಾರೆ. ವಿ. ಜಿ. ಅಂದಾನಿ ಅವರ ಳಿಯೂ ಕೆಲವು ಮೂಲ ಚಿತ್ರಗಳಿವೆ.

**ಮಾ.ಮಂ.**

## ಸುಪ್ರ ಯಥಾರ್ಥವಾದ (Super Realism)

ಇದು ಶಿಲ್ಪಕಲೆ ಅಥವಾ ಚಿತ್ರಕಲೆಯ ಒಂದು ವಿಶಿಷ್ಟ ಶೈಲಿ. ಇದನ್ನು 'ಫೋಟೋ ರಿಯಲಿಜಂ', 'ಹೈಪರ್ ರಿಯಲಿಜಂ' ಎಂದು ಗುರುತಿಸುತ್ತಾರೆ. ಬ್ರಿಟನ್ ಹಾಗೂ ಯುನೈಟೆಡ್ ಸ್ಟೇಟ್ಸ್‌ಗಳಲ್ಲಿ ಈ ಶೈಲಿಯು ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಅವಧಿಯೆಂದರೆ ೧೯೬೦ ಹಾಗೂ ೧೯೭೦ರ ದಶಕಗಳು. ವಿವರಗಳನ್ನು ಅತ್ಯಂತ ಸೂಕ್ಷ್ಮ, ಛಾಯಾಚಿತ್ರಕಲೆಯಲ್ಲಿನ ಖಚಿತತೆಯಂತೆ ಚಿತ್ರಿಸಲು ಕಾಳಜಿವಹಿಸುವುದು ಈ ಶೈಲಿಯ ವಿಶೇಷತೆಯಾಗಿತ್ತು. ಸುಪರ್ ರಿಯಾಲಿಸ್ಟರು ಅತ್ಯಂತ ಉನ್ನತಮಟ್ಟದ ತಂತ್ರವಿಧಾನವನ್ನನುಸರಿಸಿ ಕಲಾಕೃತಿಗಳನ್ನು ತುಂಬಾ ನಯವಾಗಿ ರಚಿಸುತ್ತಿದ್ದರು. ಅಲ್ಲದೆ ಚಿತ್ರದ ವಸ್ತುವನ್ನು ಸರ್‌ರಿಯಾಲಿಸ್ಟರಂತೆ ಸಂಪೂರ್ಣವಾಗಿ ಅನೈಸರ್ಗಿಕ ಅಥವಾ ಅಸ್ವಾಭಾವಿಕವಾಗಿ ಚಿತ್ರಿಸುತ್ತಿದ್ದರು. ಹರ್ಬರ್ಟ್ ರೀಡನು ಫ್ರೆಂಚ್ ಭಾಷೆಯ ಅತಿಯಥಾರ್ಥವಾದ (Sur-Realism) ಶಬ್ದದ ಅನುವಾದದಂತೆ ಈ ಶಬ್ದವನ್ನು ಬಳಸಿರುವನಾದರೂ ಅದು ತನ್ನ ಅರ್ಥವ್ಯಾಪ್ತಿಯನ್ನು ಮೀರಿ ಪ್ರಯೋಗಗೊಂಡಿದೆ. ಚಕ್‌ಕ್ಲೋಸ್, ರಿಚರ್ಡ್‌ಈಸ್ಟಸ್ ಮತ್ತು ಶಿಲ್ಪಿ ಡಾನ್‌ಹಾನಸ್ಸನ್ ಮುಂತಾದವರು ಈ ಶೈಲಿಯ ಪ್ರಮುಖ ಕಲಾವಿದರು.

**ಎಸ್.ಎಂ.ಮ.**

## ಸುಪ್ರಿಮ್ಯಾಟಿಸಂ (Suprematism)

ಕ್ಯೂಬಿಸಂ(cubism)ನ ಅತೀತವಾದ ಹಾಗೂ ಅತಿ ಜ್ಯಾಮಿತಿಯ ಸ್ಥಿತಿ ಈ ಸುಪ್ರಿಮ್ಯಾಟಿಸಂ. ಇದನ್ನು ಕಾಸಿಮರ್ ಮಾಲೆವಿಕ್ ಎಂಬ ರಷ್ಯನ್ ಕಲಾವಿದ ಪ್ರಾರಂಭಿಸಿದ. ಈ ಪ್ರಕಾರದ ಕೃತಿಗಳಲ್ಲಿ ದುಂಡಾಕಾರ, ತ್ರಿಕೋನಾಕಾರ, ಆಯತಾಕಾರ ಮತ್ತು ಕ್ರಾಸ್(cross) ಆಕಾರಗಳ ಅತಿ ಬಳಕೆಯುಂಟು. ಈ ಶೈಲಿಯ ಅತ್ಯಂತ ಶುದ್ಧರೂಪ ಮೂಡಿಸಿದವನು ಮಾಲೆವಿಕ್. ಬಿಳಿಯ ಹಿನ್ನೆಲೆಯ ಮೇಲೆ ಕಪ್ಪು ಚೌಕವಿರುವ(square) ಕೃತಿಯೇ ಅದು.

ಈ ಸುಪ್ರಿಮ್ಯಾಟಿಸಂ ಪಂಥವು ಇತರ ಸಮಕಾಲೀನ ಕಲಾ ಪ್ರಕಾರಗಳೊಂದಿಗೆ ಸಾಮ್ಯತೆ-ವ್ಯತ್ಯಾಸಗಳನ್ನು ಏಕಕಾಲಕ್ಕೆ ಹೊಂದಿದ್ದಿತು. ಉದಾಹರಣೆಗೆ: ಲೇಟ್-ಅಬ್‌ಸ್ಟ್ರಾಕ್ಷನ್, ನಿಯೋ-ಪ್ಲಾಸ್ಟಿಸಿಸಂ. ನಾನ್-ಆಬ್‌ಜೆಕ್ಟಿವಿಸಂ ಮತ್ತು ಕನ್‌ಸ್ಟ್ರಕ್ಟಿವಿಸಂ ಪಂಥಗಳೊಂದಿಗೆ ಕಲಾಪ್ರಕಾರವು ಗಾಢ ಸಂಬಂಧ ಹೊಂದಿದ್ದಿತು.

ಮಾಲೆವಿಕನು ತನ್ನ ಸುಪ್ರಿಮ್ಯಾಟಿಸಂ ಪ್ರಕಾರದ ರೀತಿನೀತಿಗಳನ್ನು(manifesto) ಕ್ರಿ.ಶ.೧೯೧೫ರಲ್ಲಿ ಪ್ರಕಟಿಸಿದ. ಈ ಪಂಥವು ಸಾಮಾನ್ಯ ಕ್ಯೂಬಿಸಂ- ಕೃತಿಗಳಿಗಿಂತಲೂ ಅಮೂರ್ತದ ಕಡೆಗೆ ಒಂದು ಹೆಜ್ಜೆ ಮುಂದಿದ್ದಿತು.

ಎಚ್.ವಿ.ಅ.

## ಸೂತ್ರದ ಗೊಂಬೆ

ಜನರ ಮನೋಧರ್ಮದ ವಿವಿಧ ಆಯಾಮಗಳನ್ನು ತಿಳಿಯಪಡಿಸುವ ಪ್ರದರ್ಶನಾತ್ಮಕ ಕಲೆಗಳು ಜಗತ್ತಿನ ಎಲ್ಲೆಡೆಯೂ ಕಂಡುಬರುತ್ತವೆ. ಸೂತ್ರದ ಗೊಂಬೆಯಾಟದ ಕಲೆ ಇಂದು ವಿಶ್ವವ್ಯಾಪಿಯಾದ ಪ್ರದರ್ಶನಾತ್ಮಕ ಕಲೆಯಾಗಿ ಜನಮನವನ್ನು ಆಕರ್ಷಿಸುತ್ತಲಿದೆ.

ಭಾರತದಲ್ಲಿ ಸೂತ್ರದ ಗೊಂಬೆಯಾಟವು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯಂತೆ ಕ್ರಿಸ್ತಪೂರ್ವದಿಂದಲೇ ಇದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕರ್ನಾಟಕದಲ್ಲಿ ೧೨ನೆಯ ಶತಮಾನದಷ್ಟು ಹಿಂದಿನಿಂದಲೇ ಪ್ರಚಲಿತದಲ್ಲಿದ್ದ ವಿವರವು ವಚನಗಳಲ್ಲಿ ದೊರೆಯುತ್ತದೆ. ಸದ್ಯ ಭಾರತದಲ್ಲಿ ಅತಿ ಪ್ರಾಚೀನ ಸೂತ್ರದ ಗೊಂಬೆಯಾಟವು ರಾಜಸ್ಥಾನದ ಗೊಂಬೆಯಾಟವೇ ಮೂಲವೆಂಬ ಅಭಿಪ್ರಾಯಕ್ಕೆ ವಿದ್ವಾಂಸರು ಬಂದಿದ್ದಾರೆ.

ಸೂತ್ರದ ಗೊಂಬೆಯ ರಚನೆಯ ವಿಧಾನಗಳು ಪ್ರಾದೇಶಿಕವಾಗಿ ಭಿನ್ನಭಿನ್ನವಾಗಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಅತ್ತಿ, ಹಾಲವಾಣ, ಕಡವಲ ಮರದಿಂದಲೂ ಸಿಬಿರು ಬಾರದ ಹಗುರಾದ 'ಮರಾಲೆ' ಮರದ ಕಟ್ಟಿಗೆ ಗೊಂಬೆಗಳ ರಚನೆಯಲ್ಲಿ ಹೆಚ್ಚಾಗಿ ಬಳಸಲಾಗುತ್ತದೆ. ಸೂತ್ರದ ಗೊಂಬೆಗಳ ನಿರ್ಮಾಣ ಹಂತದಲ್ಲಿ ಕಟ್ಟಿಗೆಯ ಆಯ್ಕೆ ಬೇಕಾದ ಗಾತ್ರಕ್ಕೆ ಕಟ್ಟಿಗೆಯ ಬಿಡಿ ಭಾಗಗಳನ್ನು ತಯಾರಿಕೆ, ಎದೆ, ತೋಳು, ಮುಂಗೈ, ಹಸ್ತ, ತೊಡೆ ಮುಂಗಾಲು ಪಾದ ಹೀಗೆ ಸಿದ್ಧಗೊಳಿಸಿಕೊಳ್ಳಲಾಗುತ್ತಿದೆ. ಹೀಗೆ ಸಿದ್ಧವಾದ ನಂತರ ಗೊಂಬೆಗಳಿಗೆ ಕೀಲು ಜೋಡಿಸಲಾಗುತ್ತದೆ. ಇದು ತುಂಬ ಮಹತ್ವದ ಹಂತವೆಂದು ಹೇಳಲಾಗುತ್ತದೆ. ಇಲ್ಲಿ ಕನಿಷ್ಟ ಆರು ಸೂತ್ರಗಳನ್ನು ಜೋಡಿಸಲಾಗುತ್ತದೆ. ಮುಖದ ಎಡಬಲಕ್ಕೆ ಎರಡು ಒಂದು ಕೋಲಿಗೆ, ಕೈಗಳಿಗೆ ಕಟ್ಟಿದ ಸೂತ್ರಗಳು, ಕಾಲಿಗೆ ಕಟ್ಟಿದ ಎರಡು ಸೂತ್ರಗಳು ಮೂರನೆಯ ಕೋಲಿಗೆ ಹೀಗೆ ಅಂಗಾಂಗಗಳ ಚಲಿಸುವಿಕೆಗೆ ಅನುಗುಣವಾಗಿ ಈ ಸೂತ್ರದ ಜೋಡಣೆ ಇನ್ನು ಹೆಚ್ಚಿಗೆ ಆಗುವದು ಉಂಟು. ಈ ಸೂತ್ರಗಳಿಗೆ ಜವಿ, ಕಪ್ಪುದಾರ, ತಂತಿ, ನಾರಾಚಗಳನ್ನು ಬಳಸುತ್ತಾರೆ.

ಸೂತ್ರದ ಗೊಂಬೆಗಳ ವರ್ಣಾಲಂಕಾರ. ವೇಶಭೂಷಣಗಳ ವಿನ್ಯಾಸ ಸೂತ್ರದ ಗೊಂಬೆಯ ರಚನೆಯ ಇನ್ನೊಂದು ಮಹತ್ವದ ಹಂತವೆಂದು ಹೇಳಬಹುದು. ನಯಗೊಳಿಸಿದ ಕಟ್ಟಿಗೆ ಬಿಡಿಭಾಗಗಳಿಗೆ ಅದರಲ್ಲೂ ಮುಖಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗುತ್ತದೆ.

ಹರಿದಾಳ, ನೀಲಿ, ಕೆಂಪು, ಬಿಳಿ, ಬಣ್ಣದ ಜೊತೆಗೆ ಗಚ್ಚಿನ ಎಣ್ಣೆ, ಅರಗು, ಬಳಸಿಕೊಂಡು ಮುಖಕ್ಕೆಲ್ಲ ಹರಿದಾಳದ ಲೇಪನಮಾಡಿ ನಂತರ ಕಣ್ಣಿನ ಅಲಂಕಾರ ಮಾಡುತ್ತಾರೆ. ಬಯಲಾಟದ ಪಾತ್ರಗಳಿಗೆ ಹಚ್ಚುವಂತೆ ಇಲ್ಲಿಯ ವಿವಿಧ ಪಾತ್ರದ ಗೊಂಬೆಗಳಿಗೆ ಆಯಾ ಪಾತ್ರಗಳ ಸ್ವಭಾವಕ್ಕೆ ಅನುಗುಣವಾಗಿ ಬಣ್ಣದ ಲೇಪನ ಮಾಡುತ್ತಾರೆ. ಮುಖವರ್ಣಿಕೆ ಮಾತ್ರ ಅತ್ಯಂತ ಆಕರ್ಷಕವಾಗಿರುತ್ತದೆ. ಇಲ್ಲಿ ಚಿತ್ರಕಾರನ ಪರಿಶ್ರಮ, ಕಲ್ಪನಾ ಶೀಲತೆಗಳು ಎದ್ದು ಕಾಣುತ್ತವೆ. ಮುಖ ಪಾದ, ಹಸ್ತ ಮುಂಗೈಗಳಲ್ಲಿ ಮಾತ್ರ ವರ್ಣಲೇಪನ ಮಾಡಲಾಗುತ್ತದೆ. ಗೊಂಬೆಯ ಶರೀರದ ಇನ್ನುಳಿದ ಭಾಗಗಳು ಆಯಾ ಪಾತ್ರದ ಗುಣಧರ್ಮಕ್ಕನುಗುಣವಾಗಿ ವೇಷಭೂಷಣವನ್ನು ವಿನ್ಯಾಸಗೊಳಿಸಲಾಗುತ್ತಿದೆ. ಹೀಗೆ ಅಂಗಾಂಗಗಳೆಲ್ಲ ತುಂಬಾ ಕಲಾತ್ಮಕವಾದ ಅಲಂಕಾರಗಳಿಂದ ಕೂಡಿರುತ್ತವೆ.

ಗೊಂಬೆಗಳ ಮುಖದಲ್ಲಿಯ ವರ್ಣಗಳು ಬಹುಕಾಲ ಬಾಳಿಕೆ ಬರುವ ಸಲುವಾಗಿ ಬೇವಿನ ಅಂಟು ಲೇಪಿಸುವುದೂ ಉಂಟು. ಶ್ರೀರಾಮ, ಕೃಷ್ಣ, ಪರಶುರಾಮ, ಆಂಜನೇಯ, ಮುಂತಾದ ಗೊಂಬೆಗಳ ಮುಖಕ್ಕೆ ನೀಲಿಬಣ್ಣ ಉಗ್ರ ಪಾತ್ರಗಳ ಗೊಂಬೆಗಳಿಗೆ ಕೆಂಪುವರ್ಣ, ರಾಕ್ಷಸ ಮುಂತಾದ ಪಾತ್ರಗಳಿಗೆ ಕಪ್ಪು ಬಣ್ಣದ ಲೇಪನ ಮಾಡುತ್ತಾರೆ. ರೌದ್ರತೆಯನ್ನು ಬಿಂಬಿಸಲು ಕಪ್ಪು ಬಿಳಿ ಬಣ್ಣದ ಚುಕ್ಕೆ ಇಡುತ್ತಾರೆ. ಗೊಂಬೆಗಳ ಹಣೆಯ ಮೇಲೆ ಬಿಳಿ ಮತ್ತು ಕೆಂಪು ನಾಮವನ್ನು, ವಿಭೂತಿ ಗಂಧದ ಬೊಟ್ಟುಗಳನ್ನು ಮಾಡಲಾಗುತ್ತದೆ. ಕೋಳಿಯ ಮೊಟ್ಟೆ ಬಿಳಿಯ ದ್ರವವನ್ನು ಬಣ್ಣಗಳೊಡನೆ ಬೆರೆಸಿ ಬಳಸಿದ ಗೊಂಬೆಗಳು ಹೆಚ್ಚು ಹೊಳಪನ್ನು ಸ್ಥಿರತೆಯನ್ನು ತರುತ್ತವೆ. ಹೀಗೆ ಸೂತ್ರದ ಗೊಂಬೆಗಳಲ್ಲಿ ವೇಷಭೂಷಣಗಳಂತೆ ವರ್ಣವಿನ್ಯಾಸವು ಮಹತ್ವದ ಅಂಶವಾಗಿ ಪರಿಗಣಿತವಾಗುತ್ತದೆ.

ಎಸ್. ಸಿ. ಪಾ.

## ಸೋಪಾನ

ಆಲಯಕ್ಕೆ ಪ್ರವೇಶಿಸಲು ಸೋಪಾನಗಳನ್ನು ನಿರ್ಮಿಸಿರುತ್ತಾರೆ. ಆಲಯದ ಪ್ರವೇಶ ಮಂಟಪಕ್ಕೆ ಹೊಂದಿಸಿರುವ ಈ ಸೋಪಾನಗಳು ಅನೇಕ ರೀತಿಯಲ್ಲಿರುತ್ತವೆ. 'ದೀರ್ಘವೇದಾಶ್ರ' ರೀತಿಯ ಸೋಪಾನವು ಆಯುತಾಕಾರದಾಗಿದ್ದು ಹೆಚ್ಚು ಅಗಲವಾಗಿರುತ್ತದೆ. ಈ ರೀತಿಯದನ್ನು ಸಾಮಾನ್ಯವಾಗಿ ಎಲ್ಲೆಡೆ ಕಾಣಬಹುದಾಗಿದೆ. ದ್ವಾರದ ಎರಡೂ ಪಾರ್ಶ್ವ ಹಾಗೂ ಮಧ್ಯದಲ್ಲಿ ನಿರ್ಮಿತವಾದ ಸೋಪಾನಗಳಿಗೆ 'ತ್ರಿಕಂಡಕಾರ' ಎಂದು ಹೆಸರು. ದ್ವಾರದ ಉಭಯ ಪಾರ್ಶ್ವಗಳಲ್ಲೂ ಮೆಟ್ಟಿಲುಗಳಿದ್ದಾಗ ಅದನ್ನು 'ದ್ವಿರದ' ಎನ್ನುತ್ತಾರೆ. ಈ ಸೋಪಾನಗಳಿಗೆ ಅಕ್ಕಪಕ್ಕಗಳಲ್ಲಿ 'ಅಲಂಬನ ಬಾಹು' ಅಥವಾ 'ಪಕ್ಷ ಶಿಲಾ' ಎಂಬ ಕೈಪಿಡಿಗಳನ್ನು ಜೋಡಿಸಿರುತ್ತಾರೆ. ಇವು ಆನೆಯ ಸೊಂಡಿಲಿನಂತಿದ್ದಾಗ 'ಹಸ್ತಿಹಸ್ತ' ಎಂದೂ 'ರಥಚಕ್ರ ಗುರುತನ್ನು ಹೊಂದಿದ್ದರೆ 'ರಥಾಂಗ' ಎಂದೂ, ವ್ಯಾಳಿಗಳಿಂದ ಅಲಂಕೃತಗೊಂಡಿದ್ದರೆ ವ್ಯಾಳಿಸೋಪಾನವೆಂದು ಕರೆಯಲಾಗುತ್ತದೆ. ಕೆಲವೊಮ್ಮೆ ಇಡೀ ಸೋಪಾನವನ್ನು 'ಹಸ್ತಿಹಸ್ತ'ವೆಂದೂ ವ್ಯವಹರಿಸುತ್ತಿರುವುದುಂಟು.

ಓ.ವಿ.ಕೆ.

## ಸೆಲ್ಟಿಕ್ ಆರ್ಟ್ (Celtic Art)

ಯುರೋಪಿನ ಪಶ್ಚಿಮ ಹಾಗೂ ಮಧ್ಯಭಾಗದಲ್ಲಿ ನೆಲೆಸಿದ್ದ ಆದಿವಾಸಿಗಳನ್ನು ಸೆಲ್ಟ್ಸ್ ಎಂದು ಕರೆಯುತ್ತಾರೆ. ಈ ಸೆಲ್ಟ್ಸ್ ಜನಾಂಗದವರಿಂದ ರೂಪುಗೊಂಡ ಕಲೆಯೇ ಸೆಲ್ಟಿಕ್‌ಕಲೆ. ಜಾಮಿತಿಯ ಆಕೃತಿಗಳು, ಪ್ರಾಣಿಗಳು ಮುಂತಾದ ಆಕಾರಗಳಿಂದ ಅಲಂಕೃತಗೊಂಡ ಸೆಲ್ಟಿಕ್ ವಾಸ್ತುಶಿಲ್ಪವನ್ನು ಕಾಣಬಹುದು. ಮೆಡಿಟರೇನಿಯನ್ ಅಥವಾ ಭೂಮಧ್ಯ ಸಮುದ್ರದ ಪ್ರದೇಶ ಹಾಗೂ ಯುರೋಪಿನ ಅನೇಕ ಭಾಗಗಳಲ್ಲಿ ಸೆಲ್ಟಿಕ್ ಕಲೆಯು ಹರಡಿಕೊಂಡಿದೆ. ಡ್ರೈಪರ್(Driper) ಹಾಗೂ ಸೀಥಿಯನ್(Scythian) ಎಂಬುವರು ಈ ಶೈಲಿಯ ಪ್ರಮುಖ ಕಲಾವಿದರು. ಇವರ ಕಲಾಕೃತಿಗಳಲ್ಲಿ ಪ್ರಾಣಿಗಳ ಮನಮೋಹಕ ಹಾಗೂ ರಮ್ಯ ಆಕೃತಿಗಳ ನಿರೂಪಣೆಯನ್ನು ಕಾಣಬಹುದು. ಸ್ವಿಝರ್‌ಲ್ಯಾಂಡ್, ಬೊಹೇಮಿಯ(Bohemia) ಮತ್ತು ಬೆಲ್ಜುವಾಸಿಯಗಳಲ್ಲಿ ದೊರೆತ, ತಾಮ್ರ ಹಾಗೂ ಬಂಗಾರದ ನಾಣ್ಯಗಳಲ್ಲಿ ಸ್ಫುಟವಾಗಿ, ಸುಂದರವಾಗಿ ರಚಿತವಾದ ಕಣ್ಣು, ಹುಬ್ಬು ಕೇಶವಿನ್ಯಾಸಗಳು ಸೆಲ್ಟಿಕ್ ಕಲೆಯ ಅತ್ಯುತ್ತಮ ಉದಾಹರಣೆಗಳಾಗಿವೆ. ಅಲ್ಲದೇ ಯಾವುದೇ ಭೌಗೋಳಿಕ ನಿರ್ಬಂಧಕ್ಕೊಳಪಟ್ಟಿರದ ವಿದೇಶಿಯರ (Barbaric) ಕಲಾಕೃತಿಗಳೂ ಇದೇ ಶೈಲಿಯಲ್ಲಿ ರಚಿತವಾಗಿರುವುದನ್ನು ಕಾಣಬಹುದು.

ಕುಂಭಕಲೆ(Ceramics), ಲೋಹ, ಆಭರಣ, ಪಾನಪಾತ್ರೆಗಳೇ ಮೊದಲಾದವುಗಳು ಸೆಲ್ಟಿಕ್ ಕಲೆಯ ಉತ್ತಮ ಮಾದರಿಗಳಾಗಿದ್ದು ಗ್ರೀಕ್, ರೋಮ ಮತ್ತು ಯುರೋಪಗಳಲ್ಲಿ ಅಭಿವೃದ್ಧಿಗೊಂಡವುಗಳಾಗಿವೆ.

ಅಟಳ

## ಸೋಲಾಪುರ (ಶುಭರಾಯರ ಮಠ)

ಮಹಾರಾಷ್ಟ್ರದ ಜಿಲ್ಲಾ ಕೇಂದ್ರವಾದ ಸೊಲ್ಲಾಪುರವು ಚಾಳುಕ್ಯರ ಕಾಲದ ದೇವಾಲಯಗಳಿಂದ ಪ್ರಸಿದ್ಧವಾಗಿದೆ. ಆದರೆ ಇಲ್ಲಿಯ ಶುಭರಾಯರು ಮಠದಲ್ಲಿಯ ಚಿತ್ರಕಲೆ ಹೆಚ್ಚು ಪ್ರಸಿದ್ಧವಾಗಿಲ್ಲ. ಕರ್ನಾಟಕದ ಮಾಲೂರಿನ ಶುಭರಾಯ (೧೭೫೦-೧೮೨೦) ಮೊದಲು ಟಿಪ್ಪುವಿನ ಸೈನ್ಯದಲ್ಲಿದ್ದು ನಂತರ ಸೊಲ್ಲಾಪುರದಲ್ಲಿ ನೆಲೆಸಿ ಆಧ್ಯಾತ್ಮ ಮಾರ್ಗವನ್ನು ಕಂಡುಕೊಂಡು ಅಲ್ಲಿಯೇ ನೆಲೆ ನಿಂತರು. ಗೀತ, ವಾದನ-ನರ್ತನಗಳೊಂದಿಗೆ ಚಿತ್ರಕಲೆಯೂ ಅವರ ಭಕ್ತಿ ಮಾರ್ಗದ ಅಭಿವ್ಯಕ್ತಿಗಳಲ್ಲಿ ಒಂದಾಗಿದ್ದು ಅವರು ರಚಿಸಿದ ೩೦೦ಕ್ಕೂಹೆಚ್ಚು ಚಿತ್ರಗಳು ಇಂದಿಗೂ ಉಳಿದು ಬಂದಿದೆ. ರಾಮಾಯಣ, ಭಾರತಗಳಲ್ಲದೆ ಕೃಷ್ಣ ಗೋಪಿಕೆಯರ ಕುರಿತ ಕೃಷ್ಣನ ಬಾಲಲೀಲೆ, ಸಾಹಸಗಳನ್ನು ಕುರಿತ ಚಿತ್ರಗಳು ಶುಭರಾಯರದೇ ಶೈಲಿಯಲ್ಲಿವೆ. ಸ್ಥಳೀಯವಾಗಿ ದೊರೆಯುವ ಬಣ್ಣಗಳಿಂದಲೇ ರಚಿಸಿದ್ದು ಹಿನ್ನೆಲೆಯಲ್ಲಿ ಗಾಢವಾದ ನೀಲಿಯನ್ನು ಬಳಸಿ ಅಲಂಕಾರ ಯುತವಾಗಿ ರಚಿತವಾಗಿವೆ. ಇಲ್ಲಿಯ ಎಲ್ಲ ಆಕೃತಿಗಳೂ ಚಲನಶೀಲವಾಗಿ ಲವಲವಿಕೆಯಿಂದ ಕೂಡಿರುವುದು ಸಂಪ್ರದಾಯ ರಚನೆಯಲ್ಲಿ ವಿಶೇಷವಾದದ್ದಾಗಿದೆ. ಈ ಚಿತ್ರಗಳನ್ನು ವಾರ್ಷಿಕ ಹಬ್ಬಾಚರಣೆಗಳಲ್ಲಿ ಮಠ ಹಾಗೂ ಮಂಟಪದ ಅಲಂಕಾರಕ್ಕಾಗಿ ಬಳಸಿದಂತಿವೆ.

ಅಲಪ

## ಸೌಂದರ್ಯವಾದ (Aestheticism)

ಔದ್ಯೋಗಿಕ ಕಲೆಯಲ್ಲಿಯ ಸೌಂದರ್ಯ ರಾಹಿತ್ಯ ಮತ್ತು ಕೇವಲ ವ್ಯಾವಹಾರಿಕ ಮನೋಧರ್ಮ-ಇವು ಸೌಂದರ್ಯವಾದಕ್ಕೆ ದಾರಿಮಾಡಿಕೊಟ್ಟವು. ೧೮ನೆಯ ಶತಮಾನದಲ್ಲಿ ಇಮ್ಯಾನ್ಯುಯಲ್ ಕ್ಯಾಂಟ್ ಎಂಬಾತನು ಈ ಕಲಾತತ್ವವನ್ನು ಪ್ರತಿಪಾದಿಸಿದನು. ಕಲಾಕೃತಿಯು ಅದರಲ್ಲಿನ ಸೌಂದರ್ಯಾಂಶಗಳಿಂದ ಮನ್ನಿಸಲ್ಪಡಬೇಕೆಂಬುದು ಆತನ ನಿಲುವು. ಜರ್ಮನಿಯ ಗೋಥೆ ಮತ್ತು ಶಿಲ್ಲರ್ ಈ ವಾದವನ್ನು ಎತ್ತಿಹಿಡಿದರು. ಇಂಗ್ಲೆಂಡಿನಲ್ಲಿ ಸ್ಯಾಮ್ಯುವೆಲ್ ಟೇಲರ್, ಕೋಲರಿಜ್, ಥಾಮ್ಸ ಕಾರ್ಲೈಲ್ ಮೊದಲಾದ ಬರಹಗಾರರು ಈ ವಾದವನ್ನು ಪ್ರಚುರಪಡಿಸಿದರು. ಇದೇ ಹಿನ್ನೆಲೆಯಲ್ಲಿ (ಕ್ರಿ. ಶ. ೧೮೧೮ ರಲ್ಲಿ) ಫ್ರಾನ್ಸ್ ದೇಶದ ವಿಕ್ಟರ್ ಕಜಿನ್ ಎಂಬಾತನು 'ಕಲೆಗಾಗಿ ಕಲೆ' ಎಂಬ ಪದ ಪ್ರಯೋಗ ಮಾಡಿದನು. ಫ್ರಾನ್ಸಿನಲ್ಲಿ ಕ್ರಿ.ಶ. ೧೮೪೦ರ ದಶಕದಲ್ಲಿ ಈ ವಾದವು ಪುನರುಜ್ಜೀವನಗೊಂಡಿತು. ಇಂಗ್ಲೆಂಡಿನಲ್ಲಿ ೧೮೮೦ರ ದಶಕದಲ್ಲಿ ಸೌಂದರ್ಯವಾದದ ಚಳುವಳಿಯ ಮುಂದಾಳುಗಳು ಈ ಕಲಾತತ್ವವನ್ನು ಬೆಳೆಸಿದರು.

ಶಿ.ಹ.

## ಸೌಂದರ್ಯಶಾಸ್ತ್ರ (Aesthetics)

ಅಲೆಂಗ್ಝಾಂಡರ್ ಗಾಟಿಲಿಬ್ ಬೌಮಗಾರ್ಟನ್‌ನು(Alexander Gattilib Baumagartan) ೧೮ನೆಯ ಶತಮಾನದ ಮಧ್ಯಭಾಗದಲ್ಲಿ ತತ್ವಜ್ಞಾನದ ಒಂದು ಶಾಖೆಯ ಅಂದರೆ ಅಭಿರುಚಿ ಮತ್ತು ಸೌಂದರ್ಯಗಳಿಗೆ ಸಂಬಂಧಪಟ್ಟಂತೆ 'ಎಸ್ತೆಟಿಕ್ಸ್' ಪದಕ್ಕೆ ವಿವರಣೆ ಕೊಟ್ಟನು. ಹಿಂದೆ ಲಲಿತಕಲೆಗಳಿಗೆ ಅನ್ವಯವಾಗುತ್ತಿದ್ದ ವಿವರಣೆಯು ಈಗ ವ್ಯಾಪಕವಾದ ಅನ್ವಯ ಪಡೆದಿದೆ. ಸೌಂದರ್ಯಶಾಸ್ತ್ರದ ವಿಚಾರವನ್ನು ಒಂದು ಸೂತ್ರಕ್ಕೆ ಅಳವಡಿಸುವುದು ಅಶಕ್ಯ. ಈ ಬಗೆಗಿನ ಚರ್ಚೆ ಪ್ಲೇಟೋನ ಕಾಲದಿಂದಲೂ ಇದೆ. 'ಸೌಂದರ್ಯ ಒಂದರ್ಥದಲ್ಲಿ ಅನುಕರಣೆ' ಎಂಬ ಅರ್ಥವನ್ನೊಳಗೊಂಡು 'ಪರಮಾತ್ಮನೇ ಅದರ ಮೂಲ ಶ್ರೋತ' ಎಂಬ ಉನ್ನತ ವಿವರಣೆಯವರೆಗೂ ಈ ಬಗೆಗೆ ಚರ್ಚೆ ನಡೆದಿದೆ. ಜರ್ಮನಿಯ ಕಾಂಟ್(Kant), ಲೆಸ್ಸಿಂಗ್ (lesting) ಶೆಲ್ಲರ್(Scheller) ಹೆಗಲ್(Hegal) ಮತ್ತು ಶಾಫೆನ್‌ಹಾರೆರ್(Schopen Haurer) ಮೊದಲಾದ ತತ್ವಜ್ಞಾನಿಗಳು ಈ ಕುರಿತು ಸುದೀರ್ಘವಾಗಿ ಚರ್ಚೆ ಮಾಡಿದ್ದಾರೆ. ಮಧ್ಯಕಾಲದ ಕೊನೆಯ ಅವಧಿಯಲ್ಲಿ ಕಲಾವಿದನ ರಚನೆಯು ಆತನ ಮನದಲ್ಲಿರುವ ವಿಚಾರಗಳ ಸೌಂದರ್ಯದ ಅನುವಾದ ಎಂಬ ಅಭಿಪ್ರಾಯವಿತ್ತು. ಪುನರುಜ್ಜೀವನ ಕಾಲದಲ್ಲಿ ಈ ವಿಚಾರಕ್ಕೂ ಕಲಾವಿದ ಮತ್ತು ಅವರ ಪ್ರತಿಭೆಗೂ ವಿಶೇಷ ಮಹತ್ವ ದೊರೆಯಿತು.

ಕ್ರಿ.ಶ. ೧೯ನೆಯ ಶತಮಾನದಲ್ಲಿ ಮಾತ್ರ ಕಲಾವಿದನು ಅಭಿವ್ಯಕ್ತಿಸಿದ ಪ್ರಾತಿನಿಧಿಕ ಸೌಂದರ್ಯದ ಅನ್ವೇಷಣೆಯ ಹಿನ್ನೆಲೆಯಲ್ಲಿ ವಿಶೇಷವಾಗಿ ರಿಯಲಿಸ್ಟರು ೨೦ನೆಯ ಶತಮಾನದಲ್ಲಿ ಕನ್‌ಸ್ಟ್ರಕ್ಟಿವಿಜಮ್ ಮುಂತಾಗಿ ಪ್ರಗತಿವಾದಿಗಳು ಈ ಬಗ್ಗೆ ಪ್ರಶ್ನೆಗಳನ್ನೆತ್ತಿದರು. ಕಲೆಗೆ ಸಂಬಂಧಿಸಿದಂತೆ ಸೌಂದರ್ಯ ಶಾಸ್ತ್ರಕ್ಕೆ ಇದೇ ಕೊನೆಯದಾದ ಸೂತ್ರ ಎಂದು ಹೇಳುವುದು ಸಾಧ್ಯವಿಲ್ಲ, ಅದೊಂದು ನಿರಂತರ ಅನ್ವೇಷಣೆ. ಕಾಲಕಾಲಕ್ಕೆ ವ್ಯವಸ್ಥಿತ ಅಧ್ಯಯನದಿಂದ ಕಂಡುಕೊಳ್ಳಬೇಕಾದ ಸತ್ಯ ಎಂಬುದು ಚಿಂತಕರ ವಿಚಾರವಾಗಿದೆ.

ಶಿ.ಹ.

## ಹಂಪೆ(ಚಿತ್ರಕಲೆ)

ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಒಳ ಛಾವಣಿಯಲ್ಲಿ ಹಲವಾರು ಭಿತ್ತಿಚಿತ್ರಗಳಿವೆ. ಈ ಮಂಟಪ ೧೬ನೇ ಶತಮಾನದಲ್ಲಿ ರಚಿತವಾದರೂ ಚಿತ್ರಗಳು ೧೭ನೇ ಶತಮಾನದವು ಎಂದು ವಿದ್ವಾಂಸರ ಅಭಿಪ್ರಾಯ. ವಿಶಾಲವಾದ ಅಂಕಣದಲ್ಲಿ ತ್ರಿಪುರ ಸಂಹಾರ, ಕಾಮದಹನ, ಅರ್ಜುನ ಮತ್ಸ್ಯಯಂತ್ರ ಬೇಧಗಳಲ್ಲದೆ ಶಿವನ ಪಂಚವಿಂಶತಿ, ವಿಷ್ಣುವಿನ ದಶಾವತಾರ, ಗಿರಿಜಾ ಕಲ್ಯಾಣ, ಇತ್ಯಾದಿಗಳನ್ನು ಮನೋಹರವಾಗಿ ಚಿತ್ರಿಸಿದೆ. ಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆ ಹೋಗುತ್ತಿರುವ ಯತಿಯೊಬ್ಬರ ಚಿತ್ರವಿದ್ದು ಈ ಚಿತ್ರದ ಬಗ್ಗೆ ಸಾಕಷ್ಟು ಚರ್ಚೆಯಾಗಿದೆ. ಇದು ವಿದ್ಯಾರಣ್ಯರ ಚಿತ್ರವೆಂದು ಬಹುಜನರ ಅಭಿಪ್ರಾಯ. ವಿಶಾಲವಾದ ಅಂಕಣಗಳನ್ನು ಚಿಕ್ಕದಾಗಿ ಒಡೆದು ಮತ್ತೆ ಅವುಗಳಲ್ಲಿ ಮಂಟಪ ಇತ್ಯಾದಿ ರಚಿಸಿ ಅವುಗಳ ಒಳಗೆ ಇನ್ನೂ ಚಿಕ್ಕದಾಗಿ ರಚಿಸಿರುವ ಆಕೃತಿಗಳು ಚಿಕಣಿ ಚಿತ್ರಗಳನ್ನು ನೆನಪಿಸುತ್ತವೆಯಾದರೂ ಸಾಕಷ್ಟು ಎತ್ತರದಲ್ಲಿ ಇರುವ ಈ ಚಿತ್ರಗಳನ್ನು ಗುರುತಿಸುವುದು ಕಷ್ಟಸಾಧ್ಯ. ಅಂಕಣಗಳಲ್ಲಿ ಮಾನವ ಆಕೃತಿಗಳು ಇಲ್ಲದ ಜಾಗ ತುಂಬಲು ತೆಂಗಿನ ಮರ, ತೆರೆಗಳು, ಗಂಡಭೇರುಂಡ ಇತ್ಯಾದಿ ಬಳಸಿಕೊಳ್ಳಲಾಗಿದೆ. ಪಕ್ಕದ ತೊಲೆಯ ಮೇಲೆ ಸುತ್ತಲೂ ಶೈವ ಪರವಾದ ಪೌರಾಣಿಕ ಚಿತ್ರಗಳನ್ನು ರಚಿಸಲಾಗಿದೆ. ಬಣ್ಣಗಾರಿಕೆಯಲ್ಲಿ ನೀಲಿಯ ವಿನಾ ಉಳಿದವು ಹೆಚ್ಚಾಗಿ ಬಳಕೆಯಾಗಿದೆ ಆಕೃತಿಗಳ ನಿಲವು, ಉಡುಗೆ, ತೊಡುಗೆಗಳು ವಿಜಯನಗರದ ಕಾಲದ ತಮಿಳುನಾಡಿನ ಚಿತ್ರಗಳಿಗಿಂತ ಭಿನ್ನವಾಗಿ ಮೈಸೂರು ಸಂಪ್ರದಾಯದ ಆರಂಭ ಕಾಲದಂತಿವೆ. ಕೆಲವು ಭಾಗದಲ್ಲಿ ತಿದ್ದುವ ಪ್ರಯತ್ನ ಆಗಿದೆಯಾದರೂ ಇಡೀ ಚಿತ್ರಗಳನ್ನು ಮತ್ತೆ ತಿದ್ದಿದಂತೆ ಕಾಣುಬರುವುದಿಲ್ಲ.

ಅಲಸ



# ಹಚ್ಚೆಯ ಕಲೆ

ಜನಪದ ಚಿತ್ರಕಲಾ ಪರಂಪರೆಯಲ್ಲಿ ಹಚ್ಚೆ, ಶರೀರದ ಮೇಲೆ ಶಾಶ್ವತ ಚಿತ್ರಕಲೆಯಾಗಿ ಪ್ರಪಂಚವ್ಯಾಪಿ ದೀರ್ಘ ಇತಿಹಾಸ ಹೊಂದಿದೆ. ಒಂದು ಜನಪ್ರಿಯ ಕಲೆ.

ಚರ್ಮದ ಮೇಲೆ ಶಾಶ್ವತವಾಗಿ ಇರಬಲ್ಲ ಹಸಿರುಬಣ್ಣದ ಗುರುತೇ ಹಚ್ಚೆಯಾಗಿದೆ. ಕಿಟಲ್ ಕೋಶದಲ್ಲಿ ಹಚ್ಚೆಗೆ ಅಚ್ಚೆ, ಪಚ್ಚೆ, ಹೆಚ್ಚೆ, ಎಂಬ ಅರ್ಥಗಳಿವೆ. ಮಲೆಯಾಳಿಯಲ್ಲಿ ಹಚ್ಚೆಗೆ ಪಚ್ಚ ಕುತ್ತುಕ, (ಹಚ್ಚೆ ಕುಕ್ಕುವುದು) ಎನ್ನುತ್ತಾರೆ. ತಮಿಳಿನಲ್ಲಿ ಪಚ, ಪಚ್ಚೆ, ಎಂಬ ರೂಪಗಳಿವೆ. ಇಂಗ್ಲೀಷಿನಲ್ಲಿ Totoo ಎಂದು ಕರೆಯುತ್ತಾರೆ. ಮರಾಠಿಯಲ್ಲಿ ಗೊಂದಸ್, ತೆಲುಗಿನಲ್ಲಿ ಮಚ್ಚಾ, ತಮಿಳಿನಲ್ಲಿ ಕೈಕಾಪಾಡ್ಡಾ, ಕೊಂಕಣಿಯಲ್ಲಿ ಹಚ್ಚೆ ಬೊಟ್ಟಾ, ಹಿಂದಿ, ಉರ್ದುವಿನಲ್ಲಿ ಗೋದನಾ, ಎಂದು ಕರೆಯಲಾಗುತ್ತಿದೆ. ಕರ್ನಾಟಕದಲ್ಲಿಯೂ ಕೂಡ ಇದು ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಿಸಿಕೊಳ್ಳುತ್ತದೆ.

ಹಚ್ಚೆಯ ಪ್ರಾಚೀನ ಉಲ್ಲೇಖ ಕ್ರಿ.ಶ. ಪೂ. ೪೫೦ರಲ್ಲಿ ಇದ್ದುದಾಗಿ ತಿಳಿದುಬರುತ್ತದೆ. ಇನ್ನೊಂದು ಅಭಿಪ್ರಾಯದಂತೆ ಕ್ರಿ.ಪೂ. ೨೦೦೦ಕ್ಕೆ ಸೇರಿದ ಇಜಿಪ್ಟಿನ ಮಮ್ಮಿ (ರಕ್ಷಿತಶವ)ಯೊಂದರ ಮೇಲೆ ಹಚ್ಚೆ ಇದ್ದುದರ ಕುರುಹು ಕಂಡುಬಂದಿದೆ. ಪ್ರಾಚೀನ ಜಗತ್ತಿನ ಎಲ್ಲ ಬುಡಕಟ್ಟುಗಳಲ್ಲಿಯ, ಹಚ್ಚೆಹಾಕಿಸಿಕೊಂಡ ಜನಾಂಗಗಳಿದ್ದುದು ತಿಳಿದುಬರುತ್ತದೆ. ಭಾರತದಲ್ಲಿ ಹಚ್ಚೆಯ ಕುರುಹುಗಳು ಶುಂಗ ಅರಸರ ಕಾಲದ ಶಿಲ್ಪಗಳಲ್ಲಿ ಮತ್ತು ಮಧ್ಯ ಪ್ರದೇಶದ ಮಾಳವ ಗಿರಿಜನವಾಸಿಗಳ ನಾಣ್ಯಗಳಲ್ಲಿ ಕಂಡುಬಂದಿವೆ.

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದ ಬಸವಣ್ಣನವರ ವಚನಗಳಲ್ಲಿ ಚನ್ನಬಸವಣ್ಣನವರ ವನಚಗಳಲ್ಲಿ ಹಾಗೂ ಮಲ್ಲಿಕಾರ್ಜುನನ ಸೂಕ್ತಿಸುದಾರ್ಣವ ಮುಂತಾದ ಗ್ರಂಥಗಳಲ್ಲಿ ಹಚ್ಚೆಯ ಉಲ್ಲೇಖಗಳು ಕಂಡುಬರುತ್ತವೆ.

ಹಚ್ಚೆಯ ಕುರಿತು ಜನಪದರಲ್ಲಿ ಅನೇಕ ಕಥೆಗಳು ಐತಿಹ್ಯಗಳು ನಂಬಿಕೆಗಳು ಒಗಟು, ಹಾಡುಗಳು ಪ್ರಚಲಿತದಲ್ಲಿವೆ. ಹಚ್ಚೆಯನ್ನು ಸ್ತ್ರೀಯರು ಹೆಚ್ಚಾಗಿ ಹಾಕಿಸಿಕೊಳ್ಳುತ್ತಿದ್ದು ಪುರುಷರು ಕಡಿಮೆ ಪ್ರಮಾಣದಲ್ಲಿ ಹಾಕಿಸಿಕೊಳ್ಳುತ್ತಾರೆ. ಹಚ್ಚೆಯೂ ಶರೀರದ ಎಲ್ಲ ಭಾಗಗಳಲ್ಲಿಯೂ ಹಾಕಿಸಿಕೊಳ್ಳುತ್ತಾರೆ. ಮುಖ, ಕೊರಳು, ಕೈ, ಎದೆ, ಹೊಟ್ಟೆ, ಬೆನ್ನು, ಗುಪ್ತಾಂಗ, ಕಾಲು, ಮುಂತಾದ ಕಡೆಗೆ ಸೌಂದರ್ಯದ ಹಿನ್ನೆಲೆಯಲ್ಲಿ ಧಾರ್ಮಿಕ ಹಿನ್ನಲೆ ಹಾಗೂ ವೈದ್ಯಕೀಯ ಚಿಕತ್ಸೆಯಾಗಿ ಕೂಡ ಹಾಕಿಸಿಕೊಳ್ಳುವುದುಂಟು. ಒಂದೊಂದು ಸ್ಥಳದಲ್ಲಿ ಹಾಕಿಕೊಳ್ಳುವ ಹಚ್ಚೆಗೆ ಅದರದೇ ಆದ ಜನಪದ ಸಂಪ್ರದಾಯ ನಂಬಿಗೆ ಆಶಯಗಳಿವೆ. ಹಚ್ಚೆಯನ್ನು ಸೂಜಿಯಿಂದ ಚುಚ್ಚಿ ಚುಚ್ಚಿ ಹಾಕುತ್ತಾರೆ. ಈ ಸಂದರ್ಭದಲ್ಲಿ ಹಾಡು ಹೇಳುವುದುಂಟು. ಹಚ್ಚೆಯ ಚಿತ್ರವಿನ್ಯಾಸಗಳು ವೈವಿಧ್ಯತೆಯಿಂದ ಕೂಡಿದವುಗಳಾಗಿದ್ದು ಧಾರ್ಮಿಕ ದೇವಾನುದೇವತೆಗಳು, ಪುರಾಣ, ರಾಮಾಯಣ, ಮಹಾಭಾರತದ ಚಿತ್ರಗಳು, ನೈಸರ್ಗಿಕ ಚಿತ್ರಗಳು ಪ್ರಾಣಿ, ಪಕ್ಷಿ ಹೂ, ಎಲೆ ಬಳ್ಳಿ ಮುಂತಾದ ಸ್ಥಳೀಯ ಪರಿಸರದ ಚಿತ್ರಗಳು, ಕೃಷಿ ಪ್ರಧಾನವಾದ ವಸ್ತುಗಳು, ವಿವಿಧ ಧಾನ್ಯಗಳ ಚಿತ್ರಗಳು ಮತ್ತು ಹೆಸರುಗಳನ್ನು ಹಾಕಿಸಿಕೊಳ್ಳುತ್ತಿದ್ದು ಚಿತ್ರಗಳು ಸರಳರೇಖಾ ಮತ್ತು ವಕ್ರರೇಖಾ ಚಿತ್ರವಿನ್ಯಾಸಗಳು ಹೇರಳವಾಗಿ ಕಂಡುಬರುತ್ತವೆ.

ಕರ್ನಾಟಕದಲ್ಲಿ ಕಿಳ್ಳಿಕೇತ ಕೊರವ ಜನಾಂಗ ಹಚ್ಚೆಯನ್ನು ಹೆಚ್ಚಾಗಿ ಹಾಕುವ ಪ್ರಮುಖ ವೃತ್ತಿಯ ಜನಾಂಗವಾಗಿವೆ

ಎಸ್. ಸಿ. ಪಾ.

## ಹರದನ ಹಳ್ಳಿ

ಮೈಸೂರು ಜಿಲ್ಲೆ ಚಾಮರಾಜನಗರದಿಂದ ಸು. ೧೦ ಕಿ. ಮಿ. ದೂರದಲ್ಲಿದೆ ಇಲ್ಲಿದು ದಿವ್ಯ ಲಿಂಗೇಶ್ವರ ದೇವಾಲಯ ಸು. ೧೩೧೬ರಲ್ಲಿ ನಿರ್ಮಿತವಾಯಿತು. ನಂತರ ೧೮ನೇ ಶತಮಾನದವರೆಗೂ ಹೊಸ ಸೇರ್ಪಡೆಗಳಾಗಿವೆ. ದೇವಾಲಯದ ಹಿಂದೆ ಇರುವ ಉದ್ದನೆಯ ಹಜಾರ ಹಾಗೂ ದೇವರ ಗೂಡುಗಳು ವಿಜಯನಗರದ ಅಂತ್ಯ ಕಾಲದವು. ಈ ಹಜಾರದ ಒಳ ಮೇಲ್ಛಾವಣಿ ಹಾಗೂ ದೂಲಗಳ ಮೇಲೆ ಆ ಕಾಲದೆನ್ನಬಹುದಾದ ಚಿತ್ರಗಳಿವೆ. ಹಲವಾರು ವಿಶಾಲವಾದ ಅಂಕಣಗಳಲ್ಲಿ ಗಜಾಸುರ ಮರ್ಧನ, ಲಕ್ಷ್ಮೀ ನಾರಾಯಣ, ಪಂಚಮುಖಿ ದಶಹಸ್ತ ಉಮಾ-ಮಹೇಶ್ವರ, ಅಂಧಕಾಸುರ ಸಂಹಾರ, ಸೀತಾರಾಮ ಪರಿವಾರ ರಾಜರಾಜೇಶ್ವರಿಯೊಂದಿಗೆ ಶಿವ ಇತ್ಯಾದಿಗಳು ಚಿತ್ರಿತವಾಗಿವೆ. ಮಧ್ಯೆ ವೃತ್ತಾಕಾರವಾದ ಸಂಯೋಜನೆಯಲ್ಲಿ ಈ ದೇವರುಗಳಿದ್ದು ಉಳಿದ ಜಾಗವನ್ನು ಹೂಬಳ್ಳಿಗಳ ಪಶುಪಕ್ಷಿಗಳ ವಿನ್ಯಾಸಗಳಿಂದ ಜ್ಯಾಮಿತಿಯ ಆಕಾರಗಳಿಂದ ತುಂಬಿಸಲಾಗಿದೆ.

ದೂಲದ ಮೇಲೆ ಮುಖ್ಯವಾಗಿ ಭಾರತ, ಭಾಗವತ, ಶಿವಲೀಲೆಗಳ ಚಿತ್ರಣ, ಗೋಪಿಕಾ ವಸ್ತ್ರಾಪಹರಣ, ಕೃಷ್ಣನ ಬಾಲಲೀಲೆಗಳು, ಲಕ್ಷ್ಮೀನಾರಾಯಣ ವೇಣುಗೋಪಾಲ, ಗಜಲಕ್ಷ್ಮಿ, ಶಿವಾರ್ಜುನ ಯುದ್ಧ ಅಷ್ಟದಿಕ್ಪಾಲಕರು, ಬೇಡರಕಣ್ಣಪ್ಪ, ವಾದ್ಯಗಾರರು, ಸ್ತ್ರೀಪುರುಷರು, ಭಕ್ತರು, ಹಾವಾಡಿಗರು ಇತ್ಯಾದಿ ಚಿತ್ರಗಳನ್ನು ಕಾಣಬಹುದು. ಮೈಸೂರು ಶೈಲಿಯ ಆರಂಭದ ಕಾಲದ್ದೆನ್ನಬಹುದಾದ ಈ ಚಿತ್ರಗಳು ಸಾಂಪ್ರದಾಯಿಕ ಚಿತ್ರಗಳಂತೆ ದುಂಡನೆಯ ಮುಖ ನೀಳ ನಾಸಿಕ ವಿಶಾಲ ನಯನಗಳಿಂದ ಕೂಡಿದ ಮುದ್ದಾದ ಆಕೃತಿಗಳಾಗಿವೆ. ಹಿತಮಿತವಾದ ಅಲಂಕರಣಗಳು ದೃಷ್ಟಿಗೆ ಹೆಚ್ಚು ಶ್ರಮ ನೀಡದೆ ಉಲ್ಲಾಸಕಾರಿಯಾಗಿ ಜೀವಂತವಾಗಿವೆ. ಪ್ರಕೃತಿಯ ವಿಕೋಪದಿಂದಾಗಿ ಸಾಕಷ್ಟು ಪ್ರಮಾಣದಲ್ಲಿ ನಾಶವಾಗಿ ಹೋಗಿದ್ದರೂ ಉಳಿದಿರುವುದು ಅಭ್ಯಾಸ ಯೋಗ್ಯವಾಗಿದೆ.

ಅಂಜ

## ಹವ್ಯಾಸಿ ಚಿತ್ರ ಕಲಾವಿದ (Sunday painter)

ವೃತ್ತಿಪರನಾಗಿರದೆ, ಯಾವುದೇ ಕಲಾಶಾಲೆಯಲ್ಲಿ ತರಬೇತಿ ಪಡೆಯದೇ, ತನ್ನ ವಿರಾಮ ವೇಳೆಯಲ್ಲಿ ಚಿತ್ರಿಸುವ ಅಭ್ಯಾಸವುಳ್ಳವನನ್ನು ಹವ್ಯಾಸಿ ಚಿತ್ರ ಕಲಾವಿದ (Sunday painter) ಎಂದು ಕರೆಯುತ್ತಾರೆ. ಇಂಥ ಕಲಾವಿದನನ್ನು ಗುರುತಿಸಲು ಫ್ರಾನ್ಸ್‌ದೇಶದಲ್ಲಿ ೧೯ನೆಯ ಶತಮಾನದಲ್ಲಿ ಮೊದಲ ಬಾರಿಗೆ ಸಂಡೇ ಪೇಂಟರ್, ಸಂಡೇ ಆಫ್ಟರ್ ನೂನ್ ಪೇಂಟರ್ ಶಬ್ದಗಳು ಬಳಕೆಯಾದವು. ಯಾವುದೇ ಸಾಂಪ್ರದಾಯಿಕ ತರಬೇತಿ ಇಲ್ಲದ ಆದರೆ ಕಲಾಪ್ರೌಢಿಮೆಯಲ್ಲಿ ಸಾಧಿಸಿದ ಚಿತ್ರ ಕಲಾವಿದರನ್ನು ಸೂಚಿಸಲು ಈ ಪದ ಬಳಕೆಯಾಗಿದೆ.

ಎಸ್. ಎಂ. ಮಿ.

## ಹಿರಿಯೂರು

ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನ ತೇರು ಮಲ್ಲೇಶ್ವರ ದೇವಾಲಯ ೧೭ನೇಯ ಶತಮಾನದ್ದಾದರೂ ಇಲ್ಲಿಯ ಭಿತ್ತಿ ಚಿತ್ರಗಳು ೧೯ನೆಯ ಶತಮಾನದವು. ಮುಖಮಂಟಪದ ಭರ್ತಿ ಇದ್ದ ಚಿತ್ರಗಳಲ್ಲಿ ಶೇಕಡ ಅರವತ್ತು ಭಾಗ ನಾಶವಾಗಿದೆ. ಆದರೆ ಆಳಿದುಳಿದ ಭಾಗ ವಿಜಯನಗರ ಕಲೆಗೆ ಉತ್ತಮ ಉದಾಹರಣೆಯಾಗಿದೆ. ಕಿರಾತಾರ್ಜುನೀಯ ಪ್ರಸಂಗದಲ್ಲಿ ಅರ್ಜುನ ಇನ್ನಿತರ ಋಷಿಗಳು ತಪಸ್ಸು ಮಾಡುತ್ತಿರುವುದು. ಶಿವ ಕಿರಾತ ಪರಿವಾರದೊಂದಿಗೆ ಸೋವು ಬೇಟೆಗೆ ನಾಯಿಗಳೊಂದಿಗೆ ಬರುತ್ತಿರುವುದು. ಕೊರೆದಾಡೆಯ ಭಯಂಕರ ಹಂದಿ ಓಡಿ ಬರುತ್ತಿರುವುದು ಋಷಿ ಮುನಿಗಳೆಲ್ಲಾ ಬೆದರಿ ಹೌಹಾರಿರುವುದು ಉಳಿದುಕೊಂಡು ಬಂದಿದೆ. ಶಿವಾರ್ಜುನರ ಯುದ್ಧದ ದೃಶ್ಯ ಅಸ್ಪಷ್ಟವಾಗಿದೆ. ನಂತರ ಶಿವನ ಪ್ರತ್ಯಕ್ಷ ಅರ್ಜುನನ ಅಭಿನಂದನೆಗಳಿವೆ ಈ ಅಂಕಣದಲ್ಲಿ ರಸಭಾವಗಳು ದೇವತೆ, ಋಷಿ ಹಾಗೂ ಜನಸಾಮಾನ್ಯರ ಶಿರೋಭೂಷಣ, ಉಡುಪು ಅಲಂಕಾರಗಳು ಅಭ್ಯಾಸಯೋಗ್ಯವಾಗಿದೆ. ಉಳಿದಂತೆ ಪಂಚಾಯ ತನದಲ್ಲಿರುವ ಶಿವನನ್ನು ಒಂದು ಅಂಕಣದ ತುಂಬಾ ವಿಶಾಲವಾಗಿ ಚಿತ್ರಿಸಿದೆ. ರಾಮಾಯಣದ ದೃಶ್ಯದಲ್ಲಿ ಅಹಲ್ಯೋದ್ಧಾರ ಮಾರೀಚವಧೆ ಇತ್ಯಾದಿಗಳು ಉಳಿದುಕೊಂಡಿವೆ.

ಅಲಶ

## ಹೀರುಪದರು (Absorbent Ground)

ಇದು ಚಿತ್ರಕಲೆಗೆಂದು ವಿಶೇಷವಾಗಿ ನಿರ್ಮಿಸಲಾದ ಮೇಲ್ಮೈ. ಲೇಪನದ ಪದರಿನಿಂದ ಸಿದ್ಧಗೊಂಡ ಈ ಮೇಲ್ಮೈ ಬಟ್ಟೆ (ಕ್ಯಾನ್‌ವಾಸ್) ಅಥವಾ ಹಲಗೆ. ಮತ್ತು ಬಣ್ಣದ ನಡುವೆ ಇರುವುದರಿಂದ ಹಿಂದಿರುವ ಆಧಾರ ಮೈಯನ್ನು ರಕ್ಷಿಸುತ್ತದೆ. ಮತ್ತು ಬಣ್ಣ ಬಳಿಯಲು ಮೇಲ್ಮೈಯನ್ನು ಒದಗಿಸುತ್ತದೆ.

ಹೀರು ಪದರು ಸೀಮೆಸುಣ್ಣ(chalk)ದಿಂದ ತಯಾರಿಸಲ್ಪಟ್ಟಿದ್ದು ಎಣ್ಣೆಯು ಮಿಶ್ರವಾಗಿರುವುದಿಲ್ಲ, ಇದರಿಂದಾಗಿ ಅದು ಬಣ್ಣದಲ್ಲಿಯ ನೀರನ್ನು ಇಲ್ಲವೆ ಎಣ್ಣೆಯನ್ನು ಹೀರಬಲ್ಲುದು ಮತ್ತು ಬಣ್ಣವನ್ನು ಬೇಗನೆ ಒಣಗಿಸಬಲ್ಲುದು.

ಶಿ.ಷ.

## ಹೊಯ್ಸಳ ವಾಸ್ತುಶಿಲ್ಪ

ಭಾರತೀಯ ಶಿಲ್ಪಕಲಾ ಜಗತ್ತಿನಲ್ಲಿ ಹೊಯ್ಸಳರ ಶಿಲ್ಪಕಲೆಯು ವಿಶೇಷವಾದ ಮನ್ನಣೆಗಳಿಸಿ ಜಗತ್ಪ್ರಸಿದ್ಧಿಯಾಗಿದೆ. ಕರ್ನಾಟಕದಲ್ಲಿ ಸುಸ್ಥಿತಿಯಲ್ಲಿರುವ ಸುಮಾರು ಐವತ್ತಕ್ಕೂ ಹೆಚ್ಚು ಹೊಯ್ಸಳ ದೇವಾಲಯಗಳನ್ನು ಗುರುತಿಸಬಹುದು. ಇವುಗಳಲ್ಲಿ ಬೇಲೂರಿನ ಚನ್ನಕೇಶವ ದೇವಾಲಯ, ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ ಮತ್ತು ಸೋಮನಾಥಪುರದ ಕೇಶವ ದೇವಾಲಯಗಳು ವಿಶ್ವವಿಖ್ಯಾತಿಯನ್ನು ಪಡೆದಿವೆ. ಇದಲ್ಲದೆ ಇವರ ಕಾಲದ ಇನ್ನಿತರೆ ಸುಂದರ ದೇವಾಲಯಗಳನ್ನು ಅರಸೀಕೆರೆ, ಬಸರಾಳು, ನುಗ್ಗೇಹಳ್ಳಿ ಹೊಸಹೊಳಲು,



ಹೊನ್ನಾವರ, ಜಾವಗಲ್, ನಾಗಲಾಪುರ, ಮೊಸಳೆ, ಹುಲ್ಲೇಕೆರೆ ಮುಂತಾದ ಕಡೆ ಕಾಣಬಹುದಾಗಿದೆ.

ಹೊಯ್ಸಳರ ಕಾಲದ ವೇಳೆಗೆ ಅನೇಕ ಶಿಲ್ಪಶಾಸ್ತ್ರಗ್ರಂಥಗಳು ರಚನೆಯಾಗಿದ್ದು, ದೇವಾಲಯದ ವಾಸ್ತುರಚನೆ ಮತ್ತು ಮೂರ್ತಿಶಿಲ್ಪದ ಬಗೆಗೆ ಹಲವಾರು ಅಂಶಗಳು ನಿಶ್ಚಿತವಾಗಿದ್ದವು. ಈ ಅಂಶಗಳ ಆಧಾರದ ಮೇಲೆ ಹೊಯ್ಸಳರ ದೇವಾಲಯಗಳು ನಿರ್ಮಿತವಾಗಿರುವುದನ್ನು ಮನಗಾಣಬಹುದಾಗಿದೆ.

ಹೊಯ್ಸಳರ ದೇವಾಲಯಗಳ ವಿನ್ಯಾಸವು ಸಾಮಾನ್ಯವಾಗಿ ನಕ್ಷತ್ರಾಕಾರವಾಗಿರುತ್ತದೆ. ದೇವಾಲಯಗಳು ಯಾವಾಗಲೂ ತಲವಿನ್ಯಾಸವನ್ನು ಅನುಸರಿಕೊಂಡು ಅದೇ ಆಕಾರದಲ್ಲಿ ಎತ್ತರವಾಗಿ ಜಗಲಿಯಂತೆ ನಿರ್ಮಿಸಿರುವ ಪೀಠದ ಮೇಲೆ ಕಟ್ಟಲ್ಪಟ್ಟಿರುತ್ತವೆ. ಗೋಪುರವು ಸಹ ತಲವಿನ್ಯಾಸದ ಆಕಾರವನ್ನೇ ಅನುಸರಿಸಿ ಸೂಚ್ಯಾಕಾರವಾಗಿ ಮೇಲಕ್ಕೆ ಏರುತ್ತ ಹೋಗುತ್ತದೆ. ಜಗಲಿಯ ಮೇಲೆ ಆರಂಭವಾಗುವ ಗೋಡೆಗಳ ಹೊರಭಾಗದಲ್ಲಿ ಬುಡದಿಂದ ಸುಮಾರು ೫-೬ ಅಡಿಗಳಷ್ಟು ಎತ್ತರದವರೆಗೆ ಅಡ್ಡಲಾಗಿ ಒಂದರ ಮೇಲೊಂದು ಚಿತ್ರಪಟ್ಟಿಕೆಗಳು ದೇವಾಲಯದ ಸುತ್ತಲೂ ಕೆತ್ತಲ್ಪಟ್ಟಿರುತ್ತವೆ. ಇವುಗಳಲ್ಲಿ ಒಂದು ಸಾಲಿನಲ್ಲಿ ಉದ್ದಕ್ಕೂ ಆನೆಗಳು, ಇನ್ನೊಂದರಲ್ಲಿ ಶಾರ್ದೂಲಗಳು, ಮತ್ತೊಂದರಲ್ಲಿ ರಾವುತರು, ಮಗದೊಂದರಲ್ಲಿ ಹಂಸಗಳು, ಮತ್ತೊಂದು ಪಟ್ಟಿಕೆಯಲ್ಲಿ ಪುರಾಣದ ಕತೆಗಳು ಕೆತ್ತಲ್ಪಟ್ಟಿರುತ್ತವೆ. ಈ ಪಟ್ಟಿಕೆಗಳ ಮೇಲುಗಡೆ ಸಾಲಾಗಿ ಸುಮಾರು ೨-೩ ಅಡಿಗಳಷ್ಟು ಎತ್ತರವಿರುವ ದೇವತಾ ವಿಗ್ರಹಗಳು ಕೆತ್ತಲ್ಪಟ್ಟಿರುತ್ತವೆ. ಹೊಯ್ಸಳರ ದೇವಾಲಯಗಳು ವಿಗ್ರಹಗಳ ಭಂಡಾರಗಳಂತಿರುತ್ತವೆ. ಮೂರ್ತಿ

ವಿದ್ಯೆಯನ್ನು ಅಭ್ಯಸಿಸುವವರಿಗೆ ಅಮೂಲ್ಯವಾದ ಸಂಗತಿಗಳನ್ನು ಒದಗಿಸಿ ಕೊಡುತ್ತವೆ. ಈ ವಿಗ್ರಹಗಳು ಒಂದೊಂದು ಸಣ್ಣ ಸಣ್ಣ ಅಂಶದಲ್ಲಿಯೂ ಶಿಲ್ಪಶಾಸ್ತ್ರದ ನಿಯಮಗಳನ್ನು ಅನುಸರಿಸಲಾಗಿದೆ. ಗೋಡೆಗಳ ಒಳ ಮತ್ತು ಹೋರಭಾಗದಲ್ಲಿ ಅನೇಕ ಗೂಡುಗಳು ಕೆತ್ತಲ್ಪಟ್ಟಿರುತ್ತವೆ. ಇವುಗಳು ಚಿಕ್ಕ ದೇವಸ್ಥಾನಗಳಂತೆಯೇ ಗೋಪುರಗಳಿಂದಲೂ ಬಾಗಿಲು ವಾಡಗಳಿಂದಲೂ, ಉಪದೇವತಾವಿಗ್ರಹಗಳಿಂದಲೂ ಕೂಡಿರುತ್ತವೆ. ಹೊಯ್ಸಳರ ದೇವಾಲಯದ ಗೋಪುರಗಳು ಬಹಳ ಎತ್ತರವಾಗಿಲ್ಲದಿದ್ದರೂ ಸೂಕ್ಷ್ಮವಾಗಿ ಕೆತ್ತಿದ ಬಳ್ಳಿಗಳಿಂದಲೂ ಸಿಂಹಲಲಾಟಗಳಿಂದಲೂ ವಿಗ್ರಹಗಳಿಂದಲೂ ಅಲಂಕೃತವಾಗಿರುತ್ತವೆ. ಗೋಪುರದ ಮುಂಭಾಗದಲ್ಲಿ ಒಬ್ಬ ಮನುಷ್ಯನು ಹುಲಿಯೊಂದನ್ನು ಇರಿಯುತ್ತಿರುವಂತೆ ವಿಗ್ರಹವಿರುತ್ತದೆ. ಮತ್ತೊಮ್ಮೆ ಅದ. ದ್ವಾರದ ಪಕ್ಕದಲ್ಲಿ ಇರುತ್ತದೆ. ಇದನ್ನು ಹೊಯ್ಸಳ ವಂಶದ ಸ್ಥಾಪಕ ಸಳನೆಂದು ನುತ್ತ ಅಂತಹ ಕಟ್ಟಡಗಳು ಹೊಯ್ಸಳರಿಂದ ಕಟ್ಟಿಸಿದವೆಂದು ಹೇಳಬಹುದಾಗಿದೆ.

ಹೊಯ್ಸಳರ ದೇವಾಲಯಗಳಲ್ಲಿ ಸಾಮಾನ್ಯವಾಗಿ ಒಂದು ಗರ್ಭಗುಡಿ, ಸುಕನಾ, ಅದರ ಮುಂಭಾಗದಲ್ಲಿ ಒಂಬತ್ತು ಅಂಕಣದ ಒಂದು ನವರಂಗವಿರುತ್ತದೆ. ಇನ್ನ ವಿಸ್ತಾರವಾದ ಗುಡಿಗಳಲ್ಲಿ ನವರಂಗದ ಮುಂದೆ ಒಂದು ಸಭಾಮಂಟಪ, ಅದರ ಮುಂಭಾಗದಲ್ಲಿ ಒಂದು ದ್ವಾರಮಂಟಪವಿರುತ್ತದೆ. ಏಕಕೂಟ, ದ್ವಿಕೂಟ, ತ್ರಿಕೂಟ, ಚತುರಕೂಟ, ಮತ್ತು ಪಂಚಕೂಟಗಳುಳ್ಳ ದೇವಾಲಯಗಳು ನಿರ್ಮಿಸಲ್ಪಟ್ಟಿವೆ. ಹೊಯ್ಸಳ ದೇವಾಲಯಗಳಲ್ಲಿನ ಕಂಭಗಳು ದುಂಡಾಗಿ ಚರತೆ ಯಂತ್ರದ ಸಹಾಯದಿಂದ ಮಾಡಿದವುಗಳಾಗಿವೆ. ಮತ್ತು ಪ್ರತಿಬಿಂಬ ಕಾಣುವಂತೆ ನುಣುಪಾಗಿಯೂ, ನಯವಾಗಿಯೂ ಇರುತ್ತವೆ. ಮತ್ತೊಂದು ಪ್ರಮುಖ ಅಂಗವೆಂದರೆ ಭುವನೇಶ್ವರಿಗಳು, ಇವುಗಳ ವಿನ್ಯಾಸ, ಆಕಾರ, ನಕ್ಷೆಗಳಲ್ಲಿ ವೈವಿದ್ಯತೆ ಕಂಡುಬರುತ್ತದೆ.

ಈ ಹೊಯ್ಸಳ ದೇವಾಲಯಗಳಲ್ಲಿ ಅತ್ಯಂತ ಮನೋಹರವಾದ ಭಾಗವೆಂದರೆ ನವರಂಗದ ಕಂಬಗಳ ಮೇಲೆ ಮತ್ತು ಹೊರಗಡೆ ಲೋನೆಕಲ್ಲಿಗೆ ಊರೆ ಕೊಟ್ಟಂತೆ ನಿಲ್ಲಿಸಿರುವ ವಿಗ್ರಹಗಳು. ಇವುಗಳನ್ನು ಮದನಿಕಾ ವಿಗ್ರಹಗಳೆಂದು ಕರೆಯುತ್ತಾರೆ. ಈ ವಿಗ್ರಹಗಳ ಸೊಬಗನ್ನು, ಶಿಲ್ಪಿಗಳ ರಚನಾ ಕೌಶಲ್ಯವನ್ನು ಬಣ್ಣಿಸುವುದು ಅಸದಳ. ಮದನಿಕೆಯರ ವಿಗ್ರಹಗಳ ಅವಯವ ಸೌಂದರ್ಯ, ಹಾವಭಾವ, ವಿಲಾಸಗಳಿಂದ ಕೂಡಿದ ಮನೋಹರವಾದ ಭಂಗಿಗಳೂ, ಅಲಂಕಾರಗಳೂ ಪ್ರೇಕ್ಷಕರ ಮನಸ್ಸನ್ನು ಸೂರೆಗೊಳ್ಳುತ್ತವೆ. ಈ ವಿಗ್ರಹಗಳಲ್ಲಿ ಶಿಲ್ಪಿಗಳು ತೋರಿಸಿರುವ ಚಾತುರ್ಯವು ಆಶ್ಚರ್ಯವನ್ನುಂಟುಮಾಡುತ್ತದೆ. ವಿಗ್ರಹಗಳನ್ನು ನರ್ತಿಸುವ ಭಂಗಿಯಲ್ಲಿ, ವಾದ್ಯಬಾರಿಸುವ ಭಂಗಿಯಲ್ಲಿ, ಉಡಿಗೆ ತೊಡುಗೆಗಳನ್ನು ಧರಿಸುತ್ತಿರುವಂತೆ ಮತ್ತು ಅಲಂಕಾರವನ್ನು ಮಾಡಿಕೊಳ್ಳುತ್ತಿರುವಂತೆ ಕೆತ್ತಲ್ಪಟ್ಟಿವೆ. ಹೊಯ್ಸಳ ಶಿಲ್ಪಿಗಳ ಅನುಪಮ ಕಲಾಕೃತಿಗಳೆನಿಸಿರುವ ಈ ಶಿಲ್ಪಿಗಳು ಯಾವುದೇ ಕಾಲದ, ಯಾವ ದೇಶದ ಶಿಲ್ಪಿಗಳ ಸಾಲಿನಲ್ಲಿದ್ದರೂ ತಮ್ಮ ಸ್ವಂತಿಕೆಯಿಂದ ಅಮರತ್ವವನ್ನು ಸ್ಥಾಪಿಸಿಕೊಳ್ಳುತ್ತವೆ.

ಜೆ. ಬಿ. ದ.

## ಕಲಾಕೋಶದ ಲೇಖಕರು

ಅ.ಜಾ. — ಅನ್ನಪೂರ್ಣ ಜಾಲವಾದಿ ಪ್ರೊ॥
ಬಸವೇಶ್ವರ ಕಲಾ ಮಹಾವಿದ್ಯಾಲಯ
ಬಾಗಲಕೋಟೆ, ಬಿಜಾಪುರ ಜಿಲ್ಲೆ

ಅ.ಟಿ.ಅ. — ಅಶೋಕ್ ಟಿ. ಅಕ್ಕಿ
ಪ್ರಾಚಾರ್ಯರು, ವಿಜಯ ಫೈನ್ ಆರ್ಟ್ಸ್ ಕಾಲೇಜ್
ಗದಗ, ಧಾರವಾಡ ಜಿಲ್ಲೆ-೫೮೨೧೦೧

ಅಲನ — ಅ.ಲ. ನರಸಿಂಹನ್, ಡಾ॥
ಅನ್ವೇಷಕರು, ಕರ್ನಾಟಕ ಗ್ಯಾಸೆಟಿಯರ್
ಕಾವೇರಿ ಭವನ, ಬೆಂಗಳೂರು-೯

ಅ.ಹಿ. — ಅನ್ನದಾನಿ ಹಿರೇಮಠ
ಗದಗ, ಧಾರವಾಡ ಜಿಲ್ಲೆ

ಆರ್.ಎ.ಶಾ. — ಆರ್. ಎ. ಶಾಂತರಾಜ್
ನಂ ೩೭, ೨ನೇ ಅಡ್ಡರಸ್ತೆ, ನಾಗಪ್ಪ ಸ್ಟ್ರೀಟ್, ಮುನೇಶ್ವರ ಬ್ಲಾಕ್
ಪ್ಯಾಲೆಸ್ ಗುಟ್ಟಹಳ್ಳಿ, ಬೆಂಗಳೂರು-೩

ಎಚ್.ಎ.ಅ. — ಎಚ್.ಎ. ಅನಿಲ್ ಕುಮಾರ್
೮೧, ಹೊಸ ಬಿ.ಇ.ಎಲ್. ರಸ್ತೆ (ಹನುಮಾನ್ ದೇವಸ್ಥಾನದ ಎದುರು)
ದೇವಸಂದ್ರ, ಬೆಂಗಳೂರು-೯೪

ಎಚ್.ಜ. — ಎಚ್. ಜಯಮ್ಮ
೨೯೩೩, ೧೩ನೇ ಮೈನ್ ಜಯನಗರ, ೩ನೇ ಹಂತ, ಬೆಂಗಳೂರು-೪೦

ಎನ್.ಬಿ.ಹೇ. — ಎನ್. ಬಿ. ಹೇಮಾವತಿ

ಎನ್. ವಿ. — ಎನ್. ವಿಶ್ವರೂಪಾಚಾರ್
೮೬, ೧೨ನೇ 'ಸಿ' ಮುಖ್ಯರಸ್ತೆ, ೬ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-೧೦

ಎಸ್. ಎಂ. ಮಿ. — ಎಸ್. ಎಂ. ಮಿಟ್ಟಿಕೊಂಡ, ಡಾ॥
ಬಸವೇಶ್ವರ ಕಲಾ ಮಹಾವಿದ್ಯಾಲಯ
ಬಾಗಲಕೋಟೆ, ಬಿಜಾಪುರ ಜಿಲ್ಲೆ

| | |
|---|---|
| ಎಸ್.ಸಿ.ಪಾ. | ಎಸ್. ಸಿ. ಪಾಟೀಲ, ಡಾ॥<br>ಉಪನ್ಯಾಸಕ, ಎಸ್.ಬಿ.ವಿ.ಸಂ. ಪದವಿ ಪೂರ್ವ ಮಹಾವಿದ್ಯಾಲಯ<br>ಉಪ್ಪಿನ ಬೆಟಗೇರಿ, ಧಾರವಾಡ ಜಿಲ್ಲೆ-೫೮೧೨೦೭ |
| ಕುಯವೀರ | ರಾಜೇಂದ್ರ ವೀರಶೆಟ್ಟಪ್ಪ ಯರನಾಳೆ ಡಾ॥<br>ಕನ್ನಡ ಉಪನ್ಯಾಸಕರು, ಬಾಲಕಿಯರ ಸರ್ಕಾರಿ ಪ.ಪೂ. ಮಹಾವಿದ್ಯಾಲಯ<br>ಹುಮನಾಬಾದ, ಬೀದರ್ ಜಿಲ್ಲೆ |
| ಕೆ.ವಿ.ಸು. | ಕೆ. ವಿ. ಸುಬ್ರಹ್ಮಣ್ಯಂ<br>೪೦/೩, ೧೦ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ<br>ಬಾಪೂಜಿನಗರ, ಬೆಂಗಳೂರು-೨೬ |
| ಜೆ.ಟಿ.ಜ. | ಜೆ.ಟಿ. ಜಯರಾಮಯ್ಯ<br>ನಂ. ೨೮೬೯, 'ಇ' ಬ್ಲಾಕ್, ೧೩ನೇ ಮುಖ್ಯ ರಸ್ತೆ<br>ರಾಜಾಜಿನಗರ ಎರಡನೇ ಹಂತ, ಬೆಂಗಳೂರು-೧೦ |
| ದೇಕೊರೆ | ದೇವರಕೊಂಡಾರೆಡ್ಡಿ ಡಾ॥<br>ಅನ್ವೇಷಕ, ಕರ್ನಾಟಕ ಗ್ಯಾಸೆಟಿಯರ್<br>ಕಾವೇರಿ ಭವನ, ಬೆಂಗಳೂರು-೯ |
| ನಿಕ್ರರಾ | ನಿ.ಕೃ ರಾಮಶೇಷನ್, ಡಾ॥<br>ನಂ ೧೪, ಎಲ್.ಐ.ಸಿ. ಕಾಲೋನಿ, ಕಾರ್ಡ್‌ರೋಡ್ ಪಶ್ಚಿಮ<br>ಬಸವೇಶ್ವರ ನಗರ, ೨ನೇ ಹಂತ ರಾಜಾಜಿನಗರ, ಬೆಂಗಳೂರು-೮೬ |
| ಪಿ.ಆರ್.ತಿ. | ಪಿ. ಆರ್. ತಿಪ್ಪೇಸ್ವಾಮಿ<br>೧೭೩, ಆರ್.ವಿ. ರಸ್ತೆ, ಮೈಸೂರು-೫೭೦ ೦೨೪ |
| ಪಿ.ವಿ.ಕೆ. | ಪಿ. ವಿ. ಕೃಷ್ಣಮೂರ್ತಿ<br>ಜೆ.ಬಿ.ಜೆ. ೫೧೦, ೧೨ನೇ ಅಡ್ಡರಸ್ತೆ<br>ಎಚ್.ಎ.ಎಲ್. ಕಾಲೋನಿ, ಮಾರತ್‌ಹಳ್ಳಿ, ಬೆಂಗಳೂರು-೩೩ |
| ಬಿ.ಕೆ.ಹಿ. | ಬಿ. ಕೆ. ಹಿರೇಮಠ, ಡಾ॥<br>ರೀಡರ್, ಬಸವೇಶ್ವರ ಕಲಾಮಹಾವಿದ್ಯಾಲಯ<br>ಬಾಗಲಕೋಟೆ, ಬಿಜಾಪುರ ಜಿಲ್ಲೆ-೫೮೭೧೦೧ |
| ಬಿ.ಪಿ.ಬಾ. | ಬಿ. ಪಿ. ಬಾಯಿರಿ, ಕಲಾವಿದರು<br>ಚಿತ್ರ ಕುಟೀರ, ಉಡುಪಿ, ದಕ್ಷಿಣ ಕನ್ನಡ ಜಿಲ್ಲೆ, ೫೭೬೧೦೧ |

| | |
|---|---|
| ಬಿ.ವಿ.ಕೆ. | ಬಿ. ವಿ. ಕೆ. ಶಾಸ್ತ್ರಿ<br>೯೯(೨), ೨ನೇ ಮೇನ್, ಶೇಷಾದ್ರಿಪುರಂ, ಬೆಂಗಳೂರು-೨೦ |
| ಮರಿ | ಎನ್. ಮರಿಶಾಮಾಚಾರ್<br>೮೮, ೧ನೇ 'ಎ'ಕ್ರಾಸ್, ೭ನೇ ಮೇನ್, ೨ನೇ ಬ್ಲಾಕ್<br>ಜಯನಗರ, ಬೆಂಗಳೂರು-೫೬೦೦೧೧ |
| ಮ.ಹೆ. | ಮನೋರಮ ಹೆಜಮಾಡಿ<br>ಕಾಳಿಂಗರಾವ್ ರಸ್ತೆ, ಉಡುಪಿ-೫೭೬೧೦೧ |
| ಮಾ.ಮಂ. | ಮಾ. ಮಂಜುಳ, ಡಾ॥<br>ಸಾಹಿತ್ಯ ಸಹಾಯಕಿ, ಕರ್ನಾಟಕ ಸಾಹಿತ್ಯ ಅಕಾದಮಿ<br>ನೃಪತುಂಗ ರಸ್ತೆ, ಬೆಂಗಳೂರು-೨ |
| ಮೃಹೊ. | ಮೃತ್ಯುಂಜಯ ಹೊರಕೇರಿ, ಡಾ॥<br>ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ<br>ಸ್ನಾತಕೋತ್ತರ ಕೇಂದ್ರ, ಸೊಂಡೂರು-೫೮೩೧೧೯ |
| ರ.ಕಾ. | ರವೀಶ್ ಕಾಸರವಳ್ಳಿ, ಡಾ॥<br>(ದಿವಂಗತರು) |
| ರ.ಕಾಶಿ | ರವಿ ಕಾಶಿ<br>೯/೩೨೪, ಸಿಂಡಿಕೇಟ್ ಬ್ಯಾಂಕ್ ಕಾಲೋನಿ ಹಿಂಭಾಗ, ಬಿ.ಪಿ.ಎಲ್. ಬಳಿ<br>ಬನ್ನೇರುಘಟ್ಟ ರಸ್ತೆ, ಅರಕೆರೆ, ಬೆಂಗಳೂರು-೫೬೦೦೭೬ |
| ರೇ.ಮ. | ರೇಣುಕ ಮಾರ್ಕಂಡೆ<br>ಉಪನ್ಯಾಸಕರು, ಸ್ಕೂಲ್ ಆಫ್ ಆರ್ಟ್ಸ್, ಧಾರವಾಡ |
| ಲ.ಗ. | ಲಕ್ಷ್ಮಿ ಗವಾಯಿ<br>ಎಂ.ಐ.ಜಿ. ೧-೨೫೮, ಕೆ.ಎಚ್.ಬಿ. ಕಾಲೋನಿ<br>ಸಿದ್ದಲಿಂಗ ನಗರ, ಗದಗ-೫೮೨೧೦೧ |
| ವಿ.ಟಿ.ಕಾ. | ವಿ. ಟಿ. ಕಾಳೆ, ಕಲಾವಿದರು<br>ಸ್ನೇಹಕುಂಜ, ೧೪ನೇ ವಾರ್ಡ್, ರವೀಂದ್ರ ಕಾಲೋನಿ<br>ಸೊಂಡೂರು, ಬಳ್ಳಾರಿ ಜಿಲ್ಲೆ-೫೮೩೧೧೯ |
| ಶಂ.ಮೂ | ಶಂಭು ಮೂಗನೂರು ಮಠ, ಪ್ರೊ॥<br>ಬಸವೇಶ್ವರ ಕಲಾಮಹಾವಿದ್ಯಾಲಯ, ಬಾಗಲಕೋಟೆ, ಬಿಜಾಪುರ ಜಿಲ್ಲೆ |

ಶಾ — ಶಾಂತಮ್ಮ ಎಸ್.
ಸುಶೀಲಾ ರಸ್ತೆ, ಮಾವಳ್ಳಿ, ಬೆಂಗಳೂರು-೪

ಶಾದಿ — ಶಾಂತಿನಾಥ ದಿಬ್ಬದ
ಸ್ನಾತಕೋತ್ತರ ಕೇಂದ್ರ, ನಂದೀಹಳ್ಳಿ, ಸೊಂಡೂರು-೫೮೩೧೧೯

ಶ್ಯಾರ — ಶ್ಯಾಮಲ ರತ್ನಕುಮಾರಿ, ಡಾ॥
ನಂ. ೨೭, (ಹೊಸ ನಂ.೨೯) ೨ನೇ ಬ್ಲಾಕ್
ಎರಡನೇ ಮುಖ್ಯರಸ್ತೆ, ತ್ಯಾಗರಾಜನಗರ, ಬೆಂಗಳೂರು-೨೮

ಶಿಪ — ಶಿಲಾಕಾಂತ ಪತ್ತಾರ, ಪ್ರೊ॥
ಪುಲಿಕೇಶಿ ಸಂಯುಕ್ತ ಮಹಾವಿದ್ಯಾಲಯ
ಬಾದಾಮಿ, ಬಿಜಾಪುರ ಜಿಲ್ಲೆ

ಸುಮ — ಸುಮ ವೆಂಕಟೇಶ್
ನಂ. ೧೩, ಹೊಸದೇವಸ್ಥಾನದ ರಸ್ತೆ, ೧೫ನೇ ಅಡ್ಡರಸ್ತೆ
ಮಲ್ಲೇಶ್ವರಂ, ಬೆಂಗಳೂರು-೩

## ಗ್ರಂಥಋಣ


ಆದಿದೇವಾನಂದ (ಅನು) (ವಿದ್ಯಾರಣ್ಯರ) 'ಪಂಚದಶಿ' ಮೈಸೂರು, ೧೯೮೧

ಕನ್ನಡ ವಿಷಯ ವಿಶ್ವಕೋಶ 'ಕರ್ನಾಟಕ' ಮೈಸೂರು, ೧೯೭೯

ಕೃಷ್ಣಾನಂದ ಕಾಮತ್, ಡಾ||, 'ಕಾವಿಕಲೆ', ಬೆಂಗಳೂರು, ೧೯೯೩

ಗಡಿಯಾರಂ ರಾಮಕೃಷ್ಣ ಶರ್ಮ, ದೇವರ ಕೊಂಡಾರೆಡ್ಡಿ ಡಾ|| (ಅನು), ಭಾರತೀಯ ವಾಸ್ತು ವಿದ್ಯೆ, ಬೆಂಗಳೂರು, ೧೯೯೪

ಗಣಪತಿ ಶಾಸ್ತ್ರಿ ಟಿ, (ಸಂ), 'ಸಮರಾಂಗಣ ಸೂತ್ರಧಾರ', (ಸಂಸ್ಕೃತ) ಬರೋಡ, ೧೯೬೬

ನರಸಿಂಹನ್, ಅ.ಲ. ಡಾ|| (ಸಂ) 'ಸಂತ, ಕಲಾವಿದ ಶುಭರಾಯರು' ಬೆಂಗಳೂರು, ೧೯೯೩

ನರಸಿಂಹನ್, ಅ.ಲ. ಡಾ|| ಕರ್ನಾಟಕದ ಚಿತ್ರಕಲೆ ಒಂದು ಅಧ್ಯಯನ, (ಅಪ್ರಕಟಿತ ಮಹಾಪ್ರಬಂಧ)

ಪಾಟೀಲ, ಎಸ್.ಸಿ. ಡಾ|| 'ಜಾನಪದ ಚಿತ್ರಕಲೆ, ಒಂದು ಅಧ್ಯಯನ', ಗದಗ, ೧೯೯೪

ಮರಿಶಾಮಾಚಾರ್, ಎನ್., ವಿಶ್ವರೂಪಾಚಾರ್, ಎನ್ (ಸಂ.) 'ಕಲಾಕೋಶ', ಬೆಂಗಳೂರು, ೧೯೮೫

ಮರಿಶಾಮಾಚಾರ್, ಎನ್. 'ಭಾರತದ ಜಾನಪದ ಕಲೆ', ಬೆಂಗಳೂರು, ೧೯೯೧

ಮರಿಶಾಮಾಚಾರ್, ಎನ್. ಭಾರತದಲ್ಲಿ ಸಮಕಾಲೀನ ಕಲೆ, ಬೆಂಗಳೂರು. ೧೯೯೩

ರಾಮಚಂದ್ರರಾವ್, ಎಸ್.ಕೆ. ಪ್ರೊ|| 'ಭಾರತದ ದೇವಾಲಯ ನೆಲೆ-ಹಿನ್ನೆಲೆ', ಬೆಂಗಳೂರು.೧೯೮೦

ಶಾಮಾಶಾಸ್ತ್ರಿ, ಆರ್, (ಸಂ) 'ಅಭಿಲಷಿತಾರ್ಥ ಚಿಂತಾಮಣಿ', (ಸಂಸ್ಕೃತ) ಭಾಗ ೧, ಮೈಸೂರು, ೧೯೨೬

ಶಾಸ್ತ್ರಿ, ಬಿ.ವಿ.ಕೆ. 'ಸಮಕಾಲೀನ ಕಲೆ', ಬೆಂಗಳೂರು, ೧೯೮೭

ಶ್ರೀಧರ ಮೂರ್ತಿ ಮ. '೬೪ ಕಲೆಗಳು', ಬೆಂಗಳೂರು, ೧೯೭೪

ಶ್ರೀನಿವಾಸನ್, ಪಿ.ಆರ್., ಶ್ರೀಹರಿ, ಕೆ.ಎನ್(ಅನು) 'ದಕ್ಷಿಣ ಭಾರತದ ದೇವಾಲಯಗಳು', ಬೆಂಗಳೂರು ೧೯೫೯

ಸಂಕೀಘಟ್ಟಂ ವೆಂಕಟಾಚಾರ್ಯ,(ಸಂ) (ಅನು) 'ವಿಷ್ಣು ಧರ್ಮೋತ್ತರ ಮಹಾಪುರಾಣಂ' ಖಂಡ ೩; ಭಾಗ ೧; ಮೈಸೂರು, ೧೯೫೩

ಹಿರೇಮಠ, ಬಿ.ಕೆ., 'ಕನ್ನಡ ಹಸ್ತಪ್ರತಿಗಳು, ಒಂದು ಅಧ್ಯಯನ' ಧಾರವಾಡ, ೧೯೯೨

Agarwal, O.P. *A Study on the Techniques of Indian wall Paintings*, Delhi.

Doust. L.A., *A Manual on composition in drawing and painting*, London, 1942.

*Dictionary of Art and Artists*, London, 1966 & 1984.

Edward Lucie-Smith, *Art Terms*, London, 1984

Francis Brunel, *Splendour of Indian Miniatures*, New Delhi.

Goswamy, B.N. and Dahmen Dallapiccola, An Early Document of Indian Art. Delhi, 1976

Harrap's, *Illustrated Dictionary of Art & Artists*, Harrap's Reference. London 1990.

Jyotindra Jain, Aarti Aggarwala, *National Handicrafts and Handlooms Museum*, New Delhi, 1989

Kurt Herberts, *The Complete Book of Artists' Techniques*, London. 1958

Mark Zetrowski, *Deccani Painting*, New Delhi, 1983

Paul Zelanski, Mary Pat Fisher, *The Art of Seeing, Luffs*, N.J. 1988

Prithvi Kumar Agrawala, *On the Sadanga Canons of Painting*, Varanasi, 1981.

Raghavan. V., *Some Sanskrit Text on Painting*, Indian Historical quarterly, Vol IX, Delhi, 1985.

Ray Smith, *The Artists Handbook*, London, 1987

Sivaramamurthi. C, *Indian Painting*, Delhi, 1980

Sivaramamurthi.C., *The Art of India*, New York, 1977

## ಅನುಕ್ರಮಣಿಕೆ

## Index

